# ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ

## (ಸಣ್ಣ ಕತೆಗಳನ್ನು ಆಧರಿಸಿ)

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು

ಎಸ್. ನಾಗರಾಜ

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ

## (ಸಣ್ಣಕತೆಗಳನ್ನು ಆಧರಿಸಿ)

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು

ಎಸ್. ನಾಗರಾಜ

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ



ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

## ಸಂಶೋಧಕರ ಪ್ರಮಾಣ ಪತ್ರ

'ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ (ಸಣ್ಣ ಕತೆಗಳನ್ನು ಆಧರಿಸಿ)' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಶಿವಾನಂದ ಎಸ್. ವಿರಕ್ತಮಠ, ಪ್ರವಾಚಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಎಸ್. ನಾಗರಾಜ

ಎಸ್. ನಾಗರಾಜ
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 03/08/2007
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

ಎಸ್. ನಾಗರಾಜ ಇವರು 'ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ (ಸಣ್ಣ ಕತೆಗಳನ್ನು ಆಧರಿಸಿ)' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ; ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಶಿವಾನಂದ ಎಸ್. ವಿರಕ್ತಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 03/08/07
ಸ್ಥಳ : ವಿದ್ಯಾರಣ್ಯ

## ಪರಿವಿಡಿ

* * * * *

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವೈಧಾನಿಕತೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

೧.೪. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವೈಧಾನಿಕತೆ

ಸಾಹಿತ್ಯ ಸಂಸ್ಕೃತಿಯನ್ನು ಕುರಿತು ಸಂಶೋಧನೆ ಮಾಡುವ ಚಾರಿತ್ರಿಕ ಸಂದರ್ಭಗಳಲ್ಲಿ ಆಯಾ ಅಧ್ಯಯನಗಳಿಗೆ ಅವುಗಳದೇ ಆದ ನಿರ್ದಿಷ್ಟ ಉದ್ದೇಶಗಳಿರುತ್ತವೆ. ನಾನು ಬಾಲ್ಯದಿಂದಲೂ ಕತೆಗಳನ್ನು ಓದುವ, ಕತೆಗಳನ್ನು ಬರೆಯುವ, ಮತ್ತು ಕತೆಗಾರರೊಂದಿಗೆ ಪ್ರತಿಕ್ರಿಯಿಸುವ ಚಟುವಟಿಕೆಯೊಂದಿಗೆ ಬೆಳೆದು ಬಂದವನು. ಕಥಾ ಪರಂಪರೆಯ ಜನಕನಾದ ಮಾಸ್ತಿಯವರಿಂದ ಹಿಡಿದು ನವ್ಯೋತ್ತರದ ಇಂದಿನ ಹೊಸ ತಲೆಮಾರಿನ ಕತೆಗಾರರ ಕತೆಗಳವರೆಗೆ ನಾನು ತುಂಬಾ ಕಾಳಜಿಯಿಂದ ಓದಿದವನು. ಪ್ರತಿಯೊಬ್ಬ ಕತೆಗಾರರು ಸಾಂಸ್ಕೃತಿಕ ಬದುಕಿನ ವೈವಿಧ್ಯಮಯ ಸಂಗತಿಗಳನ್ನು ಕತೆಯಾಗಿಸಿದ ಬಗೆಗೆ ಚಿಂತನೆ ಮಾಡಿದವನು. ಇಂತಹ ಸಣ್ಣ ಕತೆಗಳಲ್ಲಿ ವ್ಯಕ್ತವಾದ ಅನೇಕ ವೈವಿಧ್ಯಮಯ ಬರವಣಿಗೆಯ ಬದುಕನ್ನು ಅಧ್ಯಯನ ಮಾಡಬೇಕೆಂಬ ಉದ್ದೇಶ ಅನೇಕ ದಿನಗಳಿಂದ ಮನದಂಗಳದಲ್ಲಿ ಪುಟಿಯುತ್ತಿತ್ತು. ಅದಕ್ಕಾಗಿ ನಾನು ಸಾಂಸ್ಕೃತಿಕ ಪಲ್ಲಟಗಳಿಗೆ ಒಳಗಾಗಿದ್ದ ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಾದ ಎಪ್ಪತ್ತು, ಎಂಬತ್ತು, ತೊಂಬತ್ತು, ಮತ್ತು ಇಲ್ಲಿಯವರೆಗೆ ಕರ್ನಾಟಕದ ಸಂದರ್ಭದಲ್ಲಿ ಜರುಗಿದ ಮುಖ್ಯಪಲ್ಲಟಗಳನ್ನು ಗಮನದಲ್ಲಿಟ್ಟುಕೊಂಡು ಸಂಸ್ಕೃತಿ ಪ್ರಶ್ನೆ ಎಂಬ ಪರಿಕಲ್ಪನೆಯೊಂದಿಗೆ ಸಣ್ಣ ಕತೆಗಳ ಅಧ್ಯಯನಕ್ಕೆ ತೊಡಗಿಸಿದ್ದೇನೆ.

ಇಲ್ಲಿ ಸಂಸ್ಕೃತಿಯ ಪ್ರಶ್ನೆ ಎಂದರೆ ಬದುಕಿನ ಪ್ರಶ್ನೆಯೇ ಆಗಿದೆ. ಇಪ್ಪತ್ತನೆಯ ಶತಮಾನದ ಕೊನೆಯ ಮೂರು ದಶಕಗಳಲ್ಲಿ ಜರುಗಿದ ಸಾಂಸ್ಕೃತಿಕ ವಿದ್ಯಮಾನಗಳು ಸಾಮಾಜಿಕ ಬದುಕಿನ ಮೇಲೆ ಉಂಟುಮಾಡಿದ ಪರಿಣಾಮವನ್ನು ಸಮಗ್ರವಾಗಿ ಅಧ್ಯಯನ ಮಾಡುವುದರ ಜೊತೆಗೆ ಮೂರು ದಶಕಗಳಲ್ಲಿ ಕಥಾ ಸಾಹಿತ್ಯದಲ್ಲಿ ಕೃಷಿ ಮಾಡಿದ ಕತೆಗಾರರು ಕರ್ನಾಟಕದ ಪ್ರಮುಖ ವಿದ್ಯಮಾನಗಳಿಗೆ ಸ್ಪಂಧಿಸಿದ ರೀತಿಯನ್ನು ಕೂಡ ವಿಶ್ಲೇಷಣೆ ಮಾಡುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

### ೧.೧. ಅಧ್ಯಯನದ ಉದ್ದೇಶ

ಈ ಮಹಾಪ್ರಬಂಧದ ಅಧ್ಯಯನವನ್ನು ಸಂಸ್ಕೃತಿ ಪರಿಕಲ್ಪನೆಗಳ ಸುತ್ತ ಚರ್ಚೆಗೆ ಒಳಪಡಿಸಲಾಗಿದೆ. ಈಗಾಗಲೇ ಹೇಳಿದಂತೆ ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಜರುಗಿದ ವಿದ್ಯಮಾನಗಳು ಸಾಮಾಜಿಕ, ಆರ್ಥಿಕ

ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದವುಗಳಾಗಿವೆ. ಈ ಸಂದರ್ಭದಲ್ಲಿ ಸಣ್ಣಕತೆಗಳ ಕ್ಷೇತ್ರವನ್ನು ಗಂಭೀರವಾಗಿ ಪರಿಗಣಿಸಿ ಸಾಹಿತ್ಯ ರಚನೆಯನ್ನು ಮಾಡುತ್ತಿದ್ದ ಕತೆಗಾರರಿಗೆ ಸಾಮಾಜಿಕ ಬದುಕಿನ ಮೇಲೆ ಉಂಟುಮಾಡಿದ ಪರಿಣಾಮಗಳು ಅವರ ಸೃಜನಶೀಲ ಬರವಣಿಗೆಗೆ ಮುಖ್ಯ ಪ್ರೇರಣೆಗಳಾಗಿವೆ. ಈ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಹೊಸ ನೆಲೆಯ ಸಾಂಸ್ಕೃತಿಕ ಬದುಕಿನ ಹುಡುಕಾಟಗಳನ್ನು ಕತೆಗಾರರು ಚಿತ್ರಣ ಮಾಡಿದ ರೀತಿಯನ್ನು ಅಧ್ಯಯನ ಮಾಡುವುದು ನನ್ನ ಉದ್ದೇಶವಾಗಿದೆ. ಈ ಸಾಂಸ್ಕೃತಿಕ ಸಂದರ್ಭದಲ್ಲಿ ಕಾಣಿಸಿಕೊಂಡ ಪ್ರಮುಖ ವಿದ್ಯಮಾನಗಳಾದ ದಲಿತ ಬದುಕಿನ ವಿವರಗಳನ್ನೊಳಗೊಂಡ ದಲಿತ ಅನನ್ಯತೆ, ಮುಸ್ಲಿಂ ಜನಾಂಗದ ಆಚಾರ ವಿಚಾರಗಳನ್ನೊಳಗೊಂಡ ಮುಸ್ಲಿಂ ಅನನ್ಯತೆ, ಸ್ತ್ರೀವಾದಿ ಚಿಂತನೆ ವಿಚಾರ ಧಾರೆಯನ್ನೊಳಗೊಂಡ ಸ್ತ್ರೀವಾದಿ ನೆಲೆಯ ಶೋಧ ಮುಂತಾದವುಗಳಲ್ಲದೆ ಆಧುನಿಕ ಪರಿಕಲ್ಪನೆಗಳಾದ ಆರ್ಥಿಕ ಉದಾರೀಕರಣ, ಖಾಸಗೀಕರಣ, ಜಾಗತೀಕರಣದಿಂದ ಉದ್ಭವವಾದ, ನವವಸಾಹತು ಶಾಹಿ ನೆಲೆಯಿಂದ ಸೃಷ್ಟಿಯಾದ, ರೈತ ಮತ್ತು ಭೂಮಿಯ ಪ್ರಶ್ನೆ, ಪರಿಸರ ಮತ್ತು ಅರಣ್ಯ ಪ್ರಶ್ನೆ, ನೀರಾವರಿ ಸಮಸ್ಯೆ ಜೊತೆಗೆ ಕೈಗಾರಿಕೆಗಳಿಂದ ಸಾಂಸ್ಕೃತಿಕ ಪರಿಸರದ ಮೇಲಾದ ದುಷ್ಪರಿಣಾಮಗಳನ್ನು ಅಧ್ಯಯನ ಮಾಡುವುದು ಇಲ್ಲಿನ ಮುಖ್ಯ ಆಶಯವಾಗಿದೆ. ಜೊತೆಗೆ ನವವಸಾಹತು ಶಾಹಿ ನೆಲೆ ಮತ್ತು ದೇಶೀಯ ಸಂಘರ್ಷಗಳ ವ್ಯಾಪಕವಾದ ಸಾಂಸ್ಕೃತಿಕ ಚರ್ಚೆಯನ್ನು ವಿವಿಧ ಅಧ್ಯಾಯಗಳಲ್ಲಿ ನಡೆಸಲು ಉದ್ದೇಶಿಸಲಾಗಿದೆ. ಈ ಬಗೆಯ ಸಂಸ್ಕೃತಿ ಚಿಂತನೆಯ ದೇಶೀ ನೆಲೆಯ ಹುಡುಕಾಟವಾಗಿ ಕಾಣಿಸಿಕೊಂಡ ಭಾಷಿಕ ನೆಲೆಯನ್ನು ಇಲ್ಲಿ ಒಳಗೊಳಿಸುವ ಗುರಿ ಹೊಂದಲಾಗಿದೆ. ಹಾಗಾಗಿ ಉಪ, ಪ್ರಾದೇಶಿಕ, ಪ್ರಾಂತೀಯ ಭಾಷೆಗಳಲ್ಲಿ ವಿಭಿನ್ನ ಸಂಸ್ಕೃತಿ ಸಂಕರದ ಕಥಾ ಸಾಹಿತ್ಯದ ಬೆಳೆಯನ್ನು ಕೂಡಾ ಅಧ್ಯಯನ ಮಾಡುವ ಆಶಯವನ್ನು ಹೊಂದಲಾಗಿದೆ.

ನಾಡು ಸ್ವಾತಂತ್ರ್ಯಗೊಂಡು ಅರ್ಧ ಶತಮಾನ ಕಳೆದರೂ ಅನೇಕ ಸಮಸ್ಯೆಗಳು ಪರಿಹಾರ ಕಾಣದೆ ಪ್ರಶ್ನೆಗಳಾಗಿಯೇ ಉಳಿದಿವೆ. ೧೯೭೩ ರ ಕೊನೆಯಲ್ಲಿ ಶೂದ್ರ ಚಳುವಳಿಯ ಭಾಗವಾಗಿ ರೂಪಗೊಂಡ 'ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ'ದ ಚಳುವಳಿ ಮೊದಲಾದವುಗಳಿಂದ ಕರ್ನಾಟಕದ ಸಾಂಸ್ಕೃತಿಕ ಬದುಕಿನ ಸಂದರ್ಭದಲ್ಲಿ ಹೊಸ ಹುಡುಕಾಟಕ್ಕೆ ನಾಂದಿಯಾಯಿತು. ೧೯೭೪ರ ಬಿ. ಬಸವಲಿಂಗಪ್ಪನವರ 'ಬೂಸಾ ಪ್ರಕರಣ ವಿವಾದ' ಕನ್ನಡ ಸಾಹಿತ್ಯ ಸಂಸ್ಕೃತಿ ಸಂದರ್ಭದಲ್ಲಿ ಅನೇಕ ವಾಗ್ವಾದಗಳಿಗೆ ಕಾರಣವಾಯಿತು. ೧೯೮೩ ರಲ್ಲಿ ಲೋಹಿಯಾಮಂಚ ವೇದಿಕೆಯಿಂದ ಜಾತಿವಿನಾಶ ಸಮ್ಮೇಳನವನ್ನು ನಡೆಸಲಾಯಿತು. ಈ ಎಲ್ಲಾ ಬೆಳವಣಿಗೆಯ ಹಿಂದೆ ಸಮಾಜೋರಾಜಕೀಯ ಪ್ರಭಾವವಿದ್ದರೆ ಇನ್ನುಳಿದ ಭಾಗದಲ್ಲಿ ಸಮಾಜೋ ಸಾಂಸ್ಕೃತಿಕ ಆಯಾಮವಿರುವುದು ಅಧ್ಯಯನದಿಂದ ಅರಿತುಕೊಂಡಿದ್ದೇನೆ.

ಇಪ್ಪತ್ತನೆಯ ಶತಮಾನದ ಅಂತ್ಯಭಾಗದಲ್ಲಿ ವಿಭಿನ್ನ ಆಶಯಗಳ ಆಧುನಿಕ ಪ್ರಗತಿಪರ ಚಳುವಳಿಗಳು ಪ್ರಾಯೋಗಿಕ ಹಾಗೂ ತಾತ್ವಿಕ ಬಿಕ್ಕಟ್ಟುಗಳನ್ನು ಎದುರಿಸಿದವು. ಈ ಸಂದರ್ಭದಲ್ಲಿ ಕಾಣಿಸಿಕೊಂಡ ಕೋಮುವಾದವು ತನ್ನ ಕರಾಳ ಛಾಯೆಯನ್ನು ಸಾಮಾಜಿಕ ಬದುಕಿನಲ್ಲಿ ವ್ಯಾಪಿಸಿದ ಸಂದರ್ಭವನ್ನು ಅರಿತಿದ್ದೇನೆ. ಕರ್ನಾಟಕವನ್ನೊಳಗೊಂಡ ಆಧುನಿಕ ಭಾರತಾದ್ಯಂತ ಕೋಮುವಾದ ತಲೆಯೆತ್ತಿರುವ ಕಾರಣಗಳು ಅನೇಕ. ಕೋಮುವಾದಿ ಹಾಗೂ ಜಾತಿವಾದಿ ರಾಜಕಾರಣದಿಂದ ಸಾಂಸ್ಕೃತಿಕ ಬದುಕಿನಲ್ಲಿ ಉಂಟಾದ ಅನೇಕ ವೈಪರೀತ್ಯಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನಿಟ್ಟುಕೊಂಡಿದ್ದೇನೆ.

ಈ ಕೋಮುವಾದಿ ಹಾಗೂ ಜಾತಿವಾದಿ ರಾಜಕಾರಣವನ್ನು ಪ್ರತಿಭಟಿಸುವ ನಿಟ್ಟಿನಲ್ಲಿ ಜಮೀನ್ದಾರಿ ವ್ಯವಸ್ಥೆಯ ವಿರುದ್ಧ, ಆರ್ಥಿಕ ಅಸಮಾನತೆಯ ವಿರುದ್ಧ, ತಾತ್ವಿಕ ಆಶಯವನ್ನಿಟ್ಟುಕೊಂಡು, ಸಾಂಸ್ಕೃತಿಕ ಹೋರಾಟವನ್ನು ಬರವಣಿಗೆಯೊಂದಿಗೆ ರೂಢಿಗೆ ತಂದ ದಲಿತ-ಬಂಡಾಯ ಚಿಂತನೆ ಹೊಸ ಧ್ವನಿಯನ್ನು ಸಾಹಿತ್ಯ ಸಂಸ್ಕೃತಿಗಳಲ್ಲಿ ಸೃಷ್ಟಿಸಿತು. ಈ ದಲಿತ-ಬಂಡಾಯ ಸಾಹಿತ್ಯವು ಅಲಕ್ಷಿತ ಸಮುದಾಯಗಳ ಅನನ್ಯತೆಯನ್ನು ಎತ್ತಿಹಿಡಿಯುವ ವೈಚಾರಿಕತೆಯ ಹೊಸಕಾಳುಗಳನ್ನು ಸಾಹಿತ್ಯ ಸಂಸ್ಕೃತಿಯ ನೆಲದಲ್ಲಿ ಬಿತ್ತಿತು, ಇದರಿಂದ ಸಮೃದ್ಧವಾದ ಸಾಹಿತ್ಯ ಕೃತಿಗಳ ಫಲವೂ ಬೆಳೆದು ಬಂದಿತು.

ಹದಗೆಟ್ಟ ರಾಜಕೀಯ ಇಚ್ಛಾಶಕ್ತಿಗೆ ವಿರುದ್ಧವಾಗಿ ಜನಪರ ಕಾಳಜಿಯನ್ನಿಟ್ಟುಕೊಂಡು ಸಾಂಸ್ಕೃತಿಕ ಬದುಕನ್ನು ರಕ್ಷಿಸಲು ಅಧಿಕಾರ ವಿಕೇಂದ್ರೀಕರಣದ ಸೊಲ್ಲು ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಕಾಣಿಸಿಕೊಂಡಿತು. ಈ ಸಂದರ್ಭದಲ್ಲಿ 'ಮಂಡಲ ವರದಿ' ಜಾರಿಯಾಗಬೇಕೆಂದು ಚಳುವಳಿಯನ್ನು ಆರಂಭಿಸಲಾಯಿತು. ಗ್ರಾಮೀಣ ಭಾರತದ ತಳಮಟ್ಟದ ಶೋಷಣೆಗೆ ಒಳಗಾದ ಜನ ಸಾಮಾನ್ಯರಿಗೆ ಅಧಿಕಾರ ನೀಡಬೇಕೆಂದು ರೂಪಿತವಾದ 'ಪಂಚಾಯತ್ ರಾಜ್ ಮಸೂದೆ' ಅಸ್ತಿತ್ವಕ್ಕೆ ಬರಲು ಅನೇಕ ಹೋರಾಟಗಳನ್ನು ನಡೆಸಲಾಯಿತು. ಅಸ್ಸಾಂನಲ್ಲಂತೂ ವಿದ್ಯಾರ್ಥಿಗಳು ಚಳುವಳಿಗಳಿಂದ ಸರಕಾರವನ್ನು ರೂಪಿಸುವ ಮಟ್ಟಕ್ಕೆ ಹೋಗಿದ್ದನ್ನು ಆ ಕಾಲದ ವಿದ್ಯಮಾನಗಳ ಗಮನದಿಂದ ತಿಳಿಯಬಹುದಾಗಿದೆ. ಕರ್ನಾಟಕದ ಸಾಂಸ್ಕೃತಿಕ ರಾಜಕಾರಣದ ಸಂದರ್ಭದಲ್ಲಿ ಮಂಡಲ ವರದಿ ತುಂಬಾ ಪ್ರಭಾವ ಬೀರಿತು. ಮಂಡಲವರದಿ ೧೯೮೩ ರಲ್ಲಿ ಕರ್ನಾಟಕದಲ್ಲಿ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ಅನುಷ್ಠಾನಕ್ಕೆ ಬಂದಿತು. ಈ ಮಸೂದೆಯು ದೀರ್ಘವಾಗಿದ್ದು, ಇದು ಗ್ರಾಮೀಣ ಜನರ ಬುದ್ಧಿಸಾಮರ್ಥ್ಯಕ್ಕೆ ಮೀರಿದ ಕಾನೂನಿನ ತೊಡಕುಗಳಿಂದ ಕೂಡಿದ್ದರಿಂದ ಗ್ರಾಮೀಣ ತಳಮಟ್ಟದ ಜನರನ್ನು ಸಮಾಜದ ಮುಖ್ಯವಾಹಿನಿಗೆ ತರಬೇಕೆಂಬ ಇಚ್ಛೆಯು ಸಫಲಗೊಳ್ಳಲಿಲ್ಲವೆಂಬ ವಾದವೂ ಇದೆ. ಮಂಡಲವರದಿಯನ್ನಾಧರಿಸಿ ಅಸ್ತಿತ್ವಕ್ಕೆ ಬಂದ ಮಂಡಲ ಚುನಾವಣೆಗಳು ಗ್ರಾಮೀಣ ಸಂಸ್ಕೃತಿಯ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ಇಲ್ಲಿ ವಿಶ್ಲೇಷಣೆ ಮಾಡಲು ಉದ್ದೇಶಿಸಲಾಗಿದೆ.

ಎಪ್ಪತ್ತರ ದಶಕದ ಪ್ರಾರಂಭವೂ ಭಾರತೀಯ ಸ್ತ್ರೀವಾದದ ಒಂದು ತಿರುವಿನ ಕಾಲಘಟ್ಟವಾಗಿದೆ. ಈ ಸಂದರ್ಭದಲ್ಲಿ ಹುಟ್ಟಿಕೊಂಡ ಮಹಿಳಾ ಬದುಕಿನ ಪ್ರಶ್ನೆ ಅನೇಕ ಹೋರಾಟಗಳನ್ನು ರೂಪಿಸಿತು. ಮಹಿಳಾ ದೃಷ್ಟಿಕೋನವು ಎಲ್ಲಾ ಕ್ಷೇತ್ರಗಳಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳತೊಡಗಿದೆ. ಅನೇಕ ಜನಪರ, ಪ್ರಗತಿಪರ ಚಳುವಳಿಗಳಲ್ಲಿ ಮಹಿಳೆಯನ್ನು ಕುರಿತ ಪ್ರಶ್ನೆ ಹೋರಾಟದ ಧ್ವನಿಯಾಗಿಮೊಳಗಿದೆ. ಈ ಸಂದರ್ಭದಲ್ಲಿ ಸ್ತ್ರೀವಾದಿ ನೆಲೆಯು ಚರಿತ್ರೆಯಲ್ಲಿ ನಿರೂಪಿಸಿ ಮಹಿಳಾ ಬದುಕಿನ ಅನನ್ಯ ಸಾಂಸ್ಕೃತಿಕ ಬದುಕನ್ನು ಅಭಿವ್ಯಕ್ತಿಸಿದ ಕೆಲವು ಪ್ರಾತಿನಿಧಿಕ ಕತೆಗಾರ್ತಿಯರ ಕತೆಗಳನ್ನು ಮಹಿಳಾ ಪ್ರಶ್ನೆಯ ಪ್ರಮುಖ ವಿಚಾರಧಾರೆಯಾಗಿ ಗ್ರಹಿಸಿ ವಿಶ್ಲೇಷಣೆ ಮಾಡಿದ್ದೇನೆ. ಈ ಧೋರಣೆ ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಹೊಸ ದನಿಯ ಅನನ್ಯತೆಯಾಗಿ ಕಾಣಿಸಿಕೊಂಡಿರುವುದನ್ನು ಮನಗಂಡಿದ್ದೇನೆ. ಇಂದು ಮಹಿಳಾ ಸಬಲೀಕರಣದತ್ತ, ಸ್ತ್ರೀ ಸ್ವಸಹಾಯ ಗುಂಪುಗಳು ಮಹಿಳೆಯ ಆರ್ಥಿಕ ಸ್ವಾವಲಂಬನೆಯತ್ತ ಮುಖಮಾಡುತ್ತಿರುವುದನ್ನು ಪೂರಕವಾಗಿ ಚರ್ಚಿಸಲಾಗುವುದು.

ಕಳೆದ ಕಾಲು ಶತಮಾನದ ಅವಧಿಯಲ್ಲಿ ಸ್ತ್ರೀಯರ ಸೃಜನಶೀಲ ಅಭಿವ್ಯಕ್ತಿಯ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕದಲ್ಲಿ ತಮ್ಮ ಗುರುತ್ವವನ್ನು ಮೂಡಿಸಿದ ಮಹತ್ವವನ್ನು ಈ ಮಹಾಪ್ರಬಂಧದ ರಚನೆಯ ಉದ್ದೇಶದಲ್ಲಿ

ಮನಗಂಡಿದ್ದೇನೆ. ಜೊತೆಗೆ ಜಾಗತಿಕ ಹೋರಾಟಗಳಾದ ಮಂಡಲ ವಿರೋಧಿ ಚಳುವಳಿಯಲ್ಲಿ ಮಹಿಳೆಯರ ಪಾಲು, ಮತ್ತು ೧೯೯೨ರ ಅಯೋಧ್ಯೆಯ ಕರಸೇವೆಯಲ್ಲಿ ಸ್ತ್ರೀಯರು ಹೆಚ್ಚಾಗಿ ಪಾಲುಗೊಂಡಿರುವುದನ್ನು ಚರಿತ್ರೆಗಳು ದಾಖಲು ಮಾಡಿವೆ. ತೊಂಬತ್ತರ ದಶಕದ ಸಾಂಸ್ಕೃತಿಕ ರಾಜಕಾರಣದಲ್ಲಿ ಸಕ್ರಿಯವಾಗಿ ತೊಡಗಿದ ಮಹಿಳೆಯರು ಸ್ತ್ರೀಚೈತನ್ಯದ ನೆಲೆಯನ್ನು ವಿಸ್ತಾರಗೊಳಿಸಿದ್ದನ್ನು ಕಂಡಾಗ ಈ ಮಹಿಳಾ ಪ್ರಶ್ನೆ ಕೂಡ ಈ ಶತಮಾನದ ಕೊನೆಯ ದಶಕಗಳಲ್ಲಿ ಹೊಸ ಆಲೋಚನೆಗೆ ಕಾರಣವಾದದ್ದನ್ನು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಮುಖ ಮಹಿಳಾ ಕತೆಗಾರ್ತಿಯರ ಕೆಲವು ಕತೆಗಳನ್ನು ಸ್ತ್ರೀವಾದಿ ನೆಲೆಯ ಅನನ್ಯತೆಯನ್ನು ಪ್ರಸ್ತಾಪಿಸುವ ನೆಲೆಯಲ್ಲಿ ವಿಶ್ಲೇಷಿಸಲು ಗುರಿ ಹೊಂದಲಾಗಿದೆ.

ಕರ್ನಾಟಕದ ಸಂಸ್ಕೃತಿ, ಭಾಷೆಯ ಮೇಲೆ ಅನ್ಯಭಾಷೆ ಸಂಸ್ಕೃತಿಗಳು ಜಾಗತೀಕರಣ, ಆರ್ಥಿಕ ಉದಾರಿಕರಣ ಮತ್ತು ಖಾಸಗೀಕರಣದ ನೆಪದಲ್ಲಿ ದೇಶೀಯ ಸಂಸ್ಕೃತಿಯನ್ನು ಮೂಲೆಗೊತ್ತುವ ಹುನ್ನಾರವನ್ನು ಸೃಷ್ಟಿಸುತ್ತಿವೆ. ಇದೇ ಸಂದರ್ಭದಲ್ಲಿ ನಮ್ಮ ನೆಲದ ಭಾಷೆಯನ್ನು, ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ಎತ್ತಿ ಹಿಡಿಯುವ ದೇಶೀಯ ನೆಲೆಯ ಹುಡುಕಾಟಗಳೂ ಆರಂಭವಾಗಿವೆ. ಈ ಸಂದರ್ಭದಲ್ಲಿ ಒಂದು ಸಾಹಿತ್ಯದ ಪ್ರಾದೇಶಿಕ ಸತ್ವವನ್ನು ಆ ಸಾಹಿತ್ಯಕ್ಕಿರುವ ತನ್ನದೇ ಆದ ಸ್ವಾಯತ್ತತೆಯನ್ನು ಗುಣಾತ್ಮಕವೆಂದು ಒಪ್ಪಿಕೊಳ್ಳುವಂತಹ ಈ 'ದೇಶೀಯವಾದ' ಸಿದ್ಧಾಂತವೂ ಅಸ್ತಿತ್ವಕ್ಕೆ ಬಂದ ನೆಲೆಯನ್ನು ಉದ್ದೇಶಪೂರ್ವಕವಾಗಿ ಅರಿತುಕೊಳ್ಳುವ ಪ್ರಯತ್ನ ಮಾಡಲಾಗುವುದು. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಚಿಂತನೆಯನ್ನು ವಿಶ್ಲೇಷಣೆ ಮಾಡುವ ಉದ್ದೇಶವಿಟ್ಟುಕೊಂಡು ಸಾಗಿದಾಗ ಅನೇಕ ಲೇಖಕರು, ಸಂಸ್ಕೃತಿ ಚಿಂತಕರು ತಮ್ಮ ಕೃತಿಗಳಲ್ಲಿ ದೇಶೀಯ ಚಿಂತನೆಯ ಕಡೆಗೆ ಸಾಗಿರುವುದು ಹೊಸ ಹುಡುಕಾಟವೆಂದು ಭಾವಿಸಿದ್ದೇನೆ. ಈ ದಿಕ್ಕಿನಲ್ಲಿ ನಾನು ದೇಶೀಯವಾದದ ಸ್ವರೂಪ, ನೆಲೆ ವಸಾಹತುಶಾಹಿ ನೆರಳಿನಲ್ಲಿ ಬಿಡುಗಡೆ ಪಡೆಯಲು ವಸಾಹತುಶಾಹಿ ಸಂಸ್ಕೃತಿಗಳ ಶೋಧ ದೇಶೀಯವಾದದ ನಿಲುವುಗಳನ್ನು ಹೇಗೆ ಸಮರ್ಥಿಸುತ್ತವೆಯೆನ್ನುವುದನ್ನು ತಾತ್ವಿಕವಾಗಿ ಚರ್ಚಿಸುವ ಉದ್ದೇಶವಿಟ್ಟುಕೊಳ್ಳಲಾಗಿದೆ ಈ ಆಲೋಚನಾ ಕ್ರಮವು ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂದರ್ಭದಲ್ಲಿ ನಡೆದ ಹೊಸ ಚಿಂತನೆಯ ಹುಡುಕಾಟವೆಂದು ಭಾವಿಸಿದ್ದೇನೆ. ಈ ದೇಶೀಯ ನೆಲೆಯ ಹುಡುಕಾಟದಲ್ಲಿ ಅಲಕ್ಷಿತ ಸಮುದಾಯಗಳ ಉಪಸಂಸ್ಕೃತಿ, ಪ್ರಧಾನ, ಅಧೀನ, ಪರ್ಯಾಯ ಸಂಸ್ಕೃತಿಗಳ ಹುಡುಕಾಟವೂ ಕೂಡ ಕರ್ನಾಟಕ ಸಾಹಿತ್ಯ, ಸಂಸ್ಕೃತಿಯ ಸಂದರ್ಭಗಳಲ್ಲಿ ನಾನಾ ನೆಲೆಯಲ್ಲಿ ಆರಂಭಗೊಂಡಿರುವುದನ್ನು ವಿಶ್ಲೇಷಣೆ ಮಾಡುವ ಉದ್ದೇಶ ನನ್ನದಾಗಿದೆ.

ವೈವಿಧ್ಯಮಯವಾದ ಸಾಂಸ್ಕೃತಿಕ ಬದುಕನ್ನು ಒಳಗೊಂಡ ಸಾಹಿತ್ಯವು ಒಂದು ಕಾಲಘಟ್ಟ ಅಥವಾ ಅಂತಿಮ ಹಂತ ಮುಟ್ಟಿದಾಗ ಆ ಬದುಕಿನ ನೆಲೆಯನ್ನು ಚಿತ್ರಿಸಿದ ಸಾಹಿತ್ಯವನ್ನು 'ಪುನರ್ ಮೌಲ್ಯೀಕರಣ'ಕ್ಕೆ ಒಳಪಡಿಸುವ ಪ್ರಕ್ರಿಯೆಯನ್ನು[೨] ಆರಂಭಿಸಬೇಕಾಗುತ್ತದೆ. ಇದೊಂದು ರೀತಿಯ ಸಾಂಸ್ಕೃತಿಕ ಮುಖಾಮುಖಿಯೆಂದರೆ ತಪ್ಪಲ್ಲ. ಈ ಪುನರ್ ಮೌಲ್ಯೀಕರಣ ಪ್ರಕ್ರಿಯೆ ಇಪ್ಪತ್ತನೆ ಶತಮಾನದ ಹೊಸ ವ್ಯಾಖ್ಯಾನಗಳ ಒಂದು ಪ್ರಕ್ರಿಯೆಯಾಗಿದೆ. ಇಂದಿನ ಸಾಂಸ್ಕೃತಿಕ ಬದುಕು ತುಂಬಾ ಬದಲಾಗುತ್ತಿದೆ. ಈ ಬದಲಾಗುತ್ತಿರುವ ಬದುಕು ಸಾಹಿತ್ಯದಲ್ಲಿ ದಾಖಲಾಗುತ್ತಿದೆ. ಬದುಕು ಬರಹಗಳು ಹೊಸ ಕಾಲವನ್ನು ಕಂಡುಕೊಳ್ಳುವ ಮತ್ತು ಕಟ್ಟಿಕೊಳ್ಳುವ ಪ್ರಕ್ರಿಯೆಯೇ ಪುನರ್ ಮೌಲ್ಯೀಕರಣವಾಗಿದೆ. ಈ ಸಂದರ್ಭದ ಸಂಸ್ಕೃತಿ ಪ್ರಶ್ನೆಕೂಡ ಬಹುಮುಖಿಯಾದಂತ ನೆಲೆಯಲ್ಲಿ

ಅಭಿವ್ಯಕ್ತಿಗೊಂಡಿರುವ ಉದ್ದೇಶವನ್ನು ಗ್ರಹಿಸಲಾಗುವುದು. ಸಂಸ್ಕೃತಿ ಚಿಂತಕ ಪ್ರೊ. ಬರಗೂರು ರಾಮಚಂದ್ರಪ್ಪನವರ ಮೂಲಕ ಪ್ರಾಧಾನ್ಯತೆ ಪಡೆದ ಈ ಪುನರ್‌ಮೌಲ್ಯೀಕರಣ ಪರಿಕಲ್ಪನೆಯನ್ನು ವಿಶ್ಲೇಷಣೆಯಾಗಿ ಅನ್ವಯಿಸಿಕೊಳ್ಳಲಾಗುವುದು. ಈ ಪುನರ್ ಮೌಲ್ಯೀಕರಣ ಪ್ರಕ್ರಿಯನ್ನು ಹೊಸ ಸಂಸ್ಕೃತಿಶೋಧದ ನೆಲೆಯಿಂದ ಅರಿತು ವಿಶ್ಲೇಷಣೆಗೆ ಬಳಸಿಕೊಳ್ಳಲು ಉದ್ದೇಶಿಸಲಾಗಿದೆ.

ಹೀಗೆ 'ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ' ಎಂಬ ಶೀರ್ಷಿಕೆಯಡಿಯಲ್ಲಿ, ಸಂಸ್ಕೃತಿಯ ಪರಿಕಲ್ಪನಾತ್ಮಕ ಚರ್ಚೆಯನ್ನು ಮುಂದಿಸುವುದರ ಜೊತೆಗೆ ಇಪ್ಪತ್ತನೆಯ ಶತಮಾನದ ಸಾಂಸ್ಕೃತಿಕ ವಿದ್ಯಮಾನಗಳನ್ನು ವಿಶ್ಲೇಷಿಸಲು ಉದ್ದೇಶಿಸಿದೆ. ಈ ಶತಮಾನದ ಸಾಂಸ್ಕೃತಿಕ ಸಂದರ್ಭದಲ್ಲಿ ಕಾಣಿಸಿಕೊಂಡ ದಲಿತ ಅನನ್ಯತೆ, ಮುಸ್ಲಿಂ ಅನನ್ಯತೆ, ಸ್ತ್ರೀವಾದಿ ನೆಲೆಯಶೋಧ, ಜಾಗತೀಕರಣಕ್ಕೆ ಪ್ರತಿರೋಧದ ಧ್ವನಿಯಾಗಿ ಹುಟ್ಟಿಕೊಂಡ ಭೂಮಿ ರೈತ ಸಮಸ್ಯೆ, ಪರಿಸರ ಅರಣ್ಯ ಸಮಸ್ಯೆ, ನೀರಾವರಿ ಕೈಗಾರಿಕೆಗಳ ಸಮಸ್ಯೆಗಳು, ನವವಸಾಹತುಶಾಹಿ ನೆಲೆ ಮತ್ತು ದೇಶೀಯ ಸಂಘರ್ಷಗಳಾಗಿ ಕಾಣಿಸಿಕೊಂಡ ಬಗೆಗಳನ್ನು ಅಧ್ಯಯನ ಮಾಡಲಾಗುವುದು. ಉಪ, ಪ್ರಾದೇಶಿಕ, ಪ್ರಾಂತೀಯ ಭಾಷೆಗಳು ಅನನ್ಯ ಭಾಷಿಕ ನೆಲೆಯಾಗಿ ಕಾಣಿಸಿಕೊಂಡಿರುವ ಬಗೆಗಳನ್ನು ಕೂಡಾ ವೈವಿಧ್ಯಮಯ ಸಂಗತಿಗಳ ಅಭಿವ್ಯಕ್ತಿ ಸ್ವರೂಪವಾಗಿರುವುದನ್ನು ಮಹಾಪ್ರಬಂಧದ ಚೌಕಟ್ಟಿನಲ್ಲಿ ಅಧ್ಯಯನಮಾಡುವುದು ಉಪ ಉದ್ದೇಶಗಳಲ್ಲಿ ಸೇರಿದೆ. ಹೀಗೆ ವ್ಯಾಪಕವಾಗಿ ಮೂರು ದಶಕಗಳ ಸಾಂಸ್ಕೃತಿಕ ವಿದ್ಯಮಾನಗಳ ಅಧ್ಯಯನವನ್ನು ಸಣ್ಣಕತೆಗಳ ವಿಶ್ಲೇಷಣೆಯ ಮೂಲಕ ನ್ಯಾಯಿಸಲು ಒಂದು ಬೃಹತ್ ಚೌಕಟ್ಟನ್ನು ಇಟ್ಟುಕೊಳ್ಳಲಾಗಿದೆ.

### ೧. ೨. ಅಧ್ಯಯನದ ವ್ಯಾಪ್ತಿ

ಪ್ರತಿಯೊಂದು ಸಂಶೋಧನಾ ಅಧ್ಯಯನಕ್ಕೆ ನಿರ್ದಿಷ್ಟ ವ್ಯಾಪ್ತಿಯೊಂದಿರುತ್ತದೆ. "ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ (ಸಣ್ಣ ಕತೆಗಳನ್ನು ಆಧರಿಸಿ)" ಎಂಬ ಮಹಾಪ್ರಬಂಧದ ರಚನೆಗೆ ನಾವು ನಿಗದಿಪಡಿಸಿಕೊಂಡಿರುವ ಅಧ್ಯಯನದ ವ್ಯಾಪ್ತಿ ಹೀಗಿದೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಾದ ಎಪ್ಪತ್ತು, ಎಂಬತ್ತು, ತೊಂಬತ್ತು ಮತ್ತು ಇಲ್ಲಿಯವರೆಗಿನ ಕಾಲಮಾನದ ಸಾಂಸ್ಕೃತಿಕ ಚೌಕಟ್ಟನ್ನು ಇಟ್ಟುಕೊಳ್ಳಲಾಗಿದೆ. ಈ ಕಾಲಾವಧಿಯಲ್ಲಿ ಭಾರತ ಮತ್ತು ಕರ್ನಾಟಕದ ಸಂದರ್ಭದಲ್ಲಿ ಜರುಗಿದ ಪ್ರಮುಖ ವಿದ್ಯಮಾನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು. ಈ ವಿದ್ಯಮಾನಗಳು ಕರ್ನಾಟಕದ. ಕನ್ನಡದ ಕತೆಗಾರರ ಸೃಜನಶೀಲ ಬರವಣಿಗೆಯ ಮೇಲೆ ಉಂಟುಮಾಡಿದ ಪರಿಣಾಮವನ್ನು ಚರ್ಚಿಸುವುದು. ಈ ಎಲ್ಲಾ ಆಯಾಮಗಳು ಮಹಾಪ್ರಬಂಧದ ಒಟ್ಟು ವ್ಯಾಪ್ತಿಯ ಸ್ವರೂಪವಾಗಿವೆ. ಸಣ್ಣಕತೆಗಾರರು, ತಮ್ಮ ಸೃಜನಶೀಲ ಬರವಣಿಗೆಯ ಮೂಲಕ ಈ ಕ್ಷೇತ್ರದಲ್ಲಿ ಬರವಣಿಗೆಗೆ ತೊಡಗಿಕೊಂಡು ಹುಟ್ಟುಹಾಕಿದ ಸಾಂಸ್ಕೃತಿಕ ಪ್ರಶ್ನೆಗಳನ್ನು ಕತೆಗಾರರ ಕೆಲವು ಪ್ರಾತಿನಿಧಿಕ ಕತೆಗಳನ್ನು ಆಧರಿಸಿ ಅಧ್ಯಯನ ಮಾಡುವುದು ಈ ಮಹಾ ಪ್ರಬಂಧದ ಒಟ್ಟು ವ್ಯಾಪ್ತಿಯಾಗಿದೆ.

### ೧.೩. ಅಧ್ಯಯನದ ವೈಧಾನಿಕತೆ

"ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ (ಸಣ್ಣಕತೆಗಳನ್ನಾಧರಿಸಿ)" ಎಂಬ ವಿಷಯವನ್ನು ಕುರಿತು ನಾವು ಸಂಶೋಧನಾ ಮಹಾಪ್ರಬಂಧವನ್ನು ರಚಿಸಲು ಸ್ಥೂಲ ಹಾಗೂ ಸೂಕ್ಷ್ಮ ಅಧ್ಯಯನವನ್ನು

ಕೈಗೊಂಡಿದ್ದೇನೆ. ಈ ಸಂದರ್ಭದಲ್ಲಿ ನಾನು ಮೂರು ದಶಕಗಳಾದ ಎಪ್ಪತ್ತು, ಎಂಬತ್ತು, ತೊಂಬತ್ತು ಮತ್ತು ಇಲ್ಲಿಯವರೆಗೆ ಕರ್ನಾಟಕದ ಸಂದರ್ಭದಲ್ಲಿ ಜರುಗಿದ ಸಾಂಸ್ಕೃತಿಕ ವಿದ್ಯಮಾನಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನಮಾಡಿದ್ದೇನೆ. ಈ ಶತಮಾನದ ಮುಖ್ಯ ಅನನ್ಯತೆಗಳಾಗಿ ಕಾಣಿಸಿಕೊಂಡ ದಲಿತ, ಮುಸ್ಲಿಂ, ಮಹಿಳೆ, ನವವಸಾಹುತುಶಾಹಿ ಮತ್ತು ಭಾಷಿಕ ನೆಲೆಗಳ ಪರಿಕಲ್ಪನೆಗಳ ಸುತ್ತ ಚರ್ಚೆ ಮಾಡಿದ್ದೇನೆ. ಜೊತೆಗೆ ನನ್ನ ಅಧ್ಯಯನವು ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಮಾದರಿಯ ವಿಧಾನದಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗುರುತಿಸುವುದಾಗಿದೆ. ಜೊತೆಗೆ ಈ ಸಂದರ್ಭದಲ್ಲಿ ಅಂದರೆ ಸಾಂಸ್ಕೃತಿಕ ವಿದ್ಯಮಾನಗಳಿಗೆ ಕತೆಗಾರರು ಸ್ಪಂದಿಸಿದ ರೀತಿಯನ್ನು 'ಕಥೆಗಳ ಸಾಂಸ್ಕೃತಿಕ ಅಧ್ಯಯನ' ವಿಧಾನವೆನ್ನುವಂತೆ ಅರ್ಥೈಸಿದ್ದೇನೆ. ಬರಹಗಾರರು ಸಾಮಾಜಿಕ ಬದುಕಿನಲ್ಲಿ ಕಂಡ ಸಾಮಾಜಿಕ ವಾಸ್ತವ, ಮತ್ತು ಸಾಹಿತ್ಯದ ಪ್ರತಿನಿಧಿಕರಣದ ಅಂಶಗಳೆರೆಡನ್ನೂ ತೌಲನಿಕ, ವಿಶ್ಲೇಷಣಾತ್ಮಕ ಅಧ್ಯಯನದ ವಿಧಾನದಲ್ಲಿ ವಿಶ್ಲೇಷಣೆಯನ್ನು ಮಾಡಿದ್ದೇನೆ. ಇದೊಂದು ವ್ಯಕ್ತಿನಿಷ್ಠ ಅಧ್ಯಯನ ವಿಧಾನವಾಗಿದೆ.

'ಸಂಸ್ಕೃತಿ ಪ್ರಶ್ನೆ' ಎಂಬ ಮುಖ್ಯ ತಾತ್ವಿಕ ಪರಿಕಲ್ಪನೆಯನ್ನು ವಿಶಿಷ್ಟವಾದ ಸಾಂಸ್ಕೃತಿಕ, ಸಾಮಾಜಿಕ ಪರಿಕಲ್ಪನೆಯಾಗಿ ಪ್ರಸ್ತುತ ಅಧ್ಯಯನವು ಕಟ್ಟಿಕೊಡುತ್ತದೆ. ಕರ್ನಾಟಕದ ಸಾಮಾಜಿಕ ವಲಯದೊಳಗೆ ಕಾಣಿಸಿಕೊಂಡಿರುವ ಎಲ್ಲಾ ವಿದ್ಯಮಾನಗಳನ್ನು ಪ್ರಸ್ತುತ ಮಹಾಪ್ರಬಂಧವು 'ಸಂಸ್ಕೃತಿ'ಯ ಗ್ರಹಿಕೆಯಾಗಿ ಸ್ವೀಕರಿಸುತ್ತದೆ. ಈ ಎಲ್ಲಾ ಸಾಮಾಜಿಕ ವಾಸ್ತವದ ವಿದ್ಯಮಾನಗಳನ್ನು ಮಾನವ ಸಮುದಾಯಗಳು ಎದುರಿಸಬೇಕಾದ ಸವಾಲುಗಳ ನೆಲೆಯಲ್ಲಿ ಇವು ಸಾಂಸ್ಕೃತಿಕ ಪ್ರಶ್ನೆಗಳಾಗಿವೆ. ಈ ಸಾಂಸ್ಕೃತಿಕ ಪ್ರಶ್ನೆಗಳಿಗೆ ಕನ್ನಡದ ಸೃಜನಶೀಲ ಸಾಹಿತ್ಯ ಮಾಧ್ಯಮದಲ್ಲಿ ಕೃಷಿ ಮಾಡುತ್ತಿರುವ ಸಾಂಸ್ಕೃತಿಕ ರಾಯಭಾರಿಗಳಾದ ಸಾಹಿತಿಗಳು ಇದನ್ನು ಹೇಗೆ ಅಭಿವ್ಯಕ್ತಿಸಿದ್ದಾರೆಂಬುದನ್ನು ವಿಶ್ಲೇಷಿಸಲು ನಿಗಮನ ತರ್ಕದ ವೈಧಾನಿಕತೆಯನ್ನು ಇಲ್ಲಿ ಮುಖ್ಯವಾಗಿ ಬಳಸಲು ಆಶಯವನ್ನು ಹೊಂದಲಾಗಿದೆ.

ನಿಗಮನ ತರ್ಕದ ವೈಧಾನಿಕತೆಯು ತಾತ್ವಿಕವಾಗಿ ವ್ಯಕ್ತಿನಿಷ್ಠ (Subjectivity) ಮಾದರಿಯಲ್ಲಿ ಸಾಗುತ್ತದೆ. ವಸ್ತುವೊಂದು ಇರುವ ಸ್ವರೂಪ ಹಾಗೂ ಅದು ಹೊಂದಿರುವ ಪ್ರಭಾವ ಸ್ವರೂಪಗಳನ್ನು ಕೂಲಂಕುಶವಾಗಿ ಗ್ರಹಿಸುವ ಒಳಗಿನಿಂದ ನೋಡುವ ಕ್ರಮವೊಂದನ್ನು ಹೇಳುತ್ತದೆ. ಸಾಂಸ್ಕೃತಿಕವಾದ ಮತ್ತು ಸಾಮಾಜಿಕವಾದ ವಸ್ತು ಸಂಗತಿಗಳನ್ನು ಒಳಹೊಕ್ಕು ನೋಡಿದಾಗಲೇ ಅವುಗಳ ನಿಜಸ್ವರೂಪ ಬಯಲಾಗುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನವನ್ನು ವಸ್ತುನಿಷ್ಠತೆಗೆ ಬದಲಾಗಿ ಈ ವ್ಯಕ್ತಿನಿಷ್ಠ ದೃಷ್ಟಿಕೋನವನ್ನು ಅನುಸರಿಸಿ ನಡೆಸಲಾಗಿದೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಬಳಸಲಾಗುತ್ತಿರುವ ವಿಶ್ಲೇಷಣಾ ಮಾನದಂಡಗಳಾದ ಅಂತರ್‌ಶಿಸ್ತೀಯ, ಬಹುಶಿಸ್ತೀಯ, ಗುಣಾತ್ಮಕ ವಿಧಾನಗಳನ್ನು ಅನುಸರಿಸಲಾಗಿದೆ. ಈ ಪ್ರಬಂಧದ ಸಾಹಿತ್ಯ ಚಿಂತನೆಯನ್ನು ಸಾಂಸ್ಕೃತಿಕ ವಿಶ್ಲೇಷಣಾ (Caltural Analysts) ಮಾದರಿಯಲ್ಲಿ ಮೇಲಿನ ವಿಧಾನಗಳನ್ನೇ ಅನ್ವಯಿಸಿ ವಿಶ್ಲೇಷಿಸಲಾಗುವುದು. ಯಾವುದೇ ಸಾಮಾಜಿಕ ವಸ್ತು ಸಂಗತಿಗಳ ಮೂಲ ಅಧ್ಯಯನ ಹಾಗೂ ಪ್ರತಿನಿಧೀಕರಣಗಳ ಅಧ್ಯಯನಗಳ ಸಂದರ್ಭದಲ್ಲಿ ಸಧ್ಯಕ್ಕಂತೂ ಈ ವೈಧಾನಿಕತೆಗಳನ್ನೇ ಬಳಸದೆ ಗತ್ಯಂತರವಿಲ್ಲವೆಂದೆನಿಸುತ್ತದೆ. ಹಾಗಾಗಿ ಮೇಲಿನ ಒಟ್ಟು ವಿಶ್ಲೇಷಣೆಯಲ್ಲಿ ಮಂಡಿಸಲಾದ ಚೌಕಟ್ಟಿನಲ್ಲಿಯೇ ಪ್ರಸ್ತುತ ಮಹಾ ಪ್ರಬಂಧದ ವಿಶ್ಲೇಷಣೆ ಹಾಗೂ ವ್ಯಾಖ್ಯಾನದ ಸ್ವರೂಪವನ್ನು ಇಟ್ಟುಕೊಳ್ಳಲಾಗಿದೆ.

### ೧.೪. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಈ ಸಂಶೋಧನಾ ಮಹಾಪ್ರಬಂಧ ರಚಿಸುವ ಸಂದರ್ಭದಲ್ಲಿ ನಾನು ಆಯ್ಕೆಮಾಡಿಕೊಂಡ ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಅಧ್ಯಯನಗಳನ್ನು ನಡೆಸಲಾಗಿರುವುದನ್ನು ಒಂದು ಸಮೀಕ್ಷಾತ್ಮಕ ಬರಹದಲ್ಲಿ ಕಟ್ಟಿಕೊಡಲು ಇಲ್ಲಿ ಕ್ರಮವ್ಯಾಪ್ತಿ ಮಾಡಿಕೊಳ್ಳಲಾಗಿದೆ. ಈ ಎಲ್ಲ ಅಧ್ಯಯನಗಳು ಮುಖ್ಯವಾಗಿ ಸಣ್ಣಕತೆಗಳನ್ನು ಆಧರಿಸಿದರೂ ಆಯಾ ಅಧ್ಯಯನಗಳ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಗಳು ಭಿನ್ನಸ್ವರೂಪದವುಗಳಾಗಿವೆ. ನಾನು ಗಮನಿಸಿದ ಬಹುತೇಕ ಈ ಬಗೆಯ ಅಧ್ಯಯನಗಳು ಏಕಮಾದರಿಯಲ್ಲಿ, ವ್ಯಕ್ತಿಕೇಂದ್ರಿತ, ಕೃತಿಕೇಂದ್ರಿತ ನೆಲೆಯಲ್ಲಿ ನಡೆಸಲಾಗಿರುವುದನ್ನು ಇಲ್ಲಿ ಪ್ರಸ್ತಾಪಿಸಬಯಸುತ್ತೇನೆ.

ಕರೀಗೌಡ ಬೀಚನಹಳ್ಳಿಯವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಿದ್ಧಪಡಿಸಿದ ಪಿಎಚ್.ಡಿ ಮಹಾಪ್ರಬಂಧ 'ವ್ಯಷ್ಟಿ ಮತ್ತು ಸಮಷ್ಟಿ' ನವ್ಯ ಕಾಲ ಘಟ್ಟದ ಸಣ್ಣಕತೆಗಳನ್ನು ಆಧರಿಸಿದ ಅಧ್ಯಯನವಾಗಿದೆ. ಇದು ನವ್ಯಕಾಲ ಘಟ್ಟದ ಕತೆಗಳ ಸಮಗ್ರ ಅಧ್ಯಯನವನ್ನು ಮಾಡಲು ತೊಡಗಿದೆ. ಸಿ.ಬಿ. ಹೊನ್ನಯ್ಯನವರು ''ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ'' ಎಂಬ ಅಧ್ಯಯನವು ದಲಿತ ಸಂಸ್ಕೃತಿಯನ್ನೇ ಪ್ರಧಾನ ಧಾರೆಯಾಗಿಟ್ಟುಕೊಂಡು ರಚನೆಮಾಡಿರುವಂತದ್ದಾಗಿದೆ.

ಎಲ್ ಹನುಮಂತಯ್ಯನವರು 'ಕಥಾಕಥನ' ಎಂಬ ಅಧ್ಯಯನವು ದಲಿತ ಬಂಡಾಯ ಕತೆಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ. ಹೆಚ್. ಕುಮಾರಸ್ವಾಮಿಯವರ ''ದಲಿತ ಚಳುವಳಿ ಸಾಮಾಜಿಕ ನ್ಯಾಯ'' (ಸಾಹಿತ್ಯವನ್ನು ಅನುಲಕ್ಷಿಸಿ) ಮಹಾಪ್ರಬಂಧವೂ ದಲಿತ ಚಳುವಳಿಯನ್ನು ಪ್ರಮುಖವಾಗಿಟ್ಟು ರಚಿತವಾದ ಪ್ರಬಂಧವಾಗಿದ್ದು ಇಲ್ಲಿ ದಲಿತ ಕಾವ್ಯ ಬಿಟ್ಟರೆ ಉಳಿದ ಪ್ರಕಾರಗಳ ಅಧ್ಯಯನದ ಕೊರತೆ ಎದ್ದು ಕಾಣುತ್ತದೆ. ವ್ಯಕ್ತಿ ಅಥವಾ ಲೇಖಕ ಕೇಂದ್ರಿತ ಅಧ್ಯಯನವಾಗಿ ಬಿ.ಜಿ.ಅಮೃತೇಶ್ವರ್ ಅವರ ''ಕುಂ. ವೀರಭದ್ರಪ್ಪನವರ ಸಮಗ್ರ ಸಾಹಿತ್ಯ'' ಒಂದು ಅಧ್ಯಯನ ಸಾಹಿತಿಯೊಬ್ಬರ ಜೀವನ ಸಾಧನೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿತವಾದಂತಹ ಸಂಶೋಧನಾ ಬರವಣಿಗೆಯಾಗಿ ಕಾಣುತ್ತದೆ. ಇದೇ ಮಾದರಿಯಲ್ಲಿ ಸೂರ್ಯಕಾಂತ ಮದಾನೆಯವರ ಎಂ.ಫಿಲ್ ಕಿರು ಪ್ರಬಂಧ ''ಕುಂ. ವೀರಭದ್ರಪ್ಪನವರ ಸಣ್ಣಕತೆಗಳು'' ಒಂದು ಅಧ್ಯಯನವು ಕೂಡ ಸಾಗಿಬಂದಿದೆ. ಬಿ.ಗಂಗಾಧರರು ''ಬಂಡಾಯ ಸಾಹಿತ್ಯದ ಕಾದಂಬರಿಗಳು ಒಂದು ಅಧ್ಯಯನ'' ಪಿಎಚ್.ಡಿ ಮಹಾಪ್ರಬಂಧವು ಬಂಡಾಯ ಸಾಹಿತ್ಯದ ಧೋರಣೆಯೊಂದಿಗೆ ರಚಿತವಾದ, ಕೆಲವು ಕಾದಂಬರಿಕಾರರ ಕೃತಿಗಳ ಮೇಲೆ ರಚಿತವಾದಂತಹ ಸಂಶೋಧನಾ ಮಹಾಪ್ರಬಂಧವಾಗಿದೆ.

ಹೀಗೆ ನಾನು ಗಮನಿಸಿದ ಕೆಲವು ಸಂಶೋಧನಾ ಮಹಾಪ್ರಬಂಧಗಳು ಏಕಮಾದರಿಯಲ್ಲಿ ಕೆಲವು ಪರಿಕಲ್ಪನೆಗಳನ್ನಿಟ್ಟುಕೊಂಡು ರಚಿಸಿರುವುದು ಕಂಡುಬರುತ್ತದೆ. ಆದರೆ ನಾನು ರಚಿಸಿದ ''ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ'' (ಸಣ್ಣಕತೆಗಳನ್ನಾಧರಿಸಿ) ಎಂಬ ಮಹಾಪ್ರಬಂಧವು. ಅನೇಕ ಸಾಂಸ್ಕೃತಿಕ ಪಲ್ಲಟಗಳಿಗೆ ಒಳಗಾದ ಮೂರು ದಶಕಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಿರುವುದಾಗಿದೆ. ಜೊತೆಗೆ ಈ ಸಂದರ್ಭದಲ್ಲಿ ಕಾಣಿಸಿಕೊಂಡ 'ಸಂಸ್ಕೃತಿ' ನಿರ್ವಚನವು ಪಡೆದುಕೊಂಡ ಬೇರೆ ಬೇರೆ ಅರ್ಥರೂಪ ವ್ಯಾಖ್ಯಾನಗಳನ್ನು ವಿಶ್ಲೇಷಣೆ ಮಾಡಿದ್ದೇನೆ. ಸಾಂಸ್ಕೃತಿಕ ವಿದ್ಯಮಾನಗಳನ್ನು ಕುರಿತು ಬರೆದಿದ್ದೇನೆ. ದಲಿತ, ಮುಸ್ಲಿಂ,

ಮಹಿಳಾ, ನವವಸಾಹತು ಶಾಹಿ ಮತ್ತು ಭಾಷಿಕ ನೆಲೆಗಳ ಈ ಎಲ್ಲಾ ಅನನ್ಯತೆಗಳು ಇಪ್ಪತ್ತನೆ ಶತಮಾನದಲ್ಲಿ ಕಾಣಿಸಿಕೊಂಡು ಉಂಟುಮಾಡಿದ, ಕಟ್ಟಿಕೊಟ್ಟ ಸಾಂಸ್ಕೃತಿಕ ಬದುಕಿನ ವಿಶ್ಲೇಷಣೆಯನ್ನು ತಾತ್ವಿಕ ಚರಿತ್ರೆಯ ಜೊತೆಗೆ ಸಣ್ಣಕತೆಗಳ ಸಂದರ್ಭಗಳನ್ನಿಟ್ಟುಕೊಂಡು ಚರ್ಚಿಸಿದ್ದೇನೆ. ಇದೊಂದು ಇಪ್ಪತ್ತನೇಯ ಶತಮಾನದ ಒಟ್ಟು ತಲ್ಲಣಗಳನ್ನು, ಸ್ಥಿತ್ಯಂತರಗಳನ್ನು ಒಟ್ಟುಗೂಡಿಸಿ ಬಹುಶಿಸ್ತೀಯ ಮಾದರಿಯಲ್ಲಿ ರಚಿತವಾದ ಅಧ್ಯಯನ ಸ್ವರೂಪವಾಗಿದೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಸಾಂಸ್ಕೃತಿಕ ಬದುಕಿನ ಸ್ಥಿತ್ಯಂತರಗಳನ್ನೊಳಗೊಂಡ 'ಸಂಸ್ಕೃತಿ ಕಥನ'ವೇ ಮಹಾಪ್ರಬಂಧವಾಗಿದೆ.

* * * * *

ಅಧ್ಯಾಯ : ಎರಡು

# ಸಂಸ್ಕೃತಿ ಪ್ರಶ್ನೆಯ ಚರ್ಚೆಯ ನೆಲೆಗಳು

೨.೧. ಸಂಸ್ಕೃತಿ ಪರಿಕಲ್ಪನೆಯ ನಿರ್ವಚನ

೨.೨. ವಸಾಹತು ಕಾಲಘಟ್ಟದ ಸಂಸ್ಕೃತಿ ಪರಿಕಲ್ಪನೆಯ ವ್ಯಾಖ್ಯಾನದ ಸ್ವರೂಪ

೨.೩. ವಸಾಹತು ಕಾಲಘಟ್ಟದ ನಂತರದ ಚಿಂತಕರ ಸಂಸ್ಕೃತಿ ನಿರ್ವಚನ

೨.೪. ಎಪ್ಪತ್ತರ ದಶಕದ ಸಂಸ್ಕೃತಿ ನಿರ್ವಚನ

# ಅಧ್ಯಾಯ : ಎರಡು

## ಸಂಸ್ಕೃತಿ ಪ್ರಶ್ನೆಯ ಚರ್ಚೆಯ ನೆಲೆಗಳು

### ೨.೧. ಸಂಸ್ಕೃತಿ ಪರಿಕಲ್ಪನೆಯ ನಿರ್ವಚನ

ಇಂದು 'ಸಂಸ್ಕೃತಿ' ಎಂಬ ಶಬ್ದ ಬಹುಮುಖಿಯಾದ ನೆಲೆಗಳಲ್ಲಿ ಅರ್ಥವ್ಯಾಪ್ತಿಯನ್ನು ಪಡೆದುಕೊಂಡು ಬೆಳೆಯುತ್ತಾ ಬಂದಿದೆ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕವಾದ ಆಚರಣೆಗಳವರೆಗೂ ಅದರ ಅರ್ಥವ್ಯಾಪ್ತಿ ವಿಸ್ತರಿಸಿದೆ. ಇಲ್ಲಿ ಸಂಸ್ಕೃತಿಯ ಪ್ರಶ್ನೆ ಎಂದರೆ ಬದುಕಿನ ಪ್ರಶ್ನೆ, ಸಮಷ್ಟಿ ಬದುಕಿನ ಆಚಾರ ವಿಚಾರಗಳ ಗ್ರಹಿಕೆ, ಪರಿಶೀಲನೆಯೂ ಆಗಿರುತ್ತದೆ.

'ಸಂಸ್ಕೃತಿ' ಎಂಬ ಶಬ್ದವು 'ಸಂಸ್ಕೃತ' 'ಸಂಸ್ಕಾರ' ಮುಂತಾದವುಗಳಂತೆ ಒಂದೇ ಮೂಲದಿಂದ ಹುಟ್ಟಿರುವಂತದ್ದು. ಸಂಸ್ಕೃತ ಅಥವಾ ಸಂಸ್ಕಾರ ಎಂದರೆ ಸುಧಾರಿಸಿದ, ನಯಗೊಳಿಸಿದ, ಪವಿತ್ರಗೊಳಿಸಿದ, ಪರಿಶುದ್ಧಗೊಳಿಸಿದ, ಶ್ರೇಷ್ಠವಾದ ಮುಂತಾದ ಅರ್ಥಗಳಿವೆ. ಈ ಸಂಸ್ಕೃತಿ ಪರಿಕಲ್ಪನೆ ಹೊಸ ಹೊಸ ಅರ್ಥದ ನೆಲೆಗಳನ್ನು ಒಳಗೊಂಡಿದೆ. ಇಂದಿನ ಸಮಷ್ಟಿ ಜೀವನದ ವಿಕಾಸಕ್ಕೆ ಕಾರಣವಾದ ಸಾಮರಸ್ಯದ ಸಂಸ್ಕಾರ ಎಂಬುದರವರೆಗೂ ಈ ಪದದ ಅರ್ಥವ್ಯಾಪ್ತಿ ಬೆಳೆದಿದೆ. ''ಈ ಸಂಸ್ಕೃತಿ ಶಬ್ದಕ್ಕೆ 'ಮಾನಸಿಕ ಪಕ್ವತೆ' ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ''[೧] ಎಂಬ ಅರ್ಥವನ್ನು ನಿಘಂಟಿನಲ್ಲಿ ಹೇಳಲಾಗಿದೆ. ಈ ಸಂಸ್ಕೃತಿ ನಿರ್ವಚನದ ನೆಲೆಯನ್ನು ಮತ್ತೊಂದು ರೀತಿಯಲ್ಲಿ ಹೇಳುವುದಾದರೆ 'ಸಂಸ್ಕೃತಿ' ಎಂಬುದು ವೈಯಕ್ತಿಕವಾದುದು. ಒಬ್ಬೊಬ್ಬ ವ್ಯಕ್ತಿಯ ಅಂತರಂಗದಲ್ಲಿ ಅರಳುವ ಪರಿಮಳ, ವ್ಯಕ್ತಿಯ ವಿಕಾಸಕ್ಕೆ ಕಾರಣವಾಗುವ ಸಾಮಾಜಿಕ ಪರಿಕರಗಳೂ ಸಹ ಸಂಸ್ಕೃತಿಯಲ್ಲಿಯೇ ಸಮಾವೇಶಗೊಳ್ಳುತ್ತವೆ. ಅಲ್ಲದೆ ಈ ಪದದ ಪ್ರಸಾರವು ವ್ಯಾಪಕವಾಗಿದ್ದು ಅಲ್ಲಲ್ಲಿ ದೇಶವಾಚಕವಾಗಿಯೂ ಬಳಸಿರುವುದು ತಿಳಿದುಬರುತ್ತದೆ. ಉದಾ: ಭಾರತೀಯ ಸಂಸ್ಕೃತಿ, ಕರ್ನಾಟಕ ಸಂಸ್ಕೃತಿ ಇತ್ಯಾದಿಯಾಗಿ ಇನ್ನು ಕೆಲವು ಸಂದರ್ಭಗಳಲ್ಲಿ ಭಾಷಾವಾಚಕವಾಗಿ, ಮತಧರ್ಮಗಳ ಸೂಚಕವಾಗಿಯೂ ಬಳಸಿರುವುದುಂಟು. ಈ ಎಲ್ಲಾ ಸಂದರ್ಭಗಳಲ್ಲಿಯೂ ಸಂಸ್ಕೃತಿ ಎಂಬುದು ಒಂದೇ ಅರ್ಥದಲ್ಲಿ ಬಳಕೆಯಾಗದೆ, ಭಿನ್ನ ಭಿನ್ನ ಅರ್ಥವಲಯಗಳಲ್ಲಿ ಬಳಕೆಯಾಗುತ್ತಾ ಬಂದಿರುವುದು ಗೋಚರವಾಗುತ್ತದೆ. ಹೀಗಾಗಿ 'ಸಂಸ್ಕೃತಿ' ಎಂಬ ಪರಿಕಲ್ಪನೆಯ ಅರ್ಥ

ಸ್ವರೂಪವನ್ನು ಹೀಗೆಯೇ ಎಂದು ಸ್ಪಷ್ಟಪಡಿಸಿ ಒಂದು ವಾಕ್ಯಗುಚ್ಛವಾಗಿ ಮಂಡಿಸುವುದು ಸವಾಲಾಗಿ ಪರಿಣವಿಸಿದೆ. ಒಟ್ಟಾರೆ ಸಂಸ್ಕೃತಿ ಎಂಬುದು ಆಯಾ ಪ್ರದೇಶದ, ಆಯಾ ಭಾಷೆಯ ಆಯಾ ಧರ್ಮದ ಜನಗಳು ತಮ್ಮ ಬಹುಮುಖಿ ಸಮಸ್ಯೆಗಳಿಗೆ ಉತ್ತರವನ್ನು ಕಾಣಬಯಸುವ ಅಂತರಂಗದ ಸಾಧನೆಯೇ ಸಂಸ್ಕೃತಿಯ ಮೂಲ ಸಾಮಾಗ್ರಿಯಾಗಿರುತ್ತದೆ.

ಈ ಸಂಸ್ಕೃತಿ ಪರಿಕಲ್ಪನೆಯ ಚರ್ಚೆಯೊಂದಿಗಿನ ಹುಡುಕಾಟ ನಿರಂತರವಾಗಿ ನಡೆಯುತ್ತಲೇ ಇದೆ. ಕ್ರಿಯೆಯಿಲ್ಲದೆ ಸಂಸ್ಕೃತಿಯಿಲ್ಲ, ಅಂದರೆ ಸಂಸ್ಕೃತಿಯು ಕೇವಲ ಸ್ಥಗಿತಸ್ಥಿತಿಯಲ್ಲ. ನಿರಂತರವಾದ ಚಲನೆಯ ಸ್ಥಿತಿಯು ಸಂಸ್ಕೃತಿಯಲ್ಲಿ ಅಂತರ್ಗತವಾಗಿರುತ್ತದೆ. ವ್ಯಕ್ತಿಯ ಸ್ವಭಾವಕ್ಕೆ ಸಂಸ್ಕಾರವನ್ನು ಕೊಡುವ ಶಕ್ತಿಯೆಂಬ ಅರ್ಥವನ್ನು ಕೂಡ ಸಂಸ್ಕೃತಿ ಪಡೆದಿದೆ. ವ್ಯಕ್ತಿಯ ಮನಸ್ಸಿನ ಮೇಲೆ ಸಂಸ್ಕಾರವನ್ನುಂಟುಮಾಡಿ ಆತನನ್ನು ಪೂರ್ಣ ಪ್ರಜ್ಞೆಯ ಕಡೆಗೆ ನಡೆಯುವಂತೆ ಮಾಡುವ ಗುಣ ಸಂಸ್ಕೃತಿಗೆ ಇರುತ್ತದೆ. ಧರ್ಮಜಿಜ್ಞಾಸೆಯಾಗಲೀ ಸಂಗೀತ ಸಾಹಿತ್ಯಾದಿ ಕಲೆಗಳಾಗಲೀ ಸಾರ್ಥಕವಾಗಬೇಕಾದರೆ ಅವು ವ್ಯಕ್ತಿಯ ಜೀವನವನ್ನು ಪೂರ್ಣತೆಯತ್ತ ಸಾಗುವಂತೆ ಮಾಡುವ ಶಕ್ತಿಯನ್ನು ಪಡೆದಿರಬೇಕು. ಅವುಗಳಲ್ಲಿರುವ ಅಂತಃ ಶಕ್ತಿಯ ಜೊತೆಗೆ ಅದನ್ನು ಅರಿತು ಆಚರಿಸಬಲ್ಲ ಸಂಸ್ಕಾರವೂ ವ್ಯಕ್ತಿಯಲ್ಲಿದ್ದರೆ ಅವೆರಡರ ಸಂಗಮದಿಂದ ಸಂಸ್ಕೃತಿ ನಿಷ್ಪನ್ನವಾಗುತ್ತದೆ. ಸಂಸ್ಕೃತಿಯಲ್ಲಿ ಮನುಷ್ಯ ಮತ್ತು ಕ್ರಿಯೆಯ ಪಾತ್ರವು ಮಹತ್ವದ್ದಾಗಿದೆ. ಸಂಸ್ಕೃತಿಯು ಮನುಷ್ಯನ ಅನುಭವದಲ್ಲಿ ಸಾರ್ವತ್ರಿಕವಾಗಿಯೂ ಸ್ಥಳೀಯತೆ ಮತ್ತು ಪ್ರಾದೇಶಿಕ ಗುಣವನ್ನು ಒಳಗೊಂಡಿರುತ್ತದೆ. ಸ್ಥಿರವೂ ನಿರಂತರ ಚಲನಶೀಲವೂ ಆಗಿರುವ ಸ್ಥಿತಿಯನ್ನು ಉತ್ತೇಜಕ ಹಾಗೂ ನಿಯಂತ್ರಕವಾಗಿ ಕೆಲಸ ಮಾಡುವ ಪರಿಯನ್ನು ಸಂಸ್ಕೃತಿ ಸೂಚಿಸುತ್ತದೆ. ಈ ಪದವು ಮನುಷ್ಯನಿಗೆ ಸಂಬಂಧಿಸಿರುವುದರಿಂದ, ಮಾನವ ಸಮುದಾಯದ ಬದುಕಿನ ವೈರುಧ್ಯ ಮತ್ತು ವ್ಯಾಪ್ತಿಗಳನ್ನು ಸಂಸ್ಕೃತಿ ಒಳಗೊಳ್ಳುವುದು ಸಹಜವಾಗಿದೆ. ಮನುಷ್ಯನೇ ಸಂಸ್ಕೃತಿಯ ಮೂಲ ನಿರ್ಮಾಪಕ ನಿರ್ದೇಶಕನಾಗಿದ್ದಾನೆ. ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟು ಸಂಸ್ಕೃತಿಯ ವಿಕಾಸವಾಗುತ್ತದೆ. ಮನುಷ್ಯನ ಇರುವಿಕೆಯಿಂದ ಸಂಸ್ಕೃತಿಯ ಇರುವಿಕೆಯೂ ಇದೆ. ಮನುಷ್ಯನ ಶ್ರಮ ಶಕ್ತಿ ಕ್ರಿಯೆಗಳು ಸಂಸ್ಕೃತಿಯ ಬೆಳವಣಿಗೆಯ ದಿಕ್ಕನ್ನು ನಿರ್ಧರಿಸುತ್ತದೆ.

'ಸಂಸ್ಕೃತಿ' ಯೆನ್ನುವಂತದ್ದು ಸಾರ್ವಕಾಲಿಕ ಸತ್ಯವಾದದ್ದು. ಇದು ಆಧುನಿಕ ಕಾಲದಲ್ಲಿ ಇರುತ್ತದೆ. ಒಂದೊಂದು ಕಾಲದ, ಒಂದೊಂದು ಪ್ರದೇಶದ ಸಂಸ್ಕೃತಿಯಲ್ಲಿ ವ್ಯತ್ಯಾಸಗಳಿರುವುದೂ ಸಹಜವಾಗಿರುತ್ತದೆ. ಅಂದಿನದೂ ಸಂಸ್ಕೃತಿ, ಇಂದಿನದೂ ಸಂಸ್ಕೃತಿ, ಅವುಗಳ ಸ್ವಭಾವ ಮತ್ತು ಸ್ವರೂಪದಲ್ಲಿ ಅಂತರವಿರಬಹುದು, ಮೌಲ್ಯಗಳು ವ್ಯತ್ಯಾಸಗೊಂಡಿರಲೂಬಹುದು. ಸಂಸ್ಕೃತಿಯಲ್ಲಿ ತರತಮವೆಂಬುದಿಲ್ಲ. ನೈತಿಕವಾಗಿ ಕೆಟ್ಟ ಒಳ್ಳೆಯ, ವಿಕಾಸದ ದೃಷ್ಟಿಯಿಂದ ಹಿಂದುಳಿದ ಮುಂದುವರೆದ ಮತ್ತು ಶ್ರೇಣೀಕರಣದ ನೆಲೆಯಿಂದ ಮೇಲುಕೀಳು ಎಂಬುದರಿಂದ ಅಳೆಯಲುಬಾರದು. ಸಮಾಜದಲ್ಲಿರುವ ಸಮಷ್ಟಿ ಸಮುದಾಯದ ಎಲ್ಲ ಬಗೆಯ ನಂಬಿಕೆ ಆಚರಣೆಗಳನ್ನು ಸಂಸ್ಕೃತಿಯೆಂದೇ ಒಪ್ಪಿಕೊಳ್ಳತಕ್ಕದ್ದು. ಈ ಸಂಸ್ಕೃತಿ ಪರಿಕಲ್ಪನೆಯು ಮೂಲತವಾಗಿ ಒಂದು ರಾಜಕೀಯ, ಆರ್ಥಿಕ, ಮತ್ತು ಸಾಮಾಜಿಕವಾದ ಲೋಕದೃಷ್ಟಿಯಾಗಿದೆ. ಈ ಸಂಸ್ಕೃತಿ ಶಬ್ದವು ರಾಜಕೀಯ, ಆರ್ಥಿಕ, ಸಾಮಾಜಿಕ ಚಿಂತನೆಯನ್ನು ಒಳಗೊಂಡಿರುತ್ತದೆ. ಆತ್ಮ ಸಂಸ್ಕಾರದ ಸಾಮೂಹಿಕ ನೆಲೆಯಿಂದ ಸಂಸ್ಕೃತಿಯನ್ನು ಅರ್ಥೈಸಲಾಗುತ್ತದೆ. ''ಒಂದು ನಿರ್ದಿಷ್ಟವಾದಂತ ಸಮಾಜದ ಸದಸ್ಯರು ಹಂಚಿಕೊಳ್ಳುವ ಹಾಗೂ ಪ್ರಸಾರ ಮಾಡುವ ಜ್ಞಾನ, ದೃಷ್ಟಿಕೋನ ಮತ್ತು ಸ್ವಾಭಾವಿಕ ನಡವಳಿಕೆಯ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿ''[೨] ಎಂದು ಪಾಶ್ಚಾತ್ಯ ಸಂಸ್ಕೃತಿ

ಚಿಂತಕ ಲಿಂಟನ್ ಹೇಳಿದ್ದಾನೆ. ಈತ ನಿರ್ದಿಷ್ಟ ಸಮಾಜ ಮತ್ತು ಪರಸ್ಪರ ಹಂಚಿಕೊಳ್ಳುವ ಪ್ರಕ್ರಿಯೆಯನ್ನು ಪ್ರಧಾನವಾಗಿ ಗಮನಿಸಿರುವುದು ಕಂಡುಬರುತ್ತದೆ. ಇಲ್ಲಿ ಸಂಸ್ಕೃತಿ ಪದವು ಸಾಮೂಹಿಕ ನೆಲೆಯಿಂದ ಅರ್ಥವಿನ್ಯಾಸ ಪಡೆದುಕೊಂಡಿರುವುದು ಗೋಚರವಾಗುತ್ತದೆ.

**೨.೨. ವಸಾಹತು ಕಾಲಘಟ್ಟದ ಸಂಸ್ಕೃತಿ ಪರಿಕಲ್ಪನೆಯ ವ್ಯಾಖ್ಯಾನದ ಸ್ವರೂಪ**

ವಸಾಹತು ಕಾಲಘಟ್ಟದ ಸಂಸ್ಕೃತಿಯ ವಿಶ್ಲೇಷಣೆಯನ್ನು ಕುರಿತು ಚಿಂತನೆ ಮಾಡಿದಾಗ ಈ ಸಂಸ್ಕೃತಿ ಪರಿಕಲ್ಪನೆಯು ಪರಂಪರೆ ಮತ್ತುನಾಗರೀಕತೆಗಳಂತೆ ಇದೊಂದು ಬೌದ್ಧಿಕ ರಚನೆಯಂತೆ ಬಳಕೆಯಾಗಿರುವುದು ಕಂಡುಬರುತ್ತದೆ. ಈ ಪದವು ಬದುಕಿನ ಸಮಗ್ರ ಅರ್ಥವನ್ನು ಪಡೆದುಕೊಂಡು ಬಳಕೆಯಾದಂತ ಪರಿಭಾಷೆಯೂ ಇದಾಗಿದೆ. ಜನಸಾಮಾನ್ಯರ ನಿಘಂಟಿನಲ್ಲಿ ಈ ಶಬ್ದವಿಲ್ಲ. ಸಾಮಾನ್ಯವಾಗಿ ಜನರನ್ನು ನಾವು 'ನಿಮ್ಮ ಜಾತಿಧರ್ಮ ಯಾವುದು?' ಎಂದು ಕೇಳಿದರೆ ಸಲೀಸಾಗಿ ಉತ್ತರ ಕೊಡಬಹುದು. ಆದರೆ 'ನಿಮ್ಮ ಸಂಸ್ಕೃತಿ ಯಾವುದು?' ಎಂದರೆ ತಡವರಿಸುತ್ತಾರೆ. ಯಾಕೆಂದರೆ ಇಂದು ಜಾತಿಮತಗಳು ಸಾಮಾಜಿಕ ವಾಸ್ತವ. ಆದರೆ ಈ ಸಂಸ್ಕೃತಿ ಪದವನ್ನು ಬೌದ್ಧಿಕ ಚರ್ಚೆ ಮಾಡುವವರು ಮಾತ್ರ ಪರಿಭಾಷೆಯಾಗಿ ಬಳಸುತ್ತಾರೆ. ಈ ಸಂಸ್ಕೃತಿ ಶಬ್ದವನ್ನು ಪರಿಭಾಷೆಯಾಗಿ ಬಳಸುವ ವಿದ್ವಾಂಸರಲ್ಲೂ ಈ ಕುರಿತ ಖಚಿತ ಉತ್ತರ ಸಿಕ್ಕಿಲ್ಲ. ಒಂದು ವೇಳೆ ಸಿಕ್ಕರೂ ಸಂಸ್ಕೃತಿ ನಿರ್ವಚನ ಕುರಿತ ಅಭಿಪ್ರಾಯಗಳು ಏಕಾಭಿಪ್ರಾಯವಿಲ್ಲ. ಕನ್ನಡ ಸಂಸ್ಕೃತಿ ಚಿಂತಕರಲ್ಲಿ ಪ್ರಮುಖರಾದ ಡಿ.ವಿ. ಗುಂಡಪ್ಪನವರು ''ಪುರಾತನ ಗ್ರಂಥಗಳಲ್ಲಿ ಎಲ್ಲಿಯೂ ಸಂಸ್ಕೃತಿ ಪದ ಪ್ರಯೋಗ ಬಳಕೆಯಲ್ಲಿಲ್ಲವೆಂದೂ ಸಂಸ್ಕೃತನ ಗುಣ ಸಂಪತ್ತು ಸಂಸ್ಕೃತಿ, ಈ ಅರ್ಥದಲ್ಲಿ ಸಂಸ್ಕೃತಿ ಶಬ್ದ ಕನ್ನಡದಲ್ಲಿ ಈಗ ಹದಿನೈದು ಇಪ್ಪತ್ತು ವರ್ಷಗಳಿಂದ ಈಚೆಗೆ ಹೆಚ್ಚಾಗಿ ರೂಢಿಗೆ ಬರುತ್ತಿದೆ''[೩] ಎಂಬ ಸಂಗತಿಯನ್ನು ಗಮನಿಸಿ ವಿವರಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ನಂತರದ ದಿನಗಳಲ್ಲಿ ಡಿವಿಜಿಯವರು 'ಸಂಸ್ಕೃತಿ' ಕುರಿತು ಚಿಂತನೆ ಮಾಡಿ ಬರೆದ ಲೇಖನದಲ್ಲಿ ''ಸಂಸ್ಕೃತಿಯೆಂದರೆ ಮನುಷ್ಯರ ಅನ್ಯೂನ್ಯ ಸಂಬಂಧಗಳಲ್ಲಿ ನಯವಿನಯಗಳ ಸೊಬಗು ಸ್ವಗುಣ ಪರಗುಣಗಳ ಸಂಮಿಶ್ರಿತ ಕಾಂತಿ. ಈ ಸಂಸ್ಕೃತಿ, ಮೂಲದಲ್ಲಿ ನಮ್ಮ ಅಂತರಂಗ ಜೀವನಕ್ಕೆ ಸಂಬಂಧಪಟ್ಟದ್ದು ಅದು ನಮ್ಮ ಒಳ ಸಂಪತ್ತು. ಅದರ ಜಾಗ ಮನಸ್ಸು ಮತ್ತು ಹೃದಯ. ಅದರಿಂದ ಬೇರೆಯಾದದ್ದು ನಮ್ಮ ಬಹಿರಂಗ ಜೀವನ ಇದ್ದವು ಮನೆ ವಾಹನ, ಒಡವೆ, ಹಣ ಮೊದಲಾದ ಘನವಸ್ತುಗಳು''[೪] ಎಂದಿದ್ದಾರೆ. ಈ ಹೇಳಿಕೆಯು ನಿಸ್ಸಂದಿಗ್ಧವಾಗಿ ಸಂಸ್ಕೃತಿಯನ್ನು ಅಂತರಂಗದ ಪರಿಕರವಾಗಿ ಪರಿಭಾವಿಸಿರುವುದು ಕಂಡುಬರುತ್ತದೆ. 'ಅಂತರಾತ್ಮ ಶುಭವೇ ಧರ್ಮಕ್ಕೆ ಪ್ರಮಾಣ; ಅದೇ ಸಂಸ್ಕೃತಿ ಬೀಜ' ಎನ್ನುವ ಡಿವಿಜಿಯವರು ವ್ಯಕ್ತಿ ಈಗ ಸಮಾಜ ಭೂತದ ಪಾದುಕೆ ಮಾತ್ರವೆಂದೂ ಹೇಳುತ್ತಾರೆ. ಇಲ್ಲಿ ಧರ್ಮ, ಅಂತರಾತ್ಮ ಮತ್ತು ಸಂಸ್ಕೃತಿಗಳನ್ನು ಸಮೀಕರಿಸುವುದಲ್ಲದೆ, ವ್ಯಕ್ತಿಯನ್ನು ಭೂತದ ಪಾದುಕೆ ಮಾತ್ರವಾಗಿ ಪರಿಗಣಿಸಲಾಗಿದೆ. ಸಮಾಜ ಭೂತದ ನಡಿಗೆಗೆ ರಕ್ಷಣೆ ನೀಡುವ ಸಾಮಾಗ್ರಿ ಮಾತ್ರನಾಗುವುದು ಮನುಷ್ಯನ ಕೆಲಸವೆಂಬ ದೃಷ್ಟಿಕೋನ ಇಲ್ಲಿ ಮುಖ್ಯವಾಗಿದೆ.

ಡಿವಿಜಿಯವರು ತಮ್ಮ 'ಸಂಸ್ಕೃತಿ' ಕೃತಿಯಲ್ಲಿ ಸಾದರಪಡಿಸಿರುವ ಕೆಲವು ಹೇಳಿಕೆ ಹೀಗಿವೆ''

''ಸುಸಂಸ್ಕೃತನ ಗುಣ ಸಂಪತ್ತು ಸಂಸ್ಕೃತಿ'

'ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ,

ಲೋಕದೊಡನೆ ನಮಗಾಗುವ ನಾನಾ ಸಂಪರ್ಕಗಳಲ್ಲಿ

ನಾವು ಸಂಪಾದಿಸುವ ಔಚಿತ್ಯವೇ ಸಂಸ್ಕೃತಿ'

ಸಂಸ್ಕೃತಿಯೆಂದರೆ 'ಅಂತರಂಗ ಪರಿಪಾಕ' ನಿಜವಾದ ಸಂಸ್ಕೃತಿಗೆ ಭೌತ ಸಂಪತ್ತಿನ

ಪ್ರಗತಿಗಿಂತ ಆತ್ಮ ಸಂಪತ್ತಿನ ಪ್ರಗತಿ ಹೆಚ್ಚಾದದ್ದು... ಅದರ ಮುಖ್ಯಲಕ್ಷ್ಯ ಸಮಾನವಲ್ಲ ವ್ಯಕ್ತಿ.''[೫]

ಮೇಲಿನ ಡಿವಿಜಿಯವರ ಚಿಂತನೆಯ ವ್ಯಾಖ್ಯಾನಗಳನ್ನು ಗಮನಿಸಿದಾಗ ಪ್ರಧಾನ ನೆಲೆ ವ್ಯಕ್ತಿ ಮತ್ತು ಅಂತರಂಗವಾಗಿರುವುದು ಕಂಡುಬರುತ್ತದೆ.

'ಸಂಸ್ಕೃತಿ' ಶಬ್ದದ ನಿರ್ವಚನವನ್ನು ಮಂಡಿಸಿದ ಮತ್ತೊಬ್ಬ ಸಂಸ್ಕೃತಿ ಚಿಂತಕರೆಂದರೆ ದೇವುಡು. ಇವರು ಸಂಸ್ಕೃತಿಯನ್ನು ವೈದಿಕ ಕೇಂದ್ರದಲ್ಲಿ ಅತ್ಯಂತ ಸಮರ್ಥವಾಗಿ ಸಂಪ್ರದಾಯವಾದಿಯಾಗಿ ಮಂಡಿಸಿದರು. ''ಮಾನವನ ಕಾರ್ಯ ಪ್ರಪಂಚದಲ್ಲಿ ಆತನ ಮನೋವಿಕಾಸದ ಸ್ಥಿತಿಯು ಪದೇಪದೇ ತೋರಿಬರುತ್ತದೆ. ಹಾಗೇ ತೋರಿಬರುವ ಮನೋವಿಕಾಸವನ್ನೆ ನಾವು ಸಂಸ್ಕೃತಿಯೆನ್ನುವುದು''. ''ಸಂಸ್ಕೃತಿಯೆಂಬುದು ಮಾನವನಿಗೂ ಮೃಗಕ್ಕೂ ಇರುವ ಅಂತರವನ್ನು ತೋರಿಸಿಕೊಡುವ ಅಂತಸತ್ವ ಮಾನವಕಾರ್ಯ. ಪ್ರಪಂಚದಲ್ಲಿ ಕಾಣಬರುವ ಮನಸ್ಸಿನ ಬೆಳವಣಿಗೆಯನ್ನು, ಅಥವಾ ಬೆಳೆದ ಮನಸ್ಸಿನ ಸ್ಥಿತಿಯನ್ನು ತೋರಿಸುವ ಭಾವವೇ''[೬] ಸಂಸ್ಕೃತಿ. ಇವರು ಸಂಸ್ಕೃತಿ ಪದದ ಅರ್ಥವ್ಯಾಪ್ತಿಯನ್ನು ಮನುಷ್ಯನ ಮನಸ್ಸಿನ ವಿಕಾಸ, ಆತನ ಅಂತಸ್ಸತ್ವ, ಮನುಷ್ಯನ ಮಾನಸಿಕ ಜಗತ್ತಿಗೆ ಸಂಬಂಧಿಸಿ ವಿಶ್ಲೇಷಣೆ ಮಾಡಿದ್ದಾರೆ.

ನವೋದಯ ಕಾಲಘಟ್ಟದ ಪ್ರಮುಖ ಬರಹಗಾರರೂ ಸಂಸ್ಕೃತಿ ಚಿಂತಕರೂ ಆಗಿರುವ ಮಾಸ್ತಿಯವರು ರಚಿಸಿದ ಅನೇಕ ಸಣ್ಣ ಕತೆ ಕಾದಂಬರಿಯಲ್ಲಿ ಸಂಸ್ಕೃತಿ ವಿಶ್ಲೇಷಣೆಯ ಹೊಳಹುಗಳು ದೊರಕುತ್ತವೆ. ಇವರ ಪ್ರಕಾರ ಸಂಸ್ಕೃತಿಯೆಂದರೆ ''ಒಂದು ಬಗೆಯ ಸಭ್ಯತೆ ಮತ್ತು ಶಿಷ್ಟಾಚಾರ. ಈ ಸಭ್ಯತೆ ಅಥವಾ ಸಂಸ್ಕಾರವು ಗ್ರಾಮೀಣ ಜನರಲ್ಲಿಯೂ ಇರುವುದು ಸಾಧ್ಯ''ವೆನ್ನುತ್ತಾರೆ. ಮಾಸ್ತಿಯವರ ಸಂಸ್ಕೃತಿ ವಿಶ್ಲೇಷಣೆಯು ಭಾರತೀಯ ಸಂಸ್ಕೃತಿಯ ವಿಶಾಲ ಹಂದರವನ್ನು ರೂಪಿಸಿ ಅದರೊಳಗೆ ಕರ್ನಾಟಕದ ವಿವರಗಳಾದ ಕನ್ನಡ ಭಾಷೆ, ಸಾಹಿತ್ಯ-ಜನಪದ ಜಗತ್ತಿನ ವಿವರಗಳನ್ನು ವೈದಿಕ ಕೇಂದ್ರಿತ ನೆಲೆಯಲ್ಲಿ ಸಂಸ್ಕೃತಿ ವಿಶ್ಲೇಷಣೆಗೆ ತೊಡಗುತ್ತಾರೆಂಬ ಸಂಸ್ಕೃತಿ ಚಿಂತಕರಾದ ಡಾ. ರಹಮತ್ ತರೀಕೆರೆಯವರ ಮಾತುಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.[೭]

ಕನ್ನಡದ ಮತ್ತೊಬ್ಬ ಪ್ರಬುದ್ಧ ಸಂಸ್ಕೃತಿ ಚಿಂತಕರಾದ ಶಂ.ಬಾ. ಜೋಶಿ, ಇವರು ವಿಭಿನ್ನ ಮಾದರಿಯಲ್ಲಿ ಸಂಸ್ಕೃತಿ ಚಿಂತನೆಯನ್ನು ನಡೆಸಿದ್ದಾರೆ. ಇವರ ಹಲವಾರು ಪುಸ್ತಕಗಳಲ್ಲಿ ಸಂಸ್ಕೃತಿ ಕುರಿತ ಚರ್ಚೆ ಹರಡಿಕೊಂಡಿದೆ. ಇವರು ಮಾನವಶಾಸ್ತ್ರೀಯ ನೆಲೆಯಲ್ಲಿ ಸಂಸ್ಕೃತಿ ವಿಶ್ಲೇಷಣೆಗೆ ತೊಡಗಿದವರು. ಇವರ ಸಂಸ್ಕೃತಿ ವಿಶ್ಲೇಷಣೆಯು ವಸಾಹತು ಶಾಹಿ ಕಾಲಘಟ್ಟದಿಂದ ಶುರುವಾಗುತ್ತದೆ. ''ಸಂಸ್ಕೃತಿಯೆಂಬುದು ಒಂದು ಪ್ರತ್ಯೇಕ ವಸ್ತುವಲ್ಲ, ಜಡವಲ್ಲ ಅದು ಜೀವನ ಕ್ರಮವೆಂದು ಸ್ಪಷ್ಟವಾಗಿ ಹೇಳಿದವರು ಶಂಬಾ ಒಬ್ಬರೇ. ಮಾನವ ಸಂಸ್ಕೃತಿಯ ಬಗ್ಗೆ ಶಂಬಾ ಅವರಿಗಿದ್ದ ಅಸಾಧಾರಣ ಆಸಕ್ತಿ ಮತ್ತು ಕುತೂಹಲ ಬೆರಗು ತರುತ್ತದೆ. ಭೂತದ ಇತಿಹಾಸವನ್ನು ಹೊಕ್ಕು ಅದರ ಕತ್ತಲೆಯ ಮೂಲೆ ಮಡುಕಗಳನ್ನು ತಡಕಿ, ಆದ ಗಾಯಗಳನ್ನು, ಬಿಟುಬಿದ್ದ ನೆಲೆಗಳನ್ನು ಪತ್ತೆಹಚ್ಚಿ ಹಲವು ಬಗೆಯ ವೈಪರೀತ್ಯ ಸ್ವರೂಪಗಳನ್ನು ಕುರಿತು ಬರೆಯುವಲ್ಲಿ, ನೋಡುವಲ್ಲಿ ಮತ್ತು ಶೋಧಿಸುವಲ್ಲಿ ಅವರ

ಪರೀಕ್ಷೆಗಳು ನಿಜಕ್ಕೂ ದಿಟ್ಟಪ್ರಯೋಗಗಳು ಮಾತ್ರವಲ್ಲ, ಅಗತ್ಯವಾದ ಅಧ್ಯಯನ ಮಾದರಿಗಳೂ ಆಗಿವೆ. ಶಂಬಾ ಜೋಶಿಯವರು ಸಂಸ್ಕೃತಿ ಶೋಧಕ್ಕೆ ಕನ್ನಡ ಸಾಹಿತ್ಯ, ಕಲೆ, ನೈತಿಕ ಮೌಲ್ಯಗಳನ್ನು ಬಿಟ್ಟು, ಕನ್ನಡಿಗ ಸಮುದಾಯಗಳ ಭಾಷೆ, ದೈವಾಚರಣೆ, ಆರ್ಥಿಕ, ಸಾಮಾಜಿಕ ಚಟುವಟಿಕೆ, ವಲಸೆಗಳನ್ನು ಆರಿಸಿಕೊಂಡರು. ಏಕೀಕರಣಗೊಂಡ ರಾಜಕೀಯ ಕರ್ನಾಟಕಕ್ಕೆ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವ ಉದ್ದೇಶವೂ ಅವರಿಗಿತ್ತು ಎಂಬ ಸಂಸ್ಕೃತಿ ಚಿಂತಕ ಪ್ರೊ ಮಲ್ಲೆಪುರಂ.ಜಿ.ವೆಂಕಟೇಶರ ನಿಲುವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.''೮

ಶಂಬಾ ಅವರಿಗೆ ಸಂಸ್ಕೃತಿ ಅಧ್ಯಯನವೆಂಬುದು ತೋರಿಕೆಯ ಸ್ವರೂಪ ಮತ್ತು ಆಶಯವಲ್ಲ. ಅದರ ಬದಲು ತನ್ನ ವರ್ತಮಾನ ಕಾಲದ ಜಗತ್ತನ್ನು ಇನ್ನಷ್ಟು ಆಳವಾಗಿ ತೆರೆದು ನೋಡುವ ಸಾಧನವೂ ಆಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಜನಾಂಗದ ಅರಿವಿನ ವಿಸ್ತರಣೆ ಮತ್ತು ಬದುಕಿನ ಅನನ್ಯತೆಯೇ ಸಂಸ್ಕೃತಿ ಚಿಂತನೆಯಾಗಿದೆ. ಶಂಬಾ ಅವರ ಸಂಸ್ಕೃತಿ ಪರಿಕಲ್ಪನೆಯ ನೆಲೆ ಮಾನವ ಸಂಸ್ಕೃತಿ ಅಧ್ಯಯನದ ಚಿಂತನೆಯ ನೆಲೆಯಾಗಿದೆ.

ಜಾನಪದ ವಿದ್ವಾಂಸರಾದ ಸಿಂಪಿ ಲಿಂಗಣ್ಣನವರೂ ಕೂಡ ತಮ್ಮ 'ಭಾರತೀಯ ಸಂಸ್ಕೃತಿ ಸಂಘಟನೆ' ಎಂಬ ಕೃತಿಯಲ್ಲಿ 'ಸಂಸ್ಕೃತಿ'ಯೆಂಬ ಶಬ್ದವನ್ನು ನಾವು ಸುಲಭವಾಗಿ ಉಪಯೋಗಿಸುತ್ತಿರುವಂತೆ ಅದರ ಅರ್ಥವನ್ನು ಅಷ್ಟು ಸುಲಭವಾಗಿ ವಿವರಿಸಲಾರೆ. ಬ್ರಿಟೀಷರ ಸಂಪರ್ಕ ಉಂಟಾದ ಬಳಿಕ ಆ ಶಬ್ದ ಬಳಕೆ ಉಪಯೋಗ ಹೆಚ್ಚಾಗಿದೆಯೆಂದು ಹೇಳುತ್ತಾ ಆ ಶಬ್ದವು ಬಹುವಿಶಾಲವಾದ ಅರ್ಥದಲ್ಲಿ ಬಳಸಲ್ಪಡುವುದರಿಂದ ಅದರ ಅರ್ಥವನ್ನು ವಿವರಿಸುವುದು ಬಿಗಿಯಾಗಿದೆ ಎಂದು ಹೇಳುತ್ತಾರೆ. ಮೇಲಿನ ವ್ಯಾಖ್ಯಾನದ ಹಿನ್ನಲೆಯಲ್ಲಿ ವಿಚಾರಮಾಡಿದಾಗ ಸಂಸ್ಕೃತಿ ವ್ಯಾಖ್ಯೆಯನ್ನು ಅರ್ಥೈಯಿಸಿಕೊಳ್ಳುವುದು ಸಮಸ್ಯಾತ್ಮಕ ಎಂದು ಎಲ್ಲರೂ ಭಾವಿಸುತ್ತಾರೆ.

ಸಿಂಪಿಯವರು ಬಹು ಸಮ್ಮತವಾಗಿರುವ ಡಿವಿಜಿಯವರ ವ್ಯಾಖ್ಯಾನವನ್ನು ಡಿವಿಜಿಯವರ ಸಂಸ್ಕೃತಿ ಶಬ್ದದ ಹಿನ್ನೆಲೆಯನ್ನು ಹೇಳಿದ ನಂತರ ಅದರ ಅರ್ಥವ್ಯುತ್ಪತ್ತಿಯನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. ''ಸಂಸ್ಕಾರದಿಂದ ಸಂಸ್ಕೃತಿ ಸಂಸ್ಕಾರ ಮತ್ತು ಸಂಸ್ಕರಣೆಯೆಂದರೆ ಸಮ್ಯಕ್‌ಕರಣ ಸಮ್ಯಕ್ ಕೃತಿ ಸಂಸ್ಕೃತಿ ಹಾಗೆಂದರೆ ಚೆನ್ನಾಗುವಂತೆ ಮಾಡುವುದು, ಒಳ್ಳೆಯದಾಗಿಸುವುದು ಶುದ್ಧಿಮಾಡಿ ಉತ್ತಮ ಪಡಿಸುವುದು ಎಂದರ್ಥ''೯ ವೆಂದಿದ್ದಾರೆ. ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವುದೇ ಸಂಸ್ಕೃತಿ ನಡೆನುಡಿಗಳ ಚೊಕ್ಕಟವೇ ಸಂಸ್ಕೃತಿ ಚೊಕ್ಕಟವೆಂದರೆ ಕೊಳಕನ್ನು ಕಳೆದುಹಾಕುವುದು. ಸಂಸ್ಕೃತಿಯು ಮನಸ್ಸನ್ನು ತಿಕ್ಕಿ, ತೊಳೆದು ಶುಚಿ ಮಾಡುವ ಕೆಲಸ ಡಿವಿಜಿ ಹೇಳುವ ಹಾಗೆ ಸುಸಂಸ್ಕೃತನ ಗುಣ ಸಂಪತ್ತು ಸಂಸ್ಕೃತಿಯೆಂದಿದ್ದಾರೆ. ಒಬ್ಬ ಮನುಷ್ಯ ತನ್ನ ಬದುಕಿನಲ್ಲಿ ಉತ್ತಮ ನಡೆ ನುಡಿಗಳನ್ನು ಅಳವಡಿಸಿಕೊಳ್ಳಬೇಕು. ಮನಸ್ಸಿನಲ್ಲಿರುವ ವಿಕಾರ ಭಾವಗಳನ್ನು ಕಿತ್ತೊಗೆದು ಶುಚಿಯಾದ ಭಾವನೆಯನ್ನು ಇಟ್ಟುಕೊಳ್ಳಬೇಕೆಂದು ಸಿಂಪಿಯವರು ಸಂಸ್ಕೃತಿ ಚಿಂತನೆಯ ನೆಲೆಯನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ.

ಕನ್ನಡದ ಪ್ರಬುದ್ಧ ಬರಹಗಾರ, ಸಂಸ್ಕೃತಿ ಚಿಂತಕರೂ ಆಗಿರುವ ಶಿವರಾಮ ಕಾರಂತರು ವಿಚಾರವಾದಿ ಜೀವನ ದೃಷ್ಟಿಯುಳ್ಳವರು. ತಮ್ಮ ಕಾಲದಲ್ಲಿದ್ದ ನೈತಿಕವಾದಿ, ಗತಕಾಲದ ರಾಜಕೀಯ ಚರಿತ್ರೆಯನ್ನು ವೈಭವೀಕರಿಸುವ ಸಂಸ್ಕೃತಿಯನ್ನು ನಿರಾಕರಿಸುತ್ತಾರೆ. ಕಾರಂತರ ಅನೇಕ ಕಾದಂಬರಿಗಳು, ಲೇಖನಗಳೂ ವಿಚಾರವಾದಿ ನಿಲುವಿನಲ್ಲಿ ರಚನೆಗೊಂಡಿರುವಂತಹವುಗಳು. ತಮ್ಮೆಲ್ಲಾ ಬರವಣಿಗೆಯಲ್ಲಿ ಸಂಸ್ಕೃತಿ ಕುರಿತ ವಿಚಾರಗಳನ್ನು ದಾಖಲಿಸಿದ್ದಾರೆ. ''ಒಂದು ಸಮಾಜದ ನಂಬಿಕೆ ಆದರ್ಶ-ಯೋಚನೆ ಮೊದಲಾದುವು ಪರಂಪರೆಯಿಂದ ಒಂದು ಸ್ತಿಮಿತಕ್ಕೆ ಬಂದು,

ಆ ಬಳಗಕ್ಕೆ ಸೇರುವ ವ್ಯಕ್ತಿಗಳ ದಿನಚರಿಯಲ್ಲಿ ಮಾತು-ಮಂತ್ರ-ತಂತ್ರ ಶಿಷ್ಟಾಚಾರಗಳಲ್ಲಿ ವ್ಯಕ್ತವಾಗುವ ಬಗೆಯನ್ನು ನಾವು ಸಂಸ್ಕೃತಿಯೆಂದು ತಿಳಿಯಬೇಕಾಗಿದೆ.''[೧೦] ಎಂಬ ಕಾರಂತರ ಸಂಸ್ಕೃತಿ ವ್ಯಾಖ್ಯಾನವು ಸಮಾಜದ ನಂಬಿಕೆ ಆದರ್ಶ-ಯೋಚನೆ ಮೊದಲಾದುವು ಪರಂಪರೆಯಿಂದ ಸ್ತಿಮಿತಕ್ಕೆ ಬಂದಾಗ ಮಾನವನ ದಿನಚರಿಯಲ್ಲಿ ಆತ ಬಳಸುವ ಭಾಷೆ ನಡೆನುಡಿಗಳ ಬಗೆಯನ್ನು ಸಂಸ್ಕೃತಿಯೆಂದು ಅರ್ಥೈಸಿರುವುದು ಕಂಡುಬರುತ್ತದೆ. ಬೌದ್ಧಿಕ ಚಿಂತಕರಾದ, ವಿಭಿನ್ನ ಕ್ಷೇತ್ರಗಳಲ್ಲಿ ಬರವಣಿಗೆ ಮಾಡಿರುವ ಕಾರಂತರು ಸಂಸ್ಕೃತಿ ಚಿಂತನೆಯ ಸಂದರ್ಭದಲ್ಲಿ ಕಲೆಗಳ ಪಾತ್ರವನ್ನು ಪ್ರಮುಖವಾಗಿ ಪರಿಗಣಿಸಿ ಸಂಸ್ಕೃತಿ ವ್ಯಾಖ್ಯಾನಕ್ಕೆ ತೊಡಗಿದ್ದಾರೆ.

''ಮಾನವನ ಜೀವನ ಸ್ವಭಾವತಃ ಭಾವಜೀವನವಾದುದರಿಂದ ತನ್ನ ಮನಸ್ಸಿನ ಸಂಸ್ಕಾರಕ್ಕೆ ಆಯಾ ಕಾಲದ ಮನಸ್ಸಿನ ಭಾವಬಿಂಬಗಳಿಗೆ ರೂಪವನ್ನು ಕೊಡುತ್ತಲೇ ಬಂದಿದೆ. ಮನುಷ್ಯ ಸಂಸ್ಕೃತಿ ಬೆಳೆದು ಬಂದುದು ಇಂತಹ ಚಟುವಟಿಕೆಗಳಿಂದಲೇ. ನಾಗರೀಕತೆಗಳು ಶ್ರೇಷ್ಠವೆನಿಸಿಕೊಂಡದ್ದು ಅವುಗಳಿಂದಲೇ. ಕಲೆಗಳಿಗೂ, ಸಂಸ್ಕೃತಿಗೂ ಅತಿನಿಕಟವಾದ ಸಂಬಂಧವನ್ನು ಕಾಣುತ್ತೇವೆ''. ಹೀಗೆ ಕಾರಂತರ ಸಂಸ್ಕೃತಿ ವಿಶ್ಲೇಷಣೆಯು ಮಾನವಶಾಸ್ತ್ರ ಹಾಗೂ ಸೌಂದರ್ಯ ಮೀಮಾಂಸೆಯಿಂದ ಕೂಡಿದ ವಿಶಿಷ್ಟ ನೆಲೆಯ ಸಂಸ್ಕೃತಿ ಗ್ರಹಿಕೆಯಾಗಿದೆ. ವಾಸ್ತವವಾದಿಯಾದ ಕಾರಂತರು ಸಂಸ್ಕೃತಿ ವ್ಯಾಖ್ಯಾನ, ಚಿಂತನೆಯ ಸಂದರ್ಭದಲ್ಲಿ ಮತೀಯ ಮೌಲ್ಯಗಳಿಗೆ ಸಿಲುಕಲಿಲ್ಲ. ಯಾವುದೇ ಆದರ್ಶವಿರಲಿ ಅದು ನಿತ್ಯ ಜೀವನದಲ್ಲಿ ವ್ಯಕ್ತವಾಗುವ ಬಗೆಯನ್ನು ಸಂಸ್ಕೃತಿಯೆಂದು ನಿಖರವಾಗಿ ಭಾವಿಸಿದ್ದರು.

ಕರ್ನಾಟಕದ ಗತವೈಭವದ ಕಲೆ, ಸಾಹಿತ್ಯ, ಸಂಗೀತ ವಾಸ್ತು ಶೈಲಿ ಆಡಳಿತ ರಾಜಮನೆತನಗಳ ಹಿನ್ನೆಲೆ ಕೊಡುಗೆಯನ್ನು ಕುರಿತು ''ಕರ್ನಾಟಕ ಸಂಸ್ಕೃತಿ ಸಮೀಕ್ಷೆ'' ಎನ್ನುವ ಕೃತಿಯನ್ನು ರಚಿಸಿರುವ ಡಾ.ಎಚ್.ತಿಪ್ಪೆರುದ್ರಸ್ವಾಮಿಯವರು ಸಂಸ್ಕೃತಿ ಕುರಿತು ವ್ಯಾಖ್ಯಾನ ನೀಡುತ್ತಾ ''ಸಂಸ್ಕೃತಿ ಎಂಬುದು ಸೂತ್ರರೂಪದಲ್ಲಿ ಹಿಡಿದಿಡಲಾಗದ ವಿರಾಟ್‌ಶಕ್ತಿಯೆಂದೂ, ಇದು ಹಂತ ಹಂತವಾಗಿ ವಿಕಾಸಗೊಳ್ಳುತ್ತದೆ. ಪದರಪದರವಾಗಿ ಜೀವನವನ್ನು ಸಂಸ್ಕೃತಿ ವ್ಯಾಪಿಸುತ್ತದೆ. ಸಂಸ್ಕೃತಿ ಎಂಬುದು ಅಂತರಂಗದ ವಿಕಾಸ ಆ ವಿಕಾಸಕ್ಕೆ ಕಾರಣವಾಗುವ ಸಾಮಾಜಿಕ ಪರಿಕರಗಳೂ ಅಗತ್ಯ. ನುಡಿದಂತೆ ನಡೆಯುವದೇ ಸಂಸ್ಕೃತಿ ಸಮಾಜದೊಡನೆ ಸಹಬಾಳ್ವೆಯ ಸೌಜನ್ಯದ ಮಾರ್ಗವೇ ಸಂಸ್ಕೃತಿ; ಶೀಲದ ಸೌಭಾಗ್ಯವೇ ಸಂಸ್ಕೃತಿ; ಆತ್ಮ ಶಿಕ್ಷಣವೇ ಸಂಸ್ಕೃತಿ. ಸಾಹಿತ್ಯಾದಿ ಸರಸ ಕಲೆಗಳೇ ಸಂಸ್ಕೃತಿ''[೧೧] ಇವೆಲ್ಲವೂ ನಿಜ ಈ ಸಹಸ್ರ ಮುಖಗಳನ್ನು ಒಳಗೊಂಡ ವಿರಾಟ್ ರೂಪದ ಅಂಶವೇ ಸಂಸ್ಕೃತಿಯಾಗಿದೆ. ನಮ್ಮ ಉಡುಗೆತೊಡುಗೆಗಳಲ್ಲಿ ನಡೆನುಡಿಗಳ ಸಂಸ್ಕೃತಿಯ ಪ್ರಭಾವವನ್ನು ಕಾಣುತ್ತೇವೆ. ನಾಡಿನ ಕಲೆ-ಸಾಹಿತ್ಯ, ದೇವಾಲಯಗಳು, ನಾಣ್ಯಗಳು, ಸಂಗೀತ ಮುಂತಾದ ಆ ಕಾಲದ ಜೀವನ ಮೌಲ್ಯಗಳು ರಾಜರ ರಾಜಕೀಯ ಚರಿತ್ರೆಯ ಸ್ಥಿತ್ಯಂತರಗಳನ್ನು ಗಮನದಲ್ಲಿಟ್ಟುಕೊಂಡು ಸಂಸ್ಕೃತಿ ಪರಿಕಲ್ಪನೆಯ ನಿರ್ವಚನ ಮಾಡಿರುವುದು ಕಂಡುಬರುತ್ತದೆ.

ಹೀಗೆ ವಸಾಹತು ಕಾಲಘಟ್ಟದ ವಿಶ್ಲೇಷಣೆ ವೈದಿಕ ನೆಲೆಯಲ್ಲಿ ಕೆಲವು ವಿದ್ವಾಂಸರಿಂದ ಸಾಗಿದರೆ ಮತ್ತು ಕೆಲವರು ಮಾನವಶಾಸ್ತ್ರೀಯ, ನೈತಿಕ ಆದರ್ಶವಾದಿ ನೆಲೆಯಲ್ಲಿ ಸಂಸ್ಕೃತಿಯನ್ನು ಅರ್ಥೈಯಿಸಿರುವುದು ಕಂಡುಬರುತ್ತದೆ. ಈ ಕಾಲ ಘಟ್ಟದಲ್ಲಿ ಡಿ.ವಿ.ಜಿ, ಶಂಬಾ, ಮಾಸ್ತಿ, ದೇವುಡು, ಸಿಂಪಿ ಲಿಂಗಣ್ಣ ಮತ್ತು ತಿಪ್ಪೆರುದ್ರಸ್ವಾಮಿಯವರ ಸಂಸ್ಕೃತಿ ಪರಿಕಲ್ಪನೆಯ ನಿರ್ವಚನವು ತಮ್ಮ ಚಿಂತನೆಯ ನೆಲೆಯಲ್ಲಿ ಮಾಡಿರುವುದನ್ನು ಕಾಣುತ್ತೇವೆ.

## ೨.೩. ವಸಾಹತು ಕಾಲಘಟ್ಟದ ನಂತರದ ಚಿಂತಕರ ಸಂಸ್ಕೃತಿ ನಿರ್ವಚನ

ಕರ್ನಾಟಕದ ಸಂಸ್ಕೃತಿ ಚಿಂತನೆಯ ಸಂದರ್ಭದಲ್ಲಿ ಅರವತ್ತರ ದಶಕವೂ ತನ್ನದೇ ಆದಂತಹ ಹೊಸ ಚಿಂತನೆಯನ್ನು ಮೂಡಿಸಿದ ಕಾಲಘಟ್ಟವಾಗಿದೆ. ಮೇಲ್ವರ್ಗದ ಪ್ರಜ್ಞಾವಂತರಿಗೆ ಎಚ್ಚರ ಉಂಟಾದ ಕಾಲಘಟ್ಟವೂ ಇದಾಗಿತ್ತು. ಈ ಸಂದರ್ಭದಲ್ಲಿ ಪಾಶ್ಚಿಮಾತ್ಯ ಪ್ರಭಾವಕ್ಕೆ ತಾವು ಅತಿಯಾಗಿ ಸ್ಪಂಧಿಸಿದ್ದು ತಪ್ಪೆಂದು ಅನಿಸತೊಡಗಿತು. ಜ್ಞಾನೋದಯದ ಮನಸ್ಥಿತಿಯಲ್ಲಿದ್ದ ಈ ಮೇಲ್ವರ್ಗಕ್ಕೆ ಬಿಡುಗಡೆ ಬೇಕೆನಿಸಿದ್ದು. ಅತಿಯಾದ ಪಾಶ್ಚಾತ್ಯೀಕರಣದ ವಿಚಾರಕ್ರಮ ಮತ್ತು ಬ್ರಾಹ್ಮಣ ಸನಾತನವಾದದಿಂದ. ಇಂತಹ ಸಂದಿಗ್ಧ ಕಾಲಘಟ್ಟದಲ್ಲಿ ಸಂಸ್ಕೃತಿ ಚಿಂತನೆ ಮಾಡಿದವರಲ್ಲಿ ಯು.ಆರ್.ಅನಂತಮೂರ್ತಿಯವರೂ ಒಬ್ಬರು. ಇವರ ಕತೆ-ಕಾವ್ಯ-ಕಾದಂಬರಿ-ಲೇಖನಗಳಲ್ಲಿ ಬ್ರಾಹ್ಮಣವಾದ, ಮತ್ತು ಸನಾತನವಾದದ ಬಿಡುಗಡೆಯ ಸಂಸ್ಕೃತಿ ನಿರ್ವಚನ ನಡೆದಿರುವುದು ಕಾಣುತ್ತೇವೆ. ಇವರ ಇಂಗ್ಲೀಷ್ ಬ್ರಾಹ್ಮಣ-ಕನ್ನಡ ಶೂದ್ರ ಪರಿಕಲ್ಪನೆಯ ಲೇಖನ ಸಂಸ್ಕೃತಿ ಶೋಧದ ಹೊಸ ಅರ್ಥವನ್ನು ಹೊಮ್ಮಿಸುತ್ತದೆ.

ಅನಂತಮೂರ್ತಿಯವರು ತಮ್ಮ 'ಭಾರತೀಯ ಸಂಸ್ಕೃತಿ ಮತ್ತು ಕನ್ನಡ ಲೇಖಕ' ಎಂಬ ಲೇಖನದಲ್ಲಿ ''ಸಂಸ್ಕೃತಿಯೆಂದರೆ ಬುದ್ಧಿಯ ಅತ್ಯುತ್ತಮ ಮಟ್ಟದಲ್ಲಿ ಪ್ರೇರಕ ಶಕ್ತಿಯಾಗಿ ಕೆಲಸಮಾಡುವ ವಿಚಾರವಲ್ಲದೆ ನಿತ್ಯದ ಆಚರಣೆಯಲ್ಲಿ ಜೀವನವನ್ನು ರೂಪಿಸುತ್ತಿರುವ ನಡೆನುಡಿ''[೨೨] ಎಂದಿದ್ದಾರೆ. ಡಿವಿಜಿಯವರು ಬಳಸಿದಂತೆ ಸಂಸ್ಕೃತಿ ಶಬ್ದವು ಶ್ರೇಷ್ಠವಾದ ನಡೆನುಡಿಯಲ್ಲಿ ಯಾವುದು ಇರಬೇಕು ಎಂಬ ಅರ್ಥದಲ್ಲಿ ಬಳಸಿದರೆ, ಅನಂತಮೂರ್ತಿಯವರು 'ಸಂಸ್ಕೃತಿ' ಪದವನ್ನು ಮಾನವಶಾಸ್ತ್ರದಲ್ಲಿ ಬಳಸಿದಂತೆ ಜನರ ನಂಬಿಕೆ ನಡಾವಳಿಯಲ್ಲಿ ದೈನಿಕಗಳಲ್ಲಿ ವ್ಯಕ್ತವಾಗಿರುವುದು, ಇಂಗಿತವಾಗಿರುವುದು ಹಾಗೂ ನಮ್ಮ ಮುಂದೆ ಕಾಣುವ ಬದುಕೇ ಸಂಸ್ಕೃತಿಯೆಂಬ ಅರ್ಥದಲ್ಲಿ ವ್ಯಾಖ್ಯಾನಿಸಿದ್ದಾರೆ. ಅನಂತಮೂರ್ತಿಯವರ ಸಂಸ್ಕೃತಿ ನಿರ್ವಚನವನ್ನು ಮೌಲ್ಯಪ್ರಜ್ಞೆ ಹಾಗೂ ಮಾನವ ಶಾಸ್ತ್ರೀಯ ವ್ಯಾಖ್ಯೆಗಳನ್ನು ಬೆರಸಿದ ಒಂದು ಗ್ರಹಿಕೆಯಾಗಿದೆ. ಇವರ ಸಂಸ್ಕೃತಿ ಕುರಿತ ಚಿಂತನೆಯು ವ್ಯಕ್ತಿವಾದದಿಂದ, ಸಮುದಾಯವಾದ ಹೊಸ ದಿಕ್ಕಿನತ್ತ ಮುಖವಾಗಿರುವುದು ಕಾಣುತ್ತೇವೆ.

'ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ನಿರ್ವಚನವನ್ನು ದೇಶಿ ಸಮಾಜವಾದದ ಹಿನ್ನಲೆಯಲ್ಲಿ ಕಟ್ಟಿದ ಕನ್ನಡ ಭೌದ್ಧಿಕ ವಲಯದ ಸಂಸ್ಕೃತಿ ಚಿಂತಕರೆಂದರೆ ಡಾ. ಡಿ.ಆರ್. ನಾಗರಾಜರು ಅವರು ''ತೃತೀಯ ಜಗತ್ತಿನ ವಲಯದಲ್ಲಿ ಸಂಸ್ಕೃತಿಗೆ ಬಂದೊದಗಿದ ಆಪತ್ತು ಮತ್ತು ತಲ್ಲಣ, ಬಯಕೆ ವಿಷಾದಗಳ'ಜತೆಗೆ ನಡೆಸಿದ ಸಂವಾದಗಳು ಮುಖಾಮುಖಿ ಚರ್ಚೆಗಳು ಸಂಸ್ಕೃತಿಯನ್ನು ಹೊಸ ಪರಿಭಾಷೆಯೊಂದಿಗೆ ಕಟ್ಟಿದ ಮೀಮಾಂಸೆಯೇ ಆಗಿದೆ''[೨೩] ಎನ್ನುವ ಪ್ರೊ.ಮಲ್ಲೆಪುರಂ.ಜಿ. ವೆಂಕಟೇಶರು ಡಿ.ಆರ್ ನಾಗರಾಜರ ಒಟ್ಟು ಬರಹಗಳನ್ನು ಕುರಿತು ಬರೆದಿರುವ ಸಾಲುಗಳು ಡಿ.ಆರ್.ರ ಸಮಗ್ರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ. ಡಾ.ಡಿ.ಆರ್.ನಾಗರಾಜರು ತಮ್ಮ 'ಸಾಹಿತ್ಯ ಕಥನ' ಕೃತಿಯಲ್ಲಿ ವಸಾಹತುಶಾಹಿ ಸಂಸ್ಕೃತಿಯ ಅನುಭವವನ್ನು ಕುರಿತು ಹೇಳುವಾಗ ಮೂರು ಮಾದರಿಯ ಮೂಲಕ ವಿವರಿಸುತ್ತಾರೆ.

''ಒಂದು: ಸಾಂಸ್ಕೃತಿಕ ಆತ್ಮವಾದ, ಎರಡು: ಸಮಗ್ರ ದಿಗ್ವಿಜಯವಾದ, ಮೂರು: ಸಾಂಸ್ಕೃತಿಕ ಅನುಸಂದಾನ ಮಾರ್ಗ. ಇವರ ಸಾಂಸ್ಕೃತಿಕ ಆತ್ಮವಾದದಲ್ಲಿ ಪೌರ್ವಾತ್ಯ ಸಮಾಜಗಳಿಗೆ ವಿಶಿಷ್ಟವಾದ ಸಾಂಸ್ಕೃತಿಕ ಆತ್ಮವಿದೆ

ಎಂದು, ಅದು ಪಶ್ಚಿಮಕ್ಕಿಂತ ಘನ ಮತ್ತು ಪವಿತ್ರ. ಇದು ಪೌರ್ವಾತ್ಯ ಕಲೆಗಳಲ್ಲಿ ಸ್ಫುಟವಾಗಿದೆಯೆಂದು ಹೇಳುತ್ತಾ, ವಸಾಹತೀಕರಣ ಅಥವಾ ಪಶ್ಚಿಮದ ತಂತ್ರಗಾರಿಕೆಯನ್ನು ಪ್ರಮುಖವೆಂದು ಭಾವಿಸದೆ ಸೋತವರ ಇತಿಹಾಸ, ಕಲೆಗಳಲ್ಲಿರುವ ಆತ್ಮಶಕ್ತಿಗೆ ಈ ವಾದ ಹೆಚ್ಚು ಒತ್ತು ನೀಡಿರುವುದರ ಜೊತೆಗೆ ಸಮಕಾಲೀನ ಒತ್ತಡಗಳ ಆಚೆ ನಿಂತು ವರ್ತಮಾನದ ಸಾಂಸ್ಕೃತಿಕ ಬದುಕನ್ನು ಪರಿಶೀಲನೆಗೆ ಒಳಪಡಿಸಿದ್ದಾರೆ. ಚಾರಿತ್ರಿಕ ಪ್ರಗತಿಪರತೆ ಮತ್ತು ದೇಶಿ ಸಮಾಜಗಳ ಬಗೆಗಿನ ಅಂಧ ಸಾಂಪ್ರದಾಯಿಕತೆಗಳ ಸಹಬಾಳ್ವೆಯನ್ನು ನಡೆಸುವ ವಿಚಾರ ಇಲ್ಲಿದೆ. ನಮ್ಮ ನೆಲದ ಸಮಾಜದ ದೇಶೀಯ ಸಂಸ್ಕೃತಿಗೆ ಹೊಸ ಆತ್ಮವಿದೆ ಎಂದು ಹೇಳಿದ್ದಾರೆ. ಎರಡನೆಯ ಸಮಗ್ರ ದಿಗ್ವಿಜಯವಾದದಲ್ಲಿ ವಸಾಹತೀಕರಣ ಶಕ್ತಿಗಳು ದೇಶಿಯ ಸಂಸ್ಕೃತಿ ಮತ್ತು ಸಮಾಜಗಳ ಮೇಲೆ ಸಾಂಸ್ಕೃತಿಕ ಮತ್ತು ರಾಜಕೀಯ ಪ್ರಭುತ್ವವನ್ನು ಪೂರ್ಣವಾಗಿ ಸಾಧಿಸಿವೆಯೆಂದು ನಂಬುತ್ತವೆ. ಹಾಗೇ ವಸಹಾತುಶಾಹಿ ಎಂಬ ಶತ್ರುವಿನ ಶಕ್ತಿಯ ಸ್ವರೂಪವನ್ನು ತಂತ್ರಗಾರಿಕೆಯನ್ನು ಕುರಿತು ವಿಶ್ಲೇಷಣೆ ಮಾಡುತ್ತಾ, ವಸಾಹತೀಕರಣ ಬೌದ್ಧಿಕ ಮಾನಸಿಕ ವಿಸ್ತಾರಗಳಲ್ಲಿ ಸೋತ ಸಂಸ್ಕೃತಿಗಳು ಹೇಗೆ ಪ್ರತಿನಿಧಿಕರಣಗೊಳ್ಳುತ್ತವೆ ಎಂಬ ಅನ್ವೇಷಣೆಯಲ್ಲಿ ನಮ್ಮ ನೆಲದ ಬದುಕಿನ ವಿಶ್ಲೇಷಣೆಯಲ್ಲಿ 'ಸಂಸ್ಕೃತಿ'ಯ ನಿರ್ವಚನವನ್ನು ಮಾಡಿದ್ದಾರೆ. ಜೊತೆಗೆ 'ಸಾಂಸ್ಕೃತಿಕ ಅನುಸಂದಾನ ಮಾರ್ಗ' ಮಾದರಿಯಲ್ಲಿ ದೇಶಿ ಪರಂಪರೆಯ ಪರಿಕಲ್ಪನೆ ಮತ್ತು ರಚನೆಗಳನ್ನು ಕಂಡುಕೊಳ್ಳುವ ಆಕಾಂಕ್ಷೆ ತೀವ್ರವಾಗಿ ವ್ಯಕ್ತವಾಗುತ್ತದೆ. ವಸಾಹತೋತ್ತರ ಚಿಂತನೆಗಳು ಸಾಹಿತ್ಯ ಸಂಸ್ಕೃತಿಯ ಮೇಲೆ ಪೂರ್ಣ ದಿಗ್ವಿಜಯ ಸಾಧಿಸಿದಂತೆ ಭಾರತದಲ್ಲಿಯೂ ಸಾಧಿಸಿತು ಎಂದು ವಾದಿಸುತ್ತಾರೆ.''[೧೩] ಒಟ್ಟು ಡಿ.ಆರ್.ಎನ್‌ರ ಸಂಸ್ಕೃತಿ ನಿರ್ವಚನವು ದೇಶಿಯ ಚಿಂತನೆಯ ಮೂಲದಲ್ಲಿ ನಡೆದಿರುವುದು ಅವರ ಒಟ್ಟು ಬರವಣಿಗೆಯಲ್ಲಿ ಮನಗಾಣಬಹುದಾಗಿದೆ. ಜೊತೆಗೆ ''ಒಂದು ನಾಡಿನ ಸಾಹಿತ್ಯ-ಸಂಸ್ಕೃತಿ ಚಿಂತನೆ, ರಾಜಕೀಯ ಚಿಂತನೆ ಇವೆರೆಡರಲ್ಲಿ ಒಂದು ಅಖಂಡವಾದ ಸಂಬಂಧ ಇದೆ.''[೧೪] ಎನ್ನುವ ಸಾಹಿತ್ಯ ಸಂಸ್ಕೃತಿ ಚಿಂತನೆಯ ಜೊತೆಗೆ ರಾಜಕೀಯ ಇಚ್ಛಾ ಶಕ್ತಿಯ ಚಿಂತನೆಯೂ ಕೂಡ ಉತ್ತಮವಾದ ಬದುಕನ್ನು ಕಟ್ಟಿಕೊಡಲು ಸಾಧ್ಯವೆಂಬ ನಿಲುವು ಡಿ.ಆರ್. ಅವರಿಗೆ ಇತ್ತು. ಒಂದು ಕಾಲಘಟ್ಟದಲ್ಲಿ ಬಂದ ಸಾಹಿತ್ಯ ಕೃತಿಗಳನ್ನು ಅರ್ಥಮಾಡಿಕೊಳ್ಳುವಾಗ ಅನಿವಾರ್ಯವಾಗಿ ಒಂದು ಸಾಂಸ್ಕೃತಿಕ ಬದುಕಿನ ಬಗೆಗೂ, ಸಮಕಾಲೀನ ರಾಜಕೀಯ-ಸಾಮಾಜಿಕ-ಆಧ್ಯಾತ್ಮಿಕ ಶಕ್ತಿಗಳ ಬಗೆಗೆ ಒಂದು ರೀತಿಯ ಕಲ್ಪನೆ, ಚಿಂತನೆ ಇರಬೇಕಾಗುತ್ತದೆಂದು ಹೇಳುವಲ್ಲಿ ಸಾಮಾಜಿಕ ಬದುಕಿನ ಹಂದರದಲ್ಲಿ ಸಮಕಾಲೀನ ರಾಜಕೀಯ ಚಿಂತನೆಯೂ ಕೂಡ ಅನಿವಾರ್ಯವೆನ್ನುವ ಅವರ ಯೋಚನಾ ಕ್ರಮವನ್ನು ಗ್ರಹಿಸಬಹುದಾಗಿದೆ.

ಕನ್ನಡ ಸಾಹಿತ್ಯ-ಸಂಸ್ಕೃತಿಯ ಸಂದರ್ಭದಲ್ಲಿ ಹೊಸ ಯೋಚನಾ ಕ್ರಮವನ್ನು ರೂಪಿಸಿದವರು ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು. ಇವರು ತಮ್ಮ ವೈಚಾರಿಕ ಕೃತಿಗಳ ಮೂಲಕ ಸಾಂಸ್ಕೃತಿಕ ಬದುಕಿನ ಹೊಯ್ದಾಟಗಳನ್ನು ಚಿತ್ರಿಸಿದ್ದಾರೆ. ಇವರು ಸಂಸ್ಕೃತಿ ಪರಿಕಲ್ಪನೆಯನ್ನು ಸಮಾಜ ಕೇಂದ್ರದ ನೆಲೆಯಲ್ಲಿ ಅರ್ಥೈಸಿದ್ದಾರೆ. ಇವರು ೧೯೭೪ ಕಾಲಘಟ್ಟದಲ್ಲಿ ಬರೆದ 'ಕರ್ನಾಟಕ ಸಂಸ್ಕೃತಿ ವಿಶ್ಲೇಷಣೆ' ಲೇಖನವು ಅವರ ಶೂದ್ರವಾದಿ ಚಿಂತನೆಯನ್ನು ಒತ್ತಿ ಹೇಳುತ್ತಿದೆ. 'ಸಂಸ್ಕೃತಿ' ನಿರ್ವಚನವನ್ನು ಮಾಡುತ್ತಾ. ಅವರು ''ಕನ್ನಡ ಸಾಹಿತ್ಯವೆಂದರೆ, ಸಂಸ್ಕೃತಿ ಚರಿತ್ರೆಯೆಂದರೆ, ಮತ್ತೇನೂ ಆಗಿರದೆ, ಇಡೀ ಶೂದ್ರ ಸಮುದಾಯದ ಮೂಕ ಅನುಭವಗಳು ನಿಧಾನವಾಗಿ ಪ್ರಜ್ಞಾಗಮ್ಯವಾಗುತ್ತಾ ಅಭಿವ್ಯಕ್ತಿಯನ್ನು ಸಾಧಿಸಿಕೊಳ್ಳುವತ್ತ ಬಂದುದರ ಚರಿತ್ರೆ''[೧೫] ಎಂದು ಘೋಷಿಸಿದ್ದಾರೆ. ಈ ಲೇಖನದಲ್ಲಿ ತೇಜಸ್ವಿಯವರು ಶೂದ್ರ ಪರಂಪರೆಯ ಬದುಕನ್ನು ಹುಡುಕಿಕೊಳ್ಳುವ ತವಕ, ಅದರ ರಭಸದಲ್ಲಿ ಎಲ್ಲಾ ಬ್ರಾಹ್ಮಣವಾದಿ ನಿಲುವುಗಳನ್ನು ಕೆಡುಹುವ ಬಿರುಸಿನ ಚರ್ಚೆ, ಸಂಸ್ಕೃತಿಚಿಂತನೆ ಇಲ್ಲಿದೆ.

ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂದರ್ಭದಲ್ಲಿ ಬಹುಮುಖ್ಯ ವಿಮರ್ಶಕರೂ, ಸಂಸ್ಕೃತಿ ಚಿಂತಕರೂ ಆಗಿರುವ ಡಾ.ಕೆ.ವಿ. ನಾರಾಯಣರು ಸಂಸ್ಕೃತಿ ಪರಿಕಲ್ಪನೆಯ ನಿರ್ವಚನವನ್ನು ಮಾಡುತ್ತಾ ''ಸಂಸ್ಕೃತಿಯು ವಾಸ್ತವ ಜೀವನ ವಿಧಾನವೆಂದೂ, ಸಂಸ್ಕೃತಿ ಚಿಂತನೆ ನಿರ್ವಾತದಲ್ಲಿ ನಡೆಯುವುದಿಲ್ಲ. ಹಾಗೆಯೇ ಅದು ಶುದ್ಧ ಬೌದ್ಧಿಕ ಚಟುವಟಿಕೆಯೂ ಅಲ್ಲ. ನಿರಂತರವಾಗಿ ನಡೆಯುತ್ತಿರುವ ಪಲ್ಲಟಗಳನ್ನು, ಪರ್ಯಾಯಗಳನ್ನು ಗುರುತಿಸುತ್ತಲೇ ಅವುಗಳ ಬಗೆಗೆ ಒಂದು ಮೌಲ್ಯಾತ್ಮಕ ನಿಲುವುಗಳನ್ನು ಸಂಸ್ಕೃತಿ ಚಿಂತಕರು ತಳೆಯಬೇಕಾಗುತ್ತದೆ''[೧೭] ಎಂದು ವ್ಯಾಖ್ಯಾನಿಸಿದ್ದಾರೆ.

ಮೇಲಿನ ವ್ಯಾಖ್ಯಾನದಲ್ಲಿ ಸಂಸ್ಕೃತಿ ಚಿಂತಕರೂ, ಭಾಷಾ ವಿದ್ವಾಂಸರೂ ಆಗಿರುವ ಡಾ. ಕೆ.ವಿ. ನಾರಾಯಣರು 'ಸಂಸ್ಕೃತಿ' ಎನ್ನುವಂತದ್ದು ನಮ್ಮ ಮುಂದಿರುವ ವಾಸ್ತವ ಬದುಕಿನ ವಿಧಾನವೆಂದು ಕರೆದಿರುವುದು ಸಮಂಜಸವಾಗಿದೆ. ಈ ವಾಸ್ತವ ಬದುಕಿನಲ್ಲಿ ಘಟಿಸುವ ಅನೇಕ ಪಲ್ಲಟಗಳನ್ನು ಪರ್ಯಾಯಗಳನ್ನು ಗುರುತಿಸುತ್ತಲೇ ಅವುಗಳಲ್ಲಿರುವ ಕೆಲವು ಮೌಲ್ಯಾತ್ಮಕ ನಿಲುವುಗಳನ್ನು ಸಂಸ್ಕೃತಿ ಒಳಗೊಂಡಿರುತ್ತದೆಯೆಂಬ ಅವರ ನಿಲುವು ಮೆಚ್ಚುವಂತದ್ದಾಗಿದೆ. ಕನ್ನಡ ಸಾಹಿತ್ಯ ವಿಮರ್ಶೆಯ ಮುಖ್ಯಧಾರೆ ಯಾವಾಗಲೂ ಸಂಸ್ಕೃತಿ ನಿಷ್ಠವಾದ ಪ್ರಶ್ನೆಗಳನ್ನು ಅವಲಂಬಿಸಿ ಬೆಳೆದಿರುವಂತದ್ದೆಂದು ಅಭಿಪ್ರಾಯ ಪಡುತ್ತಾ; ಕಳೆದ ಏಳೆಂಟು ದಶಕಗಳ ಸಾಹಿತ್ಯ ವಿಮರ್ಶೆಯ ಚಟುವಟಿಕೆಗಳ ಹಿಂದೆ ಇದ್ದ ಪ್ರೇರಣೆಗಳೂ ಕೂಡ ಸಾಹಿತ್ಯದ ನೆಲೆಯಿಂದಲೇ ಬಂದಿರುವಂತದ್ದೆಂದು ಹೇಳುತ್ತಾರೆ. ಹಾಗೇ ನೋಡಿದರೆ ಕಳೆದ ಎರಡು ದಶಕಗಳಲ್ಲಿ ನಮ್ಮ ಸಂಸ್ಕೃತಿ ಚರ್ಚೆಗಳು ಬದಲಾಗಿವೆ. ಅಲ್ಲದೆ ಸಂಸ್ಕೃತಿನಿಷ್ಠ ನೆಲೆಗಳ ಬಗ್ಗೆ ಇಂದಿನ ವಿಮರ್ಶಕರು ಜಾಗೃತರಾಗಿದ್ದಾರೆ. ಸಂಸ್ಕೃತಿ ನಿಷ್ಠ ವಿಮರ್ಶೆಯು ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಅಗತ್ಯವಾದ ಮಾಹಿತಿ ಆಕರಗಳು ಎಂದು ಭಾವಿಸಬಹುದಾಗಿದೆ. ಇಲ್ಲವೇ ಸಂಸ್ಕೃತಿಯ ಸಂಕೀರ್ಣ ಸ್ವರೂಪ ತಿಳಿಯಲು ಒಳನೋಟ ನೀಡುವ ಮೂಲವೆಂದು ತಿಳಿಯಬಹುದೆನ್ನುವ ಅವರ 'ಸಂಸ್ಕೃತಿ' ನಿರ್ವಚನಕ್ಕೆ ಬದುಕನ್ನು ಒಳಗೊಂಡ ಸಾಹಿತ್ಯ ಕೃತಿಗಳು, ಬದುಕಿನ ಮಾಹಿತಿಯನ್ನೊಳಗೊಂಡ ಆಕೃತಿಗಳ ಒಡಲಿನಿಂದ ಸಂಸ್ಕೃತಿ ನಿರ್ವಚನವನ್ನು ಮಾಡುತ್ತಾರೆ. ಮತ್ತೊಂದು ಕಡೆಗೆ ''ಸಂಸ್ಕೃತಿ ವಿಶ್ಲೇಷಣೆಯಲ್ಲಿ ಹಲವು ಮಾರ್ಗಗಳಿವೆಯೆಂದೂ ಸಂಸ್ಕೃತಿಯನ್ನು ಹೊರಗಿನಿಂದ ನೋಡುವ ವಿಧಾನಗಳು ಹೆಚ್ಚು ಜನಪ್ರಿಯವಾದವು. ಸಂಸ್ಕೃತಿ ಒಂದು ಫಲಿತ ವಸ್ತು (ಪ್ರಾಡಕ್ಟ್) ವೆಂದು ಭಾವಿಸಿದ ಪ್ರಕ್ರಿಯೆ ಎಂದು ತಿಳಿಯುವುದಾದರೆ ಆಗ ಸಂಸ್ಕೃತಿಯನ್ನು ಒಳಗಿನಿಂದ ನೋಡುವ ವಿಧಾನ ಮತ್ತಷ್ಟು ಸಂಕೀರ್ಣಕೊಳ್ಳುತ್ತದೆ. ಹೀಗಿರುವಾಗ ಸಮಾಜ ಸಂಸ್ಕೃತಿಗಳ ನಡುವಣ ಸಂಬಂಧ ಪ್ರಧಾನ ಮತ್ತು ಅಧೀನವೆಂದು ವಿವರಿಸುವ ಕ್ರಮವು ಒಟ್ಟು ಸಂಸ್ಕೃತಿ ವಿಶ್ಲೇಷಣಾ ವಿಧಾನವನ್ನು ಅವಲಂಬಿಸಿ ಮಾತ್ರ ಯುಕ್ತವಾಗ ಬಲ್ಲದು''[೧೮] ಎಂಬ ಈ ವ್ಯಾಖ್ಯಾನವು ಮುಖ್ಯವಾಗಿ ಪ್ರಧಾನ ಮತ್ತು ಅಧೀನ ಸಂಸ್ಕೃತಿಗಳನ್ನು ಕುರಿತು ಇದ್ದರೂ, ಒಟ್ಟು ಸಂಸ್ಕೃತಿಯ ವಿಶ್ಲೇಷಣೆಯೆನ್ನುವಂತದ್ದು ಫಲಿತವಸ್ತುವಾಗಿ ನೋಡದೆ ಅದೊಂದು ಬದುಕಿನಲ್ಲಿ ಘಟಿಸುವ ನಿರಂತರ ಪ್ರಕ್ರಿಯೆಯಾಗಿ ನೋಡಬೇಕೆನ್ನುವ ನಿಲುವಿನಲ್ಲಿ ಸಮಾಜ ಸಂಸ್ಕೃತಿ ನಡುವಣ ಸಂಬಂಧ ಪ್ರಧಾನ, ಅಧೀನ ನೆಲೆಯೆಂದು ವಿಶ್ಲೇಷಣೆ ಮಾಡುವ ಕ್ರಮವೂ ಸಂಸ್ಕೃತಿಯ ನಿರ್ವಚನದ ದಾರಿಯಾಗಿದೆ ಎಂಬ ನಿಲುವಿನಲ್ಲಿ ಸಂಸ್ಕೃತಿಯ ಚಲನಶೀಲತೆಯನ್ನು ವಿವರಿಸುತ್ತಾ ಅದರ ಅಂತರನೆಲೆಗಳನ್ನು ವ್ಯಾಖ್ಯಾನಿಸಲು ಹೊರಟಿದೆ.

ಕನ್ನಡ ಸಾಹಿತ್ಯ ಸಂಸ್ಕೃತಿ ಚಿಂತಕರಲ್ಲೊಬ್ಬರಾದಂತಹ ಡಾ.ಎಚ್.ಎಸ್. ರಾಘುವೇಂದ್ರರಾವ್ ಅವರು ಸಂಸ್ಕೃತಿ ಪರಿಕಲ್ಪನೆಯ ನಿರ್ವಚನವನ್ನು ಮಾಡುವಾಗ ''ಸಂಸ್ಕೃತಿಯೆನ್ನುವುದು ಒಂದು ಸಂಗತಿಯೂ ಹೌದು, ಪ್ರತಿಕ್ರಿಯೆಯೂ ಹೌದು, ಅದರ ಹಿಂದೆ ಕೆಲವು ಅಪರಿಹಾರ್ಯವಾದ ಮತ್ತು ಕೆಲವು ತಪ್ಪಿಸಿಕೊಳ್ಳಬಹುದಾದ ಒತ್ತಡಗಳು ಕೆಲಸ ಮಾಡುತ್ತಿರುತ್ತವೆ. ಬಹುರೂಪಿ ಸಂಸ್ಕೃತಿಯ ನೆಲೆಗಳೇ ಅಂತರಿಕ ಮತ್ತು ಬಾಹ್ಯ ಸಂಘರ್ಷಗಳನ್ನು ಅನಿವಾರ್ಯವಾಗಿ ಮಾಡುತ್ತವೆ. ಇಂತಹ ಒತ್ತಡಗಳು ವಿಜ್ಞಾನ, ತಂತ್ರಜ್ಞಾನಗಳಿಂದ ಹೇಗೋ ಹಾಗೆಯೇ ಅವುಗಳ ಸೃಷ್ಟಿ ಮತ್ತು ವಿತರಣೆಗಳನ್ನು ನಿಯಂತ್ರಿಸುವ ಆರ್ಥಿಕ ಮತ್ತು ರಾಜಕೀಯ ನೆಲೆಗಳಿಂದಲೂ ಹುಟ್ಟಿಕೊಳ್ಳುತ್ತವೆ'' ಎನ್ನುತ್ತಾರೆ. ಇವರು ಸಂಸ್ಕೃತಿಯನ್ನು ಒಂದು ಸಂಗತಿಯನ್ನಾಗಿಯೂ, ಪ್ರತಿಕ್ರಿಯೆಯಾಗಿಯೂ ಪರಿಗಣಿಸಿದ್ದಾರೆ. ಜೊತೆಗೆ ಬಹುರೂಪಿಯಾದಂತಹ ಸಂಸ್ಕೃತಿಗಳ ನೆಲೆಗಳು ಬಾಹ್ಯ ಮತ್ತು ಆಂತರಿಕ ಸಂಘರ್ಷಗಳನ್ನು ಅನಿವಾರ್ಯಮಾಡುತ್ತವೆಂದು, ಇಂದಿನ ವಿಜ್ಞಾನ, ತಂತ್ರಜ್ಞಾನಗಳಿಂದಾಗುವ ಸೃಷ್ಟಿ ಮತ್ತು ವಿತರಣೆಗಳನ್ನು ನಿಯಂತ್ರಿಸುವ ಶಕ್ತಿ ಆರ್ಥಿಕ ಮತ್ತು ರಾಜಕೀಯ ನೆಲೆಗಳಿಂದ ಸಂಸ್ಕೃತಿ ಪ್ರಕ್ರಿಯೆಗಳು ಹುಟ್ಟಿಕೊಳ್ಳುತ್ತವೆ ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ.

'ಸಂಸ್ಕೃತಿ' ನಿರ್ವಚನವನ್ನು ಮೌಲಿಕವಾಗಿ ಮಂಡಿಸಿದ ಇತ್ತೀಚಿನ ತಲೆಮಾರಿನ ಸಂಸ್ಕೃತಿ ವಿಮರ್ಶಕರಾದ ಜಿ. ರಾಜಶೇಖರ್ ಅವರು ತಮ್ಮ ಸಂಸ್ಕೃತಿ ಕುರಿತ ವಿಚಾರ ಸರಣಿಯನ್ನು ಹೀಗೆ ಮಂಡಿಸಿದ್ದಾರೆ. ''ಸಂಸ್ಕೃತಿಯೆನ್ನುವುದು ವಂಶವಾಹಿನಿಯಾಗಿ ಹರಿದುಬರುವಂತಹದಲ್ಲ, ಅದು ರಕ್ತಜನ್ಯವೂ ಅಲ್ಲ, ಜನಾಂಗ ದ್ವೇಷದ ಸಿದ್ಧಾಂತಗಳು ಮತ್ತು ಹಿಂದುತ್ವದ ವಿಕೃತವಾದ ಮಾತ್ರ ಸಂಸ್ಕೃತಿ ಕುರಿತ ಹಾಗೆ ಭಾವಿಸುತ್ತದೆ. ಸಂಸ್ಕೃತಿಯು ಸಾಮಾಜಿಕ ಬದುಕಿನ ಪ್ರತಿಫಲನವಾಗಿದೆ, ಸಂವಹನವಿಲ್ಲದೆ ಸಂಸ್ಕೃತಿಯಿಲ್ಲ. ಸಂಸ್ಕೃತಿಯನ್ನು ವ್ಯವಸ್ಥೆಯಿಂದ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಎಲ್ಲಾ ಸಮಾಜಗಳು ಅಧಿಕಾರದ ಸಂರಚನೆಯಾಗಿರುವುದರಿಂದ ಸಮಾಜದ ಯಜಮಾನಿಕೆಯ ಶಕ್ತಿಗಳು ಯಾವ ಸ್ವರೂಪದವು ಎಂಬುದರ ಮೇಲೆ ಸಮಾಜದ ಸಂಸ್ಕೃತಿ ರೂಪಿತವಾಗುತ್ತದೆ.'' ಎಂದಿದ್ದಾರೆ.

ಚಿಂತಕ ಜಿ ರಾಜಶೇಖರ ಅವರ ಈ ವಿಚಾರ ತರ್ಕದಲ್ಲಿ ಸಂಸ್ಕೃತಿ ನಿರ್ವಚನವು ಸಾಮಾಜಿಕ ಬದುಕಿನ ಪ್ರತಿಫಲವಾಗಿ ರೂಪಿತವಾಗಿರುವಂತದ್ದಾಗಿ ಕಂಡುಬರುತ್ತದೆ. ಒಂದು ನಾಡಿನ ಸಂಸ್ಕೃತಿ ಸ್ವೀಕಾರವು ಸಂವಹನದೊಂದಿಗೆ, ವೈವಿಧ್ಯಮಯವಾದ ಸಾಮಾಜಿಕ ವ್ಯವಸ್ಥೆಯೊಂದಿಗೆ ಜೀವ ಸಂಬಂಧವನ್ನಿಟ್ಟುಕೊಂಡಿರುವಂತದ್ದು. ಯಾವುದೇ ನಾಡು, ಪ್ರದೇಶದ ಸಂಸ್ಕೃತಿಯು ನಿಜವಾದಂತಹ ನೆಲೆಯ ಚಿಂತನೆ ಅಲ್ಲಿನ ಜಾತಿ ಪದ್ಧತಿಯೊಳಗಣ ಆಚಾರ ವಿಚಾರಗಳು, ಅಸಮಾನತೆ ಲಿಂಗತಾರತಮ್ಯ ಮುಂತಾದ ಲಾಗಯ್ತಿನಿಂದ ರೂಢಿಯಲ್ಲಿರುವ ಆಚರಣೆಗಳನ್ನು ಸಮಕಾಲೀನ ಹಿಂದುತ್ವ ಚಳುವಳಿಯಂತಹ ಅನಿಷ್ಟಗಳನ್ನು ಒಳಗೊಳ್ಳುವುದು ಇಂದು ಅನಿವಾರ್ಯವಾಗಿದೆ ಎಂದು ಜಿ. ರಾಜಶೇಖರರು ಹೇಳಿರುವ ಮಾತು 'ಸಂಸ್ಕೃತಿ' ನಿರ್ವಚನಕ್ಕೆ ಯಥಾರ್ಥವಾಗಿದೆ.

### ೨.೪. ಎಪ್ಪತ್ತರ ದಶಕದ ಸಂಸ್ಕೃತಿ ನಿರ್ವಚನ

ಸಂಸ್ಕೃತಿ ವಿಶ್ಲೇಷಣೆಯ ಸಂದರ್ಭದಲ್ಲಿ ಎಪ್ಪತ್ತರ ದಶಕದ ನಂತರ ಆಧುನಿಕ ಶಿಕ್ಷಣದ ಮೂಲಕ ಹೊಸ ಎಚ್ಚರವನ್ನು ಪಡೆದುಕೊಂಡ ಶೂದ್ರಜಾತಿಗಳ ಅನೇಕ ಜನರು, ಅದರಲ್ಲೂ ಕರ್ನಾಟಕ, ಕನ್ನಡದ ಸಂದರ್ಭದಲ್ಲಿ ದಲಿತ ಮತ್ತು ಕೆಳಜಾತಿ ಮತ್ತು ಮಹಿಳಾ ಸಮೂಹಗಳಿಂದ ಹಲವಾರು ಬುದ್ಧಿ ಜೀವಿಗಳು, ಸಂಸ್ಕೃತಿ ಚಿಂತಕರು, ಪ್ರಮುಖ ಬರಹಗಾರರು ತಾವು ಹುಟ್ಟಿಬೆಳೆದ ಜಾತಿ ಜನಾಂಗಗಳ ಬದುಕನ್ನು ವಿಭಿನ್ನ ನೆಲೆಯಿಂದ ವಿಶ್ಲೇಷಣೆಗೆ

ಒಳಪಡಿಸಿದರು. ಮೇಲ್ವರ್ಗದ ಜನ ಸಮುದಾಯದಿಂದ ದಲಿತರಿಗೆ, ಕೆಳವರ್ಗದವರಿಗೆ ಆಗುತ್ತಿದ್ದ ಶೋಷಣೆ, ಹಿಂಸೆಯನ್ನು ಹತ್ತಿಕ್ಕಲು ಅನೇಕ ದಲಿತ ಲೇಖಕರು ತಮ್ಮ ಸಾಂಸ್ಕೃತಿಕ ಬದುಕಿನ ರಕ್ಷಣೆಗಾಗಿ ಹೊಸ ಪ್ರಶ್ನೆಗಳನ್ನು ಎತ್ತತೊಡಗಿದರು. ಈ ಸಂದರ್ಭದಲ್ಲಿ ಹುಟ್ಟಿಕೊಂಡ 'ಬರಹಗಾರ ಮತ್ತು ಕಲಾವಿದ ಒಕ್ಕೂಟ' 'ದಲಿತ ಚಿಂತನೆ'ಯನ್ನು ಒಳಗೊಂಡ 'ದಲಿತ ಸಂಘರ್ಷ ಸಮಿತಿಗಳು', 'ಬಂಡಾಯ ಸಾಹಿತ್ಯ ಸಂಘಟನೆಗಳು' ಮಹಿಳಾ ಹೋರಾಟಗಳು, ಸಾಂಸ್ಕೃತಿಕ ಬದುಕಿಗೆ ಹೊಸ ಎಚ್ಚರಗಳನ್ನು ಮೂಡಿಸಿದವು.

ಇಲ್ಲಿ ಸಂಸ್ಕೃತಿ ನಿರ್ವಚನವು ಶೋಷಿತ ಜನಾಂಗದ ಬದುಕಿನ ವಿಶ್ಲೇಷಣೆಗಾಗಿ ಮೂಡಿಬಂತು. ದಲಿತ ಸಂಘರ್ಷ ಸಮಿತಿಯ ನೇತಾರರಾಗಿದ್ದ ಪ್ರೊ ಬಿ. ಕೃಷ್ಣಪ್ಪನವರು ನೊಂದ ದಲಿತ ಜನಾಂಗದ ಬದುಕಿಗೆ ಹೊಸ ಧ್ವನಿಯಾದರು. ನಾಡಿನ ದಲಿತರು ಶೋಷಣೆಗೆ ಒಳಗಾದಾಗ ಸಾಂಸ್ಕೃತಿಕ ಸಂಘಟನೆಯನ್ನು ಕಟ್ಟಿ ಅವರ ಬದುಕಿಗೆ ಹೊಸ ಆಶಾಕಿರಣವಾದರು. ದಲಿತರ ಸ್ವಾಭಿಮಾನ, ಜಾತಿವಿನಾಶ, ಅಂತರ ಜಾತಿಯ ಮಾತುಗಳು ಕೇಳಿಬಂದವು. ಇಲ್ಲಿ ಸಂಸ್ಕೃತಿಯ ಸಾಮಾನ್ಯ ನಿರ್ವಚನವು 'ದಲಿತರ ಮಾನಸಿಕ ಪಕ್ವತೆ ಒಂದು ಸಮುದಾಯದ ಮಾನಸಿಕ ಸಾಧನೆಯಾಗಿ' ಮೂಡಿ ಬಂದಿರುವುದು ಕಾಣುತ್ತೇವೆ.

ನವ್ಯೋತ್ತರ ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂದರ್ಭದಲ್ಲಿ ಬಹುಮಹತ್ವದ ಬರಹಗಾರರೂ, ದಲಿತರ ದಮನಿತ ಬದುಕನ್ನು ಯಥಾವತ್ತಾಗಿ ಕಥನಗಳ ಮೂಲಕ ಕಟ್ಟಿಕೊಟ್ಟ ದೇವನೂರು ಮಹಾದೇವರು ಚಿತ್ರಿಸಿದ ದಲಿತರ ಅನನ್ಯವಾದ ಸಾಂಸ್ಕೃತಿಕ ಬದುಕೇ ದಲಿತ ಸಂಸ್ಕೃತಿಯ ಹೊಸ ನೆಲೆಯಾಗಿದೆ. ಅವರೇ ಹೇಳುವ ಹಾಗೇ 'ನಾನು ಕತ್ತಲ ರಾಜ್ಯದಿಂದ ಬಂದವನು ಕತ್ತಲ ರಾಜ್ಯದ ಇಡೀ ಮನುಷ್ಯ ಮಾತನಾಡುವುದಾದರೆ ಅದರಿಂದ ಉಂಟಾಗುವ ಬದಲಾವಣೆಯ ಕಲ್ಪನೆಗೆ ಎಟುಕದಷ್ಟಾಗಬಹುದು...' ಈ ಮಾತುಗಳಲ್ಲಿ ಹೊಸ ಧ್ವನಿಯೊಂದಿದೆ. ಕತ್ತಲ ರಾಜ್ಯವೆಂದರೆ ಶೋಷಣೆಗೆ ತುಳಿತಕ್ಕೊಳಗಾದ ದಲಿತ ಜನಾಂಗದಿಂದ ಬಂದವನೆಂಬ ನೋವು ಇಡೀ ಹದಗೆಟ್ಟ ದಲಿತರ ಬದುಕಿನ ಬಗ್ಗೆ ಮಾತನಾಡುವುದು ಕಲ್ಪನೆಗೆ ಎಟುಕದಷ್ಟಿದೆ. ಇಲ್ಲಿ ದಲಿತ ಸಂಸ್ಕೃತಿ ಚಿತ್ರಣವು ಅವರ ನೊಂದ ಬದುಕಿನ ಸಂಕೇತವಾಗಿ ಮೂಡಿ ಬಂದಿದೆ. ದೇವನೂರರ ಕತೆ ಕಾದಂಬರಿ ಲೇಖನಗಳಲ್ಲಿ ಸಂಸ್ಕೃತಿ ನಿರ್ವಚನವು ದಲಿತರ ಜೀವನ ಕ್ರಮವಾಗಿ, ಅವರ ಮಾನಸಿಕ ಪಕ್ವತೆಯ ಧ್ವನಿಯಾಗಿ ಮತ್ತು ಆ ಜನಾಂಗದ ಮಾನಸಿಕ ಸಾಧನೆಯಾಗಿ ಮೂಡಿ ಬಂದಿರುವುದನ್ನು ಕಾಣುತ್ತೇವೆ.

ಪ್ರಾದೇಶಿಕತೆಯ ಹಿನ್ನಲೆಯಿಂದ ಉತ್ತರ ಕರ್ನಾಟಕದ ಭಾಷಾ ಬದುಕಿನಲ್ಲಿ ಅರವಿಂದ ಮಾಲಗತ್ತಿಯವರು ತಮ್ಮ 'ಕಾರ್ಯ' ಮತ್ತು 'ಮುಗಿಯದ ಕತೆಗಳು' ಈ ಎರಡು ಕೃತಿಗಳಲ್ಲಿ 'ಸಂಸ್ಕೃತಿ' ನಿರ್ವಚನವು 'ತುಳಿತಕ್ಕೆ ಶೋಷಣೆಗೆ ಒಳಗಾದ ದಲಿತರ ಬದುಕಿನ ಆಚರಣೆ ವಿಧಿವಿಧಾನಗಳ ಸಂಸ್ಕೃತಿ ಕಥನವಾಗಿ ಮೂಡಿಬಂದಿದೆ. ದಲಿತರ ಜೀವನಕ್ರಮ ಅವರಲ್ಲಿಯ ಸಂಪ್ರದಾಯ ಪದ್ಧತಿಗಳು ಆಚರಣೆಗಳು ಮುಂತಾದ ಬದುಕು, ಸಂಸ್ಕೃತಿ ವಿಶ್ಲೇಷಣೆಯಾಗಿ ಕಂಡುಬಂದಿದೆ. ಜೊತೆಗೆ ದಲಿತ ಸಂಸ್ಕೃತಿಯ ಮೌಲ್ಯಾತ್ಮಕ ಚರ್ಚೆ ಇವರ ಕೃತಿಗಳಲ್ಲಿ ದಲಿತ ಸಮುದಾಯದ ಸ್ಥಿತಿಗತಿಗಳ ಅನನ್ಯ ಸಂಸ್ಕೃತಿಯ ವಿಶ್ಲೇಷಣೆಯಾಗಿ ಕಂಡುಬರುತ್ತದೆ.

ಇತ್ತೀಚಿನ ಮುಖ್ಯ ಸಂಸ್ಕೃತಿ ಕಥನಕಾರರಾಗಿ ರೂಪುಗೊಂಡಿರುವ ಮೊಗಳ್ಳಿ ಗಣೇಶರು ತಮ್ಮ ಕತೆ-ಕಾದಂಬರಿ ವೈಚಾರಿಕ ಲೇಖನಗಳಲ್ಲಿ 'ಸಂಸ್ಕೃತಿ' ನಿರ್ವಚನವನ್ನು ವಿಭಿನ್ನ ಚಿಂತನೆಯ ಮೂಲಕ ವಿಶ್ಲೇಷಣೆ ಮಾಡಿದ್ದಾರೆ, ಅವರ ವಿಶ್ಲೇಷಣೆ ನಿಲುವು ಹೀಗಿದೆ. ''ಪ್ರತಿಯೊಂದು ಸಮುದಾಯವೂ ನಿರಂತರವಾಗಿ ಅಸ್ತಿತ್ವದ ಹುಡುಕಾಟದಲ್ಲಿ

ತೊಡಗಿರುತ್ತದೆ. ಆ ಕಾರಣವಾಗಿ ತನ್ನ ಸಂಸ್ಕೃತಿ ಮತ್ತು ಪರಿಸರದ ಒಳಗೆ ಹಲವಾರು ಮಾರ್ಪಾಟುಗಳನ್ನು ಮಾಡಿಕೊಳ್ಳುವುದು ಅನಿವಾರ್ಯ. ಕಾಲದ ಬೇರೆ ಬೇರೆ ಅವಸ್ಥೆಗಳು ಪರಂಪರೆಯ ಧಾರೆಯಲ್ಲಿ ರೂಪಾಂತರಗಳನ್ನು ನಿರ್ಮಿಸುತ್ತಲೇ ಗತಕಾಲದ ಅನುಭವಗಳನ್ನು ಆಧುನಿಕತೆಯ ಜೊತೆಗೆ ಅನುಸಂದಾನಗೊಳ್ಳುತ್ತಿರುತ್ತದೆ.''[೨೫] ಎನ್ನುವ ಮೊಗಳ್ಳಿಯವರು ಗತಕಾಲವನ್ನು ನಿರಾಕರಿಸುವ ಯಾವ ಸಂಸ್ಕೃತಿಗಳು ಉಳಿಯಲಾರವು. ಆದರೆ ಸಂಸ್ಕೃತಿಯ ಸೃಜನಶೀಲ ಸ್ವಭಾವ ಎಂಥದೆಂದರೆ ಅದು ಅತ್ಯಾಧುನಿಕ ಸ್ಥಿತಿಯನ್ನು ಗತಕಾಲದ ರೂಪಕ್ಕೆ ಅಳವಡಿಸಬಹುದೆಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಸಾಂಸ್ಕೃತಿಕ ಅನನ್ಯತೆಯನ್ನು ಒಳಗೊಂಡ ಯಾವುದೇ ಒಂದು ಸಮುದಾಯ ತಮ್ಮ ಉಳಿವಿಕೆಗಾಗಿ ನಿರಂತರವಾದ ಬದುಕಿನ ಹುಡುಕಾಟದಲ್ಲಿ ತೊಡಗಿಸಿಕೊಳ್ಳುತ್ತಾ. ತಮ್ಮ ಸಂಸ್ಕೃತಿ ಮತ್ತು ಪರಿಸರದ ಒಳಗೆ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿರುತ್ತವೆ. ಬೇರೆ ಬೇರೆ ಕಾಲದ ಅವಸ್ಥೆಗಳ ರೂಪಾಂತರಗಳನ್ನು ನಿರ್ಮಿಸಿಕೊಳ್ಳುತ್ತವೆ. ಜೊತೆಗೆ ಗತಕಾಲದ ಅನುಭವಗಳನ್ನು ಆಧುನಿಕತೆಯ ಜೊತೆಗೆ ಅನುಸಂಧಾನ ಮಾಡಿಕೊಂಡಿರುತ್ತವೆ. ಯಾವುದೆ ಸಂಸ್ಕೃತಿಯು ಗತಕಾಲವನ್ನು ನಿರಾಕರಿಸಿದರೆ ಅಂತಹ ಸಂಸ್ಕೃತಿಗಳು ಉಳಿಯಲಾರವು ಎನ್ನುವ ಮೊಗಳ್ಳಿಯವರು ಸಂಸ್ಕೃತಿಯ ನಿರ್ವಚನವನ್ನು ಗತಕಾಲದ ಅನುಭವದ ನೆಲೆಯಲ್ಲಿ ಮತ್ತು ಆಧುನಿಕತೆಯ ಜೊತೆಗಿನ ಅನುಸಂಧಾನದಿಂದ ಸಾಧ್ಯವೆಂದಿದ್ದಾರೆ. ಸಂಸ್ಕೃತಿಯ ಗುಣ, ಸೃಜನಶೀಲತೆಯ ಸ್ವಭಾವವೂ ಕೂಡ ಅತ್ಯಾಧುನಿಕ ಸ್ಥಿತಿಯನ್ನು ಗತಕಾಲದರೂಪಕ್ಕೆ ಅಳವಡಿಸಿಕೊಳ್ಳುವದರಿಂದ ನಿರ್ಮಿತಗೊಂಡಿರುತ್ತದೆ. ಇಂದಿನ ನಾಗರೀಕತೆಗಳ ಭೌತಿಕ ರೂಪಾಂತರವು ಸಂಸ್ಕೃತಿಗಳ ಮೇಲೆ ಹಲವಾರು ಒತ್ತಡಗಳನ್ನು ಬೀರುತ್ತದೆ. ಸಂಸ್ಕೃತಿಗಳು ಯಾವೊತ್ತು ನಾಗರೀಕತೆಗಳ ವೇಗದ ಜೊತೆ ಸ್ಪರ್ಧಿಸಲಾರವು, ನಾಗರೀಕತೆ ಆ ಮಟ್ಟಿಗೆ ಸಂಸ್ಕೃತಿಗಳ ಮೇಲೆ ವ್ಯವಸ್ಥೆಯ ಯಜಮಾನ್ಯವನ್ನು ಬೇರೆ ಬೇರೆ ನೆಲೆಗಳಲ್ಲಿ ಅಂದರೆ ಧರ್ಮ ವಿಜ್ಞಾನ-ತಂತ್ರಜ್ಞಾನ-ರಾಜಕಾರಣಗಳ ಮೂಲಕ ಹೇರಬಹುದಾಗಿದೆ ಎಂಬ ಮೊಗಳ್ಳಿಯವರ ನಿಲುವಿನಲ್ಲಿ ಹೊಸಚಿಂತನೆಯಿದೆ. ನಮ್ಮ ಸಂಸ್ಕೃತಿ ಪರಿಕಲ್ಪನೆಯು ಮಾನವೀಯ ಸಂಬಂಧಗಳನ್ನು ಪುನರ್ ಸೃಷ್ಟಿಸುವ ಆಶಯಕ್ಕೆ ಒಳಪಡಿಸಬೇಕಾಗಿದೆ. ಇಂತಹ ಸಂಸ್ಕೃತಿ ಚಿಂತನೆಯು ಅಖಂಡ ಮಾನವತ್ವದ ದ್ಯಾನದಲ್ಲೇ ಸಾಗಬೇಕೆಂಬ ಮೊಗಳ್ಳಿಯವರ ಸಂಸ್ಕೃತಿ ಕುರಿತ ಮಾತುಗಳಲ್ಲಿ ಗಾಂಧಿ ಮತ್ತು ಅಂಬೆಡ್ಕರ್ ಚಿಂತನೆಗಳ ಆಶಯ ಗಾಡವಾಗಿ ಧ್ವನಿತವಾಗಿರುವುದನ್ನು ಕಾಣಬಹುದಾಗಿದೆ, ಮಾನವತಾವಾದಿಯಾದ ಅಂಬೇಡ್ಕರ್ 'ಸಂಸ್ಕೃತಿ' ಶಬ್ದವನ್ನು ಅಪರೂಪಕ್ಕೆ ಬಳಸಿದರೂ ಈ ಸಂಸ್ಕೃತಿ ಪರಿಕಲ್ಪನೆಯನ್ನು ಭಾರತೀಯ ಸಮಾಜ ವಿಶ್ಲೇಷಣೆಗೆ ಬೇಕಾದಂತಹ ಒಂದು ತಾತ್ವಿಕ ಪರಿಕಲ್ಪನೆಯಾಗಿ ಅವರಲ್ಲಿ ರೂಪಿತವಾಗಲಿಲ್ಲ ಅವರ ಚಿಂತನೆ ಬೇರೆ ಬೇರೆ ನೆಲೆಗಳ ಹುಡುಕಾಟದೊಂದಿಗೆ ಸಾಗಿ ಬಂದಿತು. ಆದರೂ ಅಂಬೇಡ್ಕರ್ ಚಿಂತನೆಗಳ ಪ್ರಭಾವ ಕನ್ನಡ ಸಂಸ್ಕೃತಿ ಅಧ್ಯಯನಗಳ ಮೇಲಾಗಿರುವುದನ್ನು ಅಲ್ಲಗಳೆಯುವಂತಿಲ್ಲ. ಎಪ್ಪತ್ತರ ದಶಕದ ಸಂಸ್ಕೃತಿ ಚಿಂತನೆಯನ್ನು ಮಂಡಿಸಿದ ವಿದ್ವಾಂಸರ ಜೊತೆಗೆಲ್ಲಾ ಅಂಬೇಡ್ಕರರ ಪ್ರಭಾವವನ್ನು ಗುರುತಿಸಬಹುದಾಗಿದೆ.

ದಲಿತ ಸಾಹಿತ್ಯ ಸಂದರ್ಭದಲ್ಲಿ ಸಂಸ್ಕೃತಿ ಪರಿಕಲ್ಪನೆಯನ್ನು ಕಟ್ಟಿಕೊಳ್ಳುವ ಪ್ರಯತ್ನದಲ್ಲಿ ಇತರೆ ತಾತ್ವಿಕತೆಗಳ ಜೊತೆ ಕೊಡುಕೊಳ್ಳುವಿಕೆ ಮಾಡಿ ಹೊಸ ಹುಟ್ಟನ್ನು ಪಡೆಯಲಾಯಿತು. ಇಲ್ಲಿ ದಲಿತ ಅನುಭವ ಜಗತ್ತು ಹಾಗೂ ವರ್ತಮಾನದ ಒತ್ತಡಗಳೇ ಅದಕ್ಕೆ ಮುಖ್ಯ ಪ್ರೇರಣೆಯಾಗಿರುವುದು ಕಂಡುಬರುತ್ತದೆ. ಕೋಟಗಾನಹಳ್ಳಿ

ರಾಮಯ್ಯನವರು 'ಸಿಂಧ್ ಮಾದಿಗರ ಸಂಸ್ಕೃತಿ'ಯನ್ನು ಕುರಿತು ಅಧ್ಯಯನ ಮಾಡುವಾಗ 'ಉಪಸಂಸ್ಕೃತಿ' ಎಂಬ ಪದವನ್ನು ಬಳಸಲು ಒಪ್ಪದೆ 'ಮೂಲ ಸಂಸ್ಕೃತಿ' ಎಂಬ ಪದ ಬಳಸುತ್ತಾರೆ. ಸಿಂಧ್‌ಮಾದಿಗರ ಬದುಕಿನ ಮೂಲ ಆಚಾರ ವಿಚಾರ ಬಗ್ಗೆ ವಿಶ್ಲೇಷಣೆ ಮಾಡುವಾಗ ಸಂಸ್ಕೃತಿ ಕುರಿತು ಈ ವಿಚಾರ ವ್ಯಕ್ತಪಡಿಸುತ್ತಾರೆ. ಮಾನವಶಾಸ್ತ್ರೀಯ ವಿಧಾನದೊಂದಿಗೆ ಅದರಾಚೆ ಹೋಗಿ ಅವರ ಸಾಂಸ್ಕೃತಿಕ ಬದುಕಿನ ಬಗ್ಗೆ ರಾಜಕೀಯ ಮತ್ತು ಸಾಮಾಜಿಕ ಪ್ರಶ್ನೆಗಳನ್ನು ಎತ್ತಿರುವುದನ್ನು ನೋಡಿದರೆ ದಲಿತ ಸಂಸ್ಕೃತಿಗಳನ್ನು ಇಂದಿನ ಆಧುನಿಕ ನೆಲೆಯಲ್ಲಿ ಸ್ವವಿಮರ್ಶೆಯೊಂದಿಗೆ ಮಾಡಿರುವ ವಿಧಾನವಿದಾಗಿದ್ದು, 'ಸಂಸ್ಕೃತಿ' ನಿರ್ವಚನವು ಇಲ್ಲಿ ಮಾನವ ಶಾಸ್ತ್ರೀಯ ಜನಾಂಗವೊಂದರ ಬದುಕಿನ ಪ್ರತಿಬಿಂಬವಾಗಿ ಬಂದಿರುವುದನ್ನು ಕಾಣುತ್ತೇವೆ.

'ಬಂಡಾಯ ಸಾಹಿತ್ಯ ಸಂಘಟನೆ'ಯ ತಾತ್ವಿಕ ನಿಲುವನ್ನು ಗಮನಿಸಿದಾಗ ಎಡವಾದಿ ಚಿಂತನೆಯ ಪರಿಣಾಮವಾಗಿ ದಲಿತ ಚಳುವಳಿಗಳಿಗೆ ಹೊಸ ಶಕ್ತಿಯನ್ನು ನೀಡಲು ಜಾತಿವಾದಿ ಹೋರಾಟ ಬಿಟ್ಟು ಆಗಿರುವ ಶೋಷಣೆ, ದಬ್ಬಾಳಿಕೆಗೆ ಬಂಡಾಯದ ನೆಲೆಯಲ್ಲಿ ವ್ಯವಸ್ಥೆಯ ವಿರುದ್ಧ ಹೊಸ ಹೋರಾಟವನ್ನು ರೂಪಿಸಿತು. ಎಂಬತ್ತರ ದಶಕದ ನಂತರದಲ್ಲಿ ನಾಡಿನಲ್ಲಿ ನಡೆದ ಸಾಂಸ್ಕೃತಿಕ ಅಧ್ಯಯನಗಳ ಹಿಂದಿರುವ ಪ್ರೇರಕ ಶಕ್ತಿಯಾಗಿ ಹೊರಹೊಮ್ಮಿದ ಈ ಬಂಡಾಯ ಚಳುವಳಿಯ 'ನಮ್ಮನೆಲೆ' ಎಂಬ ಪ್ರಣಾಳಿಕೆಯಲ್ಲಿ ಸಾಂಸ್ಕೃತಿಕ ಪರಿಕಲ್ಪನೆಯನ್ನು ಕುರಿತ ಮಾತುಗಳಿವೆ. ಇಲ್ಲಿ 'ಸಂಸ್ಕೃತಿ' ಪರಿಕಲ್ಪನೆಯು ಸಾಮಾಜಿಕ, ರಾಜಕೀಯ, ಸಾಹಿತ್ಯ ಕ್ಷೇತ್ರಗಳನ್ನು ಒಳಗೊಂಡ ವಿಶ್ಲೇಷಣೆಯಾಗಿದೆ. ಈ ಸಂದರ್ಭದಲ್ಲಿ ಬರಗೂರು ರಾಮಚಂದ್ರಪ್ಪ, ಚಂದ್ರಶೇಖರ ಪಾಟೀಲ, ಎಸ್.ಎಸ್.ಹಿರೇಮಠರ 'ಸಂಸ್ಕೃತಿ' ಪರಿಕಲ್ಪನೆಯನ್ನು ಕುರಿತು ಆಡಿದ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಪ್ರಸ್ತುತವೆಂದುಕೊಂಡಿದ್ದೇನೆ.

ಚಿಂತಕ ಬರಗೂರು ರಾಮಚಂದ್ರಪ್ಪನವರು ''ವ್ಯಕ್ತಿಯ ಅಂತರಂಗಕ್ಕೆ ಬಹಿರಂಗ ಪ್ರವೇಶ, ಬಹಿರಂಗಕ್ಕೆ ಅಂತರಂಗದ ಆಗಮನ ಆಗುವುದು ಒಂದು ಅನಿವಾರ್ಯ ಪ್ರಕ್ರಿಯೆಯೆಂಬುದು ನನ್ನ ಭಾವನೆ. ನನ್ನ ದೃಷ್ಟಿಯಲ್ಲಿ ಸಂಸ್ಕೃತಿಯೆನ್ನುವುದು ಅಂತರಂಗ ಬಹಿರಂಗಗಳ ಸಂಬಂಧದಲ್ಲಿ ಒಡಮೂಡುವ ಸಾಮಾಜಿಕ ವಿನ್ಯಾಸ; ವಿವಿಧ ನೆಲೆಗಳ ಅಂತರ್ ಸಂಬಂಧದಲ್ಲಿ ಸಂಭವಿಸುವ ಸಾಮಾಜಿಕ ಆಕೃತಿ; ಭೂತ ಬಯಲಾಗುತ್ತ ಹೋಗುವ ವರ್ತಮಾನದ ಉಸಿರು''[೨೨] ಇಲ್ಲಿ ಸಂಸ್ಕೃತಿ ನಿರ್ವಚನವನ್ನು ಅಂತರಂಗ ಮತ್ತು ಬಹಿರಂಗಗಳ ಭಾವನಾತ್ಮಕ ಸಂಬಂಧದೊಂದಿಗೆ ಒಡಮೂಡುವ ಸಾಮಾಜಿಕ ವಿನ್ಯಾಸವಾಗಿ ಪ್ರಕಟಗೊಳ್ಳುತ್ತದೆ. ಸಮಾಜದ ವಿವಿಧ ನೆಲೆಗಳಲ್ಲಿ ಆಂತರಿಕ ಸಂಬಂಧದಲ್ಲಿ ಸಂಭವಿಸುವಂತಹ ಸಾಮಾಜಿಕ ಆಕೃತಿಯಾಗಿಯೂ, ಭೂತದೊಂದಿಗೆ ಬಯಲಾಗುತ್ತಾ ಹೋಗುವ ಸಂಸ್ಕೃತಿ ಪರಕಲ್ಪನೆ ವರ್ತಮಾನದ ಉಸಿರಾಗಿ ನಿಲ್ಲುತ್ತದೆಂಬ ನಿಲುವು ಬರಗೂರರದಾಗಿದೆ.

ಪ್ರೊ.ಚಂದ್ರಶೇಖರ ಪಾಟೀಲರು ೧೯೭೯ ರಲ್ಲಿ ಸಂಕ್ರಮಣದಲ್ಲಿ ಬರೆದಂತಹ ''ಬಂಡಾಯ ಮತ್ತು ಸಾಹಿತ್ಯ'' ವೆಂಬ ಲೇಖನದಲ್ಲಿ ''ನಮ್ಮ ಹೋರಾಟ ಪ್ರಧಾನವಾಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು, ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವು ಎಂಬ ನಿಲುವಿನಿಂದ ಹೊರಟದ್ದು. ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನಮ್ಮೆಲ್ಲರ ಶತ್ರುಗಳನ್ನು ಗುರುತಿಸಿಕೊಳ್ಳಬೇಕು. ನಮ್ಮದು ಪ್ರಧಾನವಾಗಿ ಸಾಂಸ್ಕೃತಿಕ ಚಳುವಳಿ ಆದ್ದರಿಂದ ನಮ್ಮ ಆಶಯಗಳನ್ನೊಳಗೊಂಡ ಸೃಜನಶೀಲ ಸಾಹಿತ್ಯ ಹೆಚ್ಚೆಚ್ಚು ಸೃಷ್ಟಿಯಾಗಬೇಕು. ಮುಖ್ಯವಾಗಿ ಸಾಂಸ್ಕೃತಿಕ ಕ್ಷೇತ್ರದಲ್ಲಿ ಶೋಷಿತ ಜನತೆಯ ಪರವಾದ ಅಭಿಪ್ರಾಯಗಳನ್ನು ರೂಪಿಸಬೇಕು.''[೨೩] ಚಂಪಾರವರ ಪ್ರಬಂಧದ ಸಾಲುಗಳಲ್ಲಿ 'ಸಂಸ್ಕೃತಿ' ನಿರ್ವಚನವು ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ

ಸಂದರ್ಭಗಳಿಂದ ವ್ಯಾಖ್ಯಾನ ಮಾಡಿರುವಂತದ್ದು. ಇಲ್ಲಿ 'ಸಂಸ್ಕೃತಿ' ಪದವು ದಮನಿತರ, ಶೋಷಿತರ ಸಮುದಾಯಗಳ ಆಶೋತ್ತರಗಳನ್ನು ಪ್ರಸ್ತುತ ಸಂದರ್ಭದಲ್ಲಿ ಪ್ರತಿನಿಧೀಕರಿಸುವ ಪರಿಭಾಷೆಯ ಪದವಾಗಿ ಬಳಕೆಯಾಗಿರುವುದು ಕಂಡುಬರುತ್ತದೆ.

ಬಂಡಾಯ ಸಾಹಿತ್ಯ ಚಳುವಳಿಯ ಮುಖ್ಯ ಲೇಖಕರಲ್ಲಿ ಒಬ್ಬರಾಗಿರುವ ಪ್ರೊ ಎಸ್.ಎಸ್. ಹಿರೇಮಠರು ತಮ್ಮ ಬರವಣಿಗೆಯಲ್ಲಿ ಬಂಡಾಯ ಪ್ರಜ್ಞೆಯೊಂದಿಗೆ ಮಾರ್ಕ್ಸ್‌ವಾದಿ ನೆಲೆಗಳಿಂದ ಚಾರಿತ್ರಿಕ ಹಾಗೂ ತತ್ವಶಾಸ್ತ್ರೀಯ ನೆಲೆಯಲ್ಲಿ ಸಂಸ್ಕೃತಿ ಶೋಧಕ್ಕೆ ತೊಡಗಿರುವವರಲ್ಲಿ ಪ್ರಮುಖರು. ಅಲೆಮಾರಿ ಮತ್ತು ಬುಡಕಟ್ಟು ಜನಾಂಗಗಳ ಮೂಲವನ್ನು ಹುಡುಕುತ್ತಾ ಹಿರೇಮಠರು ದಲಿತರ ಮೂಲವನ್ನು ಸ್ಥಾಪಿಸುತ್ತಾ ಹೊರಡುವ ಅವರ ಶೋಧಗಳು ಸಂಸ್ಕೃತಿಯ ಹಿನ್ನಲೆಯ ಸ್ವರೂಪವನ್ನು ಕಟ್ಟಿಕೊಡುವಲ್ಲಿ ಪ್ರಯತ್ನಿಸುತ್ತವೆ. ಇಪ್ಪತ್ತನೆಯ ಶತಮಾನ ಕೊನೆಯ ದಶಕಗಳ ಸಂಸ್ಕೃತಿ ಪ್ರಶ್ನೆಯಲ್ಲಿ ದಲಿತ ಸಂಸ್ಕೃತಿಯ ಒಟ್ಟಿಗೆ ಅನೇಕ ಅಲಕ್ಷಿತ, ಅಲ್ಪ ಸಂಖ್ಯಾತರ, ಅಂಚಿನ ಸಮುದಾಯಗಳ ಮತ್ತು ಮಹಿಳಾ ಅಧ್ಯಯನಗಳು ಆರಂಭವಾಗಿ ಅವರ ಸಾಂಸ್ಕೃತಿ ಬದುಕಿನ ವಿವರಗಳನ್ನು ಒಳಗೊಂಡ ಕೃತಿಗಳು ರಚಿತವಾದ ಪ್ರೊ.ಎಸ್.ಎಸ್. ಹಿರೇಮಠರು ಸಂಸ್ಕೃತಿ ಪರಿಕಲ್ಪನೆಯ ನಿರ್ವಚನವನ್ನು ಈ ರೀತಿ ವ್ಯಾಖ್ಯಾನಿಸುತ್ತಾರೆ. ''ನಮ್ಮದು ಬಹುಮುಖಿ ಸಂಸ್ಕೃತಿಗಳ ವಿಚಿತ್ರ ಸಂಗಮ. ಸಂಸ್ಕೃತಿ ಆಯಾ ಸಮಾಜದ ಆರ್ಥಿಕ ಸಂಬಂಧಗಳೆಂಬ ಅಡಿಪಾಯದ ಮೇಲೆ ಮೇಲ್ ರಚನೆಯ ಮೊತ್ತವಾಗಿ ರೂಪುಗೊಳ್ಳುತ್ತದೆ. ಗ್ರಾಮೀಣ ಭಾರತದಲ್ಲಿ ಹಳೆಯ ಕಾಲದ ಪಳಿಯುಳಿಕೆಯಂತಿರುವ ಆರ್ಥಿಕ ಸಂಬಂಧಗಳಲ್ಲಿ ಜಾತಿ ಎಂಬ ಸಾಮಾಜಿಕ ಘಟಕವು ಸಂಯೋಜನೆಗೊಂಡಿದೆ. ಜಾತಿಯ ನಗರೀಯ ರೂಪಾಕೃತಿ ಭೂರ್ಜ್ವಾ ರಾಜಕೀಯ ಪ್ರಕ್ರಿಯೆಗಳ ಜತೆ ಅಂಟಿಕೊಂಡಿದೆ. ಸಂಸ್ಕೃತಿಗಳ ರೂಪಾಕೃತಿಗಳು ಅವುಗಳ ನಡುವಿನ ಕೊಳುಕೊಡೆ ಸ್ಥಿತ್ಯಂತರಗಳ ಪ್ರಶ್ನೆ ಜಟಿಲವಾದುದು. ಬಂಡವಾಳಗಾರರ ಭೂಮಾಲಿಕರ ವರ್ಗಗಳು ಅವುಗಳ ಶಕ್ತಿರಾಜಕಾರಣ, ಜಾಗತೀಕರಣ, ಖಾಸಗೀಕರಣ ಉದಾರೀಕರಣದಂಥ ಅಪಾಯಕಾರಿ ಅಂತರಾಷ್ಟ್ರೀಯ ಒಡನಾಟದಲ್ಲಿ ಭಾರತದ ಶ್ರಮಿಕ ಸಮುದಾಯಗಳನ್ನು ಸರ್ವನಾಶ ಮಾಡುತ್ತಿವೆ. ಇದರಲ್ಲಿ ಸಂಸ್ಕೃತಿಯ ಪ್ರಶ್ನೆಯೂ ಬೆರತಿದೆ.''[೨೨]

ಮೇಲಿನ ಇವರ ಸಂಸ್ಕೃತಿ ನಿರ್ವಚನವು ಸಮಾಜದ ಆರ್ಥಿಕ ಸಂಬಂಧದ ಅಡಿಪಾಯದ ಮೇಲೆ ಮೇಲ್‌ರಚನೆಯ ಮೊತ್ತವಾಗಿ ರೂಪುಗೊಂಡಿರುವಂತದ್ದು. ಜೊತೆಗೆ ಗ್ರಾಮೀಣ ಜಗತ್ತಿನಲ್ಲಿರುವ ಹಳೆಯ ಕಾಲದ ಪಳೆಯುಳಿಕೆಯಂತಿರುವ ಆರ್ಥಿಕ ಸಂಬಂಧಗಳಲ್ಲಿ ಜಾತಿ ಎಂಬ ಸಾಮಾಜಿಕ ಘಟಕವೂ ಅಂಟಿಕೊಂಡಿದೆಯೆನ್ನುವ ಹಿರೇಮಠರು ಇಂದಿನ ಸಂದರ್ಭದಲ್ಲಿ ಶಕ್ತಿರಾಜಕಾರಣ, ಉದಾರೀಕರಣ, ಖಾಸಗೀಕರಣ, ಜಾಗತೀಕರಣದಿಂದ ಶ್ರಮಿಕ ಸಮುದಾಯದ ಸಾಂಸ್ಕೃತಿಕ ಬದುಕು ಸರ್ವನಾಶವಾಗುತ್ತಿದೆಯೆನ್ನುವ ಅವರ ಮಾತುಗಳಲ್ಲಿ ಸಂಸ್ಕೃತಿಯ ಅರ್ಥವಿನ್ಯಾಸ ಸಮಾಜ ಗ್ರಾಮೀಣ ಜಗತ್ತು, ಆರ್ಥಿಕ ಸಂಬಂಧಗಳು ಮುಂತಾದ ನೆಲೆಗಳಿಂದ ನಿರ್ವಚನಗೊಂಡಿದೆ.

ಹಿರೇಮಠರಿಗೆ ಸಂಸ್ಕೃತಿ ಕುರಿತು ವಿಶಾಲ ದೃಷ್ಟಿಕೋನವಿದೆ. ಇಂದು ಗ್ರಾಮೀಣ ಭಾರತದಲ್ಲಿರುವ ವೈವಿಧ್ಯಮಯವಾದ, ಜನಪರ, ಜೀವಪರ ಸಂಸ್ಕೃತಿಯನ್ನು ಕ್ರಿಯಾಶೀಲ ನಿಲುವಿನೊಂದಿಗೆ ರಕ್ಷಿಸಬೇಕಾಗಿದೆ ಎಂದು, ಅಲ್ಲದೆ ಅವರ ವೈವಿಧ್ಯಮಯವಾದ ಬದುಕಿನ ಚಿತ್ರಣ ಸಾಹಿತ್ಯ ಕೃತಿಗಳಲ್ಲಿ ದಾಖಲಾಗಿದೆ. ಈ ಕೃತಿಗಳು ಸಂಸ್ಕೃತಿಯ ಭಾಗವಾಗಿವೆ. ಅವರ ಕಲೆಯ ಪ್ರಭೇಧ ಸಂಸ್ಕೃತಿಯ ಅರ್ಥನೆಲೆಯನ್ನು ಒಳಗೊಂಡಿರುವಂತದ್ದು, ಈ ಸಂಸ್ಕೃತಿ

ಮಾನವನ ಭೌತಿಕ, ಭೌದ್ಧಿಕ ಚಟುವಟಿಕೆಗಳ ಅಥವಾ ಅರಿವು ಇರುವುಗಳ ಗತಿ ತಾರ್ಕಿಕ ಪ್ರಕ್ರಿಯೆಗಳ ಅಭಿವ್ಯಕ್ತಿಯಾಗಿದೆ.

ಕರ್ನಾಟಕ ಸಂಸ್ಕೃತಿಯಲ್ಲಿ ಸ್ತ್ರೀ ಬದುಕಿನ ಅಳಲನ್ನು ವಿಶ್ಲೇಷಣೆ ಮಾಡುವಂಹ ಸಂದರ್ಭದಲ್ಲಿ ಪ್ರಗತಿಪರ ಮಹಿಳಾ ಲೇಖಕಿಯರು ತಾವು ನಿಕೃಷ್ಟವಾಗಿ ಬಾಳಿಬದುಕುತ್ತಿರುವ ಮಹಿಳಾ ಸಾಂಸ್ಕೃತಿಕ ಬದುಕನ್ನು ತಮ್ಮ ಸೃಜನಶೀಲ ಕತೆ, ಕಾವ್ಯ, ಕಾದಂಬರಿ, ವೈಚಾರಿಕ ಲೇಖನಗಳಲ್ಲಿ ಅನಾವರಣಗೊಳಿಸಿದ್ದಾರೆ. ಸ್ತ್ರೀಯನ್ನು ಕುರಿತ ಒಂದು ಸಂಸ್ಕೃತಿಯ ದೃಷ್ಟಿಕೋನಕ್ಕೂ, ಆ ಸ್ತ್ರೀಲೋಕದ ಸಂಸ್ಕೃತಿಯನ್ನುಳ್ಳ ಸಮಾಜದ ನೈತಿಕ ದೃಷ್ಟಿಕೋನಕ್ಕೂ ನೇರವಾದಂತ ಸಂಬಂಧವಿದೆ. ಸ್ತ್ರೀ ಬದುಕಿನ ಧಾರುಣವಾದ ಚಿತ್ರಣಗಳನ್ನು ಮಹಿಳಾ ಸಾಹಿತ್ಯ ಸ್ತ್ರೀ ಸಂವೇದನೆಯೊಂದಿಗೆ ದಾಖಲಿಸಿದೆ. ಪ್ರಮುಖ ಮಹಿಳಾ ಬರಹಗಾರ್ತಿಯರಾದ ವಿಜಯಾ ದಬ್ಬೆ, ಬಿ.ಎನ್ ಸುಮಿತ್ರಾಬಾಯಿ, ಶ್ರೀಮತಿ.ಎಚ್.ಎಸ್, ಎನ್.ಗಾಯತ್ರಿ, ಸಾರಾ ಅಬೂಬಕ್ಕರ್, ಗೀತಾ ನಾಗಭೂಷಣ, ಮತ್ತು ವೈದೇಹಿಯವರ ಬರವಣಿಗೆಯಲ್ಲಿ ಸಂಸ್ಕೃತಿ ಕುರಿತ ನಿರ್ವಚನವೂ ಮಹಿಳಾ ಸಾಂಸ್ಕೃತಿಕ ಬದುಕಿನ ವಿವರಣೆಯೊಂದಿಗೆ ದಾಖಲೆಗೊಂಡಿದೆ. ಇಂದು ಆರ್ಥಿಕ ಸ್ವಾವಲಂಬನೆಗೆ ಮಹಿಳೆಯ ಸಾಂಸ್ಕೃತಿಕ ಬದುಕು ಒಳಗಾಗುತ್ತಿದೆ.

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಸ್ತ್ರೀಚೈತನ್ಯದ ಬದುಕಿನ ನೆಲೆ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತಿದೆ. ಮಹಿಳೆ ತನ್ನ ಸಾಂಸ್ಕೃತಿಕ ಅನನ್ಯ ಬದುಕನ್ನು ಪುರುಷ ಪ್ರಧಾನ ಸಮಾಜದಲ್ಲಿ ತಾನೇನು ಕಡಿಮೆಯಿಲ್ಲ, ಪುರುಷನಂತೆ ದುಡಿದು ಬದುಕನ್ನು ರೂಪಿಸಿಕೊಳ್ಳಬಲ್ಲೆನೆಂಬ ಛಲ ಆಕೆಯಲ್ಲಿ ಮೂಡಿಬರತೊಡಗಿದೆ. ಗೀತಾ ನಾಗಭೂಷಣರ 'ಚಿತ್ತಿ ಮತ್ತು ರಿಕ್ಷಾ' ಕತೆಯಲ್ಲಿ ಚಿತ್ತಿ ಅನಾಥೆಯಾಗಿದ್ದ ತನ್ನನ್ನು ಸಾಕಿದ್ದ ಫಕ್ಕಿರಪ್ಪ ಖಾಯಿಲೆಯಿಂದ ಬಳಲುತ್ತಿದ್ದಾಗ ಅನ್ನದ ಸಮಸ್ಯೆ ಕಾಣಿಸಿಕೊಂಡಾಗ ಆಗ ಚಿತ್ತಿ, ಆತನಿಗೆ ''ಅಲ್ಲೊ.. ಯಪ್ಪೋ... ನೀ ಆರಾಮ ಮಾಡು ನಾ ರಿಕ್ಷಾ ಹೊಡಿತೀನಂತೆ. ನನಗ ಗಂಡು ಮಗನಂಗ್ಹ ಬೆಳ್ಸೀದಿ, ನಾ ಗಂಡು ಮಗನಾಂಗ್ಹ ದುಡುದು ನಿನಗ ಉಳಿಸ್ಗೋತಿನಂತ ನಾನು''[೨೧] ಉಲ್ಲೇಖಿತ ಕತೆಯ ಸಾಲಿನಲ್ಲಿ ಚಿತ್ತಿಯೆಂಬ ಮಹಿಳೆ ಸಾಕು ತಂದೆಯನ್ನು ಸಾಕಲು ಛಲಗಾರ್ತಿಯಾಗಿ ರಿಕ್ಷಾ ತುಳಿದೆ ಬದುಕನ್ನು ಕಟ್ಟಿಕೊಳ್ಳುತ್ತಾಳೆ, ಪುರುಷನಿಗಿಂತ ತಾನೇನು ಕಮ್ಮಿಯಿಲ್ಲ ಎಂದು ಬದುಕಿ ತೋರಿಸುತ್ತಾಳೆ. ಡಿವಿಜಿಯವರು ಹೇಳಿದ ಹಾಗೇ 'ಲೋಕದೊಡನೆ ನಮಗಾಗುವ ಸಂಪರ್ಕಗಳಲ್ಲಿ ನಾವು ಸಂಪಾದಿಸುವ ಔಚಿತ್ಯವೇ ಸಂಸ್ಕೃತಿ'ಯೆನ್ನುವಂತೆ ಚಿತ್ತಿ ಬದುಕಿನ ನೋವಿನ ನೆಲೆಯಲ್ಲಿ ಔಚಿತ್ಯ ಪ್ರಜ್ಞೆಯಿಂದ ಜೀವನ ಸಾಗಿಸಿ ಸುಸಂಸ್ಕೃತ ಗುಣ ಸಂಪತ್ತನ್ನು ಉತ್ತಮ ಸಂಸ್ಕೃತಿಯ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಇಲ್ಲಿ ಸಂಸ್ಕೃತಿ ನಿರ್ವಚನವೂ ಮಹಿಳಾ ಬದುಕಿನ ಅನನ್ಯತೆಯ ಸಂಕೇತವಾಗಿ ಮೂಡಿ ಬಂದಿದೆ.

ವೀಣಾ ಶಾಂತೇಶ್ವರರ ಕತೆಗಳು, ಟಿ.ಬಿ.ಲಲಿತಾನಾಯಕ, ಸಾರಾಅಬೂಬಕರ್, ವೈದೇಹಿ, ಹೆಚ್.ನಾಗವೇಣಿ, ಬಿ.ಟಿ. ಜಾಹ್ನವಿ, ನೇಮಿಚಂದ್ರ, ಎಂ.ಎಸ್.ವೇದಾ ಮುಂತಾದ ಮಹಿಳಾ ಬರಹಗಾರ್ತಿಯರ ಕತೆ, ವೈಚಾರಿಕ ಲೇಖನಗಳನ್ನು ಅಧ್ಯಯನ ಮಾಡಿದಾಗ ಸಂಸ್ಕೃತಿ ಪರಿಕಲ್ಪನೆಯ ನಿರ್ವಚನವು ಸ್ತ್ರೀಚೈತನ್ಯದ ಅನನ್ಯತೆಯ ಪಾತ್ರಗಳೊಂದಿಗೆ, ಪ್ರಗತಿಪರ ಆತ್ಮ ಸಂಪತ್ತಿನ ಪ್ರತೀಕವಾಗಿ ಮೂಡಿ ಬಂದಿರುವುದು ಕಂಡುಬರುತ್ತದೆ.

ಹೀಗೆ ಸಂಸ್ಕೃತಿ ಪರಿಕಲ್ಪನೆಯ ನಿರ್ವಚನವು ಪ್ರಾರಂಭದಲ್ಲಿ ಸಾಮಾನ್ಯ ನೆಲೆಗಟ್ಟಿನಲ್ಲಿ ಬದುಕಿನ ಪ್ರತಿ ಬಿಂಬವಾದರೆ, ವಸಾಹತು ಕಾಲಘಟ್ಟದಲ್ಲಿ ವೈದಿಕ ಕೇಂದ್ರಿತ ನೆಲೆಯಲ್ಲಿ ಡಿ.ವಿ.ಜಿ, ಮಾಸ್ತಿ, ಶಂಬಾ ಸಂಸ್ಕೃತಿ ನಿರ್ವಚನವನ್ನು ಮಂಡಿಸಿರುವುದು ಕಂಡುಬರುತ್ತದೆ. ನಂತರ ವಸಾಹತು ನಂತರದ ಕಾಲಘಟ್ಟದಲ್ಲಿ ಪಾಶ್ಚಿಮಾತ್ಯ

ಪ್ರಭಾವದಿಂದ ಬಿಡಿಸಿಕೊಂಡ ಬುದ್ಧಿಜೀವಿಗಳು ನಿತ್ಯದ ಆಚರಣೆ ಜೀವನವನ್ನು ರೂಪಿಸುತ್ತಿರುವ ನಡೆನುಡಿಯ ಮೂಲಕ ಸಂಸ್ಕೃತಿ ಪರಿಕಲ್ಪನೆಯನ್ನು ಅಧ್ಯಯಿಸಿರುವುದು ಕಾಣುತ್ತೇವೆ. ಬೌದ್ಧಿಕ ಚಿಂತಕರಾದ ಕೆ.ವಿ.ನಾರಾಯಣರು, ಡಿ.ಆರ್.ನಾಗರಾಜ, ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಸಾರಾಅಬೂಬಕರ್, ವೈದೇಹಿ ಮುಂತಾದವರು ತಾವು ನಡೆಸಿದ ಸಂವಾದ, ಚರ್ಚೆಗಳಲ್ಲಿ, ಕತೆಗಳಲ್ಲಿ ಸಂಸ್ಕೃತಿಯನ್ನು ಹೊಸ ಪರಿಭಾಷೆಯೊಂದಿಗೆ ಕಟ್ಟಿಕೊಟ್ಟಿರುವುದನ್ನು ಅವರ ಬರಹಗಳಲ್ಲಿ ಕಾಣುತ್ತೇವೆ. ಈ ಚಿಂತಕರು ಹುಟ್ಟುಹಾಕಿದ ಆಲೋಚನೆಗಳು ಎಪ್ಪತ್ತರ ದಶಕದ ಕಾಲಘಟ್ಟದಲ್ಲಿ ಹೊಸ ಶಿಕ್ಷಣ, ವೈಚಾರಿಕತೆಯೊಂದಿಗೆ ಕೆಳವರ್ಗದ ಜನರ ಜೀವನಶೈಲಿಯ ಆಚರಣೆ ವಿಧಿ ವಿಧಾನಗಳ ಮೇಲೆ 'ಸಂಸ್ಕೃತಿ' ನಿರ್ವಚನವು ದಲಿತ ಸಂಸ್ಕೃತಿ, ಮುಸ್ಲಿಂ ಸಂಸ್ಕೃತಿ, ಅಲಕ್ಷಿತ, ಜನಸಮುದಾಯದ ನೆಲೆಯಲ್ಲಿ ಸಂಸ್ಕೃತಿ ಶೋಧ ಹೊಸ ನೆಲೆಗಟ್ಟನ್ನು ಪಡೆದಿರುವುದನ್ನು ಕಾಣುತ್ತೇವೆ. ಕರ್ನಾಟಕ ಮತ್ತು ಕರ್ನಾಟಕವನ್ನೊಳಗೊಂಡ ಭಾರತದ ಸಂದರ್ಭದಲ್ಲಿ ಜರುಗಿದ ಅನೇಕ ವಿದ್ಯಮಾನಗಳ ಹಿನ್ನಲೆಯಲ್ಲಿ, ಸಾಂಸ್ಕೃತಿಕ ಬದುಕಿನಲ್ಲಿ ಅನೇಕ ಸ್ಥಿತ್ಯಂತರಗಳು ಜರುಗಿದವು. ಆ ಸಂದರ್ಭದಲ್ಲಿ ಸಂಸ್ಕೃತಿಯ ವಿಶ್ಲೇಷಣೆಯ ನಿರ್ವಚನವೂ ಹೊಸ ಹೊಸ ಆಯಾಮಗಳಲ್ಲಿ ಅರ್ಥವ್ಯಾಪ್ತಿಯನ್ನು ವಿಸ್ತರಿಸಿಕೊಂಡಿರುವುದನ್ನು ಅಧ್ಯಯನದಿಂದ ಅರಿತು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಿದ್ದೇನೆ.

**ಟಿಪ್ಪಣಿಗಳು**

೦೧. ರಹಮತ್ ತರೀಕೆರೆ - ಸಾಂಸ್ಕೃತಿಕ ಅಧ್ಯಯನ (ಪು.೬)

೦೨. ಪ್ರೊ ಬರಗೂರು ರಾಮಚಂದ್ರಪ್ಪ - ಪ್ರಸ್ತಾವನೆ 'ಸಂಸ್ಕೃತಿ - ಉಪಸಂಸ್ಕೃತಿ'
ಉಪಸಂಸ್ಕೃತಿ ಅಧ್ಯಯನಮಾಲೆ (೧೯೯೩) (ಪು.೨೭)

೦೩. ಹಾ.ಮಾ. ನಾಯಕ (ಸಂ) - ಡಿ.ವಿ.ಜಿ. ಸಂಪುಟ - ೧ (೧೯೮೭)

೦೪. ಡಿ.ವಿ.ಜಿ. - ಲೇಖನ ಪ್ರಜಾವಾಣಿ ೩೦.೮.೧೯೮೭

೦೫. ಡಿ.ವಿ.ಜಿ. - 'ಸಂಸ್ಕೃತಿ' (೧೯೫೩)
ಡಿ.ವಿ.ಜಿ. ಸಂಪುಟ-೧, ಡಾ.ಹಾ.ಮಾ. ನಾಯಕ (ಸಂ)

೦೬. ದೇವುಡು - 'ಕರ್ನಾಟಕ ಸಂಸ್ಕೃತಿ' (ಪು.೩,೧೪)

೦೭. ರಹಮತ್ ತರೀಕೆರೆ - ಕನ್ನಡದ ಸಂಸ್ಕೃತಿ ಚಿಂತನೆಗಳು ಹಾಗೂ ಚಿಂತಕರು (೨೦೦೪)
ಸಾಂಸ್ಕೃತಿಕ ಅಧ್ಯಯನ - ಡಾ ರಹಮತ್ ತರೀಕೆರೆ (ಪುಟ; ೩೨,೩೩)

೦೮. ಮಲ್ಲೆಪುರಂ ಜಿ.ವೆಂಕಟೇಶ - ಶಂ.ಬಾ ಸಂಸ್ಕೃತಿ ಚಿಂತನೆ (ಪು.೧೫,೧೬)

೦೯. ನಂ ತಪಸ್ವಿಕುಮಾರ್ - 'ಸಂಸ್ಕೃತಿ ಪರಿಕಲ್ಪನೆ' (ಲೇಖನ)
ಸಂಸ್ಕೃತಿ ವಿಕಾಸ - ಡಾ.ನಂ.ತಪಸ್ವಿಕುಮಾರ್ (ಪು.೨೫)

೧೦. ಮಾಲಿನಿಮಲ್ಯ (ಸಂ) ಶಿವರಾಮ ಕಾರಂತರ ಲೇಖಗಳು (೧೯೯೪)
ಶಿವರಾಮಕಾರಂತರ ಲೇಖನಗಳು-ಮಾಲಿನಿಮಲ್ಯ (ಪು.೪೬)
೧೧. ಹೆಚ್. ತಿಪ್ಪೇರುದ್ರಸ್ವಾಮಿ ಕರ್ನಾಟಕ ಸಂಸ್ಕೃತಿ ಸಮೀಕ್ಷೆ (ಪು.೩೬)
೧೨. ಯು.ಆರ್ ಅನಂತಮೂರ್ತಿ 'ಭಾರತೀಯ ಸಂಸ್ಕೃತಿ ಮತ್ತು ಕನ್ನಡ ಲೇಖಕ'
ಪ್ರಜ್ಞೆ ಮತ್ತು ಪರಿಸರ - ಡಾ. ಯು.ಆರ್. ಅನಂತಮೂರ್ತಿ (ಪುಟ ೧೦೬)
೧೩. ಅಗ್ರಹಾರ ಕೃಷ್ಣಮೂರ್ತಿ (ಸಂ) - 'ಡಿ.ಆರ್ ಸಂಸ್ಕೃತಿ ಕಥನ'
ಪ್ರಸ್ತಾವನೆ/ಬೆನ್ನುಡಿ - ಪ್ರೊ. ಮಲ್ಲೆಪುರಂ.ಜಿ. ವೆಂಕಟೇಶ.
೧೪. ಡಿ.ಆರ್ ನಾಗರಾಜ - 'ಸಾಹಿತ್ಯ ಕಥನ' (ಪು.೬, ೭, ೮)
೧೫. ಡಿ.ಆರ್.ನಾಗರಾಜ - ಸಂಸ್ಕೃತಿ ಕಥನ, ಅಗ್ರಹಾರ ಕೃಷ್ಣಮೂರ್ತಿ (ಸಂ) (ಪುಟ ೫೯೦)
೧೬. ರಹಮತ್ ತರೀಕೆರೆ - ಕನ್ನಡ ಸಂಸ್ಕೃತಿ ಚಿಂತನೆಗಳು
ಸಾಂಸ್ಕೃತಿಕ ಅಧ್ಯಯನ-ರಹಮತ್ ತರೀಕೆರೆ (ಪು.೩೬)
೧೭. ಕೆ.ವಿ. ನಾರಾಯಣ - ಕರ್ನಾಟಕ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ (ಹೊಸತು-೨೦೦೫)
೧೮. ಕೆ.ವಿ. ನಾರಾಯಣ - 'ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ' (ಪು; ೨೦)
ಬೇರು ಕಾಂಡ ಚಿಗುರು - ಡಾ.ಕೆ.ವಿ.ನಾರಾಯಣ.
೧೯. ಎಚ್.ಎಸ್ ರಾಘವೇಂದ್ರರಾವ್ - 'ಕರ್ನಾಟಕ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ' (ಹೊಸತು-೨೦೦೫)
೨೦. ಜಿ. ರಾಜಶೇಖರ - 'ಕರ್ನಾಟಕ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ' (ಹೊಸತು - ೨೦೦೫)
೨೧. ಮೊಗಳ್ಳಿ ಗಣೇಶ್ - ಕರ್ನಾಟಕ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ ಹೊಸತು ವಿಶೇಷಾಂಕ-೨೦೦೫
೨೨. ಬರಗೂರು ರಾಮಚಂದ್ರಪ್ಪ - ಪ್ರಸ್ತಾವನೆ-ಸಂಸ್ಕೃತಿ-ಉಪಸಂಸ್ಕೃತಿ ಮಾಲೆ
೨೩. ಚಂದ್ರಶೇಖರ ಪಾಟೀಲ - ಬಂಡಾಯ ಮತ್ತು ಸಾಹಿತ್ಯ ಸಂಕ್ರಮಣ-ಸಂಪುಟ-ಧಾರವಾಡ, (ಪು.೪)
೨೪. ಎಸ್.ಎಸ್. ಹಿರೇಮಠ - 'ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ'
ಹೊಸತು ವಿಶೇಷಾಂಕ (೨೦೦೫)
೨೫. ಗೀತಾ ನಾಗಭೂಷಣ 'ಚಿತ್ರಿ ಮತ್ತು ರೀಕ್ಷಾ'
ಅವ್ವ ಮತ್ತು ಇತರೆ ಕತೆಗಳು (ಪುಟ.೯೧)

* * * * *

ಅಧ್ಯಾಯ : ಮೂರು

# ಇಪ್ಪತ್ತನೆಯ ಶತಮಾನದ ಸಾಂಸ್ಕೃತಿಕ ವಿದ್ಯಮಾನಗಳು

೩.೧. ವಸಾಹತು ಪೂರ್ವ ವಿದ್ಯಮಾನಗಳು

೩.೧.೧. ಕೋಮುವಾದ

೩.೨. ವಸಾಹತೋತ್ತರ ವಿದ್ಯಮಾನಗಳು

೩.೨.೧. ಮಂಡಲ ವರದಿ

೩.೨.೨. ವಸಾಹತುಶಾಹಿ ಪ್ರಭಾವದಲ್ಲಿ ದೇಶಿ ನೆಲಯ ಹುಡುಕಾಟ

೩.೨.೩. ಭೂ ಹೋರಾಟ ಮತ್ತು ರೈತ ಪ್ರಶ್ನೆ

೩.೨.೪. ದಲಿತ ಬಂಡಾಯದ ಸಾಂಸ್ಕೃತಿಕ ನೆಲೆ

೩.೨.೫. ಪುನರ್ ಮೌಲ್ಯೀಕರಣದ ಪ್ರಶ್ನೆ

೩.೨.೬. ಉಪಸಂಸ್ಕೃತಿಯ ಚಿಂತನೆಯ ನೆಲೆಗಳು
(ಅಧೀನ, ಪ್ರತಿ ಮತ್ತು ಪರ್ಯಾಯ ಸಂಸ್ಕೃತಿ ಚಿಂತನೆಗಳು)

೩.೨.೭. ಮಹಿಳಾ ಪ್ರಶ್ನೆ

೩.೨.೮. ಜಾಗತೀಕರಣದ ಪ್ರಭಾವ

# ಅಧ್ಯಾಯ : ಮೂರು

## ಇಪ್ಪತ್ತನೆಯ ಶತಮಾನದ ಸಾಂಸ್ಕೃತಿಕ ವಿದ್ಯಮಾನಗಳು

ಆಧುನಿಕ ಕನ್ನಡ ಸಾಹಿತ್ಯ ವಿಶ್ಲೇಷಣೆಯ ಸಂದರ್ಭದಲ್ಲಿ ಸಂಸ್ಕೃತಿ ಅಧ್ಯಯನದ ತಾತ್ವಿಕ ನೆಲೆಗಳ ಶೋಧ ಗಂಭೀರವಾಗಿ ನಡೆಯುತ್ತಾ ಸಾಗಿದೆ. ಚರಿತ್ರೆಯ ಗತಿ ತರ್ಕವನ್ನು ರೂಪಿಸುವ ಸೃಜನಾತ್ಮಕ ಪ್ರಕ್ರಿಯೆಯಲ್ಲಿ ಸಣ್ಣ ಕತೆಗಳ ಪಾತ್ರವು ಅತ್ಯಂತ ಪ್ರಮುಖವಾದ ಚಲನಶೀಲತೆಯನ್ನು ಸಾಧಿಸಿದೆ. ಸಂಸ್ಕೃತಿಯ ಪುನರ್ ನಿರ್ಮಾಣದಲ್ಲಿ ಮಗ್ನವಾಗಿರುವ ಕಥಾ ಸಾಹಿತ್ಯ ಭವಿಷ್ಯದ ಸಾಧ್ಯತೆಯ ಪ್ರತೀಕವಾಗಿ ಮೈದಾಳಿದೆ. ಇಂದಿನ ವೈಜ್ಞಾನಿಕ ಬೆಳವಣಿಗೆ ಹಾಗೂ ವಸಾಹತುಶಾಹಿ ಆಳ್ವಿಕೆಯಿಂದ ಛಿದ್ರಗೊಂಡ ಸ್ಥಿತ್ಯಂತರದ ಸಂದರ್ಭದಲ್ಲಿ ಇಲ್ಲಿನ ಲೇಖಕರು ಆಯಾ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳಿಗೆ ಸ್ಪಂದಿಸಿದ್ದಾರೆ. ಆಧುನಿಕ ಕಥಾ ಸಾಹಿತ್ಯ ಪ್ರಕಾರದಲ್ಲಿ ಕೃಷಿಮಾಡಲು ತೊಡಗಿದ ಕತೆಗಾರರು 'ಸಂಸ್ಕೃತಿ' ಎಂಬ ಬಹುಮುಖಿ ನೆಲೆಯುಳ್ಳ ಈ ಪರಿಕಲ್ಪನೆಯನ್ನು ಹೊಸ ಚಿಂತನಾಕ್ರಮದಿಂದ ಪರಿಭಾವಿಸಿಕೊಂಡಿದ್ದಾರೆ. ವಿವಿಧ ವಸ್ತು ಸ್ಥಿತಿಯ ಸಂದರ್ಭಗಳನ್ನು ನಿರೂಪಿಸುವಾಗ ಲೇಖಕರು ಸಾಮಾಜಿಕ ಘಟಕವನ್ನು ಮುಖ್ಯವಾಗಿಟ್ಟುಕೊಂಡು ಆಯಾ ಕಾಲಘಟ್ಟದಲ್ಲಿ ನಡೆದ ಸಂಘರ್ಷಗಳಿಗೆ ಮುಖಾಮುಖಿಯಾಗಿ ತಮ್ಮ ಕತೆಗಳಲ್ಲಿ ಸ್ಪಂದಿಸಿದ್ದಾರೆ. ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ಜರುಗಿದ ಸಾಂಸ್ಕೃತಿಕ ವಿದ್ಯಮಾನಗಳಿಗೆ ತೀವ್ರವಾಗಿ ಸ್ಪಂದಿಸಿದ ಸೃಜನಶೀಲ ಲೇಖಕರು ನಾಡಿನ ಅನನ್ಯ ಸಾಂಸ್ಕೃತಿಕ ಬದುಕನ್ನು ಹೊಸ ಬಗೆಯ ಚಿಂತನಾಕ್ರಮದಲ್ಲಿ ಅರ್ಥೈಸಿಕೊಂಡು ತಮ್ಮ ಸೃಜನಶೀಲ ಕೃತಿಗಳನ್ನು ರಚಿಸಿರುವುದು ಕಂಡು ಬರುತ್ತದೆ.

ವಸಾಹತು ಕಾಲಘಟ್ಟದ ಸಾಂಸ್ಕೃತಿಕ ವಿದ್ಯಮಾನ ಒಂದಾದರೆ ವಸಾಹತೋತ್ತರ ಕಾಲಘಟ್ಟದ ಸಾಂಸ್ಕೃತಿಕ ವಿದ್ಯಮಾನಗಳ ಪರಿ ಇನ್ನೊಂದಾಗಿದೆ. ಹಾಗೆ ನೋಡಿದರೆ ೭೦ ರ ದಶಕ ಕರ್ನಾಟಕದಲ್ಲಿ ಬಹು ಸ್ಥಿತ್ಯಂತರಗಳನ್ನು ಕಂಡ ಕಾಲಘಟ್ಟವಾಗಿದೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಜರುಗಿದ ಸಾಂಸ್ಕೃತಿಕ ವಿದ್ಯಮಾನಗಳ ಹಿನ್ನಲೆಯನ್ನು ಗಮನಿಸಿದಾಗ ನಾಡಿನ ಸಾಹಿತ್ಯ-ಸಂಸ್ಕೃತಿಯ ಮೇಲೆ ರಾಷ್ಟ್ರಮಟ್ಟದಲ್ಲಿ ವ್ಯಾಪಿಸಿಕೊಂಡ ಗಾಂಧೀಜಿಯವರ ವಿಚಾರಧಾರೆ, ಅಂಬೇಡ್ಕರ್ ಚಿಂತನೆ. ಪೆರಿಯಾರ್ ವಿಚಾರ ಧಾರೆಯ ನೆಲೆಗಳು ಹಾಗೂ ನಾಡಿನಲ್ಲಿ ನಡೆದ ಭೂ ಹೋರಾಟಗಳು. ಸಮಾಜವಾದಿ ಚಳುವಳಿಗಳು, ದಲಿತ-ಬಂಡಾಯ ಚಳುವಳಿಗಳು, ಲೇಖಕರ ಕೃತಿರಚನೆಯ ಮೇಲೆ ತೀವ್ರವಾದಂತಹ ಪ್ರಭಾವ ಬೀರಿರುವುದನ್ನು ಸೂಕ್ಷ್ಮವಾಗಿ ಗಮನಿಸಿದರೆ ಗೊತ್ತಾಗುತ್ತದೆ.

ವಿದ್ಯಮಾನಗಳೆಂದರೆ ನಾಡಿನಲ್ಲಿ ಜರುಗಿದ ಅನೇಕ ಸಾಂಸ್ಕೃತಿಕ ಘಟನಾವಳಿಗಳು. ಈ ಘಟನಾವಳಿಗಳನ್ನು ಕುರಿತು ವಿದ್ವತ್ ವಲಯದಲ್ಲಿ ಜರುಗಿದ ಚರ್ಚೆಗಳೂ ಕೂಡ ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಚಿಂತನೆಗೆ ಹೊಸ ಹೊಸ ವಿಚಾರಧಾರೆಗಳಾಗಿ ಸೇರ್ಪಡೆಯಾಗುತ್ತಲೇ ಬಂದಿವೆ. ಈ ವಿದ್ಯಮಾನಗಳನ್ನು ಎರಡು ನೆಲೆಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಒಂದು: ವಸಾಹತು ಘಟ್ಟದಲ್ಲಿ ಜರುಗಿದ ವಿದ್ಯಮಾನಗಳು, ಎರಡು ವಸಾಹತೋತ್ತರ ಕಾಲಘಟ್ಟದಲ್ಲಿ ಜರುಗಿದ ವಿದ್ಯಮಾನಗಳು, ಈ ಎರಡು ವಿದ್ಯಮಾನಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಮುಂದೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೩. ೧. ವಸಾಹತು ಪೂರ್ವ ವಿದ್ಯಮಾನಗಳು**

ಇಪ್ಪತ್ತನೆಯ ಶತಮಾನದ ಪ್ರಾರಂಭದಿಂದ ಹಿಡಿದು ನಲವತ್ತೇಳರ ಸ್ವಾತಂತ್ರ್ಯ ಬರುವವರೆಗಿನ ಪ್ರಮುಖ ಜನಸಮುದಾಯದ ಬದುಕಿನ ಸಂಸ್ಕೃತಿ ಪ್ರಶ್ನೆಯನ್ನಿಟ್ಟುಕೊಂಡು ಚರ್ಚಿಸುವುದಾದರೆ. ಆಯಾ ಕಾಲಘಟ್ಟದ ಜನ ಸಮುದಾಯದ ನಡೆಯನ್ನು ಮುಖ್ಯ ಬದಲಾವಣೆಗೆ ತಂದ ಅಂದಿನ ಚಾರಿತ್ರಿಕ ವಿದ್ಯಮಾನಗಳೂ ಸ್ವಾತಂತ್ರ್ಯ ಸಂದರ್ಭದಲ್ಲಿ ಸಂಭವಿಸಿದಂತಹ ಮುಖ್ಯ ಸ್ಥಿತ್ಯಂತರಗಳೂ, ಆ ಕಾಲದ ಸಾಂಸ್ಕೃತಿಕ ನೆಲೆಯ ವಿಶ್ಲೇಷಣೆಯೂ ಇಲ್ಲಿ ಮುಖ್ಯವಾಗುತ್ತದೆ. ಭಾರತವನ್ನು ಬ್ರಿಟೀಷ್ ಸರ್ಕಾರವು ಸ್ವಾಧೀನಪಡಿಸಿಕೊಂಡ ನಂತರದ ಅತಿಮುಖ್ಯವಾದ ಬದಲಾವಣೆಯೆಂದರೆ ಎಲ್ಲಾ ಪಾರಂಪರಿಕ ಜಾತಿ-ವರ್ಗಗಳನ್ನು ಮೀರಿ ಸೃಷ್ಟಿಯಾದ ಹೊಸ ಸಾಮಾಜಿಕ ವರ್ಗ ವ್ಯವಸ್ಥೆ ತಲೆ ಎತ್ತಿ ನಿಂತಿರುವುದು. ಭಾರತದ ವಿವಿಧ ರಾಜ್ಯಗಳಲ್ಲಿ ಪಾರಂಪರಿಕವಾಗಿ ಅನೇಕ ಪಾಳೆಯಗಾರರು ಮತ್ತು ಆಳರಸರು ಮುಂದುವರೆದರಾದರೂ ಸಮಾಜದಲ್ಲಿ ಅವರು ನಿರ್ವಹಿಸಿದ ಪಾತ್ರ ಅದ್ಭುತವಾದ ಬದಲಾವಣೆಗೆ ಕಾರಣವಾದುದನ್ನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ. ಹೊಸ ಸನ್ನಿವೇಶ ಸಂದರ್ಭದಲ್ಲಿ ಇಲ್ಲಿಯ ಜಮೀನ್ದಾರರೂ ರಾಜರಾಗಿ ಮಾರ್ಪಾಟು ಹೊಂದಿದರು. ಸ್ವಾತಂತ್ರ್ಯದ ಆಕಾಂಕ್ಷೆ ಅವರಲ್ಲಿರದೇ ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆ ಬಿಟ್ಟರೆ ತಮಗೆ ಉಳಿಗಾಲವಿಲ್ಲವೆಂದು ನಂಬತೊಡಗಿದ್ದರು. ಇದರಿಂದ ಆ ಕಾಲದ ಜನಸಾಮಾನ್ಯರ ಬದುಕಿನ ಪ್ರಶ್ನೆ ಅನೇಕ ಸ್ಥಿತ್ಯಂತರಗಳಿಗೆ ಒಳಪಟ್ಟಿದ್ದನ್ನು ಮರೆಯುವಂತಿಲ್ಲ.

ಈ ಸಂದರ್ಭದಲ್ಲಿ ವಸಾಹತು ಆಡಳಿತದ ಪರಿಣಾಮವಾಗಿ ಹೊಸ ಸಾಮಾಜಿಕ ವರ್ಗಗಳು ಉದಯವಾಗಿರುವುದನ್ನು ಕುರಿತು ಚರಿತ್ರೆಕಾರರಾದ ಎಸ್. ಚಂದ್ರಶೇಖರ ಅವರು ಮಂಡಿಸಿದ ಕೆಲವು ಅಭಿಪ್ರಾಯಗಳು ಹೀಗಿವೆ. ''ಹೊಸ ಭೂಹಿಡುವಳಿ ಕ್ರಮವನ್ನು ಜಾರಿಗೊಳಿಸಿದಾಗ, ಹೊಸದಾದ ಭೂ ಒಡೆಯರ ವರ್ಗವೊಂದು ನಿರ್ಮಾಣವಾಯಿತು, ಈ ವರ್ಗವು ಮೇಲ್ಜಾತಿಯವರಿಂದ ಕೂಡಿದ್ದಾಗಿತ್ತು. ಈ ರೈತವಾರಿ ಕ್ರಮದಿಂದ ಹೆಚ್ಚಿನ ಪ್ರಮಾಣದ ಭೂ ಒಡೆಯರನ್ನು ನಿರ್ಮಾಣ ಮಾಡುವುದಲ್ಲದೆ, ಪ್ರತಿಯೊಬ್ಬ ರೈತನು ಏಕಕಾಲದಲ್ಲಿ ಯಜಮಾನ ರೈತ ಮತ್ತು ಕಾರ್ಮಿಕನಾಗಿರುವಂತೆ ಯೋಜಿಸಲಾಗಿತ್ತು. ಈ ಕ್ರಮದಿಂದಾಗಿ ಕರ್ನಾಟಕದ ಸಂದರ್ಭದಲ್ಲಿ ಬ್ರಾಹ್ಮಣರು ಇವರ ಜೊತೆಗೆ ವಕ್ಕಲಿಗರು, ಲಿಂಗಾಯತರು ಪ್ರಭಲ ಕೋಮುಗಳಾಗಿ ಬ್ರಿಟೀಷ್ ಸಾಮ್ರಾಜ್ಯಶಾಹಿ ಧೋರಣೆಯಂತೆ ಭೂಮಾಲಿಕತ್ವವನ್ನು ಹೊಂದಿದ್ದು, ಬಡ ಕೃಷಿಕರನ್ನು ಇವರು ಶೋಷಿಸತೊಡಗಿದ್ದರು. ಕೆಳಜಾತಿ ಜನಾಂಗದ ಸಾಮುದಾಯಿಕ ಬದುಕಿನಲ್ಲಿ ಅನೇಕ ತೊಂದರೆಗಳು ಕಾಣಿಸಿಕೊಂಡವು. ಈ ಬ್ರಿಟೀಷ್ ಪೂರ್ವ ಭಾರತದ ಸಂದರ್ಭದಲ್ಲಿಯೂ ಕೂಡ ಈ ಮೇಲ್ವರ್ಗ ಜಾತಿಗಳ ಪ್ರಭಾವ ಪ್ರಾಬಲ್ಯ ಹೆಚ್ಚು ಅಲಂಕಾರಿಕವೂ, ಆಚರಣಾತ್ಮಕವೂ

ಆಗಿದ್ದರಿಂದ ಭೂನಿಯಂತ್ರಣ ಪದ್ಧತಿಯನ್ನು ಬದಲಾಯಿಸಿದ ಪರಿಣಾಮವಾಗಿ ಈ ವರ್ಗ ಚಿಗುರತೊಡಗಿತ್ತು. ಗ್ರಾಮೀಣ ಭಾಗದ ಕೃಷಿಮೂಲದ ವಿವರಗಳನ್ನು ಅರಿತ ಬ್ರಿಟೀಷರು ಆ ಬಾಗದ ಜನರ ಅಧಿಕಾರದ ಮೂಲಗಳನ್ನು ಶೋಧಿಸಿ ಗ್ರಾಮದ ಮುಖಂಡರು ಹಾಗೂ ಪಾಟೀಲ ಮತ್ತು ಶಾನುಭೋಗರ ಸ್ಥಾನಮಾನಗಳನ್ನು ಸದೃಡಗೊಳಿಸಿದರು. ಜೊತೆಗೆ ಗ್ರಾಮೀಣ ಭಾಗದ ಈ ಮೂರು ವರ್ಗಕ್ಕೆ ಅಧಿಕಾರದ ಆಸೆತೋರಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಪರಿಸ್ಥಿತಿಯನ್ನು ಬದಲಾಯಿಸಿಕೊಂಡರು.''[೧]

ಗ್ರಾಮೀಣ ಭಾರತದ ಮುಗ್ಧ ಜನತೆಯನ್ನು ಶೋಷಣೆಗೆ ಈಡು ಮಾಡಿದ ಬ್ರಿಟೀಷರ ವಸಾಹತುಶಾಹಿಯ ಈ ನೀತಿಯು ದೇಶೀಯ ಸಂಸ್ಥಾನಗಳಲ್ಲೂ ಕಂಡು ಬಂದಿತು. ''ಮೈಸೂರು ಸಂಸ್ಥಾನದ ವಿಭಾಗದಲ್ಲಿ ಒಂದು ಕುಟುಂಬ ಕಂದಾಯ ಇಲಾಖೆಯ ಅಧಿಕಾರಿಗಳ ಅಸಮರ್ಪಕ ಕಾರ್ಯನಿರ್ವಹಣೆಯಿಂದಾಗಿ ೧೮೩೧ ಗಲಭೆಗೆ ಕಾರಣವಾಗಿದ್ದಲ್ಲದೆ, ತತ್ಪರಿಣಾಮವಾಗಿ ರಾಜರು ಸಿಂಹಾಸನವನ್ನು ಕಳೆದುಕೊಳ್ಳಬೇಕಾಯಿತು.''[೨] ಹೀಗೆ ಮೇಲ್ಜಾತಿಯ ಪ್ರಾಬಲ್ಯವು ವಸಾಹತುಶಾಹಿ ಕಾಲಘಟ್ಟದ ಆರಂಭದಲ್ಲಿ ಅತಿಯಾಗಿದ್ದುದಲ್ಲದೆ ಬ್ರಿಟೀಷ್ ವಸಾಹತು ನೀತಿ ಪ್ರಬಲವಾದಂತಹ ತಂಡವನ್ನು ದೇಶಿಯ ನಮ್ಮ ನೆಲದಲ್ಲಿ ನಿರ್ಮಿಸಿ ನಮ್ಮ ಸಂಸ್ಕೃತಿ, ಸಂಪತ್ತನ್ನು ಧ್ವಂಸಮಾಡಲು ಹೊಸ ಹುನ್ನಾರವನ್ನು ರೂಪಿಸಿತು. ಬ್ರಿಟೀಷರು ತಮ್ಮ ವ್ಯವಸ್ಥಿತವಾದ ವಂಚನೆಗೆ ದೇಶಿಯ ತಂಡಗಳಿಗೆ ಮುಕ್ತ ಸ್ವಾತಂತ್ರ್ಯವನ್ನು ನೀಡಿದ್ದಲ್ಲದೇ ಭ್ರಷ್ಟಾಚಾರ, ದಬ್ಬಾಳಿಕೆಗೆ ಕುಮ್ಮಕ್ಕು ನೀಡಿತು.

ಈ ವಸಾಹತುಶಾಹಿ ಆಡಳಿತದಿಂದ ನಮ್ಮ ನಾಡಿನ ಸಂಸ್ಕೃತಿ, ಶಿಕ್ಷಣ ಮತ್ತು ಅರ್ಥ ವ್ಯವಸ್ಥೆಯ ಮೇಲೆ ತೀವ್ರತರವಾದ ಪರಿಣಾಮಗಳುಂಟಾದವು. ಈ ಸಂದಿಗ್ಧ ಕಾಲಘಟ್ಟದಲ್ಲಿ ಸೃಷ್ಟಿಯಾದಂತಹ ''ಹೊಸ ಭೂವ್ಯವಸ್ಥೆಯ ಅಳವಡಿಕೆ, ಮಾರುಕಟ್ಟೆಯ ಅರ್ಥವ್ಯವಸ್ಥೆಯ ನೀತಿ, ಮತ್ತು ಪಾಶ್ಚಾತ್ಯ ಶಿಕ್ಷಣಕ್ರಮ'' ಈ ಮೂರು ಅಂಶಗಳಿಂದಾಗಿ ನಮ್ಮ ನೆಲದ ಬದುಕು, ಆರ್ಥಿಕ ನೀತಿ, ಸಂಸ್ಕೃತಿಯನ್ನು ಬ್ರಿಟೀಷ್‌ವಸಾಹತು ನೀತಿ ಮೂಲೆಗೊತ್ತತೊಡಗಿತು. ಈ ಆಕ್ರಮಣದಿಂದ ನಮ್ಮ ಸಮಾಜ, ಸಂಸ್ಕೃತಿ, ಚರಿತ್ರೆಯು ಇನ್ನು ಚೇತರಿಸಿಕೊಳ್ಳಲು ಹೆಣಗಾಡುತ್ತಿದೆ. ವಸಾಹತುಶಾಹಿ ಸಂಸ್ಕೃತಿಯ ಪ್ರಭಾವದಿಂದ ಇಲ್ಲಿಯ ಜನಜೀವನದ ಕ್ರಮಗಳು ಹೊಸ ಪರಿವರ್ತನೆಯತ್ತ ಹೊರಳುತ್ತಿದ್ದ ಸಂದರ್ಭದಲ್ಲಿ ಆಧುನಿಕತೆ ಇಲ್ಲಿಯ ಜೀವನದಲ್ಲಿ ಕಾಲಿಟ್ಟಿತ್ತೆಂದೆ ಹೇಳಬೇಕು. ಸಹಜವಾಗಿಯೇ ಈ ಕಾಲ ಭೂತ-ವರ್ತಮಾನದ ಸಂಘರ್ಷದ ಕಾಲದಂತೆ ಭೂತವನ್ನು ತನ್ನ ನಿಟ್ಟಿನಿಂದ ಒರೆಗೆ ಹಚ್ಚುವ ಕಾಲವೂ ಆಯಿತು. ತನ್ನ ಕಾಲದ ಪ್ರಜ್ಞಾಸ್ಥಿತಿಯ ನೆಲೆಗಳಿಂದ ಹಿಂದಿನ ಜನ ಜೀವನದ ನೆಲೆಗಳನ್ನು ವಿಮರ್ಶಿಸುವ ಕೆಲಸವೂ ಆಗ ನಡೆಯಿತೆನ್ನಬಹುದು. ವಾಸ್ತವವಾಗಿ ಯಾವುದೇ ಚಾರಿತ್ರಿಕ ಘಟ್ಟದಲ್ಲಿ ಪರಂಪರೆಯ ತಿರಸ್ಕಾರ ಮಾತ್ರವೇ ಆಯಾ ಕಾಲದ ಗತಿಶೀಲ ಬೆಳವಣಿಗೆಯ ಸ್ವರೂಪವಾಗಿರುವುದಿಲ್ಲ. ಪರಂಪರೆಯಿಂದ ಯಾವುದನ್ನು ಬಿಡುವುದು ಯಾವುದನ್ನು ಸಂಗ್ರಹಿಸುವುದು ಅನ್ನುವುದು ಹೊಸ ನೆಲೆಯಲ್ಲಿ ಹುಡುಕಾಟವಾಯಿತು.

ವಸಾಹತುಪೂರ್ವ ವಿದ್ಯಮಾನಗಳನ್ನು ಕುರಿತು ಬರೆಯುವುದಾದರೆ, ಪೂರ್ವ ಪಶ್ಚಿಮ ರಾಷ್ಟ್ರಗಳ ದ್ವಂದ್ವವನ್ನು ಕುರಿತು ಚರ್ಚಿಸುವುದೆಂದರ್ಥ. ''ಈ ಚರ್ಚೆ ದೇಶೀಯ-ಪರಕೀಯ, ಸಂಪ್ರದಾಯ ಆಧುನಿಕತೆ ಮುಂತಾದ ವಿಭಿನ್ನ ರೂಪಗಳನ್ನು ತಳೆದರೂ ಅದಕ್ಕೆ ತಾತ್ವಿಕ ಚೌಕಟ್ಟನ್ನು ಒದಗಿಸುವುದು ಈ ಪೂರ್ವ ಪಶ್ಚಿಮವೇ. ಇದಕ್ಕೆ ಮುಖ್ಯ ಕಾರಣ ಎಂದರೆ ಬಹುಶಃ ವಸಾಹತು ಕಾಲದುದ್ದಕ್ಕೂ ಈ ಪೂರ್ವಪಶ್ಚಿಮಗಳೆರೆಡೂ ತಂತಮ್ಮ ಮಾತ್ರ ಮಾದರಿಗಳನ್ನು ನಿರ್ಮಿಸಿಕೊಂಡು ನಮ್ಮ ತರ್ಕದ ಎಳೆಗಳಾಗಿಬಿಟ್ಟಿವೆ. ವಸಾಹತುಪೂರ್ವ ವಿದ್ಯಮಾನದ ಸಂದರ್ಭದಲ್ಲಿಪಶ್ಚಿಮದ

ರಾಷ್ಟ್ರಗಳು ಪೂರ್ವರಾಷ್ಟ್ರಗಳ ಮೇಲೆ ರಾಜಕೀಯ ಅಧಿಕಾರ ಸ್ಥಾಪಿಸಿದ್ದು ಹಾಗೂ ಅಲ್ಲಿನ ಆರ್ಥಿಕ ಶೋಷಣೆ ನಡೆಸಿದ್ದು ಅದಕ್ಕೆ ಪೂರಕವಾದ ಒಂದು ವಿದ್ವತ್ತಿನ ಮೂಲಕವೇ ಆಗಿದೆ.''[೩] ಇದೊಂದು ರೀತಿಯ ಭೌದ್ಧಿಕ ಆಳ್ವಿಕೆ. ಈ ಆಳ್ವಿಕೆಯಲ್ಲಿ ದೇಶಿಯ ಚಿಂತನಾಕ್ರಮಗಳು ಮೂಲೆಗೊತ್ತಲ್ಪಟ್ಟವು. ವಸಾಹತು ಪ್ರಜ್ಞೆಗಳ ಮನಸ್ಸು ವಸಾಹತೀಕರಣಕ್ಕೆ ಒಳಗಾಯಿತು ಮುಂತಾದ ವಾದಗಳು ವಸಾಹತು ಕಾಲವು ನಮ್ಮ ಬುದ್ಧಿಗೆ ಮಂಕುಕಟ್ಟಿದ ಕಾಲ ಇದೊಂದು ಸಂಪೂರ್ಣ ಪರಕೀಯ ಅವಸ್ಥೆ ಎಂಬ ನಿರ್ಣಯಕ್ಕೆ ಚಿಂತಕರು ಬರುತ್ತಾರೆ. ಜೊತೆಗೆ ಈ ಕಾಲದ ಸಾಂಸ್ಕೃತಿಕ ಬದುಕಿನಲ್ಲಿ 'ನಮ್ಮವರು' ಮತ್ತು 'ಪರರು' ಎಂದು ಭಾವಿಸಿಕೊಳ್ಳುವ ಅನೇಕ ಬಣಗಳು, ಸಾರ್ವಜನಿಕ ಸಂಘಗಳು ದೇಶೀಯ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಮುದಾಯಗಳನ್ನು ಸಂಘಟಿಸಲು ತೊಡಗಿದರು. ಇದೊಂದು ರೀತಿಯಲ್ಲಿ ಪೂರ್ವ ಮತ್ತು ಪಶ್ಚಿಮಗಳ ಸಂಸ್ಕೃತಿಗಳ ಸಂಗಮದ ಫಲವೂ ಆಯಿತು. ಪಶ್ಚಿಮದ ಸಾಂಸ್ಕೃತಿಕ ಬೇರುಗಳು ನಮ್ಮ ನೆಲದಲ್ಲಿ ಬೇರೂರತೊಡಗಿದ್ದವು ಅವರ ಹೊಸ ಪಾತ್ರದೊಂದಿಗೆ ಅವರ ಮೂಲದ ನಂಬಿಕೆಗಳು ಮುಖಾಮುಖಿಯಾಗಿದ್ದನ್ನು ಇಲ್ಲಿ ಮರೆಯುವಂತಿಲ್ಲ. ಮಡಿ ಮೈಲಿಗೆಯ ವಿಚಾರದಲ್ಲಿ ಬ್ರಾಹ್ಮಣರು, ವೈಶ್ಯರು ಮತ್ತು ಶೂದ್ರರು ತಪ್ಪದೇ ಆಚರಿಸುವ ಪದ್ಧತಿಗಳಲ್ಲಿ ಅನೇಕ ಬದಲಾವಣೆಗಳಾದವು. ಆಧುನಿಕ ಮಾರುಕಟ್ಟೆ ಮತ್ತು ಕೈಗಾರಿಕೆ ಸ್ವಲ್ಪಮಟ್ಟಿಗೆ ಜಾತಿ-ಭೂತ ಹಿಡಿದ ಸಮಾಜವನ್ನು ಜಾತ್ಯತೀತಗೊಳಿಸಲು ಕಾರಣಗಳಾದವು. ಜನ ಸಂಸ್ಕೃತಿಯಲ್ಲಿ ಈ ವಿದ್ಯಮಾನಗಳು ಅನೇಕ ಮಾರ್ಪಾಟುಗಳಿಗೆ ಕಾರಣಗಳಾದವು.

ವಸಾಹತು ಕಾಲದ ಬಗ್ಗೆ ಯೋಚಿಸಿದರೆ ಈ ಕಾಲವು ಪೂರ್ವ ಪಶ್ಚಿಮಗಳ ದ್ವಂದ್ವವನ್ನಿಟ್ಟುಕೊಂಡೇ ಭಾರತೀಯ ರಾಷ್ಟ್ರೀಯತಾವಾದಿಗಳಿಗೆ ಪಶ್ಚಿಮಕ್ಕಿಂತ ಪೌರ್ವಾತ್ಯ ಅಧ್ಯಯನ ಮಾರ್ಗದವರ ಹಾಗೂ ಭಾರತೀಯ ಬ್ರಾಹ್ಮಣಿಕೆಯ ರಾಷ್ಟ್ರೀಯತೆ ಒಂದು ದುಃಸ್ವಪ್ನವಾಗಿಕಾಡಿತ್ತು. ಹಾಗಾಗಿ ಪಶ್ಚಿಮದ ಅನೇಕ ಮೌಲ್ಯಗಳನ್ನು ತಮ್ಮ ಬಿಡುಗಡೆಯ ಸಾಧನವೆಂದು ಅರಿತುಕೊಂಡಿದ್ದರು. ಇದೇ ಸಂದರ್ಭದಲ್ಲಿ ಭಾರತದ ವಿದ್ಯಾವಂತ ವರ್ಗವು ತನ್ನ ತಮ್ಮರ ಭವಿಷ್ಯಕ್ಕಾಗಿ ಚಿಂತನೆ ನಡೆಸಿತು. ''ಪಾಶ್ಚಾತ್ಯ ಚಿಂತನೆಗಳ ಪ್ರಭಾವದಿಂದ ಇಲ್ಲಿನವರ ಭವಿಷ್ಯದ ಕಲ್ಪನೆಯೂ ಬದಲಾಯಿತು, ಇದೆಲ್ಲಾ ನಡೆದದ್ದು ಸಾಂಸ್ಕೃತಿಕ ಹಾಗೂ ರಾಜಕೀಯವಾಗಿ ಜಾಗೃತರಾದ ವಿದ್ಯಾವಂತ ವರ್ಗದಲ್ಲಿ ಮಾತ್ರ''[೪] ಈ ಸುಶೀಕ್ಷಿತ ಜನವರ್ಗವು ತನ್ನ ಸಾಮುದಾಯಿಕ ಸಾಂಸ್ಕೃತಿಕ ಲೋಕದೃಷ್ಟಿಯನ್ನು ಮೂಡಿಸುವಲ್ಲಿ ಹಾಗೂ ಆ ಮೂಲಕ ಹೊಸ ಆಳ್ವಿಕೆಯಲ್ಲಿ ಸ್ಥಾನಮಾನಗಳನ್ನು ಪಡೆಯುವದಕ್ಕಾಗಿ, ಸಾಮುದಾಯಿಕ ಬದುಕನ್ನು ಮುನ್ನಡೆಸುವಲ್ಲಿ ನಿರ್ಣಾಯಕ ಪಾತ್ರವಹಿಸಿತು.

ವಸಾಹತು ಕಾಲಘಟ್ಟದಲ್ಲಿ ದೇಶಿಯ ಸಾಂಸ್ಕೃತಿಕ ಚಿಂತನೆಗೆ ಅಗತ್ಯಕ್ಕಿಂತಲೂ ಜಾಸ್ತಿ ಮಹತ್ವವನ್ನು ನೀಡಲಾಯಿತು. ಹತ್ತೊಂಬತ್ತನೆ ಶತಮಾನದಲ್ಲಿ ಪ್ರಧಾನವಾದ ಮೂರು ದೇಶಿಯ ಸಂಸ್ಥಾನಗಳಲ್ಲಿ ದಿವಾನರಾಗಿ ಸೇವೆಸಲ್ಲಿಸಿದ್ದ ಟಿ. ಮಾಧವರಾವ್ ಅವರು ಭಾರತದ ಬ್ರಿಟೀಷರ ವಸಾಹತು ಆಳ್ವಿಕೆಯ ಬಗ್ಗೆ ವಿದ್ಯಾವಂತ ಮಾಧ್ಯಮವರ್ಗದವರ ದೃಷ್ಟಿಧೋರಣೆಯನ್ನು ಕುರಿತು ಹೀಗೆ ದಾಖಲೆನೀಡುತ್ತಾರೆ. ಇಪ್ಪತ್ತೈದು ವರ್ಷಗಳ ಹಿಂದೆ ತಹಸೀಲ್ದಾರ್ ಹುದ್ದೆಗಿಂತ ಮೇಲ್ಪಟ್ಟ ಯಾವನೇ ಭಾರತೀಯ ಕಂದಾಯ ಇಲಾಖೆಯಲ್ಲಿ ಅಥವಾ ನ್ಯಾಯಾಧೀಶರ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿರಲಿಲ್ಲ. ಆದರೆ ಆಗಿನ ಸನ್ನಿವೇಶದಲ್ಲಿ ಅತ್ಯುನ್ನತ ಪದವಿಯನ್ನು ಬಿಟ್ಟು ಉಳಿದಂತೆ ಎಲ್ಲಾ ಜವಾಬ್ದಾರಿಗಳನ್ನೂ ದೇಶೀಯ ಉಪ ಜಿಲ್ಲಾಧಿಕಾರಿಗಳು ಹಾಗೂ ನ್ಯಾಯಾಧೀಶರಿಗೆ ವರ್ಗಾಯಿಸಲಾಗಿದೆ.''[೫] ಈ ಮೇಲಿನ ದಾಖಲೆಯ ವರದಿಯಂತೆ ದೇಶೀಯ ನಾಯಕರು ಆಳರಸರಿಗೆ ತೃಪ್ತಿಯಾಗುವಂತೆ ಮಾತಾಡಿ ಭಾರತೀಯ

ವರ್ಗಗಳ ಪಂಥಗಳ ಆಸಕ್ತಿಯನ್ನು ರಕ್ಷಿಸಿಕೊಳ್ಳುವುದರಲ್ಲಿ ಸಫಲತೆಯನ್ನು ಕಂಡುಕೊಂಡರು. ವಸಾಹತು ಪೂರ್ವಕಾಲಘಟ್ಟದಲ್ಲಿ ಜರುಗಿದ ಅನೇಕ ಸಾಮಾಜಿಕ ಆರ್ಥಿಕ, ಧಾರ್ಮಿಕ ಸ್ಥಿತ್ಯಂತರಗಳು ಆ ಕಾಲದ ಜನ ಸಮುದಾಯದ ನಡೆ ನುಡಿಯನ್ನು ಬದಲಾವಣೆಗೆ ತಂದಿತು. ಬ್ರಿಟೀಷರ ಆರಂಭದ ದ್ವಂದ್ವನೀತಿ, ದೇಶಿಯ ಹೋರಾಟಗಳಿಂದ ಸಡಿಲಗೊಂಡು ನೆಲದ ಬದುಕಿನ ಸಮಸ್ಯೆಗಳಿಗೆ ಸ್ಪಂದಿಸತೊಡಗಿದರು. ಸ್ವಾತಂತ್ರ್ಯ ಸಂದರ್ಭದ ಉಗ್ರಹೋರಾಟಗಳು ಬ್ರಿಟೀಷರನ್ನು ದಿಕ್ಕೆಡಿಸಿತು. ಆ ಕಾಲವು ಸಮಾಜದ ಸಂಸ್ಕೃತಿಯ ನೆಲೆಯನ್ನು ಹೊಸ ದಿಕ್ಕಿನಲ್ಲಿ ವಿಶ್ಲೇಷಣೆ ಒಳಪಡಿಸಿತು. ದೇಶೀಯ ನೆಲೆಯ ಹುಡುಕಾಟ, ಸಂಸ್ಕೃತಿಯ ರಕ್ಷಣೆಯ ಕೆಲಸ ದೇಶೀಯ ಸಂಘಗಳ ಮುಖಾಂತರ ನಡೆಯಿತು. ನಾಡಿನ ಪರಂಪರೆ, ಸಂಪ್ರದಾಯ ಕುರಿತ ಚಿಂತನೆಯೂ ದೇಶ-ಭಾಷೆ-ಆಚರಣೆಗಳ ಮತ್ತು ಧಾರ್ಮಿಕ ವಿಶ್ಲೇಷಣೆಯೂ ಈ ಕಾಲಘಟ್ಟದಲ್ಲಿ ಹೊಸ ಹುಡುಕಾಟದೊಂದಿಗೆ ಸಾಗಿಬಂತು. ಜೊತೆಗೆ ರಾಜರ ಪ್ರಭುತ್ವ ಸಂಸ್ಕೃತಿ ಜನಜೀವನದ ಮೇಲೆ ದಟ್ಟ ಪ್ರಭಾವ ಬೀರುವುದು ಕಂಡು ಬಂದಿತು. ನಾಡಿನ ವೈವಿದ್ಯಮಯವಾದಂತಹ ಸಂಸ್ಕೃತಿಯ ವ್ಯಾಖ್ಯಾನಗಳು ಅನೇಕ ಹೊಸ ಅರ್ಥಗಳಿಗೆ ಕಾರಣವಾಯಿತು. ಆಧುನೀಕರಣದ ಯಂತ್ರ ನಾಗರಿಕತೆ-ಇಂಗ್ಲಿಷ್ ಭಾಷೆಯ ವ್ಯಾಮೋಹ ಈ ಕಾಲದ ಜನ ಜೀವನದ ದಿಕ್ಕನ್ನು ಬದಲಾಯಿಸಿತು. ವಿಜ್ಞಾನದ ಸಾರ್ವಭೌಮತ್ವ, ವೈಜ್ಞಾನಿಕ ಸಂಶೋಧನೆಗಳು ಹೊಸ ಚಿಂತನಾಧಾರೆಗೆ, ಹೊಸ ಬದಲಾವಣೆಗೆ ಕಾರಣವಾದದ್ದನ್ನು ಮರೆಯುವಂತಿಲ್ಲ. ಒಟ್ಟಾರೆ ವಸಾಹತು ಪೂರ್ವಯುಗದಲ್ಲಿ ಸಂಭವಿಸಿದಂತ ಅನೇಕ ಬದಲಾವಣೆಗಳು ಸಾಂಸ್ಕೃತಿಕ ಬದುಕಿನಲ್ಲಿ ಹೊಸ ಚಿಂತನೆಗಳನ್ನು ಸೃಷ್ಟಿಸಿದವು.

### ೩.೧.೧. ಕೋಮುವಾದ

'ಕೋಮುವಾದ' ಎಂಬುದು ಆಧುನಿಕ ಭಾರತದ ಎಲ್ಲೆಡೆ ಕೇಳಿ ಬರುತ್ತಿರುವ ಸಾಮಾಜಿಕ ಸಂಘರ್ಷದ ಪ್ರತಿನಿಧೀಕರಣವಾಗಿದೆ. ಇದೊಂದು ಆಧುನಿಕ ಭಾರತದ ಮುಖ್ಯ ವಿದ್ಯಮಾನವೂ ಆಗಿದೆ. ಭಾರತದಲ್ಲಿ ಈ ಕೋಮುವಾದವೆನ್ನುಂತದ್ದು ಹಿಂದೂ ಎಂಬ ಏಕರೂಪಿಯಾದ ಧಾರ್ಮಿಕ ಗುರುತನ್ನು ಕಟ್ಟಿಕೊಂಡು ಬೆಳೆದಂತ ಆಲೋಚನಾಕ್ರಮವಾಗಿದೆ ಎಂಬುದನ್ನು ಕುರಿತು ವಿಶ್ಲೇಷಣೆ ಮಾಡಲು ವಸಾಹತು ಕಾಲದ ಇತಿಹಾಸವನ್ನು ಪರಿಶೀಲನೆಗೆ ಒಳಪಡಿಸಬೇಕಾಗುತ್ತದೆ. ವಸಾಹತು ಪೂರ್ವಕಾಲಘಟ್ಟದಲ್ಲಿ ಅಸ್ತಿತ್ವದಲ್ಲಿದ್ದ ಧಾರ್ಮಿಕ ಸಮುದಾಯಗಳ ನಂಬಿಕೆಗಳನ್ನು ಆಧುನಿಕ ಕಲ್ಪನೆಗಳಿಗೆ ಪ್ರತಿಯಾಗಿಯಿಟ್ಟು ವಸಾಹತು ಕಾಲದಲ್ಲಿ ಅವು ಪಡೆದ ಹೊಸ ಆಯಾಮವನ್ನು ಗುರುತಿಸಿದಾಗ 'ಕೋಮುವಾದ'ದ ನೆಲೆಯ ಸ್ವರೂಪ ಗೊತ್ತಾಗುತ್ತದೆ.

ಕೋಮುವಾದ ಇಂದು ಭಾರತಾದ್ಯಂತ ತಲೆಯೆತ್ತಿ ನಿಂತಿದೆ. ಇದಕ್ಕೆ ಭಾರತೀಯ ಸಂಸ್ಕೃತಿ ಚರಿತ್ರೆ ಅನೇಕ ಕಾರಣಗಳನ್ನು ನೀಡುತ್ತದೆ. ನಮ್ಮ ದೇಶದಲ್ಲಿ ಬ್ರಿಟೀಷರು ಎದುರಿಸಿದಂತಹ ಬಲಿಷ್ಠ ಶಕ್ತಿಗಳಾದ ಮುಸ್ಲಿಂ ರಾಜರುಗಳನ್ನು ಅಧಿಕಾರ ಮತ್ತು ಪ್ರಭಾವೀ ಸ್ಥಾನಗಳಿಂದ ಪಲ್ಲಟಗೊಳಿಸಿದ್ದು ಅನೇಕ ವಿರೋಧಗಳಿಗೆ ಕಾರಣವಾಯಿತು. ಅಲ್ಲದೆ ಅವರ ಆಡಳಿತ ಭಾಷೆಗಳ ಸ್ಥಾನದಿಂದ ಪರ್ಷಿಯನ್ ಮತ್ತು ಉರ್ದು ಭಾಷೆಗಳನ್ನು ತೆಗೆದುಹಾಕಿದ್ದರಿಂದ ಹಲವು ಮುಸ್ಲಿಂ ಕುಟುಂಬಗಳಿಗೆ ಅನಾನುಕೂಲವಾಯಿತು. ಸಹಜವಾಗಿಯೇ ವಸಾಹತು ಆಡಳಿತವನ್ನು ಬಲಿಷ್ಠವಾದ ಮುಸ್ಲಿಂ ಸಮುದಾಯ ಸ್ವೀಕರಿಸುವ ಸ್ಥಿತಿಯಲ್ಲಿರಲಿಲ್ಲ. ಅಲ್ಲದೆ ಭಾರತದಲ್ಲಿನ ಮುಸ್ಲಿಮರ ಮತ್ತೊಂದು ಚಿಂತಾಜನಕ ಸ್ಥಿತಿಯೆಂದರೆ ಅರ್ಥ ವ್ಯವಸ್ಥೆಯ ಬೆನ್ನುಮೂಳೆಯಂತಿದ್ದ ಭೂಮಿಯ

ಒಡೆತನ ಅವರಿಗಿರಲಿಲ್ಲ. ಇದರಿಂದಾಗಿ ಮುಸ್ಲಿಂ ಸಮುದಾಯ ಬ್ರಿಟೀಷ್ ಆಡಳಿತ ನೀತಿಯ ವಿರುದ್ಧ ಪ್ರತಿಭಟನೆ ಸಾರಿದವು.

''೧೮೮೦ರ ದಶಕದಲ್ಲಿ ಮುಸ್ಲಿಂ ಸಮುದಾಯದ ಒಂದು ಗುಂಪಿನ ಪತ್ರಿಕೆಗಳು ಆಡಳಿತದಲ್ಲಿನ ಹಿಂದುಗಳ ಪ್ರಾಬಲ್ಯದ ವಿರುದ್ಧ ಚಳುವಳಿ ಪ್ರಾರಂಭಿಸಿದವು. ಇದರ ಹಿಂದೆ ಸರಕಾರದ ಒಡೆದು ಆಳುವ ನೀತಿ ಕೆಲಸಮಾಡಿತ್ತಲ್ಲದೆ, ಪ್ರಧಾನವಾಗಿ ಮೇಲ್ಜಾತಿ ಹಿಂದುಗಳೇ ಹೆಚ್ಚಾಗಿದ್ದ ದೇಶೀಯ ಅಧಿಕಾರ ಶಾಹಿಯು ಮುಸ್ಲಿಮರ ಪ್ರಗತಿಗಾಗಿ ತಯಾರಿಸುವ ಯೋಜನೆಗಳಿಗೆ ಅಡ್ಡಿಯುಂಟುಮಾಡುವ ಹುನ್ನಾರ ನಡೆಸಿತ್ತು''[೬] ಈ ಸಂದರ್ಭದಲ್ಲಿ ಬ್ರಿಟೀಷ್ ವಸಾಹತು ಸರ್ಕಾರವು ಮುಸ್ಲೀಮರಿಗೆ ವಿಶೇಷ ರಿಯಾಯ್ತಿ ತೋರಿಸುವುದನ್ನು ರಾಷ್ಟ್ರೀಯವಾದಿ ಹಿಂದೂಗಳು ವಿರೋಧ ವ್ಯಕ್ತಪಡಿಸಿದ ಹಿನ್ನೆಲೆಯಲ್ಲಿ ಮುಸ್ಲೀಮರು ಕೆಂಗೆಟ್ಟಿದ್ದರು. ಇದರಿಂದ ಹಿಂದೂ ಮುಸ್ಲಿಂ ಸಮುದಾಯಗಳಲ್ಲಿ ದ್ವೇಷ-ಅಸೂಯೆ-ಮತ್ಸರಗಳು ಹೆಚ್ಚಾಗುತ್ತಾ ಕೋಮುವಾದ ಸೃಷ್ಟಿಯಾಗತೊಡಗಿತು.

ಇಂದು ಈ ಕೋಮುವಾದ ಮತ್ತು ಮೂಲಭೂತವಾದಗಳು ಎಂದರೇನು? ಎಂಬ ಪ್ರಶ್ನೆಗೆ ಅನೇಕ ನೆಲೆಗಳಲ್ಲಿ ಉತ್ತರಗಳ ಹುಡುಕಾಟ ನಡೆದಿದೆ. ಕನ್ನಡದ ಸಂಸ್ಕೃತಿ ಚಿಂತಕರೂ ವಿಮರ್ಶಕರೂ ಆದ ಜಿ.ರಾಜಶೇಖರ ಅವರು ಈ ಎರಡು ಪದಗಳ ವಿಶ್ಲೇಷಣೆಯನ್ನು ಈ ರೀತಿಯಲ್ಲಿ ಹೇಳುತ್ತಾರೆ. ''ರಾಜಕೀಯ ಅಧಿಕಾರಕ್ಕಾಗಿ ಒಂದು ಧರ್ಮದ ಅನುಯಾಯಿಗಳನ್ನು ಇನ್ನೊಂದು ಧರ್ಮದವರ ವಿರುದ್ಧ ಎತ್ತಿಕಟ್ಟುವುದು ಮತ್ತು ಬಹು ಸಂಖ್ಯಾತರ ಸಂಸ್ಕೃತಿಗೆ, ಅಲ್ಪ ಸಂಖ್ಯಾತರು ಹೊರಗಿನವರು ಎಂದು ವಾದಿಸಿ ಅವರಬಗ್ಗೆ ದ್ವೇಷ ತಿರಸ್ಕಾರಗಳನ್ನು ಬೆಳೆಸುವುದು ಕೋಮುವಾದರೆ, ತನ್ನಧರ್ಮದ ಕಟ್ಟು ಪಾಡುಗಳಿಗೆ ಮತ್ತು ಪವಿತ್ರ ಗ್ರಂಥಗಳಿಗೆ ಆ ಧರ್ಮಕ್ಕೆ ಸೇರಿದ ಪ್ರತಿಯೊಬ್ಬರೂ ತಲೆಬಾಗಬೇಕು ಎಂದು ಒತ್ತಾಯಿಸುವುದು ಮೂಲಭೂತವಾದ ಎಂದಿದ್ದಾರೆ.''[೭] ಜಿ.ರಾಜಶೇಖರ್ ಅವರ ಈ ಮಾತುಗಳನ್ನು ಒಡೆದು ನೋಡಿದಾಗ ಇಂದಿನ ರಾಜಕೀಯ ಲಾಭಕ್ಕಾಗಿ ಪಟ್ಟಭದ್ರ ಹಿತಾಸಕ್ತಿಗಳು ಧರ್ಮದ ಅನುಯಾಯಿಗಳೆಂದು ಸೋಗು ಹಾಕಿಕೊಂಡು ಜನಸಮುದಾಯಗಳನ್ನು ಎತ್ತಿಕಟ್ಟಿ ನಾಡಿನ ಶಾಂತಿಗೆ ಭಂಗತಂದು ದ್ವೇಷತಿರಸ್ಕಾರಗಳನ್ನು ಬೆಳೆಸುವುದೇ ಕೋಮುವಾದವಾಗಿದೆ. ಇತ್ತೀಚಿನ ದಿನಗಳಲ್ಲಿ ದೇಶದಲ್ಲಿ ಜರುಗಿದ ಸಂಘರ್ಷಾತ್ಮಕ ವಿದ್ಯಮಾನಗಳನ್ನು ಅರಿತಾಗ ಇಂದಿನ ರಾಜಕೀಯ ಧ್ರುವೀಕರಣದ ಕಾಲಘಟ್ಟದಲ್ಲಿ ಕೋಮುವಾದದ ನೆರಳು ಇಂದು ಬದುಕಿನ ಎಲ್ಲಾ ಮಗ್ಗಲುಗಳಲ್ಲಿ ತನ್ನ ಕಬಂಧ ಬಾಹುಗಳನ್ನು ಚಾಚಿಕೊಳ್ಳುತ್ತಿದೆ.

ನಾಡಿನಲ್ಲಿ ವಿಭಿನ್ನವಾದ ಆಧುನಿಕ ಪ್ರತಿಪರ ಚಳುವಳಿಗಳು ಪ್ರಾಯೋಗಿಕ ಹಾಗೂ ತಾತ್ವಿಕ ಬಿಕ್ಕಟ್ಟುಗಳನ್ನು ಎದುರಿಸಿದವು. ಸಮಕಾಲೀನ ವಾಸ್ತವದ ವಸ್ತುಸ್ಥಿತಿಯನ್ನು ಎದುರಿಸಲು ಆಧುನಿಕ ಕಥನಗಳು ಅಸಮರ್ಥಕವಾಗಿವೆಯೆಂಬುದು ಮನಗಂಡವು. ಕೋಮುವಾದವು ಇಂದು ಅನೇಕ ವಿವಾದಗಳಿಗೆ ಒಳಗಾಗಿದೆ. ಇಂದು ಕೋಮುವಾದ ಮತ್ತು ಸೆಕ್ಯುಲರಿಸಂ ವಿವಾದದಲ್ಲಿ ಈವಾದ ತನ್ನ ಪ್ರಸ್ತುತತೆಯನ್ನು ಪಡೆದಿದೆ. ಹಿಂದೂ ಮತವೆಂಬುದು ವಸಾಹತುಕಾಲದ ನಿರ್ಮಾಣವಾಗಿದ್ದು, ಅದು ಭಾರತೀಯ ವಾಸ್ತವವನ್ನು ಪ್ರತಿನಿಧಿಸುವುದಿಲ್ಲವೆಂಬ ವಾದವನ್ನು ಸೆಕ್ಯೂಲರ್ ಚಿಂತಕರು ಸಾಮಾನ್ಯವಾಗಿ ಮುಂದಿಡುತ್ತಾರೆ. ಕೋಮುವಾದದವನ್ನು ಎದುರಿಸಲು ಕೋಮುವಾದದ ತಳಪಾಯವನ್ನು ಪ್ರಶ್ನಿಸುವ ಮಟ್ಟಿಗೆ ಈವಾದವನ್ನು ಇಂದಿನ ಆಧುನಿಕ ಚಿಂತಕರು ಬಳಸುತ್ತಿದ್ದಾರೆ. ಕಳೆದ ಎರಡು ದಶಕಗಳಿಂದಲೂ ಕೋಮು ಮತ್ತು ಜಾತಿಗಳ ಪ್ರಭಾವ ಭಾರತದ ರಾಜಕಾರಣದಲ್ಲಿ ತೀವ್ರವಾಗುತ್ತಿದೆ. ಈ ಬೆಳವಣಿಗೆಯಿಂದಾಗಿ ಸಮಾಜವನ್ನು ಕಾಡುತ್ತಿರುವ ನಿರುದ್ಯೋಗ, ಬೆಲೆ ಏರಿಗೆ, ಹಸಿವು, ಬಡತನ, ಅನಕ್ಷರತೆ,

ಆರ್ಥಿಕ ಅಸಮಾನತೆ ಮತ್ತಿತರ ಸಮಸ್ಯೆಗಳು ರಾಜಕೀಯ ಚರ್ಚಾವೇದಿಕೆಗಳಿಂದ ಹಿಂದೆ ಸರಿಯುತ್ತದೆ. ''ಸಾಮ್ರಾಜ್ಯಶಾಹಿ ವಿರೋಧಿ ದೀರ್ಘ ಹೋರಾಟದಿಂದ ಸ್ಫೂರ್ತಿ ಪಡೆದು ಜಾತ್ಯತೀತ ಮತ್ತು ಪ್ರಜಾಪ್ರಭುತ್ವದ ಸುಭದ್ರ ವ್ಯವಸ್ಥೆಯ ಕನಸುಗಳನ್ನು ಹೊತ್ತು ಅಸ್ತಿತ್ವಕ್ಕೆ ಬಂದ ಭಾರತದ ಇಂದು ಅತಂತ್ರ ಸ್ಥಿತಿಯಲ್ಲಿದೆ. ಸಾಮಾಜ್ಯಶಾಹಿ ವಿರೋಧಿ ಪರಂಪರೆಯಿಂದ ಹುಟ್ಟಿಬಂದ ಬಹುಮುಖಿ ಸಂಸ್ಕೃತಿ ಅನೇಕತ್ವ ಮತ್ತು ಪ್ರಜಾಪ್ರಭುತ್ವ ಸಂಸ್ಥೆಗಳನ್ನು ನಿರ್ನಾಮ ಮಾಡಲು ಹೊರಟಿರುವ ಭಾರತೀಯ ಜನತಾಪಕ್ಷ ಮತ್ತು ಸಂಘಪರಿವಾರದ ಸಂಘಟನೆಗಳು ಪಿತೂರಿ ಹಾಗೂ ಬಡುಮೇಲು ಕೃತ್ಯಗಳು ಒಂದು ಕಡೆಯಾದರೆ ಮತ್ತೊಂದು ಕಡೆ ಬೃಹತ್ ರಾಷ್ಟ್ರೀಯ ಪಕ್ಷವೆನಿಸಿಕೊಂಡಿರುವ ಕಾಂಗ್ರೆಸ್ ಈ ಬೆಳವಣಿಗೆಗಳ ದುಷ್ಪರಿಣಾಮಗಳು ಅರಿವಿದ್ದು ತನ್ನ ಬೇಜವಬ್ದಾರಿತನವನ್ನು ಪ್ರದರ್ಶಿಸುತ್ತಿರುವುದು. ಈ ಹಿಂದೆ ವಸಾಹತುಶಾಹಿಯ ವಿರುದ್ಧ ನಡೆದ ಭಾರತದ ಸ್ವಾತಂತ್ರ್ಯ ಸಂಗ್ರಾಮ ಅವಿಸ್ಮರಣೀಯ. ಹಾಗೂ ಅಸಾಧಾರಣವಾದದ್ದು. ಆಗಾಗ್ಗೆ ಸಂಭವಿಸುತ್ತಿದ್ದ ಕೋಮುಗಲಭೆಗಳು ಸಾಮಾಜಿಕ ಹಿಂಸೆ, ಕೊಲೆ, ಲೂಟಿಯಂತಹ ಸಮಾಜ ಘಾತುಕ ಕೃತ್ಯಗಳನ್ನು ಬಗ್ಗುಬಡಿದು ಶೀಘ್ರ ಅವಧಿಯಲ್ಲಿಯೇ ಶಾಂತಿಯನ್ನು ಮರುಸ್ಥಾಪನೆ ಮಾಡಲು ಸಾಧ್ಯವಾಗುತ್ತಿದ್ದಂತಹ ಕಾಲವದು. ಆದರೆ ಈಗ ಕೋಮುಗಲಭೆ, ಹಿಂಸೆಗಳು, ಅಲ್ಪ ಸಂಖ್ಯಾತರ ಮೇಲಿನ ದೌರ್ಜನ್ಯ ದಿನ ನಿತ್ಯದ ಘಟನೆಗಳಾಗಿವೆ. ಇಂದು ಜಾತ್ಯಾತೀತ ಎಂಬ ಪದವೇ ಹಾಸ್ಯಾಸ್ಪದವಾಗಿವೆ.''[೮] ಎಂಬ ಕೃಷ್ಣ ಅನಂತರ ಮೇಲಿನ ಗಂಭೀರ ಸಾಲುಗಳನ್ನು ಇಂದು ಆಲೋಚಿಸಬೇಕಾಗಿದೆ. ಈ ಎಲ್ಲಾ ಪರಿಣಾಮಗಳಿಗೆ ಕಾರಣಗಳೇನು ಎಂಬ ಪ್ರಶ್ನೆಗೆ ಅನೇಕ ಉತ್ತರಗಳು ವಾಸ್ತವ ಸಮಾಜದಲ್ಲಿ ಇಂದು ಪುಟಿದೇಳುತ್ತಿವೆ.

ಸ್ವಾತಂತ್ರ್ಯ ಪೂರ್ವದಿನಗಳ ಕೆಲವು ವಿದ್ಯಮಾನಗಳನ್ನು ಗಮನಿಸಿದಾಗ ಅಂದು ಹಿಂದೂಗಳು, ಮುಸ್ಲಿಮರು ಕ್ರಿಶ್ಚಿಯನ್ನರು, ಕಾರ್ಮಿಕ ವರ್ಗ ಮತ್ತು ರೈತ ಸಮುದಾಯ, ಬುದ್ಧಿಜೀವಿಗಳು ಹೀಗೆ ಎಲ್ಲಾ ವಿಭಾಗಗಳ ವೇದಿಕೆಯಂತಿದ್ದ ಮತ್ತು ಹೋರಾಟದ ನಾಯಕತ್ವವನ್ನು ವಹಿಸಿದ್ದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಸ್ವರೂಪವು ೧೯೪೭ರ ನಂತರದ ದಿನಗಳಲ್ಲಿ ಬದಲಾವಣೆಯಾಗತೊಡಗಿತು. ಅನಂತರ ವಿಪರ್ಯಾಸವೆಂದರೆ ಸಹಜವಾಗಿಯೇ ಕಾಂಗ್ರೆಸ್ ಕೈಬಿಡುತ್ತಿದ್ದ ಸಾಮ್ರಾಜ್ಯಶಾಹಿ ವಿರೋಧಿ ಧೋರಣೆಗಳ ಮತ್ತು ಸಮಾಜವಾದದ ಮೌಲ್ಯಗಳ ಹಿಂಬದಿಯಲ್ಲಿಯೇ ಆ ಪಕ್ಷದ ನಾಯಕರು ಗ್ರಾಮಾಂತರ ಪ್ರದೇಶಗಳಲ್ಲಿ ಭೂ ಮಾಲಿಕರ ಜೊತೆ ಶಾಮೀಲಾಗಿದ್ದರು. ಇದರಿಂದ ಬಂಡವಾಳಶಾಹಿ ನೆಲೆ ಬೇರೂರುವುದಕ್ಕೆ ಕಾರಣವಾಯಿತು. ಆಡಳಿತ ವರ್ಗ ಹೆಚ್ಚು ಹೆಚ್ಚಾಗಿ ಪ್ರಜಾಪ್ರಭುತ್ವವಾದಿ ಬೆಳವಣಿಗೆಗೆ ವಿರುದ್ಧವಾಗಿ ಕೋಮುವಾದದ ಭೀಜಗಳನ್ನು ಬಿತ್ತಲು ಪ್ರಯತ್ನಿಸಿದ್ದು ಈ ಕಾಲಘಟ್ಟದಲ್ಲಿಯೇ.

'ಜಾತ್ಯಾತೀತತೆ ಕೋಮುವಾದ' ಇವೆರಡರ ಮಧ್ಯದ ಘರ್ಷಣೆಯೇ ಇಂದು ರಾಷ್ಟ್ರದ ಮುಂದುವರಿದ ಪ್ರಶ್ನೆಯಾಗಿಟ್ಟುಕೊಂಡು ಅಪಪ್ರಚಾರ ನಡೆಯಲಾಗುತ್ತಿದೆ. ಕಾಂಗ್ರೆಸ್ ಪಕ್ಷಕ್ಕೆ ಇಂದು ಇದು ಬೇಕಾಗಿದೆ. ಭಾರತೀಯ ಜನತಾಪಕ್ಷ ಕೋಮುವಾದಿ ಪಕ್ಷವೆಂದು ಈ ಕೋಮುವಾದಿ ಪಕ್ಷವನ್ನು ದೂರವಿಟ್ಟು ಜಾತ್ಯಾತೀತ ಶಕ್ತಿಗಳೊಂದಿಗೆ ಕೈಜೋಡಿಸಿ ಅಧಿಕಾರ ಹಂಚಿಕೊಳ್ಳುವ ಘೋಷಣೆಗಳನ್ನು ಇಂದು ನಾವು ಪದೇ ಪದೇ ಕೇಳುತ್ತಿದ್ದೇವೆ. ಆದರೆ ನಿಜಾಂಶವೆಂದರೆ ಕೋಮುವಾದವನ್ನು ಮೀರಿ ಇಲ್ಲಿನ ವ್ಯವಸ್ಥೆಯ ಆಂತರಿಕ ವೈರುಧ್ಯಗಳ ಫಲವಾಗಿ ಉಂಟಾಗಿರುವ ಆರ್ಥಿಕ ಮುಗ್ಗಟ್ಟಿನ ಬಗ್ಗೆ, ಛಿದ್ರವಾಗುತ್ತಿರುವ ಸಾಂಸ್ಕೃತಿಕ ಬದುಕಿನ ಬಗ್ಗೆ ಜನಸಮುದಾಯವು

ಗಮನಹರಿಸಬೇಕಾಗಿದೆ. ಅದಕ್ಕೆ ಪರ್ಯಾಯವಾದ ಆರ್ಥಿಕ, ಸಾಮಾಜಿಕ ವ್ಯವಸ್ಥೆಯನ್ನು ಸ್ಥಾಪಿಸುವಸಲುವಾಗಿ ಚಳುವಳಿಗಳನ್ನು ರೂಪಿಸಬೇಕಾಗಿದೆ.

ಕೋಮುವಾದಕ್ಕೆ ಸಂಬಂಧಿಸಿದಂತೆ ಚರಿತ್ರೆಯ ಹಿಂದಿನ ಪುಟಗಳನ್ನು ಗಮನಿಸಿದಾಗ ''ಕೋಮವಾದಿ ರಾಜಕಾರಣದ ಕ್ಷುದ್ರ ನಾಟಕದಲ್ಲಿ ವಸಾಹತು ಸರ್ಕಾರದ್ದೇ ಕೇಂದ್ರ ಪಾತ್ರವಾಗಿತ್ತು. ಸರ್ಕಾರಿ ಸೇವೆಯಲ್ಲಿ ಒಂದೇ ಜಾತಿಗೆ ಸೇರಿದ ಜನರು ಬಹು ಸಂಖ್ಯೆಯಲ್ಲಿ ಜಮಾಯಿಸಬಾರದೆಂಬುದು ವಸಾಹತು ಸರ್ಕಾರದ ಒತ್ತಡವಾಗಿತ್ತು. ಆದರೆ ಬ್ರಿಟೀಷ್ ವಸಾಹತು ಸರ್ಕಾರದ ನೀತಿ ಅನುಷ್ಠಾನಕ್ಕೆ ಬರಲು ಅನೇಕ ನ್ಯೂನ್ಯತೆಗಳಿದ್ದವು. ಈ ಸಂದರ್ಭದಲ್ಲಿ ಆಡಳಿತಕ್ಕೆ ಅರ್ಹ ವ್ಯಕ್ತಿಗಳು ದೊರೆಯದ ಕಾರಣ ಆ ನಿಯಮವು ಕೇವಲ ಕಾಗದದ ಮೇಲೆಯೇ ಉಳಿಯುವಂತಾಯಿತು. ಜಾತಿವಾದಿ ಕೋಮುವಾದಿ ರಾಜಕಾರಣ ತಲೆಯೆತ್ತಿದ ಸಂದರ್ಭದಲ್ಲಿ ನಿರ್ಮಾಣವಾದ ಬದಕುಗಳನ್ನೇ ಬಂಡವಾಳವಾಗಿಸಿಕೊಂಡು ಸಂಖ್ಯಾಬಾಹುಳ್ಯ ವರ್ಗಕ್ಕೆ ಅನುಕೂಲ ಮಾಡಿಕೊಟ್ಟು ಗೆಲ್ಲಬಹುದೆಂದು ವಸಾಹತು  ಬ್ರಿಟೀಷ್ ಸರ್ಕಾರವು ಯೋಚಿಸಿತು. ಹಾಗಾಗಿ ಇದೊಂದು ಜಾತಿ ರಾಜ ಕಾರಣದ ಹುಟ್ಟು ಮತ್ತು ಬೆಳವಣಿಗೆಯನ್ನು ಪೋಷಿಸುವಂಥ ಬಲಗಳ ಸಂಗಮವೆಂದು ಕರೆದರೆ ತಪ್ಪಾಗಲಾರದು.''[೯] ವಸಾಹತು ಸರ್ಕಾರವು ತಮಗೆ ನಿಷ್ಠರಾಗಿದ್ದ ಬಲಿಷ್ಟವಾದ ಗುಂಪುಗಳನ್ನು ಸಹ ಸರ್ಕಾರವು ಪೋಷಣೆಮಾಡಿಕೊಂಡಿತ್ತು. ಈ ಸಂದರ್ಭದಲ್ಲಿ ಒಂದು ಜಾತಿಯನ್ನು ಮತ್ತೊಂದು ಜಾತಿಯ ಮೇಲೆ ಎತ್ತಿಕಟ್ಟುತ್ತಾ ತಮಗೆ ಬೇಕಾದ ಪಡೆಯನ್ನು ನಿರ್ಮಾಣಮಾಡಿಕೊಂಡಿತು. ಸರ್ಕಾರವು ೧೯೧೧ರ ವೇಳೆಗೆ ಜಾತಿಗಳ ಹೆಚ್ಚಳಮಾಡಿ ೧೩೪ ಹಿಂದುಳಿದ ಜಾತಿಗಳನ್ನು ಸೃಷ್ಟಿಸಿತು. ಅಂದಿನ ದಶವಾರ್ಷಿಕ ಜನಗಣತಿಯು ಕೋಮುವಾದಿ ರಾಜಕಾರಣ ಹಾಗೂ ಜಾತಿವಾದಿ ಕೋಮುವಾದಿ ಸಿದ್ಧಾಂತದ ಹರಡುವಿಕೆಗೆ ಮೂಲ ಪ್ರೇರಣೆಯನ್ನು ಒದಗಿಸಿತು. ವಾಸ್ತವವಾಗಿ ಜನಗಣತಿ ನಿರೂಪಣೆಯ ಆಧಾರದ ಮೇಲೆಯೇ ಅನೇಕ ಜಾತಿಯ ಸಂಘಗಳು ಆ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವು. ಕೆಲವು ಒಡೆದು ಹೋದವು. ಕೆಲವು ಪುನಃ ಸಂಘಟಿತವಾದವು. ಮತ್ತೆ ಕೆಲವು ವಿಲೀನಗೊಂಡವು. ಅಂದು ಸರ್ಕಾರದ ಬಳಿಯಿದ್ದ ಸೀಮಿತವಾದ ಸಹಾಯದ ಪರಿಣಾಮವಾಗಿ ಜಾತಿಗಳು ಹಾಗೂ ಕೋಮುಗಳಲ್ಲಿ ಸ್ಪರ್ಧೆಯುಂಟಾಯಿತು. ಪ್ರತಿಯೊಂದು ಜಾತಿಯ ಸಂಘವೂ ಸರಕಾರದ ಮನವೊಲಿಸಿಕೊಂಡು ಸಿಕ್ಕಷ್ಟು ದಕ್ಕಿಸಿಕೊಳ್ಳಲು ಮುಂದಾದವು. ಬೇರೆ ಬೇರೆ ಜಾತಿಗಳಿಗೆ ಸೇರಿದ ಸುಶಿಕ್ಷಿತರನ್ನು ಎತ್ತಿ ಕಟ್ಟಿ ಅಕ್ಷರಶಃ ಅವರು ಕದನಕ್ಕಿಳಿಯುವಂತೆ ಪ್ರಚೋದನೆ ಮಾಡಿತು. ಆ ಸಂದರ್ಭದಲ್ಲಿ ಕೋಮುವಾದಿ ರಾಜಕಾರಣ ಹೆಚ್ಚು ಹೆಚ್ಚು ತೀವ್ರವಾಗುವುದಕ್ಕೆ ಮುಖ್ಯಕಾರಣವೆಂದರೆ ಬೇರೆ ಬೇರೆ ಜಾತಿಗಳಿಂದ ವಿಶೇಷವಾಗಿ ಬ್ರಾಹ್ಮಣೇತರ ಮಧ್ಯಮ ಮತ್ತು ಕೆಳಜಾತಿಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಜನರು ಶಾಲೆ-ಕಾಲೇಜು ಸರ್ಟಿಫಿಕೇಟುಗಳನ್ನು ಪಡೆದು ಮುಂದೆ ಬರತೊಡಗಿದರು. ಈ ಸಮುದಾಯಗಳ ಬೇಡಿಕೆಗಳನ್ನು ಈಡೇರಿಸುವ ಮನಸ್ಥಿತಿ ಸಹಾನುಭೂತಿ ರಾಷ್ಟ್ರೀಯವಾದಿ ಚಳುವಳಿಯಲ್ಲಿದ್ದ ಕಾಂಗ್ರೆಸ್ ನಾಯಕತ್ವಕ್ಕೆ ಇರಲಿಲ್ಲ. ಪ್ರಜಾ ಸತ್ತಾತ್ಮಕ ಬೇಡಿಕೆಗಳಿಗೆ ವಿರುದ್ಧವಾದ ಧೋರಣೆಯನ್ನು ಪ್ರದರ್ಶಿಸುವುದರ ಮೂಲಕ ಅಂದಿನ ನಾಯಕತ್ವವು ಇತರೆ ಭಾರತೀಯರೊಡನೆ ಪ್ರಜಾಪ್ರಭುತ್ವ ಸವಲತ್ತುಗಳನ್ನು ಹಂಚಿಕೊಳ್ಳಲು ಮುಂದಾಗಲಿಲ್ಲ. ಇದರಿಂದಾಗಿ ಜಾತಿ ಕೋಮುವಾದಿ ರಾಜಕಾರಣ ಹರಡುವುದಕ್ಕೆ ಕಾರಣವಾಯಿತು.

ಒಂದು ಕಡೆ ಜನರು ಸಾಂಸ್ಕೃತಿಕ ಬದುಕಿನ ಸುಧಾರಣೆ, ಜಾತಿ ಬೇದ ನಿವಾರಣೆ, ಅಸ್ಪೃಶ್ಯತೆ, ಮಹಿಳೆಯ ಸಮಸ್ಯೆಗಳಿಗೆ ಸ್ಪಂದಿಸಲು ತುಡಿಯುತ್ತಿರುವಾಗ ಕಾಂಗ್ರೆಸ್‌ನ ಬಹುಪಾಲು ನಾಯಕರು ಆ ವಿಷಯಗಳಿಂದ ದೂರವಾಗಿ ಉಳಿದ ಕಾರಣ ಬಹಳ ಜನರ ಅಸಮಧಾನಕ್ಕೆ ಪಾತ್ರರಾದರು. ಇದರಿಂದ ಸಹಜವಾಗಿಯೇ ಅವರನ್ನು ಪ್ರಜಾತಂತ್ರ ವಿರೋಧಿಗಳೆಂದೂ ಬೇರೆ ಬೇರೆ ವೇಷಗಳಲ್ಲಿ ಜಾತಿಯತೆ ಮತ್ತು ತತ್ಸಂಬಂಧೀ ಸಂಪ್ರದಾಯಗಳನ್ನು ಮುಂದುವರೆಸುವರೆಂದು ಆಪಾದಿಸಲು ಕಾರಣವಾಯಿತು. ಈ ಸಂಕ್ರಮಣ ಕಾಲಘಟ್ಟದಲ್ಲಿ ನೋವಿನಲ್ಲಿ ಬದುಕು ತಳ್ಳುತ್ತಿದ್ದ ಅಸ್ಪೃಶ್ಯರು, ಕ್ರಿಶ್ಚಿಯನ್ನರು ಹಾಗೂ ಇತರೆ ಕೆಳವರ್ಗದ ಜಾತಿಯ ಜನರು ಕಾಂಗ್ರೆಸ್‌ನಾಯಕತ್ವದ ಚಲನವಲನಗಳನ್ನು ಸಂಶಯದಿಂದ ನೋಡುವುದಕ್ಕೆ ಪ್ರಾರಂಭಿಸಿದರು.

ಜನರ ಸಾಂಸ್ಕೃತಿಕ ಬದುಕು ಪ್ರಜಾಸತ್ತಾತ್ಮಕ ಪಕ್ಷಗಳ ತಿಕ್ಕಾಟಗಳ ನೋವಿನಿಂದ ನರಳತೊಡಗಿತು. ಜನರು ರಾಜಕೀಯ ಪಕ್ಷಗಳ ಬಗ್ಗೆ ನಂಬಿಕೆ ಕಳೆದುಕೊಳ್ಳತೊಡಗಿದರು. ಜಾತ್ಯಾತೀತತೆ ಮತ್ತು ಪ್ರಜಾಪ್ರಭುತ್ವಗಳ ಉಜ್ವಲವಾದ ಇತಿಹಾಸ ಪರಂಪರೆ ಇರುವ ಈ ಎರಡು ಪಕ್ಷಗಳು ಜಾತ್ಯಾತೀತತೆ (ಕಾಂಗ್ರೆಸ್) ಕೋಮುವಾದ (ಬಿ.ಜೆ.ಪಿ)ಕ್ಕೆ ಮಾತ್ರ ಸೀಮಿತಗೊಂಡ ಈ ರಾಜಕೀಯ ಪಕ್ಷಗಳ ಪಿತೂರಿಯ ಬಲೆಗೆ ಬೀಳದೆ ಜನರನ್ನು ಇಂದು ಕ್ರಾಂತಿಕಾರಿ ಹೋರಾಟಗಳಲ್ಲಿ ತೊಡಗಿಸಬೇಕಾಗಿದೆ. ರಾಷ್ಟ್ರೀಯ ಬಂಡವಾಳ ಶಾಹಿಗಳಿಗೆ ಎಂದಿಗಿಂತಲೂ ಸಮಾಜವಾದಿ ಹಾದಿಯಲ್ಲಿ ತಮ್ಮ ನೀತಿಗಳನ್ನು ರೂಪಿಸಿ ಅಭಿವೃದ್ಧಿಯನ್ನು ತರಬೇಕೆಂಬುದಿಲ್ಲ. ಅವರ ಕಾಲಕ್ಕೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪರಿಸ್ಥಿತಿಗೆ ಹೊಂದಿಕೊಂಡಂತೆ ತಮ್ಮ ಬಣ್ಣವನ್ನು ಬದಲಾಯಿಸುತ್ತಲೇ ಬಂದಿದ್ದಾರೆ. ಜಾಗತಿಕ ಬಂಡವಾಳಶಾಹಿಯಿಂದ ಮೊದಲ್ಗೊಂಡು ಇಂದು ಆರ್ಥಿಕ ಉದಾರೀಕರಣ ಮತ್ತು ಖಾಸಗೀರಣದ ಮಾತುಗಳನ್ನೇ ಆಡುತ್ತಿದ್ದಾರೆ. ಇದೆಲ್ಲದರ ಮೂಲ ಉದ್ದೇಶ ಖಾಸಗೀ ಬಂಡವಾಳಿಗರಾದ ಮಾಲಿಕವರ್ಗ, ಭೂಮಾಲಿಕರ ಉದ್ಧಾರಕ್ಕಾಗಿ ನಡೆದಿದೆ. ಈ ಕಾರ್ಯಚರಣೆಗೆ ಕೋಮು ಮತ್ತು ಮತೀಯ ದ್ವೇಷವು ಖಂಡಿತವಾಗಿ ನೆರವಾಗುತ್ತದೆ.

ಕೋಮುವಾದಿ ಶಕ್ತರಾಜಕಾರಣದ ವಿರುದ್ಧ ಅನೇಕ ಸಂಘಟನೆಗಳು ಹೋರಾಟಕ್ಕಿಳಿದವು. ಇದಕ್ಕೆ ಅಂದರೆ ''ಈ ಹೋರಾಟಕ್ಕೆ ಉನ್ನತ ಪರಂಪರೆಯಿದೆ. ತೆಲಂಗಾಣ ತೇಭಾಗ ಪುನ್ನಪ್ಪ, ವಯಲಾರ್ ಅವುಗಳಂತಹ ಸಶಸ್ತ್ರಹೋರಾಟಗಳು, ಭಾರತೀಯ ರಾಯಲ್ ನೌಕಾ ಪಡೆಯಬಂಡಾಯ ಐ.ಎನ್.ಎ.ಸೈನಿಕರ ವಿಚಾರಣೆ, ರೈಲ್ವೇ ಕಾರ್ಮಿಕರ ಬೃಹತ್ ಹೋರಾಟಗಳು ಇಂತಹ ಅನೇಕ ಹೋರಾಟಗಳು ಸಾಮ್ರಾಜ್ಯಶಾಹಿ ವಿರುದ್ಧವಾಗಿದ್ದವರ ಜೊತೆಗೆ ಪ್ರಜಾಪ್ರಭುತ್ವ ಜಾತ್ಯಾತೀತತೆ ಮತ್ತು ಸಮಾನತೆಗಳ ಮೌಲ್ಯಗಳನ್ನೇ ಮೂಲ ಅಂಶಗಳನ್ನಾಗಿಟ್ಟುಕೊಂಡು ಬೆಳೆದುಬಂದವು.''[೧೦] ಅಂದಿನ ದಿನಗಳಲ್ಲಿ ಮೇಲಿನ ಸಂಘಟನೆಗಳು ಮತ್ತು ಇಡೀ ಜನಸ್ತೋಮವೂಕೂಡ ಕೋಮು, ಜಾತಿಗಳೆಂಬ ಕ್ಷುಲ್ಲುಕ ವಿಷಯಗಳನ್ನು ಬದಿಗಿಟ್ಟು ಬೀದಿಗಿಳಿದಿದ್ದು ಆ ಹೋರಾಟಗಳ ಉಜ್ವಲ ಚಾರಿತ್ರ್ಯಕ್ಕೆ ಕುರುಹಾಗಿದೆ. ಅದೇ ಸಂದರ್ಭದಲ್ಲಿ ಕೋಮುವಾದಿಗಳ ಧ್ವನಿಯೂ ಸದ್ದಿಲ್ಲದೆ ಅಡಗಿಹೋದದ್ದು ಕೂಡ ಬಹುಮುಖ್ಯ ಅಂಶವಾಯಿತು.

ಭಾರತದಲ್ಲಿಂದು ಕೋಮುವಾದವೆಂದರೆ 'ಹಿಂದೂ' ಎಂಬ ಏಕರೂಪಿ ಧಾರ್ಮಿಕ ಗುರುತನ್ನು ಕಟ್ಟಿಕೊಂಡು ಬೆಳೆದಂತೆ ಐಡಿಯಾಲಜಿಯಾಗಿದೆ. ಅನೇಕ ಸಂಸ್ಕೃತಿ ಚಿಂತರು ವಸಾಹತು ಕಾಲದ ಇತಿಹಾಸವನ್ನು ಪರಿಶೀಲನೆಗೆ ಒಡ್ಡುತ್ತಾರೆ. ಅವರು ವಸಾಹತು ಅನುಭವವು ನಮ್ಮ ಗತಕಾಲವನ್ನು ನೋಡುವ ದೃಷ್ಟಿಕೋನವನ್ನು

ಬದಲಾಯಿಸಿದೆಯೆಂಬವಾದವನ್ನು ಐತಿಹಾಸಿಕ ವಿವರಗಳ ಮೂಲಕ ಪುಷ್ಟೀಕರಿಸುತ್ತಾರೆ. ''ವಸಾಹತೋತ್ತರ ವಿಚಾರಗಳನ್ನು ಒಪ್ಪಿಕೊಂಡ ಆಶಿಸ್ ನಂದಿಯವರಂಥ ಚಿಂತಕರು ಭಾರತೀಯ ಶ್ರದ್ಧಾ ಪ್ರಪಂಚವನ್ನು ಕೋಮುವಾದಿ ನಿರೂಪಣೆಯಿಂದ ಬಿಡಿಸಲು ಭಾರತೀಯ ಸಂಪ್ರದಾಯದ ಕುರಿತ ಪಾಶ್ಚತ್ಯ ಆಧುನಿಕ ಕಥನಗಳನ್ನು ಒಟ್ಟಾರೆಯಾಗಿ ತಿರಸ್ಕರಿಸುವುದೊಂದೇ ಸರಿಯಾದ ಮಾರ್ಗ''[೧೧] ಎನ್ನುತ್ತಾರೆ. ಭಾರತೀಯ ಸಂಪ್ರದಾಯವು ವಸಾಹತು ಕಾಲದಲ್ಲಿಧರಿಸಿದ ಕೋಮುವಾದವನ್ನೊಂದೆ ತಿರಸ್ಕರಿಸುವುದು ಸಾಧ್ಯವಿಲ್ಲ. ಈ ಕೋಮುವಾದವನ್ನು ಸೃಜಿಸುವ ಆಧುನಿಕ ವಿಚಾರಗಳನ್ನೇ ತ್ಯಜಿಸಿ ಭಾರತೀಯ ಸಂಪ್ರದಾಯವನನ್ನು ಶುದ್ಧವಾಗಿ ಪಡೆಯುವುದರಿಂದ ಮಾತ್ರ ಕೋಮುವಾದವನ್ನು ತಡೆಯಬಹುದು. ಕೋಮುವಾದದ ರಾಜಕೀಯ ಸ್ಥಿತ್ಯಂತರದ ಕೆಲವು ಘಟನೆಗಳನ್ನು ಈ ಸಂದರ್ಭದಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ. ಶ್ರೀಮತಿ ಇಂದಿರಾ ಗಾಂಧಿಯ ನಂತರ ಅಧಿಕಾರಕ್ಕೆ ಬಂದ ರಾಜೀವ್‌ಗಾಂಧಿಯವರ ಆಳ್ವಿಕೆಯು ಇಡೀಯಾಗಿ ಬಿ.ಜೆ.ಪಿ.ಸಿದ್ಧಾಂತವನ್ನು ಕಾಂಗ್ರೆಸ್ ಅನುಷ್ಠಾನಗೊಳಿಸಿದ ಕಥನವಾಗಿದೆ. ೧೯೮೬ರಲ್ಲಿ ಪ್ರಧಾನ ಮಂತ್ರಿ ರಾಜೀವಗಾಂಧಿ, ಕೇಂದ್ರ ಮಂತ್ರಿ ಅರುಣ್ ನೆಹರೂ ಉತ್ತರ ಪ್ರದೇಶದ ಅಂದಿನ ಮುಖ್ಯಮಂತ್ರಿ ವೀರಭದ್ರಸಿಂಗ್ ಗುಟ್ಟಾಗಿ ಸಮಾಲೋಜನೆ ನಡೆಸಿ ಅಯೋಧ್ಯೆಯ ಬಾಬರಿ ಮಸೀದಿಯ ಬಾಗಿಲು ತೆಗೆಯಿಸಿದರು. ಅಯೋಧ್ಯಯ ಬಗ್ಗೆ ಸಂಘ ಪರಿವಾರಗಳು ನಡೆಸುತ್ತಿರುವ ಹೋರಾಟವು ಸಕಾರಣವೆಂಬ ನಿಲುವು ಸರ್ಕಾರ ಸಾರಿತು. ೧೯೮೯ರಲ್ಲಿ ಅಯೋಧ್ಯೆಯಲ್ಲಿ ಹೊಸ ಮಂದಿರದ ನಿರ್ಮಾಣಕ್ಕೆ ಅನುಮತಿ ನೀಡಿದ್ದು ಅಂದು ಘೋಷಣೆಯಾಗಿದ್ದ ಚುನಾವಣೆಯಲ್ಲಿ ಹಿಂದೂ ಮತಗಳನ್ನು ಪಡೆಯುವ ಹುನ್ನಾರವೇ ಮೂಲವಾಗಿತ್ತು. ೧೯೯೨ರಲ್ಲಿ ಅಯೋಧ್ಯೆಯಲ್ಲಿ ಬಾಬರಿಮಸೀದಿ ಉರುಳಿದ ಸಂದರ್ಭದಲ್ಲಿ ಕೇಂದ್ರದ ಕಾಂಗ್ರೆಸ್ ಸರಕಾರಗಳು ವರ್ತಿಸಿದ ರೀತಿ, ೧೯೯೨-೯೩ ಮುಂಬೈ ಗಲಭೆಯಲ್ಲಿ ಮಹಾರಾಷ್ಟ್ರ ಕಾಂಗ್ರೆಸ್ ಸರಕಾರಗಳು ವರ್ತಿಸಿದ ರೀತಿ ಕೂಡ ಮತೀಯವಾದದಪರ ನೀತಿಯನ್ನು ಸಾಭೀತುಪಡಿಸಿದಂತಿತ್ತು. ಈ ಎಲ್ಲಾ ಘಟನೆಗಳ ಹಿಂದೆ ಸಂಘ ಪರಿವಾರವು ಕರಾವಳಿಯ ಭಾಗದಲ್ಲಿ ಮುಸ್ಲೀಮರ ವಿರುದ್ಧ ದ್ವೇಷದ ವಾತಾವರಣವನ್ನು ನಿರ್ಮಿಸಿದ್ದು ಇವೆಲ್ಲವೂ ಕೋಮುಗಲಭೆಗೆ ಕಾರಣವಾಯಿತು. ಇದಕ್ಕೆಲ್ಲಾ ಸಂಘಪರಿವಾರದ ಹುನ್ನಾರವೂ ಕಾರಣವಾಗಿತ್ತು ಈ ಎಲ್ಲಾ ಘಟನಾವಳಿಗಳ ಉಲ್ಬಣದೊಂದಿಗೆ ಕೋಮುವಾದ ಅಪಾಯದ ದಾರಿಯಲ್ಲಿ ಬೆಳೆಯಲು ಕಾರಣವಾಯಿತು.

ಇದು ವಸಾಹತೋತ್ತರ ಕಾಲಘಟ್ಟದಲ್ಲಿ ಮುಂದುವರಿದ ಕಾರಣವಾಗಿ ಕಳೆದ ಮೂರುನಾಲ್ಕು ವರ್ಷಗಳಲ್ಲಿ ಹುಟ್ಟುಹಾಕಲಾದ ಬಾಬಾಬುಡನಗಿರಿ 'ದತ್ತಪೀಠ' ವಿವಾದ ಕರ್ನಾಟಕದ ಕೋಮುವಾದದ ಬಹುದೊಡ್ಡ ಸಮಸ್ಯೆಯಾಗಿ ಸೃಷ್ಟಿಗೊಂಡಿದೆ. ಈ ಬಗ್ಗೆ ಮೂಲಭೂತವಾದ ಮತ್ತು ಮುಸ್ಲಿಂ ಮೂಲಭೂತವಾದ ಒಂದೊಂದು ಕಡೆಯ ಅಲೆಗೆ ಎಳೆದರೆ ಇದರ ಬೇರನ್ನೇ ಮಟ್ಟಹಾಕಲು ನಾಡಿನ ಪ್ರಗತಿಪರ ಸಂಘನೆಗಳು ಒಕ್ಕಟ್ಟಾಗಿ ಪ್ರತಿರೋಧಿಸುತ್ತಾ ಹೋರಾಟಗಳನ್ನು ಹುಟ್ಟು ಹಾಕಿವೆ. ಇತ್ತೀಚೆಗೆ ಇಂಥದೇ ಇನ್ನೊಂದು ಸಂಘರ್ಷ ಹಂಪಿಯನ್ನು ಕೇಂದ್ರವಾಗಿರಿಸಿಕೊಂಡು ನಡೆಸಲಾಗುತ್ತಿದೆ. ಇವೆಲ್ಲ ಮುಂದುವರಿದ ರೂಪಗಳಾಗಿ ವಿಸ್ತರಣೆಗೊಳ್ಳುತ್ತಲಿವೆ.

ಹೀಗೆ ಕೋಮುವಾದದ ಕರಾಳ ನೆರಳು ವಸಾಹತು ಪೂರ್ವಕಾಲ ಘಟ್ಟದಿಂದಲೇ ಸಾಂಸ್ಕೃತಿಕ ರಂಗದ ಎಲ್ಲಾ ಭಾಗಗಳಲ್ಲಿ ಮೆಲ್ಲನೆ ಪಸರಿಸತೊಡಗಿತು. ರಾಜಕೀಯ ಅಧಿಕಾರಕ್ಕಾಗಿ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಜನಗಣತಿಯ ಆಧಾರದ ಮೇಲೆ ಜಾತಿವಾರು ಸಂಘಟನೆಗಳು ಸೃಷ್ಟಿಯಾಗಿ ಕುಲವು ಒಡೆದು ಛಿದ್ರವಾಗಿ ಕೋಮುವಾದಿ ರಾಜಕಾರಣಕ್ಕೆ ಕಾರಣವಾಗಿ ಭಾವೈಕ್ಯತೆಗೆ ಪೆಟ್ಟುಬಿದ್ದಿತು. ವಸಾಹತು ಪೂರ್ವಕಾಲ ಘಟ್ಟದಲ್ಲಿ ಘಟಿಸಿದ ಅನೇಕ ಘಟನೆಗಳು

ಹೊಸರೀತಿಯ ಹುಡುಕಾಟ, ತಲ್ಲಣಗಳಿಗೂ ಕಾರಣವಾಯಿತು. ಈ ಸಂದರ್ಭದಲ್ಲಿ ಸಾಂಸ್ಕೃತಿಕ ಬದುಕಿನ ನೆಲೆಯ ವಿಶ್ಲೇಷಣೆಯೂ ಹೊಸ ಆಲೋಚನೆಯನ್ನು ಹುಟ್ಟುಹಾಕುವಲ್ಲಿ ಯಶಸ್ವಿ ಸಾಧ್ಯತೆಯಾಗಿ ಹೇಳಬೇಕಷ್ಟೆ.

### ೩.೨. ವಸಾಹತೋತ್ತರ ವಿದ್ಯಮಾನಗಳು

ಭಾರತದ ಸಾಂಸ್ಕೃತಿಕ ನೆಲದಿಂದ ಬ್ರಿಟೀಷರು ನಿರ್ಗಮಿಸಿದ ನಂತರ ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ಸರಕಾರಗಳು ರಚನೆಗೊಂಡವು. ಈ ಪ್ರಜಾಪ್ರಭುತ್ವದ ಮೌಲ್ಯಗಳಲ್ಲಿ ಅನೇಕ ಬದಲಾವಣೆಗಳಾದವು. ಸಾಮಾಜಿಕ ಬದುಕಿನಲ್ಲಿ ಅನೇಕ ಸ್ಥಿತ್ಯಂತರಗಳು ಸಂಭವಿಸಿದವು. ದೇಶ-ನಾಡು ಕಟ್ಟುವ ಸಂದರ್ಭದಲ್ಲಿ ನಡೆದ ಅಭಿವೃದ್ಧಿ ಚಿಂತನೆಗಳಿಂದ ಸರಕಾರದ ನೀತಿ ನಿರೂಪಣೆಯಲ್ಲಿ ಅನೇಕ ಮಾರ್ಪಡುಗಳಾದವು. ಕರ್ನಾಟಕದ ಸಂದರ್ಭದಲ್ಲಿ ದೇವಾರಾಜು ಅರಸು ಮುಖ್ಯ ಮಂತ್ರಿಯಾಗಿದ್ದ ಕಾಲದಲ್ಲಿ ಬಡವರ ದಲಿತರ ಪರಧ್ವನಿಗಳು ಕೇಳಿಬಂದವು. ಉಳುವವನೆ ಭೂಮಿಯ ಒಡೆಯ ಕಾಯ್ದೆಯು ರೂಪುಗೊಂಡಿತು. ಆ ಸಂಕ್ರಮಣ ಕಾಲಘಟ್ಟದಲ್ಲಿ ಜಮೀನ್ದಾರಿ ಪದ್ಧತಿಯ ವಿರುದ್ಧ ಧ್ವನಿಯೆದ್ದು ಭೂ ಹೋರಾಟಗಳೂ ಎಲ್ಲೆಡೆ ರೂಪಗೊಳ್ಳತೊಡಗಿದವು. ಕಾಗೋಡು ಸತ್ಯಾಗ್ರಹ ಹೊಸ ಸಂಚಲನವನ್ನು ಸೃಷ್ಟಿಮಾಡಿತು. ಈ ಕಾಲದಲ್ಲೆ ಸಮಾಜವಾದಿ ಚಿಂತನೆಗಳು ಆರಂಭವಾಗಿ ಲೋಹಿಯಾ, ಅಂಬೇಡ್ಕರ್, ದಲಿತ ಚಿಂತನೆಗಳ ವಿಚಾರದಾರೆಗಳೂ ಕಾಣಿಸಿಕೊಂಡವು. ಅಲಕ್ಷಿತ, ಅಂಚಿನ ಸಮುದಾಯಗಳ, ಬುಡಕಟ್ಟು ಅಲೆಮಾರಿ ಸಮುದಾಯಗಳ ವಿಶೇಷ ಅಧ್ಯಯನಗಳು ಸಂಸ್ಕೃತಿ ವಿಶ್ಲೇಷಣೆಯ ನೆಲೆಯಲ್ಲಿ ಆರಂಭವಾದವು. ಜೊತೆಗೆ ಉಪ ಸಂಸ್ಕೃತಿ, ಪ್ರತಿಸಂಸ್ಕೃತಿ, ಪರ್ಯಾಯಸಂಸ್ಕೃತಿಗಳ ಹೊಸ ವ್ಯಾಖ್ಯಾನಗಳು ರಚನೆಗೊಂಡವು. ನಾಡು-ದೇಶದ ಅನೇಕ ಭಾಗಗಳಲ್ಲಿ ಮಹಿಳಾ ಪ್ರಶ್ನೆ ರೈತ ಪ್ರಶ್ನೆ ಮತ್ತು ಪರಿಸರ ಪ್ರಶ್ನೆಯ ಹೋರಾಟಗಳು ಸಾಂಸ್ಕೃತಿಕ ರಂಗದಲ್ಲಿ ಪ್ರವೇಶವನ್ನು ಪಡೆಯತೊಡಗಿದವು. ಈ ವಸಾಹತೋತ್ತರ ಕಾಲಘಟ್ಟದಲ್ಲಿ ಜರುಗಿದ ಕೆಲವು ಮುಖ್ಯ ವಿದ್ಯಮಾನಗಳನ್ನು ಸ್ಥೂಲವಾಗಿ ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

#### ೩.೨.೧. ಮಂಡಲ ವರದಿ

ಇಪ್ಪತ್ತನೆ ಶತಮಾನದ ಸಾಂಸ್ಕೃತಿಕ ಬದುಕಿನ ಮೇಲೆ ಹೊಸ ಚಿಂತನೆ ಪ್ರಭಾವ ಬೀರಿದ 'ಮಂಡಲವರದಿ' ಯೂ ಕೂಡ ದೇಶ-ನಾಡಿನ ಸಂದರ್ಭದಲ್ಲಿ ಘಟಿಸಿದ ಅನೇಕ ಘಟನೆಗಳಿಗೆ ಕಾರಣವಾಗಿ, ಈ ವರದಿ ಪ್ರಮುಖ ವಿದ್ಯಮಾನವಾಗಿ ಗೋಚರಿಸುತ್ತದೆ. ಹೊಸದಾಗಿ ಅಸ್ತಿತ್ವಕ್ಕೆ ಬಂದ 'ಮಂಡಲ ವರದಿ ಅಥವಾ ಪಂಚಾಯತ್ ರಾಜ್ ವ್ಯವಸ್ಥೆ' ಇದನ್ನು 'ಕರ್ನಾಟಕ ಜಿಲ್ಲಾ ಪಂಚಾಯತ್, ಮಂಡಲ ಪಂಚಾಯತ್ ಮತ್ತು ನ್ಯಾಯ ಪಂಚಾಯತ್ ಮಸೂದೆ-೧೯೮೩' ಯೆಂತಲೂ ಕರೆಯಲಾಗಿದೆ. ವ್ಯಾಪಕವಾದ ಬದಲಾಣೆಯನ್ನು ಒಳಗೊಂಡಿರುವ ಈ ಮಸೂದೆಯನ್ನು ಶಾಸನಸಭೆಯ ಮುಂದಿಡಲಾಯಿತು.

ಈ ವರದಿಯು ಮಹಾತ್ಮಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸು. ಅಧಿಕಾರ ವಿಕೇಂದ್ರೀಕರಣದ ಕನಸು ಮತ್ತು ಇತರೆ ನಾಯಕರ ವಿಚಾರಧಾರೆ, ಸಾಮಾಜಿಕ ಆರ್ಥಿಕ ಸಮಾನತೆ ಹಾಗೂ ಭವಿಷ್ಯತೆಯ ಅಗತ್ಯತೆಗಳ ಮೇಲೆ ರಚನೆಗೊಂಡ ಈ ಮಸೂದೆ ಅನೇಕ ವಾಗ್ವಾದಗಳಿಗೆ ಒಳಗಾಯಿತು. ಗ್ರಾಮೀಣ ಭಾಗದ ಮುಗ್ಧ ಜನರಿಗೆ ಪ್ರಜಾಸತ್ತಾತ್ಮಕ ಮೌಲ್ಯಗಳು ತಿಳಿಯುವಂತಾಗಬೇಕು. ಇವರೂ ಕೂಡ ತಮ್ಮನ್ನು ತಾವು ಆಳಿಕೊಳ್ಳಬೇಕೆಂದು ಅನೇಕ ಹೋರಾಟಗಳು ನಡೆದವು. ಅಸ್ಸಾಂನಲ್ಲಂತೂ ಈವರದಿ ಜಾರಿಯಾಗಬೇಕೆಂದು ಉಗ್ರಚಳುವಳಿಗಳು

ಪ್ರಾರಂಭವಾದವು. ಆನಾಡಿನ ವಿದ್ಯಾರ್ಥಿಗಳು ಈ ಚಳುವಳಿಯನ್ನು ನಿರಂತರವಾಗಿ ಹುಟ್ಟುಹಾಕಿ ಸರಕಾರ ರಚಿಸುವ ಮಟ್ಟಕ್ಕೆ ಹೋದರು. ಈ ಮಂಡಲ ವರದಿ ಜಾರಿಗೆ ಬರಬೇಕೆಂದು ಉಗ್ರಚಳುವಳಿಗಳು ಪ್ರಾರಂಭವಾದವು. ಈ ಪ್ರಾದೇಶಿಕ ಚಳುವಳಿ ದೇಶವ್ಯಾಪ್ತಿ ಚಳುವಳಿಯಾಗಿ ರೂಪುಗೊಂಡಿತು.

ಕರ್ನಾಟಕ ಗ್ರಾಮಾಭ್ಯುದಯ ಸ್ವಯಂ ಸೇವಾ ಸಂಸ್ಥೆಗಳ ಒಕ್ಕೂಟ (ಕ.ಗ್ರಾ.ಸ್ವ.ಸೇ.ಒ) ಈ ಮಸೂದೆಯನ್ನು ಪರಿಶೀಲಿಸಿ ಕೆಲವು ಸಲಹೆ ಸೂಚನೆಗಳನ್ನು ನೀಡಿತು. ಈ ವರದಿಯಲ್ಲಿರುವ ಅನೇಕ ಸಂಗತಿಗಳು ಪ್ರಜಾಪ್ರಭುತ್ವ ತತ್ವಕ್ಕೆ ಎಷ್ಟರ ಮಟ್ಟಿಗೆ ಸರಿಹೊಂದುತ್ತದೆಂಬುದನ್ನು ಚರ್ಚಿಸಿತು. ರಾಜಕೀಯ ಚಿಂತಕರಾದಂತಹ, ಪಂಚಾಯತ್ ರಾಜ್ ಸಿದ್ಧಾಂತದ ಪ್ರವರ್ತಕರಾದಂತಹ ಬಲವಂತರಾವ್‌ಮೆಹ್ತ, ಜಯಪ್ರಕಾಶ್‌ನಾರಾಯಣ್, ಪಂಡಿತ ಜವಹರಲಾಲ್ ನೆಹರು. ಮುಂತಾದವರಲ್ಲಿ ಈ ಮಸೂದೆಯನ್ನು ಕುರಿತ ಸಮಗ್ರ ಕಲ್ಪನೆಯ ಚಿಂತನೆಯಿತ್ತು.

ಅಧಿಕಾರ ವಿಕೇಂದ್ರೀಕರಣ ಮುಖ್ಯವಾಗಿದ್ದಲ್ಲಿ ಪ್ರಜೆಗಳೇ ಅಧಿಕಾರದ ನಿಜವಾದ ಆಧಾರ ಸ್ತಂಭಗಳು. ಅವರೇ ಆಡಳಿತದಲ್ಲಿರುವವರು ಪ್ರಜಾಪ್ರಭುತ್ವಶಕ್ತಿ ಇಂಥಾ ಜಾಗೃತ ಪ್ರಜ್ಞೆಯಲ್ಲೆ ಅಡಗಿರುತ್ತದೆ. ಎಲ್ಲಾಸ್ತರಗಳಲ್ಲಿ ಪ್ರಜಾಪ್ರಭುತ್ವವಾದಿ ಸಂಸ್ಥೆಗಳು ಬಲಿಷ್ಠಗೊಳುವುದು ಈ ತಿಳುವಳಿಕೆಗಳಿಂದಲೇ ಜನರ ಕೈಯಲ್ಲಿರುವ ಅಧಿಕಾರ ಚಲಾವಣೆಯ ದೃಷ್ಟಿಯಿಂದ ಎಲ್ಲಾ ಕಾನೂನುಗಳು ಎರೆಡು ದೃಷ್ಟಿಕೋನಗಳಿಂದ ನೋಡಿರುವಂತದ್ದು ಒಂದು ಸಿದ್ಧಾಂತ ದೃಷ್ಟಿಯಿಂದ ಎರಡು ಆಚರಣೆಯ ದೃಷ್ಟಿಯಿಂದ. ಸಿದ್ಧಾಂತ ಮತ್ತು ಆಚರಣೆಯ ದೃಷ್ಟಿಯಿಂದ ಕಾನೂನುಗಳು ಹೊಸ ಹೊಸ ಚಿಂತನೆಗಳನ್ನು ನಿರ್ಮಿಸಿದವು.

ಮಂಡಲ ವರದಿಯನ್ನು ಕುರಿತು ೧೯೭೮ರ ಜನವರಿಯಲ್ಲಿ ಪಂಚಾಯತ್ ರಾಜ್ ಕುರಿತ ಪ್ರಥಮ ಗೋಷ್ಠಿಯ ಸಂದರ್ಭದಲ್ಲಿ ಜಯಪ್ರಕಾಶ್ ನಾರಾಯಣರು ತಮ್ಮ ವಿಚಾರವನ್ನು ಮಂಡಿಸುತ್ತಾ ''ಸ್ಥೂಲವಾಗಿ ಹೇಳುವುದಾದರೆ ಮಂಡಲ ವರದಿಯಲ್ಲಿ ಎರಡು ವಿರುದ್ಧವಾದ ಅಥವಾ ವಿಮುಖವಾದ ಅಭಿಪ್ರಾಯಗಳಿವೆಯೆಂದು ಈ ಎರಡು ಅಭಿಪ್ರಾಯಗಳ ಎರಡು ಸಮ್ಮಿಶ್ರಣಗಳು ಹಲವಾಗಿವೆ. ಪಂಚಾಯತ್ ರಾಜ್ಯದ ಸಂಸ್ಥೆಗಳಾದ ಗ್ರಾಮ ಪಂಚಾಯತ್, ಪಂಚಾಯತ್‌ಸಮಿತಿಗಳು ಹಾಗೂ ಜಿಲ್ಲಾಪರಿಷತ್‌ಗಳು ರಾಜ್ಯ ಸರ್ಕಾರದ ಅಂಗಾಂಗಗಳು ಮಾತ್ರ'' ವೆಂದು ಜೆ.ಪಿ.ಮಂಡಿಸಿದ ನಿರ್ಣಯದಲ್ಲಿ ಅಧಿಕಾರ ವಿಕೇಂದ್ರೀಕರಣ ಮೂಲ ನೆಲೆಗಳಾದ ಗ್ರಾಮ ಪಂಚಾಯತ್‌ಗಳು, ಪಂಚಾಯತ್ ಸಮಿತಿ ಮತ್ತು ಜಿಲ್ಲಾಪಂಚಾಯತ್‌ಗಳು ರಾಜ್ಯ ಸರ್ಕಾರದ ಅಂಗಗಳಾಗಿ ಕಾರ್ಯನಿರ್ವಹಿಸುವ ಸಂದರ್ಭದಲ್ಲಿ ಉಂಟಾಗುವ ಪರಿಣಾಮಗಳನ್ನು ಸುದೀರ್ಘವಾಗಿ ಚರ್ಚಿಸುತ್ತಾರೆ.

ಈ ಮಸೂದೆಯು ಕರ್ನಾಟಕದಲ್ಲಿ ೧೯೮೩ರಲ್ಲಿ ರಾಮಕೃಷ್ಣ ಹೆಗಡೆಯವರು ಮುಖ್ಯ ಮಂತ್ರಿಯಾಗಿದ್ದ ಕಾಲದಲ್ಲಿ ಅನುಷ್ಠಾನಕ್ಕೆ ತರಲಾಯಿತು. ಕೆಲವು ಅಪಾದನೆಗಳೂ ಕೂಡ ಈ ವರದಿಯನ್ನು ಕುರಿತಾಗಿ ಬಂದವು ''ಮಂಡಲವರದಿಯು ದೀರ್ಘವಾಗಿರುವಂತದ್ದು, ಕಾನೂನಿನ ಜಾಲವೂ ಆಗಿದೆ. ಇದರಿಂದ ಜಿಲ್ಲಾಧಿಕಾರಿಗಳಿಗೆ ವಿಪರೀತ ಅಧಿಕಾರನೀಡಿರುವುದು ಮತ್ತು ಗ್ರಾಮೀಣ ಜನತೆಯ ಬುದ್ಧಿ ಸಾಮರ್ಥ್ಯಕ್ಕೆ ಮೀರಿದ ಕಾರ್ಯಚರಣೆಗಳನ್ನು ಪಂಚಾಯತ್ ಮಂಡಲಗಳಿಗೆ ವಿಧಿಸಿರುವಂತದ್ದು. ಉದ್ದಿಷ್ಟಮಟ್ಟದಲ್ಲಿ ಅಧಿಕಾರ ವಿಕೇಂದ್ರಿಕರಣ, ತಳಮಟ್ಟದ ಅಧಿಕಾರವಂಚಿತರಾದ ಅಲಕ್ಷಿತ ಸಮುದಾಯಗಳಿಗೆ ಅಧಿಕಾರ ನೀಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಇಚ್ಛೆಯು ಸಫಲಗೊಳ್ಳಲಿಲ್ಲವೆಂಬವಾದವೂ ಇದೆ.[೮]

ಕರ್ನಾಟಕದಲ್ಲಿ ಒಟ್ಟು ಭಾರತದ ಸಂದರ್ಭದಲ್ಲಿ ಈ ಪಂಚಾಯತ್ ರಾಜ್ ವ್ಯವಸ್ಥೆ ಸೃಷ್ಟಿಸುವ ಕೆಲವು ತಾತ್ವಿಕ ಸಂಗತಿಗಳನ್ನು ಪರಿಶೀಲಿಸಿದರೂ ಗ್ರಾಮೀಣ ಭಾರತದ ತಳಮಟ್ಟದ ಶೋಷಣೆಗೆ ಒಳಗಾದ ಜನ ಸಾಮಾನ್ಯರಿಗೆ ಅಧಿಕಾರ ನೀಡಬೇಕೆಂದು ರೂಪಿತವಾದಂತ ಈ ಮಸೂದೆ ಕರ್ನಾಟಕದ ಸಾಂಸ್ಕೃತಿಕ ಬದುಕನ್ನು ಪುನರ್‌ನಿರ್ಮಿಸುವಲ್ಲಿ ದುರುಪಯೋಗವಾದದ್ದೇ ಹೆಚ್ಚು. ಈ ಮಸೂದೆಯಲ್ಲಿ ಸಂಪನ್ಮೂಲಾಧಾರ ತುಂಬ ಸಂಕುಚಿತವಾದದ್ದಾಗಿದೆ, ತೆರಿಗೆ ಬಾಬುಗಳು ಕಡಿಮೆ ತೆರಿಗೆ ಅಧಿಕಾರ ಸೀಮಿತ. ಜಿಲ್ಲಾ ಪಂಚಾಯತ್‌ಗಳ ಮೇಲೆ ವಿಪರೀತವಾದ ಕಾರ್ಯಬಾರ ನೀಡಿರುವಂತದ್ದು. ಜಿಲ್ಲಾಶಾಸಕರಿಗೆ, ಜಿಲ್ಲಾ ಪರಿಷತ್ ಕಲಾಪಗಳಲ್ಲಿ ಭಾಗವಹಿಸುವ ಮತ್ತು ಮತದಾನ ಮಾಡುವ ಹಕ್ಕನ್ನು ಕೊಟ್ಟಿರುವುದರಿಂದ ಇಡೀ ವ್ಯವಸ್ಥೆ ಏರುಪೇರಾಗಿರುವುದು. ಈ ಮಸೂದೆಯಲ್ಲಿ ಅವಕಾಶಗಳು ಪಟ್ಟಭದ್ರರ ಹಿತಾಸಕ್ತಿಗಳನ್ನು ಪ್ರೋತ್ಸಾಹಿಸುವ ಸಂಭವವಿದೆ. ಮಂಡಲ ಪಂಚಾಯತ್‌ಗಳನ್ನು ವಿಸರ್ಜಿಸುವ ಹಕ್ಕು ಸರ್ಕಾರಕ್ಕಿರುವುದರಿಂದ ಪ್ರಭಾವೀ ಕೈಗಾರಿಕೋದ್ಯಮಿ ಹಾಗೂ ಬಂಡವಾಳಶಾಹಿ ಇನ್ನಿತರ ಜಮೀನ್ದಾರರು ಇದನ್ನು ದುರುಪಯೋಗಪಡಿಸಿಕೊಳ್ಳುವುದು ಖಂಡಿತ, ಇದಕ್ಕೆ ಅವಕಾಶವಿರಬಾರದು.

ಸಂಸ್ಕೃತಿಚಿಂತಕರಾದ ಡಿ.ಆರ್.ನಾಗರಾಜು ಅವರು ಈ ಪಂಚಾಯತ್ ರಾಜ್ ವ್ಯವಸ್ಥೆಯ ಬಗೆಗೆ ತಮ್ಮ ನಿಲುವುಗಳನ್ನು ವ್ಯಕ್ತಪಡಿಸುತ್ತಾ ''ಪಂಚಾಯತ್ ರಾಜ್ ವ್ಯವಸ್ಥೆ ಕಲ್ಯಾಣ ರಾಜ್ಯ (ವೆಲ್ ಫೇರ್ ಸ್ಟೇಟ್)ದ ಒಂದು ಅಂಗ ಎಂಬಂತಾಗಿಬಿಟ್ಟಿದೆ. ಪಂಚಾಯತ್ ವ್ಯವಸ್ಥೆಯ ಮಾತು ಹಾಗಿರಲಿ ನಮ್ಮ ಇಡೀ ಅಭಿವೃದ್ಧಿ ಪಥವೇ ಅಂತಿಮವಾಗಿ ವೆಲ್ ಫೇರ್ ಸ್ಟೇಟ್‌ನ ಒಂದು ವಿಕೃತ ಪ್ರಯೋಗವಾಗಿ ಕುಸಿದು ಹೋಗುವ ಹಾಗೆ ಕಾಣುತ್ತದೆ. ಇದು ಸೃಷ್ಟಿಸುವ ಮನಃಸ್ಥಿತಿಗಳು, ಮೌಲ್ಯಗಳು ಏನು ಎಂಬುದರ ಬಗ್ಗೆ ಸಂಸ್ಕೃತಿ ವಿದ್ಯಾರ್ಥಿಯಾದ ನನಗೆ ಅಪಾರ ಕೂತೂಹಲವಿದೆ''[೧೩] ಎನ್ನುತ್ತಾರೆ. ಈ ಪಂಚಾಯತ್ ರಾಜ್ ವ್ಯವಸ್ಥೆ, ಕಲ್ಯಾಣರಾಜ್ಯದ ಅಂಗವಾಗಿ, ಇಡೀ ಅಭಿವೃದ್ಧಿಯಪಥವೆನ್ನುವಂತದ್ದು ಕಲ್ಯಾಣದ ರಾಜ್ಯದ ವಿಕೃತ ಪ್ರಯೋಗವಾಗಿದೆಯೆಂದು ವ್ಯಕ್ತಪಡಿಸಿದ ವಿಚಾರಗಳು ಹೊಸ ಚಿಂತನೆಗೆ ತೊಡಗಿಸುತ್ತವೆ.

ಗಾಂಧೀಜಿಯವರು ಗ್ರಾಮ ಸ್ವರಾಜ್ಯದ ಕಲ್ಯಾಣ ರಾಜ್ಯದ ಕಲ್ಪನೆ ಒಂದು ನಿಟ್ಟಿನಲ್ಲಿ ಅನಿವಾರ್ಯವಾಗಿ ಕಾಣುತ್ತದೆ. ''ಕಲ್ಯಾಣ ರಾಜ್ಯದ ಕಲ್ಪನೆ ಎಂದರೆ ಜನತೆಯ ಬದುಕಿನ ಸಮಸ್ತ ಕ್ಷೇತ್ರಗಳಿಗೂ ಸರ್ಕಾರ ಸೇವಾ ವ್ಯವಸ್ಥೆಯನ್ನು ನಿರ್ಮಿಸುವುದು. ದುಡಿವ ವರ್ಗದ ಹೋರಾಟ ತೀವ್ರವಾಗುತ್ತ ಹೋಗಿ ತನ್ನ ಸಮರಶೀಲತೆಯ ಮೂಲಕ ಸೇವಾ ವ್ಯವಸ್ಥೆಯನ್ನು ಗಳಿಸಿ ಕೊಳ್ಳುತ್ತದೆಯೆಂಬ'' ಸಂಸ್ಕೃತಿ ಚಿಂತಕ ಡಿ.ಆರ್.ನಾಗರಾಜರ ಮಾತುಗಳು ಕಲ್ಯಾಣರಾಜ್ಯ ಕಲ್ಪನೆಗೆ ಹೊಸ ನೋಟಗಳನ್ನು ವ್ಯಕ್ತಪಡಿಸುತ್ತಾರೆ. ಗ್ರಾಮೀಣ ಜನತೆಯಲ್ಲಿ ಕ್ರಿಯಾಶೀಲ ಸ್ವಾವಲಂಬನೆ ಸೃಷ್ಟಿಸುವುದು ಸಮರಶೀಲ ಗಾಂಧಿವಾದದ ಗುರಿ. ಕರ್ನಾಟಕದ ಈ ಪಂಚಾಯತ್ ವ್ಯವಸ್ಥೆಯನ್ನು ಗಾಂಧಿವಾದಿ ಕಲ್ಪನೆಯ ನೆಲೆಯಲ್ಲಿ ಪರೀಕ್ಷಿಸುವುದು ಕೂಡ ಕುತೂಹಲಕಾರಿಯೆನ್ನುತ್ತಾರೆ.

ಅನೇಕ ತತ್ವ ಆಶಯಗಳ ಜೊತೆಗೆ ಅನುಷ್ಠಾನಕ್ಕೆ ಬಂದಂತಹ ಈ ಮಂಡಲ ವರದಿಮಸೂದೆಯು ಬಹಳಷ್ಟುಕಾಲ ನೆಲೆನಿಲ್ಲಲಿಲ್ಲ. ಈ ವರದಿ ಜನರ ಸಾಂಸ್ಕೃತಿಕ ಬದುಕಿನಲ್ಲಿ ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕನಸು ನನಸಾಗಲಿಲ್ಲ. ಅಧಿಕಾರ ವಿಕೇಂದ್ರೀಕರಣ ಕೆಲವರಲ್ಲಿ ಕೇಂದ್ರೀಕರಣವಾಯಿತು. ಪಟ್ಟಬದ್ರ ಹಿತಾಸಕ್ತಿಯಿಂದ ನುಚ್ಚುನೂರಾಯಿತು. ಗ್ರಾಮೀಣ ಪ್ರದೇಶದಲ್ಲಿ ಮಂಡಲ ಚುನಾವಣೆಯಿಂದ ಅನೇಕ ಕೋಮುಗಲಭೆಗಳು

ಉಂಟಾದವು. ನಂತರದ ದಿನಗಳಲ್ಲಿ ಮಂಡಲ ಪಂಚಾಯತ್‌ಗಳು ರದ್ದಾಗಿ ಗ್ರಾಮವನ್ನೊಳಗೊಂಡ ಗ್ರಾಮ ಪಂಚಾಯತ್‌ಗಳು ಅಸ್ತಿತ್ವಕ್ಕೆ ಬಂದವು.

ಈ ಮಂಡಲ ವರದಿಯು ಸಾಂಸ್ಕೃತಿಕ ಬದುಕಿನ ದೃಷ್ಟಿಯಿಂದ ಭಾರತ ಹಳ್ಳಿಗಳ ದೇಶದಲ್ಲಿ ಅನೇಕ ಸಾಮಾಜಿಕ ಸ್ಥಿತ್ಯಂತರಗಳಿಗೆ ಕಾರಣವಾಯಿತು. ಆಧುನಿಕ ಕನ್ನಡದ ಕತೆಗಾರಸಾದ ಕುಂ.ವೀರಭದ್ರಪ್ಪ, ಅಮರೇಶ ನುಗಡೋಣಿ ಮುಂತಾದವರು ಅಧಿಕಾರ ವಿಕೇಂದ್ರೀಕರಣ ಮಂಡಲ ಚುನಾವಣೆಗಳಲ್ಲಿ ಜಮೀನ್ದಾರರು ಅಧಿಕಾರಲಲಾಸೆಗಾಗಿ ಸಾಂಸ್ಕೃತಿಕ ಬದುಕನ್ನು ಛಿದ್ರಗೊಳಿಸಿದರೀತಿಯನ್ನು ಕತೆಗಳಲ್ಲಿ ಅನಾವರಣಗೊಳಿಸಿದ್ದಾರೆ.

**೩.೨.೨. ವಸಾಹತುಶಾಹಿ ಪ್ರಭಾವದಲ್ಲಿ ದೇಶಿ ನೆಲೆಯ ಹುಡುಕಾಟ**

ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಹೊಸ ಚಿಂತನೆಯ ಹುಡುಕಾಟದಲ್ಲಿ ದೇಶೀಯ ನೆಲೆಯ ಹುಡುಕಾಟವೂ ಒಂದು. ದೇಶೀಯವಾದದ ವಿಭಿನ್ನ ವಿಚಾರ ಧಾರೆಯಾಗಿ ಸೃಷ್ಟಿಯಾದ ದೇಶೀಯ ನೆಲೆಯ ಸಂಸ್ಕೃತಿಯ ಅನನ್ಯ ನೆಲೆಗಳನ್ನು ಅನಾವರಣಗೊಳಿಸುತ್ತದೆ. ಸಂಸ್ಕೃತಿ ಚಿಂತಕರು, ವಿಮರ್ಶಕರೂ ಆದ ರಾಜೇಂದ್ರ ಚೆನ್ನಿಯವರ ದೇಶೀಯವಾದವನ್ನು ಕುರಿತು ಹೇಳುತ್ತಾ ''ಒಂದು ಸಾಹಿತ್ಯದ ಪ್ರಾದೇಶಿಕ ಸತ್ವವನ್ನು, ಆ ಸಾಹಿತ್ಯ ಹುಟ್ಟಿಕೊಳ್ಳುವ ಭಾಷಾ ಸಮುದಾಯದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಪ್ರದಾಯದ ವಿಶಿಷ್ಟ ಒಲವುಗಳನ್ನು, ಆ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ಆ ಸಾಹಿತ್ಯಕ್ಕಿರುವ ತನ್ನದೇ ಆದ ಸ್ವಾಯತ್ತತೆಯನ್ನು ಗುಣಾತ್ಮಕವೆಂದು ಒಪ್ಪಿಕೊಳ್ಳುವ ಧೋರಣೆ, ಅಥವಾ ಸಿದ್ಧಾಂತ.''[೧೮] ವೇ ದೇಶೀಯವಾಗಿದೆ ಎನ್ನುತ್ತಾರೆ. ಯಾವುದೇ ಸೀಮೆಯ ಪ್ರಾದೇಶಿಕ ಸತ್ವ, ಅಲ್ಲಿಯ ಜನರಾಡುವ ಆಡುಭಾಷೆ, ಸಂಪ್ರದಾಯಿಕ ಬದುಕಿನ ವೈಶಿಷ್ಟತೆಗಳು ಸ್ವಾಯತ್ತತೆಯ ಗುಣಾತ್ಮಕ ಅಂಶಗಳು ದೇಶೀಯ ಸಂಸ್ಕೃತಿಯ ನೆಲೆಗೆ ತಳಪಾಯವಾಗಿರುತ್ತವೆ. ಕನ್ನಡ ಸಂಸ್ಕೃತಿ ಸಂದರ್ಭದಲ್ಲಿ ಈ ದೇಶೀಯ ನೆಲೆಯ ಶೋಧವು ಹೊಸ ಚಿಂತನಾಧಾರೆಯೊಂದರ ಶೋಧವಾಗಿ ಚಾಲ್ತಿಯಲ್ಲಿ ಬಂತು. ವಸಾಹತುಶಾಹಿ ಸಂಸ್ಕೃತಿಯ ಪ್ರಭಾವದಿಂದ ಬಿಡುಗಡೆ ಹೊಂದಲು ಅನೇಕ ಲೇಖಕರು, ಸಂಸ್ಕೃತಿ ಚಿಂತಕರು ದೇಶೀಯ ಚಿಂತನೆಗೆ ಒತ್ತುಕೊಟ್ಟರು. ರಾಜೇಂದ್ರ ಚೆನ್ನಿಯವರು ದೇಶೀಯ ನೆಲೆಯ ಬಗ್ಗೆ ವಿಶ್ಲೇಷಣೆ ಮಾಡುತ್ತಾ ''ವಿಶಿಷ್ಟವಾದ ಸಂಸ್ಕೃತಿಯನ್ನು ಹೊಂದಿರುವ ಭಾಷಾ ಸಮುದಾಯವೊಂದರ ವಾಸ್ತವಿಕ ಜೀವನದ ಹೊರ ಆವರಣವಾಗಿ ಮಾತ್ರ ಮುಖ್ಯವಾಗಿರುತ್ತದೆ. ಅಲ್ಲದೆ ಭಾಷಾ ಸಮುದಾಯವೊಂದರ ತನ್ನದೇ ಆದ ಚಿಂತಿಸುವ ಮತ್ತು ಭಾವಿಸುವ, ಒಟ್ಟಿನಲ್ಲಿ ಬದುಕನ್ನು ಅರ್ಥಮಾಡಿಕೊಳ್ಳುವ ಬಗೆಗೆ ಪರೋಕ್ಷವಾಗಿ ಆ ನೆಲದ ಭೌಗೋಳಿಕ ಸತ್ಯಗಳೂ ಪ್ರಭಾವ ಬೀರುವುದರಿಂದ ದೇಶೀಯ ನೆಲೆಯ ಹುಡುಕಾಟ ಮುಖ್ಯವಾಗುತ್ತದೆ.''[೧೯] ಎಂದಿದ್ದಾರೆ.

ದೇಶೀಯ ನೆಲೆ ಅನನ್ಯವಾದ ಮತ್ತು ನಿರಂತರವಾದ ಸೃಷ್ಟಿಶೀಲತೆಯನ್ನು ಹುಡುಕಿ ಪೊರೆಯಬೇಕೆನ್ನುವ ನಿಲುವಾಗಿದೆ. ನಿರಂತರವಾಗಿ ಹರಿದು ಬರುವ ಈ ಸತ್ವಶೀಲತೆಯು ಬಹುಮುಖ್ಯವಾದ ಅಭಿವ್ಯಕ್ತಿಯಾಗಿದೆ ಆಯಾ ಸಂಸ್ಕೃತಿಯ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ದಾಖಲಿಸುವುದು. ನಮ್ಮ ನೆಲದ ಭಾಷೆ ಮತ್ತು ಅನನ್ಯ ಸಂಸ್ಕೃತಿಯ ಮೇಲೆ ವಿದೇಶಿ ಭಾಷೆ, ಸಂಸ್ಕೃತಿಯ ಹೇರಿಕೆಯನ್ನು ತಡೆಗಟ್ಟಿ ನಮ್ಮ ಭಾಷೆ ಸಂಸ್ಕೃತಿಯ ಅನನ್ಯತೆಯನ್ನು ಕುರಿತು ಚಿಂತಿಸುವುದು, ಅಭಿವ್ಯಕ್ತಿಯ ಮೂರ್ತ ರೂಪ ನೀಡುವುದು ದೇಶೀಯ ನೆಲೆಯ ಮಹತ್ವದ ಹುಡುಕಾಟವಾಗಿದೆ.

ದೇಶೀಯವಾದದ ಸಾಮಾನ್ಯ ಬಗೆಯೆಂದರೆ ದೇಶಿಯವಲ್ಲದಂತಹ ರಚನೆ, ಪರಿಕರಗಳನ್ನು ಗುರುತಿಸುವುದರ ಮೂಲಕವೇ ದೇಶೀಯ ರಚನೆಯ ಪರಿಕರಗಳನ್ನು ಕುರಿತು ತರ್ಕಿಸುವುದು, ಮತ್ತು ದೇಶೀಯವೆನ್ನಲಾಗುವ ಸಂಗತಿಗಳ ಬಗ್ಗೆ ನಿರಂತರವಾದ ಹುಡುಕಾಟವೂ ಸೃಜನಶೀಲವಾಗಿರುವಂತದ್ದಾಗಿದೆ. ಇಲ್ಲಿ ವಿದೇಶಿ ಸಂಸ್ಕೃತಿಯ ಯಜಮಾನಿಕೆಯ ವಿರುದ್ಧ ಪ್ರತಿಭಟಿಸುವುದು ಒಂದು ರೀತಿಯ ಸಂಕುಚಿತವೆನಿಸಿದಗೂ ದೇಶೀಯ ನೆಲೆಯ ಅತ್ಯಂತ ಮಹತ್ವ ಪೂರ್ಣ ಒಳಬಂಡಾಯ ಇಲ್ಲಿ ನಮ್ಮ ಸಂಸ್ಕೃತಿಯ ಯಜಮಾನಿಕೆಯ ಸ್ಥಾನವನ್ನು ಆಕ್ರಮಿಸುವ ಅಂಶಗಳ ವಿರುದ್ಧವಾದ ನಿಲುವೂ ಆಗಿದೆ.

ಸಾಹಿತ್ಯ ಸಂಸ್ಕೃತಿಯ ಸಂದರ್ಭದಲ್ಲಿ ದೇಶೀವಾದವು ಅನ್ಯಸಾಹಿತ್ಯಿಕ ಸಾಂಸ್ಕೃತಿಕ ಪ್ರಭಾವಗಳ ವಿರುದ್ಧ ದೇಶೀ ಸಾಹಿತ್ಯದ ಅನನ್ಯತೆಯನ್ನು ಸಮರ್ಥಿಸುತ್ತದೆ. ದೇಶೀಯ ನೆಲೆಯ ಹುಡುಕಾಟವು ಅನ್ಯಪ್ರಭಾವಗಳನ್ನು ತಿರಸ್ಕರಿಸುತ್ತದೆ. ಮತ್ತು ಕೆಲವೊಮ್ಮೆ ಅನ್ಯಪ್ರಭಾವಗಳ ಸ್ವೀಕರಣದ ಬಗ್ಗೆ ಹೆಚ್ಚು ಆರೋಗ್ಯಕರವಾದ ನಿಲುವುಗಳನ್ನು ತೋರಿಸುವಂತದ್ದೂ ಆಗಿರುತ್ತದೆ.

ದೇಶೀಯ ನೆಲೆಯ ಶೋಧನೆಯು ವಿದೇಶಿ ಸಂಸ್ಕೃತಿಯ ಪ್ರಬಲವಾದ ಸಂಪರ್ಕವಿಲ್ಲದೇ ಇರುವ ಸಂದರ್ಭ. ಇಂತಹ ಸಂದರ್ಭದಲ್ಲಿ ದೇಶೀಯ ಸಂಸ್ಕೃತಿ ತನ್ನ ಆಂತರಿಕ ಬಹುಮುಖಿತ್ವವನ್ನು ಅರಿತುಕೊಂಡು ತನ್ನಲ್ಲಿಯ ದೇಶೀಯ ಅಂಶಗಳನ್ನು ಶೋಧಿಸುತ್ತದೆ. ದೇಶೀಯ ಹುಟ್ಟಿಗೆ ಕಾರಣವಾಗುವ ಮತ್ತೊಂದು ಸಂದರ್ಭವೆಂದರೆ ಪರರಾಷ್ಟ್ರೀಯ ಯಜಮಾನಿಕೆ ವಿರುದ್ಧ ಸ್ವದೇಶಿ ಸಂಸ್ಕೃತಿಯನ್ನು ಸಮರ್ಥಿಸಬೇಕಾದ ಸಂದರ್ಭ ಸಾಂದರ್ಭಿಕ ಕಾರಣಗಳಿಂದ, ವಿದೇಶಿ ಸಂಸ್ಕೃತಿಯ ಪ್ರಭಾವದಿಂದ ತಪ್ಪಿಸಿಕೊಂಡು ನಮ್ಮ ಸಂಸ್ಕೃತಿ ನಮ್ಮ ನೆಲದ ಜೀವನಾನುಭವದೊಂದಿಗೆ ಬಹುಮುಖಿಯಾದ ವ್ಯಕ್ತಿತ್ವವನ್ನು ಪಡೆದುಕೊಂಡು ನಮ್ಮ ಅನನ್ಯ ಸಂಕರವಾದ ಸಂಸ್ಕೃತಿಯನ್ನು ಚಿತ್ರಿಸಲು ಸಾಧ್ಯವಾಗಿದೆ.

ಯಾವುದೇ ಸಂಸ್ಕೃತಿಯ ಒಳಗೆ ವಿಭಿನ್ನವಾದ ಸಂಪ್ರದಾಯಗಳ ನಡೆ ನುಡಿಯ ವಿಧಿ ವಿಧಾನಗಳ ಸಂಪರ್ಕದ ವಿವೇಚನೆಯಲ್ಲಿ ಶಿಷ್ಟ ಮತ್ತು ದೇಶೀಯ ಸೊಗಡಿನ ಜಾನಪದ ಸಂಪ್ರದಾಯಗಳ ವಿಶ್ಲೇಷಣೆಯೂ ಬಹಳ ಮುಖ್ಯವಾಗಿರುತ್ತದೆ. ಇಂದಿನ ನಮ್ಮ ಶಿಷ್ಟಪರಂಪರೆಯು ಸತತವಾಗಿ ಜಾನಪದ ಸಂಪ್ರದಾಯಗಳಿಂದ ಪ್ರಭಾವಿತವಾಗಿರುವುದರಿಂದ ಅದರ ದೆಸೀಯ ಸ್ವರೂಪವನ್ನು ಜಾನಪದ ಸಂಪ್ರದಾಯಗಳ ಹಿನ್ನಲೆಯಲ್ಲಿ ಮಾತ್ರ ಅರ್ಥಮಾಡಿಕೊಳ್ಳುವುದು ಸಾಧ್ಯವಾಗಿದೆ. ಈ ದೇಶೀಯ ನೆಲೆಯ ಹಿನ್ನಲೆಯನ್ನು ಕುರಿತು ಟಿ.ಪಿ. ಅಶೋಕರವರು ದೇಶಿಯ ಚಿಂತನೆಯ ಕಡೆ ವಿಚಾರಮಾಡುತ್ತ...

''ಕನ್ನಡ ಸಾಹಿತ್ಯವನ್ನು ಮುಖ್ಯವಾಗಿ ಆಧಾರವಾಗಿಟ್ಟುಕೊಂಡು ಪರಂಪರೆಯನ್ನು ಕಲ್ಪಿಸುವ ಅದರ ಬೆಳವಣಿಗೆಯ ವಿವಿಧ ಹಂತಗಳನ್ನು ಇಂದಿನ ಸಾಹಿತ್ಯದಲ್ಲಿ ಕಾಣುವ ಪ್ರಯತ್ನವನ್ನು ನಾವೇಕೆ ಮಾಡಬಾರದು? ಇದನ್ನು ತೀರ ಸರಳವಾಗಿ ಗ್ರಹಿಸಬಾರದು, ಬಂಧ ಮತ್ತು ಆಶಯಗಳ ಪರಸ್ಪರ ಪೂರಕತೆಯು ಈ ದೇಶೀಯ ನೆಲೆಯ ಸಾಹಿತ್ಯದಲ್ಲಿ ಪಡೆದಿರುವ ವಿನ್ಯಾಸಗಳನ್ನು ಕುರಿತಂತೆ ಎಚ್ಚರದ ಚರ್ಚೆ ನಡೆಸಬೇಕಾಗಿದೆ.''[೨೫] ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಕನ್ನಡದ ಮಹತ್ವದ ವಿದ್ವಾಂಸರೂ, ರಾಷ್ಟ್ರಕವಿಗಳೂ ಆಗಿರುವ ಡಾ. ಜಿ.ಎಸ್. ಶಿವರುದ್ರಪ್ಪನವರು ಈ ವಿಚಾರಗಳನ್ನು ಕುರಿತು ''ಈ ಎರಡು ಶಿಷ್ಟ, ಜಾನಪದ ಪರಂಪರೆಗಳು ಒಂದಕ್ಕೊಂದು ಪೂರಕವಾಗಿ ಸಂಬಂಧಗಳಾಗಿ ಇಂದಿಗೂ ಕ್ರಿಯಾಶೀಲವಾಗಿವೆ. ಸಂಸ್ಕೃತಿಯ ಆಶಯದ ದೃಷ್ಟಿ ಮತ್ತು ರಾಚನಿಕ ಸಂದರ್ಭಗಳಲ್ಲಿ ಈ ಎರೆಡು

ಅಭಿವ್ಯಕ್ತಿಗಳು ರೂಢಿಯೇ ಜಾಗೃತವಾಗಿರುವುದನ್ನು ನಾವು ತಿಳಿಯಬೇಕಾಗಿದೆ. ಸಂಸ್ಕೃತ ಭಾಷೆಯೊಂದಿಗೆ ಈ ಎರಡು ನೆಲೆಯ ಶಾಬ್ದಿಕ ಅಭಿವ್ಯಕ್ತಿಗಳು ನಿರಂತರವಾದ ದಾಳಿಯನ್ನು ಮಾಡಿವೆ''[೧೬] ಎಂದಿದ್ದಾರೆ.

ಈ ಮೇಲಿನ ಮೊದಲ ಉದ್ಧರಣದಲ್ಲಿ ಟಿ.ಪಿ. ಅಶೋಕರು ಕನ್ನಡ ಸಾಹಿತ್ಯ ವಿಮರ್ಶೆಯ ಅನ್ಯಪ್ರಭಾವ ಸಾಧನೆಗಳ ಕುರಿತು ವಿಶ್ಲೇಷಣೆಮಾಡುವಾಗ ದೇಶೀಯ ನೆಲೆಯನ್ನು ಬಂಧ ಮತ್ತು ಆಶಯಗಳ ಪರಸ್ಪರ ಪೂರಕತೆಯ ವಿನ್ಯಾಸದಲ್ಲಿ ಕಾಣಬಹುದು ಈ ನಿಟ್ಟಿನ ಚರ್ಚೆ ಇಂದು ನಡೆಯಬೇಕಿದೆ ಎನ್ನುತ್ತಾರೆ.

ಎರಡನೇ ಉದ್ದರಣೆಯ ವ್ಯಾಖ್ಯಾನದಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರು ಶಿಷ್ಟ ಮತ್ತು ಜಾನಪದ ಪರಂಪರೆಗಳು ಒಂದಕ್ಕೊಂದು ಪೂರಕವಾದ ಸಂಬಂಧಗಳಾಗಿ ಕ್ರಿಯಾಶೀಲವಾಗಿವೆಯೆನ್ನುತ್ತಾರೆ. ಇಲ್ಲಿ ಜಿ.ಎಸ್.ಶಿವರುದ್ರಪ್ಪನವರು ಶಿಷ್ಟ ಮತ್ತು ಜಾನಪದಗಳೆರಡೂ ದೇಶೀಯ ನೆಲೆಯ ಹುಡುಕಾಟದೊಂದಿಗೆ ಪೂರಕವಾಗಿ ಸಾಗಿವೆ ಮತ್ತು ಅನ್ಯ ಭಾಷಾ ಸಂಸ್ಕೃತಿಯಾದ ಅಂದರೆ ನಮ್ಮ ಆಡುಭಾಷಾ ಬದುಕಿನೊಂದಿಗೆ ದೂರ ಉಳಿದ ಸಂಸ್ಕೃತಿ ಭಾಷೆಯೊಂದಿಗೆ ಈ ಎರಡು ಪರಂಪರೆಗಳು ಅಭಿವ್ಯಕ್ತಿಗಳು ದಾಳಿಮಾಡಿವೆಯೆಂದು ಹೇಳುತ್ತಾರೆ.

ವಸಾಹತುಶಾಹಿ ಅನುಭವದಿಂದ ಬಿಡುಗಡೆ ಪಡೆಯಲು ವಸಾಹತುಶಾಹಿ ಸಂಸ್ಕೃತಿಗಳು ದೇಶೀಯ ನೆಲೆಯ ಹುಡುಕಾಟವನ್ನು ಸಮರ್ಥಿಸುತ್ತವೆಯೆಂಬುದನ್ನು ಮರೆಯುವಂತಿಲ್ಲ. ಭಾರತದ ಸಂದರ್ಭದಲ್ಲಿ ದೇಶೀವಾದದ ಮುಖ್ಯ ಅಭಿವ್ಯಕ್ತಿಯಾದ ಸಾಂಸ್ಕೃತಿಕ ಪುನರುಜ್ಜೀವನ ಎಲ್ಲಾ ಪ್ರಾದೇಶಿಕ ಸಂಸ್ಕೃತಿಗಳಲ್ಲಿ ಒಂದೇ ಬಗೆಯದಾಗಿರಲಿಲ್ಲ. ದೇಶದ ಸಂಸ್ಕೃತಿಯ ಬಗ್ಗೆ ಭಾವುಕವಾದಂತ ಮನೋಭಾವನೆ ಪಶ್ಚಿಮದ ಮಾನವತಾವಾದಿ ಧೋರಣೆಗಳ ಪ್ರಭಾವದಿಂದಾಗಿ ಸಂಭವಿಸಿದ ಸಮಾಜ ಸುಧಾರಕ ಪ್ರವೃತ್ತಿ, ಆದರ್ಶಗಳು ವಸಾಹತುಶಾಹಿ ಅನುಭದ ಎದುರಿನಲ್ಲಿ ಭಾರತೀಯ ಸಂಪ್ರದಾಯದ ಮನಸ್ಸುಗಳು ಸೃಷ್ಟಿಸಿಕೊಂಡ ಒಲವು, ಅವುಗಳ ಪ್ರಭಾವವನ್ನು ಕನ್ನಡದಂಥ ಪ್ರಾದೇಶಿಕ ಸಂಸ್ಕೃತಿಗಳ ಮೇಲೂ ಕಾಣುತ್ತವೆ. ರಾಷ್ಟ್ರಮಟ್ಟದಲ್ಲಿ ಸ್ವದೇಶಿವಾದ ಮತ್ತು ರಾಷ್ಟ್ರೀಯತೆಗಳಿದ್ದರೆ ಪ್ರಾದೇಶಿಕ ಸಂದರ್ಭದಲ್ಲಿ ದೇಶೀಯತೆಯು ಪ್ರಾದೇಶಿಕ ಸಂಸ್ಕೃತಿಗಳ ಪರವಾದ ನಿಲುವುಗಳಿವೆ. ದೇಶೀಯ ನೆಲೆಯ ಸಂಸ್ಕೃತಿ ಕೆಳಗಣಸ್ತರಗಳಿಂದ ಬಂದಿರಬಹುದಾದ ಅಂಶಗಳನ್ನು ಶಿಷ್ಟ ಸಾಹಿತ್ಯ ಮತ್ತು ಸಂಸ್ಕೃತಿ ರಚನೆಗಳನ್ನು ಶೋಧಿಸುತ್ತದೆ. ವಸಾಹತುಶಾಹಿಯ ವಿರುದ್ಧ, ಮಹಾಪರಂಪರೆಯ ವಿರುದ್ಧ ಪ್ರಾದೇಶಿಕ ಸಂಸ್ಕೃತಿಯು ದೇಸೀಯವಾಗಿ ಕಾಣುತ್ತದೆ. ಈ ಪ್ರಾದೇಶಿಕ ಸಂಸ್ಕೃತಿಯ ಸ್ವರೂಪವು ಬಹುಮುಖಿಯಾಗಿ ಕಾಣುತ್ತದೆ. ಆದರೆ ಪ್ರಾದೇಶಿಕತೆಯನ್ನೆ ನಾವು ದೇಶೀಯತೆಯೆಂದು ಕರೆಯಲಾಗದೆಂದು, ಪ್ರಾದೇಶಿಕ ಸತ್ವದ ಹಿಂದೆ ಸ್ಥೂಲವಾದ ದೇಶೀವಾದಿ ನೆಲೆಗಳಿವೆಯೆಂದು ಹೇಳಿದರೆ ತಪ್ಪಾಗಲಾರದು.

ವಸಾಹತುಶಾಹಿ ಸಂಸ್ಕೃತಿಯ ಆಳ್ವಿಕೆ ಹೊರಟುಹೋದ ಮೇಲೆ ದೇಶೀಯ ಸಂಸ್ಕೃತಿ ತನ್ನ ಸಾಂಸ್ಕೃತಿಕ ವ್ಯಕ್ತಿತ್ವದ ನಿಜವಾದ ಸ್ವರೂಪದ ಬಗ್ಗೆ ಕಳವಳ ಕಸಿವಿಸಿ ಮತ್ತು ಸಂದಿಗ್ಧದ ಮನೋಭಾವನೆಯನ್ನು ತಾಳುವುದು ಸಹಜವಾಗಿತ್ತು. ವಸಾಹತುಶಾಹಿ ಪ್ರಭಾವದಲ್ಲಿ ಹುಟ್ಟಿಕೊಂಡ ಸಾಹಿತ್ಯವನ್ನು ಮತ್ತು ಸಂಸ್ಕೃತಿಯ ಕೆಲವು ಅಂಶಗಳನ್ನು ಗುರುತಿಸಲು ಪ್ರಯತ್ನಿಸುವುದು ಬಹುಪಾಲು ದೇಶೀಯ ಸಂಸ್ಕೃತಿಗಳಲ್ಲಿ ಕಂಡುಬರುವ ಧೋರಣೆಯಾಗಿದೆ.

ಕನ್ನಡ ಸಂಸ್ಕೃತಿ ವಿಮರ್ಶೆಯ ಸಂದರ್ಭದಲ್ಲಿ ದೇಶೀಯವಾದಿಯೆಂದು ಕರೆಯಬಹುದಾದ ನಿಲುವುಗಳು ಸದ್ಯಕ್ಕೆ ಠರಾವುಗಳ ಹಂತದಲ್ಲಿವೆಯೆಂಬ ಮಾತಿದೆ, ಕನ್ನಡ ಮಾದರಿಗಳನ್ನು ಬಳಸಬೇಕೆನ್ನುವ ಮತ್ತು ಕನ್ನಡ ಪರಂಪರೆಯ ಸ್ವರೂಪವನ್ನು ಗ್ರಹಿಸಬೇಕೆನ್ನುವ ನಿಲುವುಗಳೇನು ಒಳ್ಳೆಯವು. ಆದರೆ ಈ ನಿಲುವುಗಳ ಹಿಂದೆ ಇರುವಂತಹ

ತೊಡಕುಗಳು ಹಲವಾರು, ಮೊದಲಿನಿಂದಲೂ ಅನ್ಯ ಪ್ರಭಾವಗಳಲ್ಲಿ ಅರಗಿಸಿಕೊಂಡು ಬೆಳೆದಿರುವ ಬಹುಮುಖಿ ಕನ್ನಡ ಪರಂಪರೆಯಲ್ಲಿ ಕನ್ನಡ ಅಂದರೆ ದೇಶೀಯವಾದ ಮಾದರಿಗಳು ಯಾವುವು. ಈ ಮಾದರಿಗಳನ್ನು ಗುರುತಿಸುವ ಪ್ರಯತ್ನವಾದರೆ ಕನ್ನಡ ಪರಂಪರೆಯ ಬಗ್ಗೆ ಅತ್ಯಂತ ಮಹತ್ವ ಪೂರ್ಣವಾದ ಒಳನೋಟಗಳನ್ನು ನೀಡಬಲ್ಲದು.

ಈ ದೇಶೀಯವಾದಿ ಸಂಸ್ಕೃತಿಯ ಚಿಂತನೆ ಮನುಷ್ಯಪರವಾದ ಚಿಂತನೆಯನ್ನು ಒಳಗೊಂಡಿರುವುದನ್ನು ಸಾಹಿತ್ಯ ಕೃತಿಗಳಿಂದ ಸಾಬೀತು ಮಾಡುವುದು ಇಂದಿನ ಸಂಸ್ಕೃತಿ ವಿಮರ್ಶೆಯ ಜವಬ್ದಾರಿಯಾಗಿದೆ. ಈ ನೆಲದ ದೇಶೀಯ ಪರಿಕರದ ಸಂಸ್ಕೃತಿಯನ್ನು ಗುರುತಿಸಿ, ಆದರೆ ಅಸ್ಪಷ್ಟವಾಗಿ ಗೋಚರವಾದ, ಮಾನವಪರವಾದ ನೆಲೆಯಲ್ಲಿ ಮಾನವೀಯ ಮೌಲ್ಯಗಳ ಹಿನ್ನಲೆಯಲ್ಲಿ ಸಂಪ್ರದಾಯದ ಸತ್ವಶೀಲತೆಯನ್ನು ಬಗೆಯುವ ತೊಡಕಿನ ದಾರಿಯಲ್ಲಿ ದೇಶಿಯನೆಲೆಯ ಚಿಂತನೆ ಇಂದು ಸಾಗಬೇಕಿದೆ. ಈ ನಿಟ್ಟಿನಲ್ಲಿ ದೇಶೀಯ ನೆಲೆಯ ಹುಡುಕಾಟವು ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಪ್ರಮುಖ ಚಿಂತನಾಧಾರೆಯಾಗಿ ಸಾಗಿ ನಮ್ಮ ಪರಂಪರೆಯಲ್ಲಿನ ಜೀವಂತವಾದ, ಅರ್ಥಪೂರ್ಣವಾದ ನೆಲೆಗಳನ್ನು ಉಳಿಸಿ, ಹೊಸ ಅರ್ಥದಲ್ಲಿ ಬಳಸಿ ನಮ್ಮ ನೆಲದ ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ನಿರ್ಮಿಸುವುದಾಗಿದೆ. ಈ ದಿಕ್ಕಿನಲ್ಲಿ ಅನೇಕ ಕತೆಗಾರರು ಕತೆಗಳ ಮೂಲಕ ದೇಶೀಯ ಸಂಸ್ಕೃತಿಯ ಬದುಕನ್ನು ಕಟ್ಟಿಕೊಡುತ್ತಿದ್ದಾರೆ.

**೩.೨.೩. ಭೂ ಹೋರಾಟ ಮತ್ತು ರೈತ ಪ್ರಶ್ನೆ:**

ಭೂಮಿತಾಯಿಯ ಚೊಚ್ಚಿಲ ಮಗನಾದಂತ ರೈತನ ಬದುಕು ಇಂದು ಅನೇಕ ಸಂಕಟಗಳಿಗೆ ಒಳಗಾಗುತ್ತಿದೆ, ಜಾಗತೀಕರಣದ ಪ್ರಭಾವದಿಂದಂತೂ ಕೃಷಿಯನ್ನು ನಂಬಿಕೊಂಡ ರೈತರ ಬದುಕಿನ ಮೇಲೆ ಅನೇಕ ರೀತಿಯ ಪೆಟ್ಟುಗಳು ಬೀಳತೊಡಗಿದವು. ಕರ್ನಾಟಕದ ಸಾಂಸ್ಕೃತಿಕ ಬದುಕಿನ ಸಂದರ್ಭದಲ್ಲಿ ಭೂಮಿಕುರಿತಾದ ಹೋರಾಟಗಳು ಮತ್ತು ರೈತರ ಬದುಕಿನ ದುಃಖದುಮ್ಮಾನಗಳನ್ನು ಕುರಿತಾದ ಅನೇಕ ಹೋರಾಟಗಳು ನಡೆದು ಹೋಗಿವೆ, ಮತ್ತು ನಡೆಯುತ್ತಿವೆ. ಕನ್ನಡ ನಾಡು, ನುಡಿಯನ್ನು ಕಾವ್ಯದ ಮುಖಾಂತರ ಸೃಜನಶೀಲಗೊಳಿಸಿದಂತಹ ವರಕವಿ ಬೇಂದ್ರೆ ರೈತನನ್ನು ಭೂಮಿ ತಾಯಿಯ ಚೊಚ್ಚಿಲ ಮಗನನು ಕಣ್ತೆರೆದೊಮ್ಮೆ ನೋಡಿಹರೇನು? ಎಂದು ರೈತರ ದಮನಿತವಾದ ಸಮಸ್ಯೆಗಳ ಸರಮಾಲೆಯನ್ನು ಕುರಿತು, ಜನರನ್ನಾಳುವ ಪ್ರಭುತ್ವದ ಸರಕಾರಕ್ಕೆ ಹೊಸ ದಿಕ್ಕನ್ನು ಕವಿತೆಯಲ್ಲಿ ತೋರಿಸುತ್ತಾರೆ. ಭೂಮಿ ಹಿಂದೆ ಉಳ್ಳವರಸೊತ್ತಾಗಿತ್ತು. ಜಮೀನ್ದಾರರು ನೂರಾರು ಎಕರೆ ಭೂಮಿಗಳನ್ನು ತಮ್ಮ ಕಪಿಮುಷ್ಠಿಯಲ್ಲಿಟ್ಟುಕೊಂಡು ದಲಿತರು, ನಿರ್ಗತಿಕ ಬಡವರನ್ನು ತಮ್ಮ ಭೂಮಿಯಲ್ಲಿ ಜೀತಕ್ಕಿಟ್ಟುಕೊಂಡು ಅವರು ದುಡಿದ ಶ್ರಮದ ಪ್ರತಿಫಲದ ಸುಖದ ಸುಪ್ಪತ್ತಿಗೆಯಲ್ಲಿ ಮೆರೆಯುತ್ತಿದ್ದರು. ದಿನಗಳೆದಂತೆ ಶೋಷಿತರ ಭೂರಹಿತರ ಪರವಾದ ಹೋರಾಟಗಳು ರೂಪಿತವಾದವು, ರೈತ ಸಂಘಗಳು ಅನೇಕ ಹಂತದಲ್ಲಿ ಉಳುವವನಿಗೆ ಭೂಮಿಯ ಒಡೆತನ ನೀಡಬೇಕೆಂದು ಚಳುವಳಿಗಳನ್ನು ನಡೆಸಿದವು.

ವಿಶ್ವ ಆರ್ಥಿಕ ಸಂಬಂಧ ವಿಶ್ವ ರಾಜಕೀಯ ಸಂಪರ್ಕದಿಂದ ಮುಕ್ತ ಮಾರುಕಟ್ಟೆಯ ನೀತಿಯಿಂದಾಗಿ ಕೃಷಿಪದ್ಧತಿಯು ವಾಣಿಜ್ಯೀಕರಣಗೊಂಡಿತು. ವಾಣಿಜ್ಯ ಬೆಳೆಗಳು ಹೆಚ್ಚಾಗಿ ಕೃಷಿ ಬದುಕು ದುಬಾರಿಯಾಗತೊಡಗಿತು. ದೈಹಿಕ ಪರಿಶ್ರಮ ಕಡಿಮೆಯಾಗಿ ಯಂತ್ರಗಳ ಬಳಕೆ ಹೆಚ್ಚಾದಂತೆ ರೈತರ ಆರ್ಥಿಕ ಬದುಕಿನ ಮೇಲೆ ಅನೇಕ ಪರಿಣಾಮಗಳಾಗತೊಡಗಿದವು. ಮಾನವ ಶ್ರಮ ಇಲ್ಲವಾಗುತ್ತಾ ಜಾಗತೀಕರಣದ ವಿರಾಟ್ ಸ್ವರೂಪವಾದ ಯಂತ್ರ

ನಾಗರೀಕತೆಯ ಅಟ್ಟಹಾಸ ವಿಪರೀತವಾಗತೊಡಗಿತು. ಭೂಮಿಯ ಸಂಬಂಧ ಮತ್ತು ರೈತರ ಬದುಕಿನಲ್ಲಿ ಕಾಣಿಸಿಕೊಂಡ ಅನೇಕ ಸಮಸ್ಯೆಗಳನ್ನಿಟ್ಟುಕೊಂಡು ರೈತರು ಹೋರಾಟಕ್ಕೆ ನಿಂತಿದ್ದಾರೆ.

ನಮ್ಮದು ಹಳ್ಳಿಗಳ ದೇಶ. ಈ ಹಳ್ಳಿಗಳಲ್ಲಿಯ ಶೇ. ೬೮% ಕ್ಕಿಂತ ಅಧಿಕ ರೈತರು ವ್ಯವಸಾಯದಿಂದಲೇ ಬದುಕನ್ನು ಹೆಣೆದುಕೊಳ್ಳುತ್ತಿದ್ದಾರೆ. ಭಾರತದ ಮತ್ತು ನಾಡಿನ ಪ್ರಜಾಪ್ರಭುತ್ವ ಸರಕಾರಗಳು ಗ್ರಾಮೀಣ ರೈತಾಪಿ ಜನರ ಪ್ರಗತಿಗಾಗಿ ಮಹತ್ವವನ್ನು ಹೆಚ್ಚಾಗಿನೀಡುತ್ತಿಲ್ಲವೆಂದು ರೈತಪರ ಸಂಘಟನೆಗಳು ಹೋರಾಟಕ್ಕೆ ಕರೆನೀಡಿದಂತಹ ಘಟನೆಗಳು ಕರ್ನಾಟಕದ ಸಂದರ್ಭದಲ್ಲಿ ಜರುಗಿಹೋಗಿವೆ.

ವಸಾಹತುಶಾಹಿಯ ವಿರುದ್ಧ ಹೋರಾಡಿದ ಇತಿಹಾಸದ ನೆನಪುಗಳು ಇನ್ನೂ ಮಾಸದಿರುವ ಸಂದರ್ಭದಲ್ಲಿ ನಮ್ಮ ನೆಲದಲ್ಲಿ ರೈತ ಚಳುವಳಿಗಳು, ರೈತರ ಸಮಸ್ಯೆಗೆ ಪರಿಹಾರವಾಗಿ ಕಾಣಿಸಿಕೊಂಡವು. ರೈತರ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬದುಕು ಅಭಿವೃದ್ಧಿಗೊಳಿಸುವ ಹಿನ್ನಲೆಯೊಂದಿಗೆ ಈ ರೈತ ಚಳುವಳಿಗಳು ನಾಡಿನಲ್ಲಿ ಹೊಸ ಸಂಚಲನವನ್ನು ಉಂಟುಮಾಡಿದವು. ದೇಶ, ಭಾಷೆ ಧರ್ಮ ಇತ್ಯಾದಿ ವಿಚಾರಗಳಿಂದ, ದ್ವೇಷ ಸಾಧನೆಯಿಂದ ಬಿಡುಗಡೆಯಾಗಿ ರೈತ ಚಳುವಳಿಗಳು ವರ್ಗಹಿತಾಸಕ್ತಿಯ ಹೋರಾಟವನ್ನು ಕಟ್ಟಿಕೊಂಡವು. ಇಲ್ಲಿ ವರ್ಗ ಹಿತಾಸಕ್ತಿಯೆಂದರೆ ರೈತವರ್ಗದ ಹಿತಾಸಕ್ತಿಯೇ ಆಗಿತ್ತು.

'ಯಾರು ತನ್ನ ಭೂಮಿಯನ್ನು ಸ್ವತಃ ತಾನೇ ಉಳುತ್ತಾನೆಯೋ ಅವನೇ ರೈತನಾಗಿರುತ್ತಾನೆ.' ಅಲ್ಲದೆ ಯಾರು ಕೃಷಿಯೊಂದಿಗೆ ಸಂಬಂಧವಿಟ್ಟುಕೊಂಡಿರುತ್ತಾರೋ ಕೃಷಿಯೊಂದಿಗೆ ಬದುಕುತ್ತಾರೋ ಅವರೇ ರೈತರೆಂಬ ನಿಲುವಿನೊಂದಿಗೆ ರೈತ ಸಂಘಟನೆಯು ಹೊಸ ಚೈತನ್ಯ ಶಕ್ತಿಯೊಂದಿಗೆ ಚಲಿಸತೊಡಗಿತು.

ಕಿಸಾನ್ ಸಭಾ ಮತ್ತು ಪ್ರಾಂತ ರೈತ ಸಂಘಗಳು ಎಡ ಪಂಥೀಯ ವಿಚಾರಧಾರೆಯೊಂದಿಗೆ ರೈತ ಸಮುದಾಯವನ್ನು ಸಂಘಟಿಸಿದವು. ೧೯೭೦ರ ವರೆಗೂ ಈ ಸಂಘಟನೆ ಪ್ರಬಲವಾದ ರೈತ ಹೋರಾಟಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಪ್ರಾಂತ ರೈತ ಸಂಘವು ೧೯೯೮ ರಲ್ಲಿ ನಡೆಸಿದ ಬಾಗೂರು ನವಿಲೆ ಹೋರಾಟ ನಾಡಿನಲ್ಲಿ ಹೊಸ ಸಂಚಲನವನ್ನು ಉಂಟುಮಾಡಿತು. ಹಾಗೇ ಮಲಪ್ರಭಾ ನದಿ ಪ್ರದೇಶದ ರೈತರು ಭೂ ಸಂಬಂಧಿ ಸಮಸ್ಯೆಗಳನ್ನಿಟ್ಟುಕೊಂಡು ಮಾಡಿದ ಹೋರಾಟವು ರೈತ ಚಳುವಳಿಯ ಮುಖ್ಯತಿರುವಾಗಿದೆ. ಭಾರತದ ಸಂದರ್ಭದಲ್ಲಿ ಭೂಸಂಬಂಧಿ, ರೈತರ ಸಮಸ್ಯೆಯನ್ನಿಟ್ಟುಕೊಂಡು ೧೨೦ ಕ್ಕೂ ಹೆಚ್ಚು ಹೋರಾಟಗಳು ನಡೆದಿರುವುದು ಕಂಡುಬರುತ್ತದೆ. ಕರ್ನಾಟಕದ ಸಂದರ್ಭದಲ್ಲಿ ಹೇಳುವುದಾದರೆ ಭೂ ಸಂಬಂಧಗಳು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರೂಪದಲ್ಲಿದ್ದವು. ಜೋಡಿ ಇನಾಂ, ಜಮ್ಮಾ ಜಹಗೀರುವಾರು ಗುತ್ತಿಗೆ, ಒಳಕಂದಾಯ, ಗೇಣಿಪದ್ಧತಿ ಮುಂತಾದ ಭೂ ಸಂಬಂಧಗಳೂ ಇದ್ದವು. ಅಂದು ಪಾಳೇಗಾರಿಕೆಯ ಅಂಶಗಳಾಗಿ ಬಿಟ್ಟದುಡಿಮೆ, ಜೀತ ಪದ್ಧತಿ, ಬಡ್ಡಿ ವ್ಯವಹಾರ, ಜಾತಿ ಪದ್ಧತಿಯ ಸಾಮಾಜಿಕ ಅಂತಸ್ತುಗಳು ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಅನಿಷ್ಟಗಳೇ ತುಂಬಿದ್ದವು. ನಿಜಾಮಶಾಹಿಯ ಕೈಯಲ್ಲಿದ್ದ ಕರ್ನಾಟಕದ ಭಾಗಗಳಲ್ಲಿ ವ್ಯಾಪಕವಾದ ಗೇಣಿ ಪದ್ಧತಿ ಬೆಳೆದಿತ್ತು. ಬೆಳೆಯ ಬಹುಭಾಗವನ್ನು ಭೂಮಾಲಿಕರಿಗೆ ಕೊಡಬೇಕಾಗಿತ್ತು. ಅಂದು ಉಳಿಗಮಾನ್ಯ ಶಕ್ತಿಗಳು ಪ್ರಬಲ ಶಕ್ತಿಗಳಾಗಿ ಬೆಳೆದಿದ್ದವು. ಇವರು ಮಧ್ಯಮ ಮತ್ತು ಬಡ ರೈತರನ್ನು ಶೋಷಣೆ ಮಾಡುತ್ತಿದ್ದರು. ರೈತ ಕೂಲಿಕಾರರೂ ಕೂಡ ರೈತರ ಸಮಸ್ಯೆಯ ಪರ ಚಳುವಳಿಗಳನ್ನು ನಡೆಸತೊಡಗಿದರು.

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕಿಸಾನ್‌ಸಭಾ ಭೂಮಾಲಿಕರ ಬಂಡವಾಳಶಾಹಿ ಪದ್ಧತಿಯನ್ನು ನಾಶ ಮಾಡಲು ಸ್ವಾತಂತ್ರ್ಯ ಹೋರಾಟದೊಡನೆ ರೈತ ಹೋರಾಟವನ್ನು ರೂಪಿಸಿತು. ಜೊತೆಗೆ ಭಾರತದ ರೈತಾಪಿ ವರ್ಗವನ್ನು ಒಂದು ಗೂಡಿಸಲು ಸಿದ್ಧಾಂತ, ಸಂಘಟನೆ, ಹೋರಾಟವೆಂಬ ಮಾದರಿ ಅಂಶಗಳನ್ನಿಟ್ಟುಕೊಂಡು ಚಳುವಳಿ ರೂಪಿಸಿತು. ಶೋಷಣಾ ರಹಿತ ಸಮಾಜದ ಮಾದರಿಯನ್ನಿಟ್ಟುಕೊಂಡು ಸಮಕಾಲೀನ ಗ್ರಾಮೀಣ ರೈತ ಸಮಸ್ಯೆಗಳಿಗೆ ಹೋರಾಟದ ಮೂಲಕ ಪರಿಹಾರವನ್ನು ಕಾಣಿಸುವ ಉದ್ದೇಶವನ್ನು ಈ ಸಂಘಟನೆಯಿಟ್ಟುಕೊಂಡಿತ್ತು.

‘‘ಇದೇ ದಶಕದಲ್ಲಿ ಜಾಗತಿಕ ಅರ್ಥಿಕ ಬಿಕ್ಕಟ್ಟು ಉಂಟಾಯಿತು. ಬ್ರಿಟೀಷರು ಭಾರತೀಯ ಗೃಹ ಕೈಗಾರಿಕೆಗಳನ್ನು ನಾಶಮಾಡಿದರು. ಎಲ್ಲೆಲ್ಲೂ ನಿರುದ್ಯೋಗ ಹೆಚ್ಚಿ ರೈತಾಪಿ ಸಮುದಾಯ ಕಷ್ಟಕ್ಕೀಡಾಯಿತು. ಕೃಷಿಯೇ ಮುಖ್ಯ ಉತ್ಪಾದನೆಯಾದರೂ ಆಹಾರದ ಕೊರತೆ ಉಂಟಾಗಿ ಧಾನ್ಯಗಳ ಬೆಲೆ ಕುಸಿಯಿತು. ಅದೇ ಸಮಯದಲ್ಲಿ ತೆರಿಗೆ ಹೆಚ್ಚಳ, ಸಾಲದ ಬಾಧೆ, ಅತೀವ ಬಡ್ಡಿ, ಲೇವಾದೇವಿಯವರ ಕಾಟ, ಸರಕಾರ ಇದರ ಪರವಾಗಿದ್ದರಿಂದ ಕಾನೂನು ಕ್ರಮಗಳಿಂದ ಉಂಟಾದ ಸಂಕಷ್ಟಗಳು ಹೇಳತೀರದಾದವು. ಇದರಿಂದ ರೈತ ಹೋರಾಟಗಳ ಅಲೆಗಳೇ ಉಂಟಾಗಿ ಕಿಸಾನ್ ಸಭಾ ವ್ಯಾಪಕವಾಗಿ ಬೆಳೆಯಲು ಸಾಧ್ಯವಾಯಿತು.’’ [೧೨] ಎಂದು ಸಿ.ವೀರಭದ್ರಯ್ಯನವರು ಕರ್ನಾಟಕ ಪ್ರಾಂತ ರೈತ ಸಂಘದ ಚರಿತ್ರೆಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ರೈತರ ಸಮಸ್ಯೆಗಳನ್ನಿಟ್ಟುಕೊಂಡು ‘ಕಿಸಾನ್ ಸಭಾ ’ ಹೋರಾಟ ರೂಪಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಆಂಧ್ರದ ತೆಲಂಗಾ ಹೋರಾಟವೂ ಕೂಡ ಭೂಹಂಚಿಕೆಗೆ ಸಂಬಂಧಿಸಿದಂತೆ ಜಮೀನ್ದಾರಿ ಪದ್ಧತಿಯನ್ನು ನೇರವಾಗಿ ಎದುರಿಸಿ ಹೋರಾಟ ಮಾಡಿತು. ಕಿಸಾನ್ ಸಭಾದ ನೇತೃತ್ವದಲ್ಲಿಯೇ ಈ ಹೋರಾಟವು ಭೂ ಸುಧಾರಣೆ ಕಾಯಿದೆಗಳನ್ನು ಅನುಷ್ಠಾನಕ್ಕೆ ತರಲು, ಮತ್ತು ಬಂಡವಾಳಶಾಹಿ ಕೈಯಲ್ಲಿದ್ದ ಭೂಮಿಯನ್ನು ಬಡಜನತೆಗೆ ಹಂಚಲು ಪಟ್ಟುಹಿಡಿಯಿತು.

ಮಲೆನಾಡು ಪ್ರಾಂತದಲ್ಲಿ ಸೋಷಿಯಲಿಷ್ಟರು ಪ್ರಾರಂಭಿಸಿದ ಭೂಮಿ ಅಂದೋಲನ ರೈತ ಚಳುವಳಿಯ ಪ್ರಮುಖ ತಿರುವಿನ ಘಟ್ಟವೆನ್ನಲಾಗಿದೆ. ಈ ಮಲೆನಾಡು ಪ್ರಾಂತದಲ್ಲಿ ಕಾಗೋಡು ಸತ್ಯಾಗ್ರಹ ದ ನೆನಪುಗಳು ಹಸಿರಾಗಿರುವಾಗಲೇ. ಸಮಾಜವಾದಿ ಪಕ್ಷವು ಭೂಹೋರಾಟವನ್ನು ಪ್ರಾಂಭಿಸಿ ರೈತರ ಪ್ರಾತಿನಿಧಿಕ ಭೂ ಸಮಸ್ಯೆಯನ್ನು ಹಕ್ಕೊತ್ತಾಯದ ರೀತಿಯಲ್ಲಿ ಕೇಳತೊಡಗಿತು. ಅಂದು ಸರಕಾರದ ನಿಯಂತ್ರಣದಲ್ಲಿದ್ದ ಸಾಗುವಳಿಗೆ ಒಳಪಡದ ಭೂಮಿಯನ್ನು ಸಾಗುವಳಿ ಮಾಡಲು ಸರಕಾರ ಅನುಮತಿ ನೀಡದಿದ್ದರಿಂದ ಅನೇಕ ರೈತ ಕೂಲಿ ಕಾರ್ಮಿಕರಿಗೆ ತೊಂದರೆಯಾಗಿತ್ತು. ಅಂತಹ ಸಂದರ್ಭದಲ್ಲಿ ಸಮಾಜವಾದಿ ಪಕ್ಷವು ಸಮಾಜದಲ್ಲಿರುವ ಭೂಹೀನ ರೈತರಿಗೆ, ಸಮಾಜದಲ್ಲಿ ತುಳಿತಕ್ಕೊಳಗಾದವರಿಗೆ ಹರಿಜನ ಗಿರಿಜನ ಮುಂತಾದವರಿಗೆ ಭೂಮಿ ದೊರಕಿಸಿಕೊಡಬೇಕೆಂದು ಉಗ್ರಹೋರಾಟಗಳನ್ನು ಮಾಡಿತು. ಈ ಪಕ್ಷದ ತೀವ್ರ ಹೋರಾಟದ ಧ್ವನಿಗೆ ಸರಕಾರ ಮೊದಮೊದಲು ಜಗ್ಗದೇ ಚಳುವಳಿಗಾರರನ್ನು ಬಂಧಿಸಿತು. ಸಮಾಜವಾದಿ ಪಕ್ಷದ ಪ್ರಭಾವವು ಹೆಚ್ಚಾಗಿದ್ದ ಶಿಕಾರಿಪುರ, ಸೊರಬ, ಸಾಗರ, ಶಿವಮೊಗ್ಗ ತಾಲೂಕುಗಳ ಹೆಚ್ಚು ಭಾಗ ಅರಣ್ಯದಿಂದ ಕೂಡಿದ್ದು, ವ್ಯವಸಾಯಕ್ಕೊಳಪಟ್ಟ ಭೂಮಿ ತೀರ ಕಡಿಮೆಯಾಯಿತು. ಈ ಭಾಗದಲ್ಲಿದ್ದ ಹತ್ತು ಸಾವಿರ ಎಕರೆ ಭೂಮಿಯನ್ನು ಚಳುವಳಿಗಾರರು ಆಕ್ರಮಿಸಿಕೊಂಡಾಗ ಸರಕಾರ ಅವರನ್ನು ಬಂದಿಸಿತು. ನಂತರ ಅವರ ತೀವ್ರ ಹೋರಾಟದ ಫಲವಾಗಿ ನಾಲ್ಕು ಸಾವಿರದ ಏಳುನೂರ ಎಕರೆ ಭೂಮಿಯನ್ನು ಶಿಕಾರಿಪುರ ತಾಲೂಕೊಂದರಲ್ಲೆ ಹಂಚಲಾಯಿತು.’’ [೧೮] ನಂತರದ ದಿನಗಳಲ್ಲಿ ಸಮಾಜವಾದಿ ಪಕ್ಷದ

ಪ್ರಭಾವವೂ ಕೂಡ ಕಡಿಮೆಯಾಗುತ್ತಾ ಸಾಗಿತು. ಇದಕ್ಕೆ ಚಳುವಳಿಯನ್ನು ಕಟ್ಟುವಾಗ ಉಂಟಾದ ಭಿನ್ನಾಭಿಪ್ರಾಯಗಳೂ ಕಾರಣವಾಗಿದ್ದವೆಂದು ತಾತ್ವಿಕ ಚರಿತ್ರೆಗಳು ಹೇಳುತ್ತಿವೆ.

ಕಡುಬಡವರ, ರೈತರ ಸಮಸ್ಯೆಗಳಿಗೆ ಸ್ಪಂದಿಸಿದ ಸ್ವತಂತ್ರ ಭಾರತ ಕಂಡ ಧೀಮಂತ ಜನಪರ ಮುಖ್ಯಮಂತ್ರಿಯೆಂದರೆ ದೇವರಾಜಅರಸ್. ಮೊದಲ ಬಾರಿಗೆ ಈ ರಾಜ್ಯದ ಪ್ರಬಲ ಜಾತಿಗಳ ರಾಜಕೀಯ ಪ್ರಭುತ್ವದ ಏಕಸ್ವಾಮ್ಯವನ್ನು ಒಡೆದು, ಒಬ್ಬ ಅಲ್ಪ ಸಂಖ್ಯಾತ ವರ್ಗದಿಂದ ಮುಖ್ಯಮಂತ್ರಿಯಾದವರು. ಇವರು ಅತ್ಯಂತ ಪರಿಣಾಮಕಾರಿಯಾಗಿ ಚಿಂತನೆ ಮಾಡಿ ಭೂ ಸುಧಾರಣೆಯನ್ನು, ಜಾರಿಗೆ ತಂದವರು. ಈ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲೆ ಎರಡು ಮೂರು ಲಕ್ಷ ಗೇಣಿದಾರರು ನಿಜವಾದ ಭೂಮಿಯ ಒಡೆಯರಾದರು. ಇದು ಭಾರತದ ಇತಿಹಾಸದಲ್ಲೆ ಮೊದಲ ಬಾರಿಗೆ ಸಂಭವಿಸಿದ ಅತ್ಯಂತ ಮಹತ್ವಪೂರ್ಣವಾದ ರಾಜಕೀಯ ಘಟನೆಯೆನ್ನಬಹುದು. ಅಂದಿನ ಪ್ರಧಾನಮಂತ್ರಿಗಳಾಗಿದ್ದ ಶ್ರೀಮತಿ ಇಂದಿರಾಗಾಂಧಿ ದುರ್ಬಲ ವರ್ಗಗಳ ಏಳಿಗೆಗೆ ಹಾಕಿಕೊಂಡ ''ಗರೀಬಿ ಹಠಾವೋ'' 'ಇಪ್ಪತ್ತು ಅಂಶಗಳ ಕಾರ್ಯಕ್ರಮ' 'ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ' 'ಹಿಂದುಳಿದವರಿಗೆ ಐದು ಸೆಂಟ್ಸ್ ಭೂಮಿ ಮತ್ತು ಉಚಿತ ವಸತಿ ಸೌಲಭ್ಯ' 'ಆದ್ಯತಾ ರಂಗಕ್ಕೆ ಬ್ಯಾಂಕುಗಳಲ್ಲಿ ಕಡಿಮೆ ಬಡ್ಡಿಸಾಲ' ಮುಂತಾದ ಯೋಜನೆಗಳು ಬಡ ರೈತ ಸಮುದಾಯಕ್ಕೆ ನೀಡಿದ ಮಹತ್ವದ ಕೊಡುಗೆಗಳಾದವು. ಆ ಯೋಜನೆ ಸಂಕಷ್ಟದಲ್ಲಿದ್ದ ರೈತರ ಬದುಕಿಗೆ ಹೊಸ ಉಸಿರಾಟವನ್ನು ನೀಡಿದಂತಾಯಿತು. ಈ ಎಲ್ಲಾ ಯೋಜನೆಗಳು ಕರ್ನಾಟಕದ ಸಂದರ್ಭದಲ್ಲಿ ಅನುಷ್ಠಾನಕ್ಕೆ ಬರಲು ದೇವರಾಜ ಅರಸರೇ ಕಾರಣವಾದರು. ಅರಸರ ಧೈರ್ಯ, ದೂರದರ್ಶಿತ್ವ, ಗುಣಗಳಿಂದಾಗಿ ಬಡ ರೈತಾಪಿ ವರ್ಗ ಹೊಸ ಬದುಕು ಕಂಡು ಕೊಂಡರು. ಈ ಸಂದರ್ಭದಿಂದಾಗಿ ಮೊಟ್ಟಮೊದಲ ಬಾರಿಗೆ ರಾಜ್ಯದಲ್ಲಿ ಸ್ವರವೇಯಿಲ್ಲದ ರೈತರು, ಹಿಂದುಳಿದವರು, ದಲಿತರು ಮತ್ತು ಮಹಿಳೆಯರು ತಮ್ಮ ಮೇಲೆ ಸತತವಾಗಿ ನಡೆಯುತ್ತಿರುವ ದಬ್ಬಾಳಿಕೆಯನ್ನು ವಿರೋಧಿಸುವ ಧ್ವನಿ ಶಕ್ತಿಯನ್ನು ಪಡೆದುಕೊಂಡರು.

ನಂತರದ ದಿನಗಳಲ್ಲಿ ಕರ್ನಾಟಕ ರಾಜ್ಯ ರೈತ ಸಂಘವೂ ರೈತರ ಬದುಕಿನ ವಿವಿಧ ನೋವುಗಳಿಗೆ ಸ್ಪಂದಿಸತೊಡಗಿತು. ರೈತರ ಮತ್ತು ಭೂಸಂಬಂಧ ಕುರಿತಾದ ಸಮಸ್ಯಾತ್ಮಕ ಪ್ರಶ್ನೆಗಳಿಗೆ ರೈತಪರ ಹೋರಾಟವನ್ನು ಮಾಡಿತು. ರೈತರ ಬದುಕಿನ ಆರ್ಥಿಕ ರಾಜಕೀಯ ನೀತಿಗಳು ರೈತರ ದೈನಂದಿನ ಬದುಕನ್ನು ನಿರ್ಧರಿಸುವಂತಾಯಿತು. ಈ ಕಾರಣಗಳಿಂದಲೇ ರೈತ ಸಂಘವು ರೈತರ ಸರ್ವತೋಮುಖ ಅಭಿವೃದ್ಧಿಗಾಗಿ ವಿವಿಧ ಬಗೆಯ ಚಳುವಳಿಗಳನ್ನು ಆರಂಭಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಕರ್ನಾಟಕದ ರೈತ ಹೋರಾಟಗಳು ಕುರಿತ ವಿಶ್ಲೇಷಣೆ ಮಾಡುವ ಸಂದರ್ಭದಲ್ಲಿ ಅನೇಕ ಸಮಸ್ಯೆಗಳ ಮೇಲೆ ಚಳುವಳಿಗಳು ರೂಪಿತವಾಗಿದ್ದನ್ನು ಕಾಣುತ್ತೇವೆ. ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಂದರ್ಭದಲ್ಲಿ ನಡೆದಂತಹ ಚಳುವಳಿಗಳು ಮುಖ್ಯವಾಗಿ ಭೂಕಂದಾಯ ತೆರಿಗೆಗಳನ್ನು ತಡೆದಿಟ್ಟುಕೊಳ್ಳುವುದು. ಮಾರುಕಟ್ಟೆಗೆ ಕನಿಷ್ಟ ಎರೆಡು ತಿಂಗಳ ಮಟ್ಟಿಗಾದರೂ ತಮ್ಮ ಉತ್ಪಾದನೆಯನ್ನು ಕಳಿಸದೆ ಇಟ್ಟುಕೊಂಡು ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಪಟ್ಟುಹಿಡಿಯುವುದು, ಮತ್ತು ಗ್ರಾಮ ಸ್ವರಾಜ್ಯದ ಪರವಾಗಿ ನಡೆದ ಚಳುವಳಿಗಳು ಪ್ರಮುಖವಾಗಿ ಗ್ರಾಮೀಣ ಭಾಗದಲ್ಲಿ ಸ್ಥಾಪಿತವಾದಂತಹ ಟೆಕ್ಸ್‌ಟೈಲ್ಸ್ ಸಕ್ಕರೆ, ಎಣ್ಣೆ, ಗಂಧ ಮತ್ತು ಸೋಪು ಉದ್ದಿಮೆಗಳನ್ನು ಬಹಿಷ್ಕರಿಸುವುದರ ಮೂಲಕ, ಗ್ರಾಮಗಳಲ್ಲಿ ರೈತರು ಸ್ವಂತ ಶಕ್ತಿಯ ಮೂಲಕ ಹಾಗೂ ತನ್ನ ಉಪಯೋಗಕ್ಕಾಗಿ

ಪರಿಸರದ ಉತ್ಪನ್ನಗಳನ್ನು ಬಳಸಿಕೊಳ್ಳುವುದಾಗಿದೆ. ಜೊತೆಗೆ ಮದ್ಯಪಾನ ನಿಷೇಧ, ಮತ್ತು ಪ್ರಾಕೃತಿಕ ಸಂಪನ್ಮೂಲಗಳನ್ನು ಆಯಾ ಗ್ರಾಮದಲ್ಲಿ ಮೀಸಲಿಡುವ ನಿಟ್ಟಿನಲ್ಲಿ ರೈತ ಹೋರಾಟವೂ ಕೂಡ ನಾಡಿನ ಎಲ್ಲಾ ಜಿಲ್ಲೆಯನ್ನು ವ್ಯಾಪಿಸಿಕೊಂಡಿತು.

ರೈತರಿಗೆ ಒದಗಿದ ಮತ್ತೊಂದು ಆಪತ್ತನ್ನು ಇಲ್ಲಿ ದಾಖಲಿಸಬೇಕಿದೆ. ಮಹಾರಾಷ್ಟ್ರದಲ್ಲಿ ರೈತ ಸಂಘಟನೆಯು ಉದಾರವಾದಕ್ಕೆ ಬೆಂಬಲಿಸಿದರೆ ಉತ್ತರ ಪ್ರದೇಶ ಮತ್ತು ನಮ್ಮ ರಾಜ್ಯದ ರೈತರು ಉದಾರವಾದಕ್ಕೆ ಮಾತ್ರವಲ್ಲ 'ಡೆಂಕಲ್ ಪ್ರಸ್ತಾವನೆ' ಹಾಗೂ 'ಗ್ಯಾಟ್ ಒಪ್ಪಂದ'ಗಳನ್ನೂ ವಿರೋಧಿಸುವುದರ ಜೊತೆಗೆ ಇದರಿಂದಾಗಿ ನವ ವಸಾಹತುಶಾಹಿ ಬೆಳೆಯುತ್ತದೆ. ಗ್ರಾಮೀಣ ರೈತಾಪಿ ವರ್ಗ ಬಿಕಾರಿಗಳಾಗುತ್ತಾರೆಯೆಂದು ಪ್ರತಿ ವಾದಿಸಿತು. ಡಂಕಲ್ ಪ್ರಸ್ತಾವನೆ' ಮುಖ್ಯ ಸಮಸ್ಯೆಯಾಗಿ ಉದ್ಭವವಾಗಿದ್ದು ಸರಕಾರವು ರೈತರಿಗೆ ನೀಡುತ್ತಿದ್ದ ಗೊಬ್ಬರದ ಮೇಲಿನ ಸಬ್ಸಿಡಿಯನ್ನು ನಿಲ್ಲಿಸಿತು. ಇದಕ್ಕಾಗಿ ರೈತ ಸಂಘವು ಪ್ರಬಲವಾದ ಪ್ರತಿಭಟನೆ ಮಾಡಿತು. ಜೊತೆಗೆ ಬಹು ರಾಷ್ಟ್ರೀಯ ಕಂಪನಿಗಳ ವಿರುದ್ಧವೂ ತನ್ನ ಹೋರಾಟವನ್ನು ರೂಪಿಸಿತು.

ಹೀಗೆ ಭಾರತ ಮತ್ತು ಕರ್ನಾಟಕದ ಸಂದರ್ಭದಲ್ಲಿ ಭೂ ಹೋರಾಟ ಮತ್ತು ರೈತರ ಬದುಕಿನ ದಮನಿತ ಸಮಸ್ಯೆಗಳ ಪರಿಹಾರಕ್ಕಾಗಿ ನಡೆದ ಹೋರಾಟಗಳು ಇಪ್ಪತ್ತನೆಯ ಶತಮಾನದ ರೈತರ ಸಾಂಸ್ಕೃತಿಕ ಬದುಕಿನಲ್ಲಿ ಘಟಿಸಿದ ಅನೇಕ ಘಟನೆಗಳ ಹಿನ್ನಲೆಯಲ್ಲಿ ಸಾಗಿದ ಭೂಮಿ ಮತ್ತು ರೈತ ಸಂಬಂಧಿ ನೆಲೆಯಲ್ಲಿ ಚರ್ಚಿಸಲಾಗಿದೆ. ಈ ಚರ್ಚೆ ಪ್ರಮುಖ ವಿದ್ಯಮಾನವಾಗಿ ಪರಿಗಣಿಸಲಾಗಿದೆ.

### ೩.೨.೪. ದಲಿತ ಬಂಡಾಯದ ಸಾಂಸ್ಕೃತಿಕ ನೆಲೆ

ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಹುಟ್ಟಿಕೊಂಡ ದಲಿತ ಬಂಡಾಯ ಸಾಹಿತ್ಯ ಪಂಥಗಳು ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ವಿದ್ಯಮಾನಗಳಾಗಿ ಸಂಸ್ಕೃತಿ ಚಿಂತನೆಯ ಮೇಲೆ ಗಾಢವಾದಂತ ಪರಿಣಾಮವನ್ನುಂಟು ಮಾಡಿದವು. ಈ ದಲಿತ ಬಂಡಾಯ ಸಾಹಿತ್ಯ ಪಂಥಗಳು ನಾಡಿನ ದೀನ ದಲಿತರ ಸಾಂಸ್ಕೃತಿಕ ಬದುಕಿನ ಮೇಲೆ ಹೊಸ ಆಶಾಕಿರಣವನ್ನು ಮೂಡಿಸಿದವು. ಸ್ವಾತಂತ್ರ್ಯ ಬಂದು ಎಷ್ಟೋ ದಶಕಗಳು ಕಳೆದುಹೋದರೂ ನಮ್ಮ ನೆಲದಲ್ಲಿ ಜಾತಿ ಪ್ರಜ್ಞೆ ಆಳವಾಗಿ ಬೇರೂರಿರುವುದು ಕಂಡು ಪ್ರಜ್ಞಾವಂತ ದಲಿತರು, ದಲಿತರ ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ಎತ್ತಿ ಹಿಡಿಯುವ ಸಾಹಿತ್ಯವನ್ನು ರಚಿಸತೊಡಗಿದರು. ೧೯೭೫ರಲ್ಲಿ 'ದಲಿತ ಬರಹಗಾರರ ಯುವ ಸಂಘಟನೆ'ಯನ್ನು ಹುಟ್ಟುಹಾಕಿದ್ದಲ್ಲದೇ ೧೯೭೬ರಲ್ಲಿ ಭದ್ರಾವತಿಯಲ್ಲಿ ಈ ಸಂಘಟನೆಯು ಸಮ್ಮೇಳನವೊಂದನ್ನು ಮಾಡಿದ ಸಂದರ್ಭದಲ್ಲಿ ಪ್ರಜ್ಞಾವಂತ ದಲಿತ ಬರಹಗಾರರ ಸಂಖ್ಯೆ ಕೈ ಬೆರಳಿನಷ್ಟಿತ್ತು. ಅಲ್ಲದೇ ಈ ದಲಿತಎಂಬ ಪದವೂ ಕೂಡ ಈ ಸಾಂಸ್ಕೃತಿಕ ಸಂದರ್ಭದಲ್ಲಿ ಹೆಚ್ಚಾಗಿ ಬಳಕೆಯಲ್ಲಿ ಬಂತು. ಈ ದಲಿತ ಪಂಥಕ್ಕೆ ಪ್ರೇರಣೆ ಹಿನ್ನಲೆ ಮಹಾರಾಷ್ಟ್ರದ ದಲಿತ ಚಳುವಳಿಯೇ ಆಗಿತ್ತು. ಈ ಸಾಂಸ್ಕೃತಿಕ ಅನಿವಾರ್ಯತೆಯ ಕಾಲಘಟ್ಟದಲ್ಲಿ ಬಿ. ಕೃಷ್ಣಪ್ಪನವರ ನೇತೃತ್ವದಲ್ಲಿ ದಲಿತ ಸಂಘರ್ಷ ಸಮಿತಿ ರೂಪುಗೊಂಡಿತು. ಈ ಸಂಘಟನೆಯು ಹೊಸ ಎಚ್ಚರಿಕೆಯ ಸಂಘಟನೆಯಾಗಿ ಬೆಳೆದುಬಂತು. ಈ ಹಿಂದೆ ೧೯೭೪ರಲ್ಲಿ ನಡೆದ ಬಿ. ಬಸವಲಿಂಗಪ್ಪನರ 'ಭೂಸಾಪ್ರಕರಣ' ದಲಿತ ಚಳುವಳಿಗೆ ತೀವ್ರ ಚಾಲನೆಯನ್ನು ನೀಡಿತು. ಇದಕ್ಕೂ ಹಿಂದೆ ೧೯೭೩ರ ಕೊನೆಯಲ್ಲಿ ಶೂದ್ರ ಚಳುವಳಿಯ ಭಾಗವಾಗಿ 'ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ'ವು ರೂಪುಗೊಂಡಿತು. ಈ ಒಕ್ಕೂಟವು ಬಿರುಸಿನ ಚಟುವಟಿಕೆಗಳನ್ನು ಆರಂಭಿಸಿದ್ದರಿಂದ ದಲಿತ ಚಿಂತನೆಯ ನೆಲೆ ಒಂದೆಡೆ ಸೇರವಲ್ಲಿ ವಿಳಂಬವಾಯಿತು.

ಈ ಸಂದಿಗ್ಧ ಕಾಲಘಟ್ಟದಲ್ಲಿ ಹುಟ್ಟಿಕೊಂಡ ಅನೇಕ ದಲಿತ ಚಿಂತನಾಧಾರೆಯೊಂದಿಗೆ ಹುಟ್ಟಿಕೊಂಡ ಚಳುವಳಿಗಳು ದಲಿತರ ಬದುಕಿನ ನೆಲೆಯನ್ನು ಕುರಿತು ಹೊಸ ಸಂಸ್ಕೃತಿಯ ಪ್ರಶ್ನೆಗಳನ್ನು ಎತ್ತತೊಡಗಿದವು. ಧಾರವಾಡದಲ್ಲಿಯ 'ದಲಿತ ಪಂಥ' ಶಿವಮೊಗ್ಗೆಯ 'ದಲಿತ ಸಂಘರ್ಷ ಸಮಿತಿ'ಗಳು ರೂಪಗೊಂಡರೆ, ಮೈಸೂರು ಬೆಂಗಳೂರು ಭಾಗದಲ್ಲಿ ''ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ''ವೂ ಸಾಂಸ್ಕೃತಿಕ ಬದುಕಿನ ಮೇಲೆ ಹೊಸ ಚಿಂತನೆಯ ಪ್ರಭಾವವನ್ನು ಉಂಟು ಮಾಡಿತು. ಇದಕ್ಕೆ ಸಮಾಜೊ ಸಾಂಸ್ಕೃತಿಕ ಮುಖವು ಒಡೆದು ಕಾಣುತಿತ್ತು. ಈ ಒಕ್ಕೂಟವೂ ಮುಂದೆ. ೧೯೭೩ರಲ್ಲಿ 'ಲೋಹಿಯಾಮಂಚ' ವೇದಿಕೆಯಿಂದ ಜಾತಿ ವಿನಾಶ ಸಮ್ಮೇಳನವನ್ನು ನಡೆಸಿದ್ದು ಕೂಡ ಉಲ್ಲೇಖನೀಯ. ಇದು ಶೂದ್ರ ಲೇಖಕರಿಂದ ಕೂಡಿದ ಮೊದಲ ಬ್ರಾಹ್ಮಣೇತರ ಚಳುವಳಿಯಾಗಿತ್ತು. ಈ ಎಲ್ಲಾ ಬೆಳವಣಿಗೆಯ ಹಿಂದೆ ಸಮಾಜೋ ರಾಜಕೀಯ ಮುಖವಿದ್ದರೆ, ಇನ್ನುಳಿದ ಭಾಗದಲ್ಲಿ ಸಮಾಜೋ ಸಾಂಸ್ಕೃತಿಕ ಮುಖವಿರುವುದು ಕಾಣುತ್ತದೆ.

ದಲಿತ ಚಳುವಳಿಗೆ ಸಂಬಂಧಿಸಿದಂತೆ ಸಂಸ್ಕೃತಿ ಚಿಂತಕ ಡಿ.ಆರ್. ನಾಗರಾಜರು ''ದಲಿತ ಚಳುವಳಿಯ ವಿಶೇಷ ಲಕ್ಷಣ, ಸಾಂಸ್ಕೃತಿಕ ಎಚ್ಚರ ಮತ್ತು ರಾಚನಿಕ ವಿಸ್ಮೃತಿಯ ರಾಜಕಾರಣಗಳ ನಡುವಣ ಪ್ರಧಾನ ವಿಭಜನೆಯಾಗಿದೆ. ಹಾಗೇ ನೋಡಿದರೆ ದಲಿತ ಚಳುವಳಿ ಸಾಂಸ್ಕತಿಕ ಆಕ್ರೋಶದ ಅಭಿವ್ಯಕ್ತಿಯಾಗಿದೆ ''[೧೯] ಎಂಬ ಮಾತು ದಲಿತ ಸಾಂಸ್ಕೃತಿಕ ಚಳುವಳಿಯ ಕುರಿತ ಹೊಸ ನೋಟವಾಗಿದೆ.

ದಲಿತರ ಬದುಕಿನ ವಿವರಗಳನ್ನೊಳಗೊಂಡ ದಲಿತ ಸಾಂಸ್ಕೃತಿಕ ಲೋಕದ ಸಾಹಿತ್ಯದ ನೆಲೆ ಒಂದು ರೀತಿಯ ತಾತ್ವಿಕ ಬೆಳವಣಿಗೆಯಾದರೆ, ಬಂಡಾಯ ಚಳುವಳಿಯ ನೆಲೆ ಮತ್ತೊಂದು ರೀತಿಯದು. ಈ ಬಂಡಾಯ ಸಾಹಿತ್ಯ ಚರಿತ್ರೆಯ ಅನಿವಾರ್ಯತೆಯಿಂದ ಹುಟ್ಟಿದ ಸೃಜನಶೀಲ ಪ್ರಕ್ರಿಯೆಯಾಗಿದೆ. ದಲಿತ ಸಾಹಿತ್ಯವು ದಲಿತರ ಸಾಮುದಾಯಿಕ ಬದುಕಿನ ಪ್ರತಿಫಲವಾಗಿ ಮೂಡಿಬಂದಿದೆ, ಈ ರೀತಿಯ ಜಾತಿ ಸಂಕುಚಿತ ನೆಲೆ ಸಲ್ಲದು ಎಂದು ದಲಿತರ ಬದುಕಿನ ಮೇಲೆ ನಡೆದ ಶೋಷಣೆ ದಬ್ಬಾಳಿಕೆ ಜಾತಿ ಸಂಕುಚಿತ ನೆಲೆಯಿಂದ ಬದುಕನ್ನು ನೋಡಲುಬಾರದೆಂದು ಈ ಎಲ್ಲಾ ವೈರುಧ್ಯಗಳಿಗೆ ರಾಜಕೀಯ ಇಚ್ಛಾಶಕ್ತಿಯ ದುರ್ಬಳಕೆಯೇ ಪ್ರಮುಖ ಕಾರಣವೆಂದು ಈ ಶಕ್ತಿಯ ವಿರುದ್ಧ ಬಂಡಾಯ ಪ್ರತಿಭಟನೆಯಿಂದಲೇ ಬದಲಾವಣೆ ಸಾಧ್ಯವೆಂದು ಬಂಡಾಯ ಚಳುವಳಿ ಆರಂಭವಾಯಿತು. ಮೂಲತಃ ಬಂಡಾಯ ಸಾಹಿತ್ಯ ಸಂಘಟನೆಯು ದಲಿತರು ಕಟ್ಟಿದ ಮನೆಯಾಗಿತ್ತು. ಈ ಮನೆಯಲ್ಲಿ ನಾವು ದಲಿತರಿಗೆ ಬೆನ್ನೆಲು ಬಾಗುತ್ತವೆಯೆಂದು ದಲಿತೇತರ ಬಂಡಾಯದ ಪ್ರತಿಗಪರ ಚಿಂತಕರೂ ಇಲ್ಲಿ ಪ್ರವೇಶ ಮಾಡಿದರು. ಈ ಬಂಡಾಯ ಸಂಘಟನೆ ಎಡಪಂಥೀಯವನ್ನಿಸುವ ವಿಚಾರಧಾರೆಯೊಂದಿಗೆ ದಲಿತ, ಶೋಷಿತರ ಪರವಾದ ಕಾಳಜಿಗಳನ್ನಿಟ್ಟುಕೊಂಡು ಬಂಡಾಯಚಳುವಳಿಯ ಸಾಂಸ್ಕೃತಿಕ ಹೋರಾಟ ಸಾಗಿ ಬಂತು. ''ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಕಂಡುಬರುತ್ತಿರುವ ಪ್ರಗತಿಪರ ದೋರಣೆಗಳು ತೆಗೆದುಕೊಂಡ ತಿರುವುಗಳು ಎದುರಿಸಿದ ಸಮಸ್ಯೆಗಳು ಮತ್ತು ತಲುಪಿದ ಕ್ಷೀಣ ನೆಲೆಗಳನ್ನು ಗಮನಿಸಿದಾಗ ಅವುಗಳಿಂದ ಪಾಠ ಕಲಿತ ವ್ಯಾಪಕ ಸ್ವರೂಪದ ಸಂಘಟನೆಯ ಅಗತ್ಯ ಗೊತ್ತಾಗುತ್ತದೆ. ಒಕ್ಕೂಟ ಪ್ರಗತಿ ಪಂಥಗಳ ಸಾಫಲ್ಯ ವೈಫಲ್ಯಗಳ ದಾಖಲೆ ನಮಗೊಂದು ಎಚ್ಚರದ ಸಂಗತಿಯೂ ಆಗುತ್ತದೆ. ನಮ್ಮ ದೇಶದ ಚಾರಿತ್ರಿಕ, ರಾಜಕೀಯ ಬೆಳವಣಿಗೆಗಳ ಸ್ವರೂಪದಿಂದಾಗಿ ಉದ್ಭವಿಸಿದ ಇಂದಿನ ವಿಶಿಷ್ಟ ಸಂದರ್ಭದ ಹಿನ್ನೆಲೆಯಲ್ಲಿ ನಮ್ಮ ಹೋರಾಟದ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ.''[೨೦] ಎಂಬ ಬರಗೂರರ

ನಿಲುವು ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಯ ಹೊಸ ಹುಡುಕಾಟವಾಗಿದೆ. ಚಾರಿತ್ರಿಕ ರಾಜಕೀಯ ಸಾಂಸ್ಕೃತಿಕ ಲೋಕದ ಎಚ್ಚರಿಕೆಯಾಗಿ ಮೂಡಿಬಂದಿದೆ.

ಬಂಡಾಯ ಚಳುವಳಿಯ ಸಾಂಸ್ಕೃತಿಕ ನೆಲೆ ಮಾನವೀಯ ಮಿಡಿತಗಳಿಂದ ರೂಪಿತವಾಗಿರುವಂತಹದ್ದು ಸಮಾಜದಲ್ಲಿ ವರ್ಗರಹಿತ ಜಾತಿರಹಿತವಾದಂತ ನೆಲೆಯಲ್ಲಿ ಮಾನವ ಸಮುದಾಯವನ್ನು ಮನುಷ್ಯ ಸಮುದಾಯವನ್ನಾಗಿ ನೋಡುವುದೇ ಮುಖ್ಯ ನೆಲೆಯಾಗಿದೆ. ನಮ್ಮ ಚರಿತ್ರೆಯ ಕಟುವಾಸ್ತವಗಳ ಹಿನ್ನೆಲೆಯನ್ನು ಅರಿತುಕೊಂಡು ಬದುಕಿನ ಭ್ರಮೆಗಳನ್ನು ಸೀಳಿ ವಾಸ್ತವವನ್ನು ಹುಡುಕುವುದು ಬಂಡಾಯ ಚಳುವಳಿಯ ಬರಹಗಾರರ ಸೃಜನಶೀಲ ಹೋರಾಟವಾಗಿದೆ. ಸಿಟ್ಟು, ವ್ಯಂಗ್ಯ, ವಿಷಾದ, ವಿಡಂಬನೆ, ಅಸಾಯಕತೆಗಳ ಹಿಂದೆ ಮಾನವೀಯ ತುಡಿತ ವಿರಬೇಕೆಂಬುದು ಬಂಡಾಯ ಸಾಹಿತ್ಯ ಚಳುವಳಿಯ ಆಶಯ ಮತ್ತು ಜವಾಬ್ದಾರಿಯಾಗಿದೆ. ಬಂಡಾಯ ಚುಳುವಳಿಯು ಅನಿಷ್ಟ ಜಾತಿ ಪದ್ಧತಿ ಪುರೋಹಿತಶಾಹಿಯ ಪದ್ಧತಿ ಬಂಡವಾಳಶಾಹಿಗಳ ವಿರುದ್ಧ ಚಳುವಳಿ ರೂಪಿಸಿ ಯಥಾ ಸ್ಥಿತಿವಾದವನ್ನು ತಿರಸ್ಕರಿಸಿ ನಿಂತ ಚಾರಿತ್ರಿಕ ಸಂಘಟನೆಯಾಗಿದೆ. ದಲಿತ ಚಳುವಳಿಯೂ ಕೂಡ ಸಾಮಾಜಿಕ ತಿರಸ್ಕಾರಕ್ಕೆ ಬಳಗಾದ ಗ್ರಾಮೀಣ ಭಾರತದ ದಲಿತರು ಶೋಷಣೆಗೆ, ತುಳಿತಕ್ಕೆ ಒಳಗಾಗಿದ್ದ ಜನರ ಪರವಾದ ಧ್ವನಿಯನ್ನು ಮೊಳಗಿಸಿತು.



ಜಮೀನ್ದಾರಿ ವ್ಯವಸ್ಥೆಯಲ್ಲಿ ನಿರ್ಗತಿಕರಾದ ದಲಿತರು ಜಮೀನ್ದಾರರ ಹೊಲಗದ್ದೆಗಳಲ್ಲಿ ಜೀತಮಾಡುತ್ತಾ ನೋವುಂಡು ಕತ್ತಲಲ್ಲಿ ಬದುಕನ್ನು ಕಮರಿಸಿಕೊಳ್ಳುತ್ತಿದ್ದರು. ಹೊಟ್ಟೆತುಂಬ ಅನ್ನ, ಮೈತುಂಬಾ ಬಟ್ಟೆಯಿಲ್ಲದೆ ದಲಿತರು ಸತ್ತು ಬದುಕುತ್ತಿದ್ದರು. ಈ ದಲಿತ ಸಮುದಾಯದಿಂದ ಬಂದಂತಹ ಅಕ್ಷರಲೋಕದ ಪ್ರಭಾವಕ್ಕೆ ಒಳಗಾದ ಪ್ರಜ್ಞಾವಂತ ದಲಿತ ಲೇಖಕರು ದಲಿತರ ಜೀವನದ ಕಷ್ಟ ಕಾರ್ಪಣ್ಯಗಳನ್ನು ತಮ್ಮ ಸಾಹಿತ್ಯದಲ್ಲಿ ಅಭಿವ್ಯಕ್ತಿಸುತ್ತಲೇ ಹೋದರು. ಇವರ ಬರವಣಿಗೆ ವ್ಯವಸ್ಥೆಯ ಅಸಮಾನತೆಯ ವಿರುದ್ಧ ಹುಟ್ಟಿದ ಬಂಡಾಯದ ಸ್ಫೋಟಕ ಬರವಣಿಗೆಯಾಗಿದೆ. ಆ ಕಾಲಘಟ್ಟದಲ್ಲಿ ಅವರ ನೋವಿಗೆ ಧನಿಯಾಗಿ ಅನೇಕ ದಲಿತೇತರ ಬರಹಗಾರರು ಸೇರಿಕೊಂಡು ಆಕಾಲಘಟ್ಟದ ಸಮಾಜೋ ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ಸಾಹಿತ್ಯದಲ್ಲಿ ದಾಖಲಿಸಿದರು. ಈ ಧೋರಣೆಯು ಬಂಡಾಯ ಸಂಘಟನೆ ಗುರಿಯೂ ಆಗಿತ್ತು. ಒಂದು ನಿಟ್ಟಿನಲ್ಲಿ ಈ ದಲಿತ ಬಂಡಾಯ ಸಾಂಸ್ಕೃತಿಕ ಚಳುವಳಿಗಳಿಗೆ ಸಾಮಾಜಿಕಅಸಮಾನತೆ, ಜಾತಿಪದ್ಧತಿ, ಶೋಷಣೆಯ ಕೇಂದ್ರ ಬಿಂದುಗಳಾಗಿದ್ದ ಜಮೀನ್ದಾರಿ ಮತ್ತು ಬಂಡವಾಳ ಶಾಹಿ ವರ್ಗವನ್ನು ದಿಕ್ಕರಿಸಿ ನಿಲ್ಲುವುದೇ ಮುಖ್ಯವಾಗಿತ್ತು.

ಈ ದಲಿತ ಬಂಡಾಯ ಸಾಂಸ್ಕೃತಿಕ ನೆಲೆಯ ಶೋಧವನ್ನು ವಿಶ್ಲೇಷಣೆಮಾಡುವಾಗ ಈ ಸಂಘಟನೆಗಳ ಜೊತೆಗೆ ರೈತ ಸಂಘಟನೆ 'ಸಮುದಾಯ' ಸಂಘಟನೆಗಳು ನಿಕಟವಾಗಿದ್ದವು. ಆದರೆ ವಿಭಿನ್ನವಾದ ವೈಚಾರಿಕ ನಿಲುವಿನಿಂದಾಗಿ ಒಂದೆಡೆ ಸೇರಲು ಸಾಧ್ಯವಾಗಲಿಲ್ಲ. ಆದರೆ ಸಮುದಾಯವು ದಲಿತರ ಅಂಗಳವೇ ಆಗಿತ್ತು. ಮತ್ತೊಂದು ಮಹತ್ವದ ಘಟನೆಯನ್ನು ಇಲ್ಲಿ ದಾಖಲಿಸಬೇಕು. ೧೯೭೯ರಲ್ಲಿ ಮಾರ್ಚ್ ತಿಂಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ ಧರ್ಮಸ್ಥಳದಲ್ಲಿ ಐವತ್ತೊಂದನೇ ಅಖಿಲಭಾರತ ಸಾಹಿತ್ಯ ಸಮ್ಮೇಳನದ ಸಿದ್ಧತೆ ನಡೆದ ಸಂದರ್ಭದಲ್ಲಿ ದಲಿತ ಬರಹಗಾರರು ಸಮ್ಮೇಳನದಲ್ಲಿ 'ದಲಿತಗೋಷ್ಠಿ'ಯನ್ನು ಏರ್ಪಡಿಸಲು ಕೋರಿದರು. ಅದಕ್ಕೆ ಸಮ್ಮೇಳನದ ಅಧ್ಯಕ್ಷರು ತಿರಸ್ಕರಿಸಿಬಿಟ್ಟರು. ಇದರಿಂದ ಆಕ್ರೋಶಗೊಂಡ ದಲಿತರು ದಲಿತೇತರರು ಒಂದೆಡೆ ಸೇರಿಕೊಂಡು ಬಂಡಾಯ ವೇದಿಕೆ

ರೂಪಿಸಿಕೊಂಡರು. ಈ ಬಂಡಾಯವು ಮೊದಲು ದಲಿತರ ಮನೆಯಾಗಿತ್ತು. ನಂತರದ ದಿನಗಳಲ್ಲಿ ದಲಿತೇತರರ ಹಿಡಿತಹೆಚ್ಚಾಗಿ ಬಿನ್ನಾಭಿಪ್ರಾಯಗಳು ತಲೆದೂರಿ ಅದು ದಲಿತ-ಬಂಡಾಯ ವೇದಿಕೆಯಾಯಿತು. ಹೀಗೆ ಸಾಹಿತ್ಯ ಸಾಂಸ್ಕೃತಿಕ ಲೋಕದಲ್ಲಿ ದಲಿತ-ಬಂಡಾಯ ಅವಳಿ ಜವಳಿ ಪದಗಳಾಗಿಯೇ ಬಳಕೆಗೆ ಬಂದವು. ಕಾಲಾಂತರದಲ್ಲಿ ಕೆಲ ದಲಿತ ಬರಹಗಾರರು ಬಂಡಾಯದಲ್ಲಿ ತಾವು ಒಂದು ಅಂಗವೆಂದೂ ಎಡಪಂಥೀಯ ಬರಹಗಾರರೆಂದು ವಾದಿಸತೊಡಗಿದರು. ಇನ್ನು ಕೆಲವರು ದಲಿತ-ಬಂಡಾಯವೆಂದು ಬರೆಯುವ ಸಂಪ್ರದಾಯವನ್ನು ತಿರುಚಿ ಬಂಡಾಯ ದಲಿತ ವೆಂದು ಘೋಷಿಸಿದರು. ಇದರಿಂದ ದಲಿತರು ದೂರ ಸರಿಯತೊಡಗಿದಾಗ ದಲಿತರಿಲ್ಲದೆ ಬಂಡಾಯ ಸಂಘಟನೆ ಬಡವಾಗತೊಡಗಿತು. ಈ ಸಂದರ್ಭದಲ್ಲಿ ದಲಿತರು ಪ್ರತ್ಯೇಕವಾಗಿ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳಲು ''ದಲಿತ, ಲೇಖಕ, ಕಲಾವಿದರ ಬಳಗ''ವನ್ನು ಆರಂಭಿಸಿದರು.

ಈ ದಲಿತ-ಬಂಡಾಯ ಚಳುವಳಿಗಳು ಮುಖ್ಯವಾಗಿ ಜಾತಿ-ವರ್ಣವ್ಯವಸ್ಥೆಯ ಕುರಿತ ತಿರಸ್ಕಾರ ಧರ್ಮವನ್ನು ಕುರಿತ ಅಸಮದಾನ, ಅಸಮಾನತೆಯ ವಿರೋಧ, ಹಸಿವು, ಬಡತನ ಅಸ್ಪೃಶ್ಯತೆಯ ಕುರಿತ ಆಕ್ರೋಶ, ಅನ್ಯಾಯದ ವಿರುದ್ಧ ಪ್ರತಿಭಟನೆ, ನೋವು, ಸಂಕಟಕ್ಕೆ ಸ್ಪಂದನೆ, ಅನಕ್ಷರಸ್ಥ ಸಮಾಜದ ಹೊಸ ಅನುಭವಗಳು ಅಂಬೇಡ್ಕರ್, ಬುದ್ಧ, ಕಾರ್ಲ್‌ಮಾರ್ಕ್ಸ್ ಚಿಂತನೆಯ ಚೈತನ್ಯ ಅಮಾನವೀಯವಾದಂತಹ ಮೌಲ್ಯಗಳ ಹುಡುಕಾಟ ಪ್ರತಿಭಟನೆ, ಪುರಾಣ ಪಾತ್ರಗಳ ಮೂರ್ತಿ ಭಂಜನ ಅಪ್ತಪಾತ್ರಗಳ ವೈಭವೀಕರಣ ಮುಂತಾದ ಸಾಂಸ್ಕೃತಿಕ ಬದುಕಿನ ನೆಲೆಯ ಗುಣಾವಗುಣಗಳನ್ನು ಶೋಧಿಸಿದವು. ಈ ದಲಿತ ಬಂಡಾಯ ಸಾಂಸ್ಕೃತಿಕ ಲೋಕದ ಅನನ್ಯತೆಯನ್ನು ಸಾಹಿತ್ಯದ ಮುಖಾಂತರ ಅಭಿವ್ಯಕ್ತಿಸಿದ ಮಹತ್ವದ ಲೇಖಕರೆಂದರೆ ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿ, ಮ.ನ.ಜವರಯ್ಯ ಇಂಧುದರ ಹೊನ್ನಾಪುರ, ಮುನಿವೆಂಕಟಪ್ಪ, ಮೊಗಳ್ಳಿಗಣೇಶ್, ಬಂಡಾಯದಲ್ಲಿ ಬರಗೂರು ರಾಮಚಂದ್ರಪ್ಪ, ಚಂಪಾ, ಕುಂ.ವೀ, ರಾಜಶೇಖರ ನೀರಮಾನ್ವಿ ಮುಂತಾದ ಲೇಖಕರ ಬರಹಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ದಲಿತಲೋಕದ ಬದುಕನ್ನು ಅನನ್ಯವಾಗಿ ಕಟ್ಟಿದ ದಲಿತಕವಿಯೆಂದೇ ಖ್ಯಾತಿಯಾದ ಡಾ.ಸಿದ್ಧಲಿಂಗಯ್ಯವರು ದಲಿತ ಬಂಡಾಯ ಲೋಕದ ವ್ಯತ್ಯಾಸವನ್ನು ಕುರಿತು ಹೇಳುವಾಗ.''ಬಂಡಾಯ-ದಲಿತ ಸಾಹಿತ್ಯಕ್ಕೆ ಇರುವ ವ್ಯತ್ಯಾಸಗಳು ತೀರಾ ಗೌಣವಾದವುಗಳು. ದಲಿತ ಸಾಹಿತ್ಯ ಕೆಳಸ್ತರದ ಸಾಹಿತಿಗಳ ಸೃಷ್ಟಿಯಾದರೆ ಬಂಡಾಯ ಸಾಹಿತ್ಯ ಎಲ್ಲಾ ಜಾತಿ, ಜನವರ್ಗಗಳ ಶೋಷಿತರ ಪರವಾದ ಕ್ರಾಂತಿಕಾರೀ ಸಾಹಿತ್ಯವಾಗಿದೆ. ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ದಲಿತರು, ಮಾರ್ಕ್ಸ್‌ವಾದಿಗಳು, ಲೋಹಿಯಾವಾದಿಗಳು ಹೀಗೆ ಎಲ್ಲಾ ಎಡವಾದಿ ಚಿಂತಕರು ಮತ್ತು ಪ್ರಜಾಪ್ರಭುತ್ವಶಕ್ತಿಗಳು ಸೇರಿಕೊಂಡಿದ್ದಾರೆ. 'ಎಲ್ಲಾ ದಲಿತ ಸಾಹಿತಿಗಳೂ ಬಂಡಾಯ ಸಾಹಿತಿಗಳೇ ಆದರೆ ಎಲ್ಲಾ ಬಂಡಾಯ ಸಾಹಿತಿಗಳು ದಲಿತ ಸಾಹಿತಿಗಳಲ್ಲ' ಎಂಬ ಬರಗೂರು ರಾಮಚಂದ್ರಪ್ಪನವರ ಮಾತೂ ಅತ್ಯಂತ ಔಚಿತ್ಯ ಪೂರ್ಣವಾದದ್ದು''[೨೫] ಎಂದು ವಿಶ್ಲೇಷಣೆ ಮಾಡಿದ್ದಾರೆ. ಈ ದಲಿತ ಬಂಡಾಯ ಚಳುವಳಿಗಳು ಸಾಂಸ್ಕೃತಿಕ ಬದುಕಿನ ಅನಂತ ಮುಖಗಳನ್ನು ಅನಾವರಣ ಗೊಳಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಆಧುನಿಕ ಸಾಹಿತ್ಯ ಸಂಸ್ಕೃತಿಯ ದೃಷ್ಟಿಯಿಂದ ಚಿಂತನೆಮಾಡಿದರೆ ಇಂದಿನವರೆಗೂ ಕಾಣದ ಒಂದು ವಿಶಿಷ್ಟ ಸಾಂಸ್ಕೃತಿಕ ಲೋಕ ತನ್ನೆಲ್ಲಾ ಕರಾಳವಾದ ಶಿಷ್ಟ ಲೋಕವು ಅಚ್ಚರಿ ಪಡುವರೀತಿಯಲ್ಲಿ ಜನಸಂಸ್ಕೃತಿಯ ಅನುಭವಗಳು ಕೇರಿಗಳು ಪಾತ್ರಗಳು ಶೋಷಿತ ಜನಾಂಗದ ಮುನಿಸು ಹೋರಾಟ. ಅಸಾಯಕತೆ, ಶೋಷಣೆಗಳು, ಅಕ್ಷರಲೋಕದಲ್ಲಿ

ಪ್ರವೇಶ ಪಡೆದು ಹೊಸ ತಲ್ಲಣವನ್ನು ಉಂಟುಮಾಡಿದವು. ಶೋಷಿತ ಜನತೆಯ ಪರವಾದ ನಿಲುವುಗಳು ಸಾಂಸ್ಕೃತಿಕ ಕ್ಷೇತ್ರದ ಸಂದರ್ಭದಲ್ಲಿ ಭದ್ರವಾಗಿ ನೆಲೆಗೊಳಿಸುವುದು ಸಾಹಿತಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯವೂ ಇಲ್ಲಿ ಮುಖ್ಯವಾಗಿತ್ತು. ಈ ದಲಿತ-ಬಂಡಾಯದ ಸಾಂಸ್ಕೃತಿಕ ಲೋಕದ ಅರಿವನ್ನು ಕಟ್ಟಿಕೊಟ್ಟ ಬರಹಗಾರರಲ್ಲಿ ದಲಿತರು, ಕೆಳವರ್ಗದವರು ಕೆಲ ಮಧ್ಯಮವರ್ಗದವರೂ ಇದ್ದಾರೆ. ಪ್ರಗತಿ ಪರ ಚಿಂತನೆ, ಶೋಷಣೆ ವಿರೋಧಿ ದೋರಣೆಯ ನೆಲೆಯಲ್ಲಿ ಅನನ್ಯವಾದ ಸಾಂಸ್ಕೃತಿಕ ಬದುಕನ್ನು ಇವರು ಸೃಜನಶೀಲ ಸಾಹಿತ್ಯದಲ್ಲಿ ಸೃಷ್ಟಿಸಿದ್ದಾರೆ.

ಹೀಗೆ ದಲಿತ-ಬಂಡಾಯ ಸಾಹಿತ್ಯವು ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಅನೇಕ ವಾಗ್ವಾದಗಳ ಮಧ್ಯೆ ಬೆಳೆದು ಬಂದಿತು, ಮತ್ತು ವಿಭಿನ್ನ ವಿಚಾರಧಾರೆಗಳೊಂದಿಗೆ ತಾತ್ವಿಕ ಬಿಕ್ಕಟ್ಟುಗಳನ್ನು ಎದುರಿಸುತ್ತಾ ಅಜ್ಞಾತ ಲೋಕದ ಅನನ್ಯ ಸಾಂಸ್ಕೃತಿಕ ಬದುಕನ್ನು ಶೋಧಿಸಿತು. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಚಿಂತನೆಗೆ ಹೊಸ ಆಲೋಚನೆಯ ಗರಿಯನ್ನು ಮೂಡಿಸಿದವು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಜಾಗತೀಕರಣದ ಪ್ರಭಾವ ದಲಿತಲೋಕದಲ್ಲಿ ಹೊಸ ಸಂಚಲನವನ್ನುಂಟು ಮಾಡಿದ್ದನ್ನು ಇಲ್ಲಿ ಸ್ಮರಿಸಬಹುದು. ಯಾವುದೇ ಒಂದು ವರ್ಗ, ಸಮುದಾಯದ ಸಾಹಿತ್ಯ ಹೇಗೆ ಗಂಭೀರವಾಗಿ ವಾಸ್ತವ ಸನ್ನಿವೇಶಗಳಿಗೆ ಸ್ಪಂದಿಸುತ್ತದೆಯೆಂಬ ಪ್ರಶ್ನೆಗೆ ಈ ದಲಿತ-ಬಂಡಾಯ ಸಾಹಿತ್ಯವು ಸಾಂಸ್ಕೃತಿಕ ಸಂಚಲನದ ವಿದ್ಯಮಾನಕ್ಕೆ ಪ್ರತಿ ಸ್ಪಂಧಿಸುವ ಪ್ರಧಾನ ಕಾಳಜಿಯಾಗಿಕಂಡುಬಂದಿತು. ವಿಭಿನ್ನ ಸಾಹಿತ್ಯ ಸಾಂಸ್ಕೃತಿಕ ಸಂಘಟನೆಯೂ ಇದಾಗಿತ್ತು. ಈ ಸಂದರ್ಭದಲ್ಲಿ ಸಾಹಿತ್ಯ ರಚನೆಗೆ ತೊಡಗಿದ ಎರಡು ಪಂಥದ ಸಾಹಿತಿಗಳು ಕಟ್ಟಿಕೊಟ್ಟ ಬದುಕಿನ ವಿಭಿನ್ನ ಮುಖಗಳು ಹೊಸ ಚಿಂತನೆಯನ್ನು ಹುಟ್ಟಿಹಾಕಿದವು. ಹೀಗೆ ಈ ದಲಿತ-ಬಂಡಾಯ ಚಳುವಳಿಗಳು ಸೃಷ್ಟಿಸಿದ ಸಂಘರ್ಷಗಳು ಸಾಂಸ್ಕೃತಿಕ ಶೋಧದ ಅನನ್ಯ ವಿದ್ಯಮಾನಗಳಾಗಿವೆ.

**೩.೨.೫. ಪುನರ್ ಮೌಲ್ಯೀಕರಣದ ಪ್ರಶ್ನೆ**

ಸಾಹಿತ್ಯ ಮತ್ತು ಸಾಂಸ್ಕೃತಿಕ ಬದುಕಿಗೆ ಸಂಬಂಧಿಸಿದ ಹಾಗೆ ಕಾಣಿಸಿಕೊಂಡ ಈ ಪುನರ್ ಮೌಲ್ಯೀಕರಣದ ಪ್ರಶ್ನೆಯು ಪ್ರಮುಖ ಹೊಸ ಚಿಂತನಧಾರೆಯೂ ಹೌದೂ; ವಿದ್ಯಾಮಾನವೂ ಹೌದು. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಸಂದರ್ಭದಲ್ಲಿ ದೇಶ-ನಾಡಿನಲ್ಲಿ ಸಂಭವಿಸಿದ ಪ್ರಮುಖ ಘಟನೆಗಳಾದ ವಿದ್ಯಮಾನಗಳಿಗೆ ಸಾಹಿತ್ಯ ಕೃತಿಗಳು ಸ್ಪಂಧಿಸಿದ ರೀತಿ ಅನನ್ಯವಾಗಿರುವಂತದ್ದು. ಸಾಮಾಜಿಕ ಬದುಕಿನ ಪ್ರತಿಫಲವಾಗಿ ಮೂಡಿ ಬಂದ ಕಲಾಕೃತಿಗಳನ್ನು ಹೊಸ ರೀತಿಯಲ್ಲಿ ಪುನರ್‌ಮೌಲ್ಯೀಕರಣಕ್ಕೆ ಒಳಪಡಿಸುವ ವಿಶ್ಲೇಷಿಸುವ ಸೃಜನಶೀಲ ಪ್ರಕ್ರಿಯೆಯೊಂದು ಆರಂಭವಾಯಿತು. ಈ ಪ್ರಕ್ರಿಯೆ ಮತ್ತೊಂದು ನಿಟ್ಟಿನಲ್ಲಿ ಸಾಂಸ್ಕೃತಿಕ ಮುಖಾಮುಖಿಯಾಗಿಯೂ ಕಾಣಿಸಿಕೊಂಡಿತು. ಸಂಸ್ಕೃತಿಚಿಂತಕರಾದ ಬರಗೂರು ರಾಮಚಂದ್ರಪ್ಪನವರು ಈ ಪುನರ್ ಮೌಲ್ಯೀಕರಣ ಕುರಿತ ತಮ್ಮ ನಿಲುವನ್ನು ಈ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ''ಪುನರ್ ಮೌಲ್ಯೀಕರಣವು ಕೇವಲ ಸಾಹಿತ್ಯಕ್ಕೆ ಸಂಬಂಧಿಸಿದ್ದಲ್ಲ, ಬದುಕಿಗೂ ಸಂಬಂಧಿಸಿದ್ದು. ಮೊದಲು ಬದುಕಿನಲ್ಲಿ ಸಂಬವಿಸಿ ತನ್ಮೂಲಕ ಸಾಹಿತ್ಯವನ್ನು ಸಾಹಿತ್ಯವಿಮರ್ಶೆಯನ್ನು ಆವರಿಸಿಕೊಳ್ಳುವ ಪುನರ್ ಮೌಲ್ಯೀಕರಣವು ಹೊಸ ವ್ಯಾಖ್ಯಾನಗಳ ಒಂದು ಪ್ರಕ್ರಿಯೆ''ಯೆಂದು ವಿಶ್ಲೇಷಣೆ ಮಾಡುತ್ತಾ ಬರಗೂರರು ಈ ಪ್ರಕ್ರಿಯೆಯು ನಿರಾಕರಣೆಯಿಂದ ಹುಟ್ಟಿದ ಪರಿಕಲ್ಪನೆಯಲ್ಲ, ಅದು ಕಟ್ಟಕಡೆಯ ತೀರ್ಮಾನವೂ ಅಲ್ಲ. ಮೌಲ್ಯೀಕರಣ ಪ್ರಕ್ರಿಯೆಯು ನಿರಂತರತೆಯನ್ನು

ಸೂಚಿಸುತ್ತದೆ. ಕಾಲಘಟ್ಟಗಳು ಜಡಗಟ್ಟುವುದನ್ನು ತಪ್ಪಿಸುವಂತಹ ಒಂದು ತೀವ್ರತೆ ಇಲ್ಲಿ ಕೆಲಸಮಾಡುತ್ತದೆ. ಜೀವನ ಕ್ರಮದ ರೀತಿಯನ್ನು ಬದಲಾಯಿಸಿ ಹೊಸ ವೈಚಾರಿಕ ಕ್ರಮದಲ್ಲಿ ಬದುಕನ್ನೊಳಗೊಂಡ ಕಲಾಕೃತಿಯೊಂದರಲ್ಲಿ ತೀವ್ರಬದಲಾವಣೆಯ ಮೌಲ್ಯವನ್ನು ಕಟ್ಟುವುದಾಗಿದೆ. ಯಾವುದೋ ಕಾಲಘಟ್ಟವೊಂದು ಕಲಾಕಾರನಿಗೆ ದೊರಕಿಸಿಕೊಟ್ಟ ಅನುಭವ ಮತ್ತು ಅರಿವಿನ ಬೆಳಕಿನಲ್ಲಿ ನಡೆಯುವ ನಿರ್ದಿಷ್ಟ ಶೋಧವಾಗಿ 'ಪುನರ್‌ಮೌಲ್ಯೀಕರಣ'ವನ್ನು ಪರಿಗಣಿಸಲಾಗುತ್ತದೆ"[೨] ಎಂದಿದ್ದಾರೆ.

ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ಒಳಗೊಂಡ ಕಾಲವು ಒಂದು ಘಟ್ಟವನ್ನು ಮುಟ್ಟಿದಾಗ ಪುನರ್ ಮೌಲ್ಯೀಕರಣದ ಅಗತ್ಯಕ್ಕೆ ಒಳಗಾಗುತ್ತದೆ. ತಾವು ಸಾಗಿ ಬಂದ ಬದುಕಿನ ಮೌಲ್ಯೀಕರಣ ಪ್ರಕ್ರಿಯೆ ಅನಂತ ಸಾಧನೆಗಳ ಪ್ರತೀಕವಾಗಿದೆ. ಸಾಮಾಜಿಕ ಬದುಕಿನಲ್ಲಿ ಬದುಕುತ್ತಿರುವ ಮನುಷ್ಯನ ಕಲ್ಪನೆಗಳು ಮತ್ತು ಕಾಲಕ್ಕೆ ಇರುವ ಸಂಬಂಧದಲ್ಲಿ ಈ ಪುನರ್ ಮೌಲ್ಯೀಕರಣದ ಚಿಂತನೆಯ ಭೀಜಗಳು ಇರುತ್ತವೆ. ಅನನ್ಯವಾಜ ಬದುಕಿನಲ್ಲಿ ಮೊದಲು ಕಾಣಿಸಿಕೊಳ್ಳುವ ಈ ಬೀಜಗಳು ಬೆಳೆದು ನಿಂತು ಸೃಜನಶೀಲ ಪ್ರಕ್ರಿಯೆಯಲ್ಲಿ ಬರವಣಿಗೆಯರೂಪತಾಳುತ್ತವೆ. ಸಾಂಸ್ಕೃತಿಕ ಬದುಕು ಬದಲಾಗುತ್ತಿರುವುದು ಬರಹದಲ್ಲಿ ಕಾಣಿಸಿಕೊಳ್ಳುತ್ತದೆ. ಇದರ ಫಲವಾಗಿ ಹಿಂದಿನ ಕಾಲಘಟ್ಟವು ಪುನರ್ ಮೌಲ್ಯೀಕರಣಕ್ಕೆ ಒಳಗಾಗುವುದು ಅನಿವಾರ್ಯವಾಗುತ್ತದೆ. ಪುನರ್ ಮೌಲ್ಯೀಕರಣವೆಂಬುದು ಪ್ರಜ್ಞಾಪೂರ್ವಕವಾಗಿ ನಡೆಯದಿದ್ದರೂ ಹೊಸ ಬದುಕು ಬರಹಗಳು ಹೊಸ ಕಾಲವನ್ನು ಹೊಸ ಚಿಂತನೆಯನ್ನು ಕಂಡುಕೊಳ್ಳುವ ಮತ್ತುಕಟ್ಟಿಕೊಳ್ಳುವ ಕ್ರಿಯೆಯು ಪುನರ್ ಮೌಲ್ಯೀಕರಣದ ಮೊದಲ ಹಾಗೂ ಸಹಜಹಂತವಾಗಿದೆ.

ನಮ್ಮ ಬದುಕು ಅಪಾರ ವೈರುದ್ಯಗಳನ್ನು ಒಳಗೊಂಡಿರುವಂತದ್ದು, ಕಾಲವು ವೈರುದ್ಯಗಳನ್ನು ಒಳಗೊಳ್ಳುತ್ತಲೇ ತಿಳಿಗೊಳಿಸುವ ಹೋರಾಟದ ವ್ಯಾಪಕಹಂತವಾಗಿದೆ. ಸಾಮಾಜಿಕ ಬದುಕಿನಲ್ಲಿ ನೆಲೆನಿಂತ ಮನುಷ್ಯ ಮತ್ತು ಕಾಲದ ಸಂಬಂಧವು ವಿಶಿಷ್ಟವಾಗಿರುತ್ತದೆ. ಕಾಲದ ಹಂದರದೊಳಗೆ ಮನುಷ್ಯ, ಮನುಷ್ಯನೊಳಗೆ ಕಾಲ, ನೆಲೆಯೂರಲು ನೆಡೆಸುವ ಪ್ರಯತ್ನಗಳ ಪ್ರಕ್ರಿಯೆಯೆ ಸಾಮಾಜಿಕ ಬದುಕಾಗಿದೆ. ಇಂದು ಮಾನವ ಎದುರಿಸುತ್ತಿರುವ ಸಮಸ್ಯೆ ಮತ್ತು ಸವಾಲುಗಳು ಕೂಡ ವಿಭಿನ್ನವಾಗಿವೆ. ನಾವು ಬದುಕುತ್ತಿರುವ ಕಾಲದಲ್ಲಿ ಅನೇಕ ಕಾಲಗಳು ಜೀವಂತವಾಗಿರುವ ಸಂದರ್ಭವಾಗಿದೆ. ಇಪ್ಪತ್ತನೆ ಶತಮಾನವು ಅನೇಕ ಶತಮಾನಗಳಲ್ಲಿ, ಘಟಿಸಿದ ವೈರುದ್ಯಗಳನ್ನು ತನ್ನ ಒಡಲಲ್ಲಿಟ್ಟುಕೊಂಡಿರುವ ಶತಮಾನವಾಗಿದೆ. ಅನೇಕ ಸಂಕಟ ಸಂಭ್ರಮಗಳು ಮನುಷ್ಯನನ್ನು ರೂಪಿಸುವ ವಿನೂತನ ಚಿಂತನೆಯ ಶತಮಾನವಾಗಿದೆ. ಇಂದಿನ ಬದುಕಿನಲ್ಲಿ ಸಾಮೂಹಿಕವಾದ ಪ್ರಜ್ಞೆ ಬೆಳೆಯುತ್ತಿದೆ. ಭೂತ ಭವಿಷ್ಯಗಳ ಮಧ್ಯೆ ವರ್ತಮಾನವು ಉಸಿರುಗಟ್ಟಿದ ವಾತಾವರಣದಿಂದ ಕೂಡಿದೆ. ಅಂತರಂಗ ಬಹಿರಂಗಗಳು ಮೌನರಂಗವಾಗಿ ರಣರಂಗವೂ ಆಗುತ್ತಿದೆ. ಇಷ್ಟೆಲ್ಲಾ ವೈರುಧ್ಯಗಳ ನಡುವೆ ಬದುಕಿನ ಭಾಂದವ್ಯದ ಕೊಂಡಿಯೂ ಕಳಚಿಕೊಳ್ಳುತ್ತಿರುವುದನ್ನು ನಾವಿಂದು ಎಲ್ಲೆಡೆ ಕಾಣುತ್ತಿದ್ದೇವೆ. ಇದು ಇಂದಿನ ಸಾಮಾಜಿಕ ಬದುಕಿನ ವೈರುಧ್ಯವೂ ಆಗಿದೆ. ಇಂದು ನಮ್ಮ ಮುಂದಿರುವಂತೆ ಒಂದೊಂದು ವಲಯವೂ ಕೂಡ ಒಂದೊಂದು ಸಾಮಾಜಿಕ ದ್ವೀಪವಾಗಿ ಪರಿಣಮಿಸಿದೆ. ಇಲ್ಲಿ ನಾವು ಕಾಲವನ್ನು ಕಟ್ಟಿಹಾಕುತ್ತಾ ಸಾಗುವಾಗ ಒಮ್ಮೊಮ್ಮೆ ಕಾಲವೇ ಮನುಷ್ಯನನ್ನು ಕಟ್ಟಿಹಾಕುತ್ತಾ ಹೋಗುವುದು ನಮ್ಮ ಕಾಲದ ವಿಶೇಷವಾದಂತಹ ವೈರುದ್ಯವೂ ಆಗಿದೆಯೆಂದರೆ ಅತಿಶಯೋಕ್ತಿಯೇನಲ್ಲ. ಇಂದಿನ ನಮ್ಮ ಬದುಕಿನ ಸಾಮಾಜಿಕ ಸಂಘರ್ಷಗಳ ದ್ವೀಪಗಳನ್ನು ದಾಟಿಸಾಗುವುದೇ ನಮ್ಮ ಮುಂದಿರುವ ಸವಾಲಾಗಿದೆ.

ಈ ಸವಾಲುಗಳನ್ನು ಎದೆಗಾರಿಕೆಯಿಂದ ಎದುರಿಸುತ್ತಾ ಸಾಂಸ್ಕೃತಿಕ ಬದುಕಿನ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಸಾಗಿದಂತೆ ನಮ್ಮಲ್ಲಿ ಪರಂಪರೆಯ ಪ್ರಜ್ಞೆಯೂ ಬೆಳೆಯುತ್ತದೆ. ಪ್ರಗತಿಯ ಪ್ರಜ್ಞೆಯೂ ತೀವ್ರವಾಗುತ್ತದೆ. ಹೀಗೆ ವಿಭಿನ್ನವಾದ ಕಾಲ-ದೇಶ ಪ್ರದೇಶಗಳಲ್ಲಿ ಏಕಕಾಲಕ್ಕೆ ಸಂಚರಿಸುವ ಸಂವೇದನಾಶಕ್ತಿ ಸೃಜನಶೀಲ ಲೇಖಕನಿಗೂ ಮನುಷ್ಯನಿಗೂ ಇಂದು ಅಗತ್ಯವಾಗಿದೆ.

ಪುನರ್ ಮೌಲ್ಯೀಕರಣದಲ್ಲಿ ನಾವು ನಿಂತ ನೆಲೆಗೆ ಮಹತ್ವವಿರುತ್ತದೆ. ಏಕೆಂದರೆ ನಮ್ಮ ಗ್ರಹಿಕೆಯ ಕ್ರಮವನ್ನು ನಾವಿಂದು ಬದುಕುತ್ತಿರುವ ಚಾರಿತ್ರಿಕ ಮತ್ತು ಸಾಮಾಜಿಕ ನೆಲೆಗಳು ನಮ್ಮನ್ನಿಂದು ನಿಯಂತ್ರಿಸುತ್ತಿರುತ್ತದೆ. ಈ ಅನಿವಾರ್ಯವಾದಂತ ನಿಯಂತ್ರಣದಲ್ಲಿ ಮನಸ್ಸು ಪಕ್ವಗೊಂಡು ನಡೆಯುವ ಬದುಕಿನ ಕ್ರಮದಲ್ಲಿ ಒಂದು ವಿಶಿಷ್ಟವಾದಂತಹ ದೃಷ್ಟಿಕೋನವೊಂದು ಒಳಗೊಂಡಿರುತ್ತದೆ.

ಪ್ರಸ್ತುತ ಸಾಮಾಜಿಕ ಬದುಕಿನ ಸಂದರ್ಭದಲ್ಲಿ ಪುನರ್ ಮೌಲ್ಯೀಕರಣದ ಭಾಗವಾಗಿ ಚರ್ಚಿಸಬಹುದಾದ ಇನ್ನೊಂದು ಸಂಗತಿಯೆಂದರೆ, ವಿಜ್ಞಾನ ಮತ್ತು ತಂತ್ರಜ್ಞಾನಗಳು ಸಾಹಿತ್ಯಾದಿ ಕಲೆಗಳ ಮೇಲೆ ಉಂಟು ಮಾಡುತ್ತಿರುವ ಪರಿಣಾಮ ಮತ್ತು ಒಡ್ಡುತ್ತಿರುವ ಸಮಸ್ಯೆಗಳೂ ಚಲನಶೀಲವಾಗಿರುವಂತಹವು. ಇಂದಿನ ಜೀವನ ಶೈಲಿಯ ಮೇಲೆ ಉಂಟಾದ ಪರಿಣಾಮವೂ ಅಗಾಧವಾಗಿರುವಂತದ್ದಾಗಿದೆ. ಈ ಆಧುನಿಕ ಜೀವನದಲ್ಲಿ ಶಿಕ್ಷಣ ಸಂಸ್ಕೃತಿಗೆ ಒಳಗಾದ ಮನುಷ್ಯರು ವೈಜ್ಞಾನಿಕ ಫಲಿತಗಳನ್ನು ಬಹುಬೇಗ ಬದುಕಿನಲ್ಲಿ ಅಳವಡಿಸಿಕೊಳ್ಳುತ್ತಾರೆ. ವೈಜ್ಞಾನಿಕ ಕ್ಷೇತ್ರದಲ್ಲಿ ಕೃಷಿಮಾಡಲು ತೊಡಗಿರುವವರು ಸಾಹಿತ್ಯದಲ್ಲಿ ವಿಜ್ಞಾನಲೋಕದ ಒಳಸಂಚಾರವನ್ನು ಕುರಿತು ಮಾತನಾಡುತ್ತಾರೆ, ವೈಜ್ಞಾನಿಕ ಮನೋಧರ್ಮದ ಅಗತ್ಯವನ್ನು ಪ್ರತಿಪಾಧಿಸುತ್ತಾರೆ. ವಿಜ್ಞಾನ ವೈಜ್ಞಾನಿಕ ಮನೋಧರ್ಮವೂ ಆದಾಗ ರೂಪಗೊಳ್ಳುವ ಮನುಷ್ಯನೇ ಬೇರೆ. ಈ ಮನುಷ್ಯ ಹೊಸಭಾಷೆ-ಪರಿಭಾಷೆಗಳ ಮೂಲಕ ಮಾತನಾಡುತ್ತಾರೆ. ಈ ವೈಜ್ಞಾನಿಕ ಮನೋಧರ್ಮವು ನಮ್ಮ ಬದುಕಿನ ಪುನರ್ ಮೌಲ್ಯೀಕರಣದ ಫಲವಾಗಿ ರೂಪುಗೊಳ್ಳುವ ಒಂದು ಮನೋವಲಯವಾಗಿರುತ್ತದೆ. ಈ ಮನೋವಲಯಕ್ಕೆ ಬದುಕಿನ ಪ್ರತಿಫಲನವಾದಂತಹ ಸಾಹಿತ್ಯಕ್ಕೆ ಸಂಬಂಧವಿರುವುದರಿಂದ ವೈಜ್ಞಾನಿಕ ಮನೋಧರ್ಮವು ಸಾಹಿತ್ಯದ ಪುನರ್ ಮೌಲ್ಯೀಕರಣದ ಸಂದರ್ಭದಲ್ಲಿ ವಹಿಸುವ ಪಾತ್ರ ಹಾಗೂ ಎದುರಿಸುವ ಸಮಸ್ಯೆಗಳ ಶೋಧ ಆಸಕ್ತಿದಾಯಕವಾದುದಾಗಿರುತ್ತದೆ. ಸಮಸ್ಯೆ ಮತ್ತು ಸವಾಲುಗಳ ಸರಿಯಾದ ಗ್ರಹಿಕೆಯಿಂದ ಪುನರ್ ಮೌಲ್ಯೀಕರಣದ ಮೌಲ್ಯವು ಹೆಚ್ಚುತ್ತದೆ. ಜೊತೆಗೆ ನಮ್ಮ ಅನನ್ಯವಾದ ಸಾಂಸ್ಕೃತಿಕ ಬದುಕಿನ ಮತ್ತು ಬರಹದಲ್ಲಿರುವ ಕಾಲಘಟ್ಟಗಳನ್ನು ಕೂಡಿಸುತ್ತಾ ಹೊಸ ಅರ್ಥವ್ಯಾಖ್ಯಾನಗಳನ್ನು ಹುಟ್ಟಿಸುವ ಒಂದು ಪ್ರಕ್ರಿಯೆಯಿದಾಗಿದೆ. ನಮ್ಮ ನಡುವಿನ ಸಮಕಾಲೀನ ಸಂದರ್ಭಗಳಲ್ಲಿ ಪ್ರಕಟಗೊಳ್ಳುತ್ತಿರುವ ಸಾಮಾಜಿಕ, ವಿವೇಕ, ವಿಮರ್ಶನ ವಿಧಾನಗಳೆಲ್ಲಾ ಸಾಹಿತ್ಯದ ಒಳಹೊಕ್ಕು ನಡೆಸುವ ನಿರ್ದಿಷ್ಟ ನೆಲೆಗಳ ಹೊಸ ಹುಡುಕಾಟವೇ ಪುನರ್‌ಮೌಲ್ಯೀಕರಣದ ಕಾರ್ಯಸ್ವರೂಪವಾಗಿರುತ್ತದೆ. ಇದು ಅರಾಜಕ ಹುಡುಕಾಟವಾಗದೇ ಖಚಿತ ಉತ್ತರಗಳ ಹುಡುಕಾಟವಾಗಿದೆ.

ಬದುಕಿನಲ್ಲಿ ಕಂಡುಬರುವ ಅನನ್ಯ ಸಂಸ್ಕೃತಿಯನ್ನು ಅಭಿವ್ಯಕ್ತಿಗೊಳಿಸಿರುವಂತಹದ್ದುಕನ್ನಡ ಸಾಹಿತ್ಯ ಈ ಸಾಹಿತ್ಯಕ್ಕೆ ಸಂಬಂಧಿಸಿದ ವಿವರಣೆಯಲ್ಲಿ ಪ್ರತಿಯೊಂದು ಕಾಲಘಟ್ಟದ ಸಾಂಸ್ಕೃತಿಕ ಬದುಕು, ಹಿಂದಿನ ಕಾಲಘಟ್ಟದ ಪುನರ್ ಸಂಯೋಜನೆಯಾಗುವುದನ್ನು ಮತ್ತು ಹೊಸ ಕಾಲಘಟ್ಟದ ಸಾಹಿತ್ಯ ಸೃಷ್ಟಿಯ ಪುನರ್‌ಮೌಲ್ಯೀಕರಣದ

ಒಂದು ಅಂಗವಾಗಿರುತ್ತದೆ. ಹಾಗೆ ನೋಡಿದರೆ ಪುನರ್‌ಮೌಲ್ಯೀಕರಣ ಪ್ರಕ್ರಿಯೆಯನ್ನುವಂತದ್ದು ನಮ್ಮ ಬದುಕು ಬದುಕನ್ನೊಳಗೊಂಡ ಸಾಹಿತ್ಯ, ಸಾಹಿತ್ಯದ ಗುಣಾವಗುಣಗಳನ್ನೊಳಗೊಂಡ ವಿಮರ್ಶೆಯಲ್ಲಿ ಪುನರ್‌ಮೌಲ್ಯೀಕರಣ ಪ್ರಕ್ರಿಯೆಯು ವ್ಯಾಪಿಸಿಕೊಂಡಿರುವುದನ್ನು ಕಾಣುತ್ತೇವೆ. ಕಾಲದಿಂದ ಕಾಲಕ್ಕೆ ಬದುಕು ಬದಲಾಗುತ್ತದೆ. ಇಂದು ನಮ್ಮ ಬದುಕಿನಲ್ಲಿ ವಿಜ್ಞಾನ ಮತ್ತು ಯಂತ್ರಜ್ಞಾನದ ಫಲಿತಗಳಿಂದ ಮಿಶ್ರ ಸಂಸ್ಕೃತಿಯ ಸಂದರ್ಭವೂ ನಮ್ಮ ಮಧ್ಯೆ ಇಂದು ಸೃಷ್ಟಿಯಾಗುತ್ತಿದೆ. ಈ ಸೃಷ್ಟಿಯ ಪ್ರತಿಫಲ, ಪ್ರತಿಸ್ಪಂದನೆಯಾಗಿ ಹೊಸ ಸೃಜನಶೀಲ ಪ್ರಕ್ರಿಯೆಯಾಗಿ ಸಾಹಿತ್ಯ ಸೃಷ್ಟಿಯಾಗುತ್ತಿದೆ. ಇಂದಿನ ಬದಲಾದ ಸ್ಥಗಿತ ನೆಲೆಗಳು ಬದುಕಿನಲ್ಲಿರುವಂತೆ ಸಾಹಿತ್ಯದಲ್ಲೂ ಇರುತ್ತವೆಯೆನ್ನುವುದು ನಿಜವಾದರೂ ಹೊಸ ರೂಪಗಳ ಹುಟ್ಟನ್ನು ತಡೆಯಲು ಸಾಧ್ಯವಿಲ್ಲ. ಬದುಕು ಜಡತ್ವಹಿಡಿತದಿಂದ ಬಿಡುಗಡೆಯನ್ನು ಪಡೆಯಲು ತಹತಹಿಸಿದಾಗ, ಸಾಹಿತ್ಯವು ಆ ಬದುಕನ್ನು ಅಭಿವ್ಯಕ್ತಿಸುವುದು ಅನಿವಾರ್ಯವಾಗುತ್ತದೆ. ಹೀಗೆ ಬದುಕು-ಬರಹದ ಸಂಬಂಧವು ವಿಶಿಷ್ಟ ಬಗೆಯದ್ದಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಚಿಂತನೆಮಾಡಿದಾಗ ಒಟ್ಟು ಬದುಕು-ಬರಹವನ್ನು ವಿಮರ್ಶೆಗೆ ಒಳಪಡಿಸುವುದು ಕೂಡ ಇಂದಿನ ನಮ್ಮ ಕಾಲದ ನಿಜವಾದ ಪುನರ್ ಮೌಲ್ಯೀಕರಣದ ಆಶಯವಾಗಿದೆ.

ಇಂದಿನ ವಸಾಹತೋತ್ತರ ಕಾಲಘಟ್ಟದಲ್ಲಿ ಸಾಂಸ್ಕೃತಿಕ ಬದುಕಿನ ಬಹುಮುಖಿಯಾದ ನೆಲೆಯನ್ನು ಶೋಧಿಸುವ ಸಂದರ್ಭದಲ್ಲಿ ಪುನರ್‌ಮೌಲ್ಯೀಕರಣ ಪರಿಕಲ್ಪನೆಯ ಹೊಸಹುಡುಕಾಟ ನವೀನ ವಿದ್ಯಾಮಾನವೆಂದರೆ ತಪ್ಪಾಗಲಾರದು. ಈ ಹೊಸ ಹುಡುಕಾಟವು ಬದುಕನ್ನೊಳಗೊಂಡ ಸಾಹಿತ್ಯ ಸಂಸ್ಕೃತಿಯ ತಲಸ್ಪರ್ಶಿ ವಿಶ್ಲೇಷಣೆಯಾಗಿದೆ. ಇಂದು ನಡೆದುಹೋದ ನಡೆಯುತ್ತಿರುವ ಸಾಮಾಜಿಕ ಸ್ಥಿತ್ಯಂತರಗಳು ವಿವಿಧ ಒಳನೋಟಗಳು ಹೊಸ ಚರ್ಚೆಗಳು, ಹೊಸ ಚಿಂತನೆಗಳು, ಅರ್ಥಪೂರ್ಣ ಸಾಂಸ್ಕೃತಿಕ ಸಂವಾದವನ್ನು ಏರ್ಪಡಿಸುವ ಅಪೇಕ್ಷೆಯಿಂದ ಹುಟ್ಟಿದ್ದೇ ಈ ಪುನರ್ ಮೌಲ್ಯೀಕರಣವಾಗಿದೆ.

**೩.೨.೬. ಉಪಸಂಸ್ಕೃತಿ ಚಿಂತನೆಯ ನೆಲೆಗಳು:** (ಅಧೀನ, ಪ್ರತಿ ಮತ್ತು ಪರ್ಯಾಯ ಸಂಸ್ಕೃತಿ ಚಿಂತನೆಗಳು)

ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ನಿರ್ವಚನವು ಅಲಕ್ಷಿತ ಸಮುದಾಯಗಳು, ಪ್ರತಿಷ್ಠಿತ ಸಮುದಾಯಗಳಿಂದ ಅನಾದಾರಕ್ಕೊಳಗಾಗಿದ್ದು, ಅನೇಕ ಸಾಂಸ್ಕೃತಿಕ ವೈವಿಧ್ಯತೆಗಳಿಂದ ತೆರೆದುಕೊಳ್ಳುವಂತಹ ಈ ವರ್ಗದ ಬದುಕು, ಬದುಕಿನ ನೆಲೆಗಳನ್ನು ಉಪಸಂಸ್ಕೃತಿ ಅಧ್ಯಯನದ ನೆಲೆಯಿಂದ ಶೋಧಿಸಲಾಗುತ್ತದೆ. ಇಂದಿನ ಪ್ರಧಾನ ನೆಲೆಯಲ್ಲಿ ಸಂಸ್ಕೃತಿಯೆಂದು ನಂಬುತ್ತಿರುವ ಅಂಶಗಳನ್ನು ಅಧೀನ ನೆಲೆಗಳೂ ಅನುಸರಿಸುವ ಸಂಪ್ರದಾಯ ನಮ್ಮದಾಗಿದ್ದರಿಂದ, ಸಾಮಾಜಿಕ ಮತ್ತು ಆರ್ಥಿಕ ಅಧೀನ ನೆಲೆಗಳ ಪ್ರಾಣವಾಗಿರುವ ಉಪಸಂಸ್ಕೃತಿಗಳು ಪ್ರತ್ಯೇಕ ಪರಿಕಲ್ಪನಾತ್ಮಕ ಪರಿಭಾವನೆಯಿಂದ ದೂರ ಸರಿಯುವಂತಾಗಿದೆ. ''ಪ್ರಧಾನ ಸಂಸ್ಕೃತಿಯು ಯಾವುದೇ ಒಂದು ದೇಶ ಪ್ರದೇಶದ ಪ್ರಧಾನ ಜೀವನ ವಿಧಾನವಾಗಿರುವಾಗ ಇದಕ್ಕೆ ಹೊರತಾಗಿ ಅಥವಾ ಪ್ರಧಾನ ನೆಲೆಯಿಂದ ನಿರ್ಲಕ್ಷಿತವಾಗಿ ಬದುಕುತ್ತಿರುವ ಸಂಸ್ಕೃತಿಗಳು ಉಪಸಂಸ್ಕೃತಿ ಪರಿಕಲ್ಪನೆಯ ಪರಿಧಿಗೆ ಬರುತ್ತದೆ.''[೨೩] ಎಂದು ಅಭಿಪ್ರಾಯಪಡುವ ಸಂಸ್ಕೃತಿ ಚಿಂತಕ ಬರಗೂರರು ಉಪಸಂಸ್ಕೃತಿ ನೆಲೆಗಳು ಈಗಲೂ ಜೀವಂತವಾಗಿದ್ದು ಪ್ರಧಾನ ಪರಿಗಣನೆಯಿಂದ ದೂರ ಉಳಿದಿವೆ. ಇವು ಭೂತದ ನೆಲೆ ಮಾತ್ರವಾಗಿರದೆ, ವರ್ತಮಾನದ ವ್ಯಾಖ್ಯಾನಗಳೂ ಆಗುತ್ತವೆ ಎಂದಿರುವ ಮಾತು ಔಚಿತ್ಯವಾಗಿದೆ.

ಒಂದು ನಿರ್ದಿಷ್ಟವಾದಂತಹ ಜಾತಿ, ವರ್ಗ, ಧರ್ಮ ಇತ್ಯಾದಿಗಳು ಸಂಸ್ಕೃತಿಯೇ ಶ್ರೇಷ್ಠವೆಂಬ ಕಲ್ಪನೆ ಉಳಿದ ವಲಯಗಳನ್ನು ನಿರ್ಲಕ್ಷ್ಯಿಕ್ಕೀಡು ಮಾಡುತ್ತದೆ. ಈ ನಿರ್ಲಕ್ಷಿತ ವಲಯಗಳಲ್ಲೂ ಒಂದು ಸಂಸ್ಕೃತಿಯಿರುತ್ತದೆಯೆಂಬ ವಿಚಾರವೂ ಉಪಸಂಸ್ಕೃತಿಗಳಕಲ್ಪನೆಯ ಕೇಂದ್ರವಾಗಿರುತ್ತದೆ. ಸಂಸ್ಕೃತಿ ಚಿಂತಕರಾದ ಡಾ.ರಹಮತ್ ತರೀಕೆರೆಯವರು 'ಮರದೊಳಗಣ ಕಿಚ್ಚು' ಕೃತಿಯಲ್ಲಿ ಸಂಸ್ಕೃತಿಗಳ ವಿಭಿನ್ನಧಾರೆಗಳನ್ನು ಕುರಿತು ವಿಶ್ಲೇಷಣೆಮಾಡುವಂತಹ ಸಂದರ್ಭದಲ್ಲಿ ಬರಗೂರರು ಪಾಶ್ಚಿಮಾತ್ಯಮಾನವ ಶಾಸ್ತ್ರಜ್ಞ ಪ್ರಾನ್ಜ್ ಬೋ ಅಸನ 'ಎಕಲ್ಚರ್' ಸಿದ್ಧಾಂತದಿಂದ ರೂಪಿಸಿದರೆಂದು ಹೇಳುತ್ತಾ.. ''ಸಮಗ್ರ ಜನತೆಯ ಜೀವನ ವಿಧಾನವೇ ಸಂಸ್ಕೃತಿಯಾದರೂ ಬೇರೆ ಬೇರೆ ಪ್ರದೇಶಗಳಲ್ಲಿ ಜನ ಬದುಕುವಾಗ ಅವರ ಬಾಳಿನ ಜೀವನ ವಿಧಾನಗಳಿಗೊಂದು ವಿಶಿಷ್ಟತೆ ಒದಗಿ ಒಂದು ಸಂಸ್ಕೃತಿ ರೂಪತಾಳುತ್ತದೆ. ಅದೇ ಉಪಸಂಸ್ಕೃತಿಯಾಗಿರುತ್ತದೆ. ಎನ್ನುವ ಬರಗೂರರ ನಿಲುವನ್ನು ವಿವರಿಸುತ್ತಾ ಚಿಂತಕ ತರೀಕೆರೆಯವರು ಪ್ರಧಾನ ನೆಲೆಯೆಂದು ಹೆಸರತ್ತಿರುವ ಸಂಸ್ಕೃತಿಯ ಅರಿವಿಗೆ ಇದು ಬಂದಿರುವುದಿಲ್ಲ. ಯಾವುದೇ ಒಂದು ಸಂಸ್ಕೃತಿಯನ್ನು 'ಉಪ'ವೆಂದು ಕರೆಯುವುದೂಕೂಡ ಸಮಸ್ಯಾತ್ಮಕವಾಗಿರುವಂತದ್ದು. ಇದರಿಂದ ಪ್ರಧಾನ ಸಂಸ್ಕೃತಿಯ ನಂಬಿಕೆಗೆ ಒಪ್ಪಿಗೆ ಕೊಟ್ಟಂತಲ್ಲವೆ? ಅಂದರೆ ಯಾವುದೋ ಒಂದು ಸಂಸ್ಕೃತಿಯು ವ್ಯವಸ್ಥೆಯಲ್ಲಿ ವಿರಾಜಮಾನವಾಗಿರುವ (ರಾಜ) ಕಾರಣಕ್ಕೆ ಬಹು ಸಂಖ್ಯಾತರ ಸಂಸ್ಕೃತಿಗಳು ಪ್ರಧಾನವಲ್ಲ ಎಂಬಂತಾಗಿದೆ. ಈ ತರ್ಕವನ್ನು 'ಉಪ' ಪ್ರಧಾನವೆಂದು ಕರೆಯುವ ಮೂಲಕ ಮತ್ತೊಮ್ಮೆ ಸಮರ್ಥಿಸಿದಂತಾಗುತ್ತದೆಯಷ್ಟೆ. ಕೀಳು ಮೇಲು ಉತ್ತಮ ಕನಿಷ್ಠ ಶ್ರೇಷ್ಠ,ಕ್ಷುದ್ರ ಮುಂತಾಗಿ ಅಧಿಕಾರಸ್ಥರು ಮಾಡಿರುವ ವರ್ಗೀಕರಣ ಇದನ್ನು ತಿರಸ್ಕರಿಸುವುದರಿಂದ ಹೊಸ ಚಿಂತನೆ ಸಾಧ್ಯ''[೨೨] ಎಂದಿದ್ದಾರೆ.

ಈ ಉಪಸಂಸ್ಕೃತಿಯನ್ನು ಕುರಿತು ವಿಶ್ಲೇಷಣೆ ಮಾಡುವ ಸಂದರ್ಭದಲ್ಲಿ ಮತ್ತೊಂದು ಅಂಶವನ್ನು ಇಲ್ಲಿ ಪ್ರಸ್ತಾಪಿಸಬೇಕು. ಉಪಸಂಸ್ಕೃತಿ ಪರಿಕಲ್ಪನೆಯನ್ನಿಟ್ಟುಕೊಂಡು ಸಿಂಧ್‌ಮಾದಿಗರ ಬಗ್ಗೆ ವಿಶೇಷ ಅಧ್ಯಯನ ಮಾಡಿರುವ ಕೋಟಗಾನಹಳ್ಳಿ ರಾಮಯ್ಯನವರು ಉಪಸಂಸ್ಕೃತಿ ಎಂದೊಪ್ಪಿಕೊಳ್ಳುವುದು ''ಆಕ್ರಮಣಶೀಲ ಸಂಸ್ಕೃತಿಯೆ ಇಂಗಿತವನ್ನು ಮನ್ನಿಸಿದಂತೆ''[೨೩] ಎಂದಿದ್ದಾರೆ. ಇವರು ಉಪಸಂಸ್ಕೃತಿ ಪದವನ್ನೊಪ್ಪದೆ 'ಮೂಲಸಂಸ್ಕೃತಿ' ಎಂಬ ಪದ ಬಳಸಿದ್ದಾರೆ. ತಮ್ಮದನ್ನು 'ಮೂಲ' ಎಂದು ತಿಳಿದರೆ ಮತ್ತೊಂದನ್ನು 'ಉಪ' ಎಂದು ತಿಳಿದಂತಲ್ಲವೇ? ಇದರಿಂದ ವ್ಯವಸ್ಥೆ ಮಾಡಿದ ತಪ್ಪನ್ನು ಅದನ್ನು ವಿರೋಧಿಸುವವರೂ ಮಾಡಿದಂತಾಗುವುದಿಲ್ಲವೇ ಎಂದು ತರೀಕೆರೆಯವರು ಪ್ರತಿ ಚರ್ಚೆ ಮಾಡುತ್ತಾರೆ. ಮತ್ತೊಂದು ಸಂದರ್ಭದಲ್ಲಿ ಸಂಸ್ಕೃತಿ ಚಿಂತಕರಾದ ಡಾ.ಕೆ.ವಿ.ನಾರಾಯಣ ಅವರು 'ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ' ಆಶಯ ಲೇಖನದಲ್ಲಿ ''ಒಂದು ಸಂಸ್ಕೃತಿಯಲ್ಲಿ ಪ್ರಧಾನತೆ ಹಾಗೂ ಇನ್ನೊಂದರ ಅಧೀನತೆ ಸಾಪೇಕ್ಷ ವಿವರಣೆಗಳು ಹಾಗೂ ಕಾಲದೇಶ ಬದ್ಧ ಸಂಗತಿಗಳು. ಏಕೆಂದರೆ ಪ್ರಧಾನತೆಯಾಗಲೀ ಅಧೀನತೆಯಾಗಲೀ ನಿಯತ ಹಾಗೂ ನಿರಂತರವಾದುದಲ್ಲ. ಸಂಸ್ಕೃತಿಯೆನ್ನುವಂತದ್ದನ್ನು ಒಂದು ಸಿದ್ಧವಸ್ತುವೆಂದು ತಿಳಿದು ಹೊರಗಿನಿಂದ ವೀಕ್ಷಿಸಿ ನೋಡುವ ಜನಪ್ರಿಯ ವಿಧಾನವಿದೆ. ಅದಕ್ಕೆ ಬದಲಾಗಿ ಸಂಸ್ಕೃತಿಯನ್ನು ಒಂದು ಪ್ರಕ್ರಿಯೆ ಎಂದು ತಿಳಿದು ಒಳಗಿನಿಂದ ಗ್ರಹಿಸುವುದು ಹೆಚ್ಚು ಉಪಯುಕ್ತ ವಿಧಾನ''[೨೪] ಎಂದಿದ್ದಾರೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸಂಸ್ಕೃತಿಯ ನೆಲೆಗಳನ್ನು ಕುರಿತು ಚಿಂತನೆ ಮಾಡಿದಾಗ ಪ್ರತಿಯೊಂದು ಕಾಲಘಟ್ಟದಲ್ಲಿ ಒಂದೊಂದು ಸಂಸ್ಕೃತಿ ಪ್ರಧಾನ ಪಾತ್ರವಹಿಸಿರುವಂತದ್ದು ಕಾಣುತ್ತೇವೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ

ಪ್ರಧಾನವಾಗಿದ್ದ ಸಂಸ್ಕೃತಿ ಮಧ್ಯಕಾಲೀನ ಸಾಹಿತ್ಯ ಸಂದರ್ಭದಲ್ಲಿ ವಿಶೇಷವಾಗಿ ವಚನ ಚಳುವಳಿಯ ಕಾಲದಲ್ಲಿ ಅಧೀನವಾದಂತೆ ಕಂಡುಬರುತ್ತದೆ. ಪ್ರಧಾನ ಮತ್ತು ಅಧೀನ ಸಂಸ್ಕೃತಿಗಳಲ್ಲಿ ಅಂತರ್‌ಕ್ರಿಯೆ ನೆಡೆಯುತ್ತಾ ಬಂದಿದೆ.

ಸಂಸ್ಕೃತಿ ಚಿಂತಕರಾದ ಡಾ.ಕೆ.ವಿ.ನಾರಾಯಣ ಅವರು ಸಂಸ್ಕೃತಿಯನ್ನು ಅಧೀನ ಮತ್ತು ಪ್ರಧಾನವೆಂದು ಹೇಗೆ ವಿಂಗಡಿಸಿದರೂ ಅವುಗಳ ನಡುವೆ ಇರುವ ಸಂಬಂಧ ಸಾಧ್ಯತೆ ಹಲವೆಂದು ವಿಶ್ಲೇಷಣೆಮಾಡುತ್ತಾರೆ. ಹಾಗೇ ಅಧೀನ ಮತ್ತು ಪ್ರಧಾನ ಸಂಸ್ಕೃತಿಗಳ ಸಂಬಂಧವನ್ನು ಮೂರು ನೆಲೆಯಲ್ಲಿ ವಿಂಗಡಿಸಿ ವಿಶ್ಲೇಷಿಸುತ್ತಾರೆ ''**ಒಂದು:** ಶತ್ರುತ್ವ ಸಂಬಂಧ **ಎರಡು:** ಸಹಚರ ಸಂಬಂಧ **ಮೂರು:** ಅನುವರ್ತಿ ಸಂಬಂಧ, ಶತ್ರುತ್ವ ಸಂಬಂಧದಲ್ಲಿ ಅಧೀನ ಸಂಸ್ಕೃತಿ ಪ್ರಧಾನ ಸಂಸ್ಕೃತಿಯನ್ನು ನಿರಾಕರಿಸಿ ಪ್ರತಿಭಟಿಸಿ ತನ್ನ ಮೇಲುಗೈಯನ್ನು ಸಾಧಿಸಲು ನೆಡೆಸುವ ಯತ್ನವಾದರೆ, ಸಹಚರ ಸಂಬಂಧದಲ್ಲಿ ಪ್ರಧಾನ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿಗಳ ನಡುವೆ ವಿರೋಧವಿದ್ದರೂ ಆ ವಿರೋಧವನ್ನು ಶತ್ರುತ್ವವನ್ನಾಗಿ ಪರಿಗಣಿಸದೆ ಇರುವ ಒಪ್ಪಂದದ ಸ್ಥಿತಿ. ಮೂರನೇ ಅನುವರ್ತಿ ಸಂಬಂಧ ಪ್ರಧಾನವಾದದ್ದರ ಯಜಮಾನ್ಯವನ್ನು ಒಪ್ಪಿ ಅಧೀನವಾದದ್ದು ತನ್ನ ಅಧೀನತೆಯನ್ನು ಸಮರ್ಥಿಸುವಂತೆ ಸದಾ ಪ್ರಧಾನವನ್ನು ಅನುಕರಿಸುವ ಅನುಸರಿಸುವ ಮಾರ್ಗವನ್ನು ಹಿಡಿಯುವುದು. ನಾವು ಚರ್ಚಿಸುತ್ತಿರುವ ವ್ಯವಸ್ಥೆಯಲ್ಲಿ ಅಧೀನವಾದುವು ಹಲವು ಇರಬಹುದಾದ್ದರಿಂದ ಅವುಗಳ ನಡುವಣ ಸಂಬಂಧದ ನೆಲೆಗಳು ಕೂಡ ಒಟ್ಟಾರೆ ಪ್ರಧಾನ ಮತ್ತು ಇತರೆ ಸಂಸ್ಕೃತಿಗಳ ಸಂಬಂಧವನ್ನು ಪ್ರಭಾವಿಸುತ್ತವೆ''[೨೭] ಎನ್ನುತ್ತಾರೆ. ಈ ಅದೀನ ಮತ್ತು ಪ್ರಧಾನ ಸಂಸ್ಕೃತಿಗಳ ಸಂಬಂಧ ಸಾಧ್ಯತೆಗಳ ಬಗ್ಗೆ ವಿಶ್ಲೇಷಣೆ ಮಾಡುತ್ತಾ ''ನಗರ ಮತ್ತು ಹಳ್ಳಿಗಳ ಮಾದರಿಯನ್ನಿಟ್ಟುಕೊಂಡು ವಿವರಿಸುತ್ತಾ ನಗರ ಮತ್ತು ಹಳ್ಳಿಗಳ ನಡುವೆ ಸದ್ಯ ಪ್ರಧಾನ ಮತ್ತು ಅಧೀನ ಸಂಬಂಧವಿದೆಯೆಂದೂ ಸಾಮಾನ್ಯ ವಿವೇಚನೆಗೆ ಈ ಪ್ರಧಾನ ಮತ್ತು ಅಧೀನ ಸಂಸ್ಕೃತಿಗಳ ಸಂಬಂಧವು ಅನುವರ್ತಿ ನೆಲೆಯದ್ದು ಎಂದೂ ವಿಶ್ಲೇಷಣೆ ಮಾಡಬಹುದು. ಅನುವರ್ತಿತನ ವಸ್ತು ಸಂಸ್ಕೃತಿ ಮಟ್ಟಿಗಂತೂ ಕಣ್ಣಿಗೆ ಕಾಣುವಂಥದ್ದು ಆದರೆ ವಿರೋಧವೆಂಬುದಿಲ್ಲ. ಈ ವಿರೋಧವೆಂಬುದು ಇಲ್ಲವೆಂದಲ್ಲ, ಈ ವಿರೋಧವನ್ನು ಶತ್ರುತ್ವದ ಸಂಬಂಧವನ್ನಾಗಿ ಪರಿವರ್ತಿಸಲು ಅವಶ್ಯವಾದ ಸಾಮಾಜಿಕ ಚಳುವಳಿಗಳೂ ನಡೆಯುತ್ತವೆ. ಸಹಚರ ಸಂಬಂಧವನ್ನಾಗಿಸಲು ಉದ್ದೇಶಿಸುವ ಸರಕಾರಿ ಯೋಜನೆಗಳೂ ಇವೆ. ನಗರಗಳ ಆಸುಪಾಸಿನ ಹಳ್ಳಿಗಳಿಗೂ ದೂರದ ಮಿತ ವ್ಯಾಪ್ತಿಯ ಹಳ್ಳಿಗಳಿಗೂ ಈ ಸಂಬಂಧದಲ್ಲಿ ಅಗಾಧವಾದ ವ್ಯತ್ಯಾಸವಿರುತ್ತದೆ. ಒಟ್ಟು ಸಂಸ್ಕೃತಿಯ ವಿನ್ಯಾಸದಲ್ಲಿ ಈ ವ್ಯತ್ಯಾಸ ಕೂಡ ಗಮನಾರ್ಹವಾಗಿರುತ್ತದೆ. ಇಂಥ ಹಲವು ನಿದರ್ಶನಗಳನ್ನು ಪರಿಶೀಲಿಸುವ ಮೂಲಕ ಪ್ರಧಾನ ಮತ್ತು ಅಧೀನ ಸಂಸ್ಕೃತಿಗಳ ವಿವಿಧ ನೆಲೆಗಳನ್ನು ಅರಿಯಬಹುದು''[೨೮] ಎಂದು ವಿಶ್ಲೇಷಣೆ ಮಾಡುತ್ತಾರೆ. ''ಹಾಗೆಯೇ ಮುಂದುವರೆದು ಯಾವುದೇ ಒಂದು ಸಮಾಜದಲ್ಲಿ ಅಕ್ಷರ ಹಾಗೂ ಅದರ ಸಹಜ ಬೆಳವಣಿಗೆಯಾದ ಬರಹ ಪ್ರಧಾನ ಸಂಸ್ಕೃತಿಯ ಭಾಗವಾಗಿರುತ್ತದೆ. ಹಾಗಾಗಿ ಈ ಬರಹದ ಸೌಲಭ್ಯದಿಂದಲೇ ಆಕಾರ ತಳೆಯುವ ಸಾಹಿತ್ಯವನ್ನು ಹೀಗೆಯೇ ಪ್ರಧಾನ ಸಂಸ್ಕೃತಿಯ ಭಾಗವೆಂದೇ ತಿಳಿಯುವ ಬಯಕೆ ಸಹಜ. ಇದರ ಪರಿಣಾಮವೆಂಬಂತೆ ಭಾರತದಲ್ಲಿ ಲಿಖಿತ ಸಾಹಿತ್ಯವಾದ ಶಿಷ್ಟ ಸಾಹಿತ್ಯವನ್ನು ಪ್ರಧಾನವೆಂತಲೂ, ಅಲಿಖಿತ ಸಾಹಿತ್ಯವಾದ ಜನಪದ ಸಾಹಿತ್ಯವನ್ನು ಅಧೀನವೆಂತಲೂ ತಿಳಿಯುವ ಪದ್ಧತಿ ಬೆಳೆದಿದೆ. ಈ ಪದ್ಧತಿಯ ಮುಂದುವರಿಕೆ ಕರ್ನಾಟಕದಲ್ಲೂ ಕಂಡುಬರುತ್ತದೆ''[೨೯]. ಎಂದು ಡಾ.ಕೆ.ವಿ.ನಾರಾಯಣರು ವ್ಯಾಖ್ಯಾನಿಸುತ್ತಾರೆ. ಸಾಹಿತ್ಯದಲ್ಲಿ ವಾಸ್ತವ ಬದ್ಧತೆಯ ಬದುಕು ಪ್ರಧಾನ ನೆಲೆಯಾದರೆ, ವಾಸ್ತವಕ್ಕೆ ದಕ್ಕದ್ದು ಅಧೀನವಾಗುತ್ತದೆ. ಇವೆರಡರ ಸಂಬಂಧದ ಹಲವು ಬಗೆಗಳನ್ನು ನಮ್ಮ ಬರಹಗಾರರು

ಶೋಧಿಸಿದ್ದಾರೆ. ಅಧೀನ-ಪ್ರಧಾನಗಳ ಶ್ರೇಣೀಕರಣವನ್ನು ಇರುವಂತೆ ಒಪ್ಪುವ ಬಗೆಯೊಂದು. ಅವೆರೆಡರ ನಡುವಣ ವಿರೋಧವನ್ನು ನಿವಾರಿಸುವ ಅಧೀನದ ಮರು ವ್ಯಾಖ್ಯಾನದ ಮೂಲತಃ ಅದು ಪ್ರಧಾನ ಲಕ್ಷಣಗಳನ್ನು ಹೊಂದಿದೆಯೆಂದು ವಾದಿಸುವ ಬಗೆ ಇನ್ನೊಂದು. ಅಂದರೆ ಅಧೀನ ಸಂಸ್ಕೃತಿ ಪ್ರಧಾನ ಸಂಸ್ಕೃತಿಯ ಒಂದು ರೂಪಕವೆಂದೂ ಅಧೀನದ ವಿರೋಧ ತೋರಿಕೆಯದೆಂದು ವಾದಿಸುವುದುಂಟು. ಹೀಗೆ ವಿಭಿನ್ನವಾದ ಮಾದರಿಗಳಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿಗಳ ಚರ್ಚೆಗಳು ಬೆಳೆದಿವೆ.

ಪ್ರಧಾನ ಮತ್ತು ಅಧೀನ ಸಂಸ್ಕೃತಿಯ ನೆಲೆಗಳು ಒಂದು ರೀತಿಯಾದರೆ ಪ್ರತಿ ಸಂಸ್ಕೃತಿಯ ಗುಣ ಮತ್ತೊಂದು ಮಾದರಿಯದು. ರಹಮತ್‌ತರೀಕೆರೆಯವರು ಪ್ರತಿ ಸಂಸ್ಕೃತಿ ಕುರಿತು ವಿಶ್ಲೇಷಣೆಮಾಡುವಾಗ ''ಅಧಿಕಾರಸ್ಥರ ಕಣ್ಣುಕೋನದಿಂದ ರೂಪುಗೊಂಡಿರುವ ನಂಭಿಕೆ ಆಚರಣೆಗಳನ್ನು ಪ್ರಶ್ನೆಗೊಳಪಡಿಸುವುದು ಅಧಿಕಾರ ರಹಿತರೂ ನಿರಾಕರಣೆಗೆ ಒಳಗಾದವರೂ ಆದ ದುಡಿವ ಸಮುದಾಯದ ಸಾಂಸ್ಕೃತಿಕ ಜಗತ್ತಿನೊಳಗಿನ ಜೀವಂತಿಕೆಯನ್ನು ಶೋಧಿಸುವುದು''[೩೦] ಎಂದು ಸರಳವಾಗಿ ವ್ಯಾಖ್ಯಾನಿಸುತ್ತಾ ಅಧಿಕಾರಸ್ಥ ಕಣ್ಣಿನ ನೋಟದಿಂದ ರೂಪುಗೊಂಡಿರುವ ನಂಬಿಕೆ ಆಚರಣೆಗಳನ್ನು ಅಧಿಕಾರ ರಹಿತರೂ ನಿರಾಕರಣೆಗೆ ಒಳಗಾದವರೂ, ದುಡಿವ ಸಮುದಾಯ ಪ್ರಶ್ನಿಸುವುದರ ಜೊತೆಗೆ ತಮ್ಮ ಬದುಕಿನ ಜಗತ್ತಿನೊಳಗಿನ ಸಾಂಸ್ಕೃತಿಕ ಅನನ್ಯತೆಯನ್ನು ಜೀವಂತಿಕೆಯಿಂದ ಶೋಧಿಸುವುದಾಗಿದೆ ಎನ್ನುತ್ತಾರೆ.ದುಡಿಯುವ ಸಮುದಾಯಗಳಿಗೆ ಕೇಡನ್ನು ಬಯಸುವ ಸಾಂಸ್ಕೃತಿಕ ಆಕೃತಿಗಳನ್ನು ನಿಷ್ಠುರವಾಗಿ ಪ್ರಶ್ನಿಸುವುದು ಹಾಗೂ ಪವಿತ್ರೀಕರಿಸಲಾಗಿರುವ ಆಕೃತಿಗಳ ಪಾವಿತ್ರ್ಯ ನಾಶ ಮಾಡುವುದು ಕೆಡವುವ ಕ್ರಿಯೆಯೊಂದೆ ಪ್ರತಿ ಸಂಸ್ಕೃತಿಯಾಗಿರದೆ ಕಟ್ಟುವ ಕ್ರಿಯೆಯೂ ಇದರೊಂದಿಗೆ ಇರುತ್ತದೆನ್ನುವರ ನಿಲುವನ್ನು ತರೀಕೆರೆಯವರು ವ್ಯಕ್ತಪಡಿಸುತ್ತಾರೆ.

ಇಂದಿನ ನಮ್ಮ ಸಮಾಜದಲ್ಲಿ ದುಡಿಯುವ ಶ್ರಮಜೀವಿಗಳ ವರ್ಗದಲ್ಲಿ ಅನೇಕ ಬಗೆಯ ನಂಬಿಕೆಗಳಿವೆ. ಅನೇಕ ಆಚರಣೆಗಳಿವೆ. ಅವುಗಳಲ್ಲಿ ಕೆಲವು ಯಜಮಾನಿಕೆ ಮಾಡುವಂತಹ ವ್ಯವಸ್ಥೆಯ ಆಲೋಚನೆಗಳನ್ನು ಒಪ್ಪಿಕೊಂಡವುಗಳಾಗಿವೆ. ಇನ್ನು ಕೆಲವು ಯಜಮಾನಿಕೆ ಮಾಡುವ ವ್ಯವಸ್ಥೆಯ ಆಲೋಚನಾಕ್ರಮಗಳಿಗೆ ತೀವ್ರವಾದಂತಹ ಪ್ರತಿರೋಧವನ್ನು ಒಡ್ಡುವಂತಹವುಗಳಾಗಿವೆ. ಮತ್ತು ತಮ್ಮದೇ ಆದಂತಹ ಲೋಕದೃಷ್ಟಿಯನ್ನು ಮಂಡಿಸುವಂತಹವುಗಳಾಗಿವೆ. ಇಂದಿನ ಸಮಾಜದಲ್ಲಿ ಆಧುನಿಕ ವೈಚಾರಿಕತೆ ಹಾಗೂ ರಾಜಕೀಯ ಪ್ರಜ್ಞೆಯೊಂದಿಗೆ ಮೈಗೂಡಿಸಿಕೊಂಡು ಆಧುನಿಕ ಸಮಾಜದ ಸಮಸ್ಯೆಗಳನ್ನು ಮುಖಾಮುಖಿ ಮಾಡಲು ಬಳಸುವ ಹೊಸ ಸಮಾಜವಾದಿ ಸಮಾಜವನ್ನು ಕಟ್ಟುವ ಪ್ರಯತ್ನಮಾಡುವುದು ಪ್ರತಿ ಸಂಸ್ಕೃತಿ ಎನ್ನಬಹುದೆಂಬ ವಿಚಾರಗಳನ್ನು ಚಿಂತಕ ರಹಮತ್ ತರೀಕೆರೆ ಅವರು ಮಂಡಿಸುತ್ತಾರೆ. ಇದೊಂದು ಏಕಕಾಲದಲ್ಲಿ ಜನ ಸಮುದಾಯಗಳ ಸಾಂಸ್ಕೃತಿಕ ಅಭಿವ್ಯಕ್ತಿಗಳ ಹಾಗೂ ಆಧುನಿಕ ಸಮಾಜವಾದಿ ರಾಜಕಾರಣದ ಏಕಕಾಲದ ಅನುಸಂಧಾನದ ಹಾದಿಯೂ ಇದಾಗಿದೆ ಎನ್ನುತ್ತಾರೆ. ಕನ್ನಡ ನಾಡಿನಲ್ಲಿ ನಡೆದುಹೋದ ಕೆಲವು ಚಾರಿತ್ರಿಕ ಸಂದರ್ಭಗಳನ್ನು ಶೋಧಿಸುವುದು ಪ್ರತಿ ಸಂಸ್ಕೃತಿಯ ಜರೂರತ್ತಾಗಿದೆ. ಜನಪರ ಮತ್ತು ಹೊಸ ಸಮಾಜವೊಂದರ ಸಮಾಜವಾದಿ ನೆಲೆಯ ಬದುಕಿನ ಸಾಧ್ಯತೆಗಳ ಬಗ್ಗೆ ಆಲೋಚಿಸುವುದು ಪ್ರತಿ ಸಂಸ್ಕೃತಿ ಪರಿಕಲ್ಪನೆಯೊಳಗಿನ ಪ್ರಮುಖ ಹಂಬಲಗಳಾಗಿವೆ. ತಿರಸ್ಕೃತರಾದಂತಹ ಅನೇಕ ಸಮುದಾಯಗಳ ಬದುಕಿನ ಸಾಂಸ್ಕೃತಿಕ ಆಕೃತಿಗಳ ಮೌಲ್ಯೀಕರಣ ಮಾಡುವ ಪ್ರಕ್ರಿಯೆಯಿದಾಗಿದ್ದು ಈ ಸಾಮುದಾಯಿಕ ಸಮಾಜದೊಳಗೆ ರೂಪಗೊಂಡಿರುವಂತಹ ಪ್ರತಿ ಸಂಸ್ಕೃತಿಕ ವಿನ್ಯಾಸಗಳನ್ನು ಕನ್ನಡ ಸಂಸ್ಕೃತಿಯ ಸಂದರ್ಭದಲ್ಲಿ

ಚಾರಿತ್ರಿಕವಾಗಿ ಶೋಧಿಸುವ ಕೆಲಸ ಪ್ರತಿ ಸಂಸ್ಕೃತಿಯ ಹುಡುಕಾಟವಾಗಿದೆ ಎಂಬುದು ಈ ಚಿಂತಕರ ಒಟ್ಟು ಚಿಂತನೆಯ ತಿರುಳಾಗಿದೆ.

ಪ್ರತಿ ಸಂಸ್ಕೃತಿಎನ್ನುವಂತಹದ್ದು ಅನಂತ ಮುಖಿಯಾದಂತಹ ಸ್ವ ವಿಮರ್ಶೆಯನ್ನು ಉಳ್ಳ ಪ್ರತಿಭಟನೆಯಾಗಿದೆ. ನಮ್ಮ ಇಂದಿನ ಯಾವುದೇ ಚಳುವಳಿಯ ಸಾಂಸ್ಕೃತಿಕ ಸಂದರ್ಭದಲ್ಲಿ ಕೇಳಿಕೊಳ್ಳಬೇಕಾದ ಪ್ರಶ್ನೆಯಿದಾಗಿದೆ. ಇಲ್ಲಿ ಪ್ರತಿ ಸಂಸ್ಕೃತಿ ಗುರಿಯು ಪರ್ಯಾಯವೋ, ಸಮಾನಾಂತರವೋ? ಎಂದು ಕೇಳಿಕೊಳ್ಳುವಾಗ ಕರ್ನಾಟಕದ ಸಂದರ್ಭದಲ್ಲಿ ನಡೆದ ವಚನಕಾರರ ಶಿವಶರಣರ ಚಳುವಳಿಯು ವೈದಿಕಕ್ಕೆ ಸಮಾನಾಂತರ ಚಳುವಳಿ ಎನ್ನಬಾರದು. ಯಾಕೆಂದರೆ ಆ ಸಂದರ್ಭದಲ್ಲಿ ಸಾಮಾಜಿಕವಾಗಿ ಕೀಳೆಂದು ಪರಿಗಣಿತವಾಗಿದ್ದ ಅಸ್ಪೃಶ್ಯರನ್ನು ಶರಣಚಳುವಳಿಯ ಶಿವಭಕ್ತಿಯ ಚೌಕಟ್ಟಿನಲ್ಲಿ ತಂದು ಸ್ವಾಭಿಮಾನವನ್ನು ಕಟ್ಟಿಕೊಂಡಿತು. ಸಾಮಾಜಿಕ ಚಲನೆಯೇ ಜಡವಾಗಿ ತಟಸ್ಥವಾಗಿದ್ದ ಅಂದಿನ ಕಾಲದ ಸಾಮಾಜಿಕ ಜಾತಿವ್ಯವಸ್ಥೆಯಲ್ಲಿ ಸ್ವಲ್ಪವಾದರೂ ಚಲನೆ ಕಾಣಿಸಿಕೊಂಡಿದ್ದು ಈ ಹನ್ನೆರಡನೆ ಶತಮಾನದ ಶರಣ ಚಳುವಳಿಯಿಂದಲೇ ಎನ್ನಬಹುದು.

ಪ್ರತಿ ಸಂಸ್ಕತಿಯ ನೆಲೆಗಳು ಇಂದು ನಮ್ಮ ಸಮುದಾಯಗಳ ಬದುಕಿನಲ್ಲಿ ಅನೇಕ ರೂಪಗಳಲ್ಲಿ ಕ್ರಿಯಾ ಶೀಲವಾಗಿದೆ. ಇಂದಿನ ಗತ ಮತ್ತು ವರ್ತಮಾನಗಳ ನಡುವಿನ ಆದರ್ಶ ಮತ್ತು ವಾಸ್ತವಗಳ ನಡುವಿನ ನಿರಂತರ ಕೊಡುಕೊಳ್ಳುವಿಕೆಯ ನೆಲೆಯಲ್ಲಿ ರೂಪಗೊಳ್ಳುವ ಭವಿಷ್ಯದ ಸಾಧ್ಯತೆಯ ಹಾದಿ ಪ್ರತಿ ಸಂಸ್ಕೃತಿಯಾಗಿದೆ. ಇಂದಿನ ಬದುಕುವ ಹಕ್ಕು ಮತ್ತು ಅಸ್ತಿತ್ವವನ್ನು ಉಳಿಸಿಕೊಳ್ಳುವ ಸಂಘರ್ಷಗಳು ಮತ್ತು ವ್ಯವಸ್ಥೆಯ ಶಕ್ತಿ ವಲಯದಿಂದ ದೂರವಿರುವ ಸಂಸ್ಕೃತಿಗಳು ಆರ್ಥಿಕ ರಾಜಕೀಯ ತಾತ್ವಿಕ ಯಜಮಾನಿಕೆಯ ಪ್ರತಿಯಾಗಿ ನಡೆಸುವ ಚಟುವಟಿಕೆ ಪ್ರತಿ ಸಂಸ್ಕೃತಿಯದ್ದಾಗಿದೆ.

ಪ್ರತಿ ಸಂಸ್ಕೃತಿಯ ಚರ್ಚೆಯು ಸಂಘರ್ಷ ನೆಲೆಯನ್ನೆಂದೂ ನಿರಾಕರಣೆಮಾಡುವಂತದ್ದಲ್ಲ. ಅದು ಎದುರಾ ಬದುರಾ ವಿರೋಧಗಳನ್ನು ಗುರುತಿಸುವಂತಹ ಸಂದರ್ಭದಲ್ಲಿ ತನ್ನತನದ ಸೂಕ್ಷ್ಮತೆಯನ್ನು ಕಳೆದುಕೊಳ್ಳದೇ ಸರಳೀಕರಣಗೊಳ್ಳದಂತೆ ಎಚ್ಚರಿಕೆಯನ್ನು ವಹಿಸುವಂತ ಗುಣವನ್ನು ಹೊಂದಿದೆ. ತಾತ್ವಿಕವಾದ ಬದ್ಧತೆಯನ್ನಿಟ್ಟುಕೊಂಡಿರುವ ತೀವ್ರವಾದ ವಿಮರ್ಶನಾ ಪ್ರಜ್ಞೆ ಪ್ರತಿ ಸಂಸ್ಕೃತಿಗಿದೆ.

ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ''ಪ್ರತಿ ಸಂಸ್ಕೃತಿ ಚಿಂತನೆಗೆ ಬಹುದೊಡ್ಡ ಸವಾಲಿರುವುದು ವರ್ತಮಾನದ ರಾಜಕೀಯ ಪ್ರಜ್ಞೆಯನ್ನು ಕಳೆದುಕೊಳ್ಳದೆ ಗತ ಕಾಲದ ಬದುಕನ್ನು ಸಂಸ್ಕೃತಿಯನ್ನು ಮುಖಾಮುಖಿ ಮಾಡುವುದರಲ್ಲಿದೆ. ವೈಚಾರಿಕ ಪ್ರಜ್ಞೆಯನ್ನು ಕಳೆದುಕೊಳ್ಳದೆ ಜನಸಮುದಾಯದ ನಂಬಿಕೆಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಮನುಷ್ಯರಲ್ಲಿನ ಮೇಲು ಕೀಳಿನ ಸಾಮಾಜಿಕ ತಾರತಮ್ಯಗಳನ್ನು ನಿರಾಕರಿಸುತ್ತಲೇ ಸಾಂಸ್ಕೃತಿಕ ಅನೇಕತ್ವ ಹಾಗೂ ವಿಶಿಷ್ಟತೆಗಳನ್ನು ಒಪ್ಪಿಕೊಳ್ಳುವುದರಲ್ಲಿ. ಒಂದು ಮತ್ತೊಂದರ ಹೆಗಲ ಮೇಲೆ ಸವಾರಿ ಮಾಡುವುದನ್ನು ಹಾಗೂ ಒಂದು ಮತ್ತೊಂದರ ಜತೆ ಸಮಾನವಾಗಿ ನಿಂತು ಕೊಡು-ಕೊಳ್ಳುವಿಕೆಯ ಸಂಬಂಧವನ್ನು ಬೇರೆಯಾಗಿ ವಿಶಿಷ್ಟವಾಗಿ ಗ್ರಹಿಸುವ ಕ್ರಮದಲ್ಲಿರಬೇಕು''[೨೦] ಎಂಬ ಸಂಸ್ಕೃತಿ ಚಿಂತಕ ರಹಮತ್ ತರೀಕೆರೆಯವರ ನಿಲುವು ಪ್ರತಿ ಸಂಸ್ಕೃತಿ ಬಗೆಗಿನ ಹೊಸ ಆಲೋಚನೆಯನ್ನು ಮೂಡಿಸುತ್ತದೆ.

ಈ ಎಲ್ಲಾ ನೆಲೆಗಳಿಂದ ಅಂದರೆ ಉಪಸಂಸ್ಕೃತಿ ಪ್ರಧಾನ ಅಧೀನ ಪ್ರತಿ ಸಂಸ್ಕೃತಿಗಳ ಚರ್ಚೆಯಿಂದ ಮುಕ್ತವಾಗಿ ಎಲ್ಲಾ ಜನಸಮುದಾಯಗಳಿಗೂ ಅನ್ವಯಿಸುವ ಎಲ್ಲಾ ಕಾಲಕ್ಕೂ ತಕ್ಕುದಾದ ಸಮನ್ವಯ ಸಾರವುಳ್ಳ ಸೌಹಾರ್ದತೆಯ ಪರ್ಯಾಯ ಸಂಸ್ಕೃತಿಯೊಂದು ನೆಲೆಯೂರಬೇಕೆಂಬ ಆಶಯ ನಮ್ಮಲ್ಲಿಂದು ಮೂಡಿಬರಬೇಕೆಂಬುದು ನನ್ನ ಅಭಿಮತವಾಗಿದೆ ಹಾಗಾದಾಗ ನಮ್ಮ ನೆಲದಲ್ಲಿ ಧರ್ಮ ಸಮನ್ವಯ ಸಂಸ್ಕೃತಿ ನೆಲೆಯೂರಿದಂತಾಗುತ್ತದೆ. ಅಂದರೆ ಮೇಲಿನ ಪರಿಕಲ್ಪನೆಗಳ ಚರ್ಚೆ ಅನನ್ಯ ಸಂಸ್ಕೃತಿ ಸಂಕರಗಳ ಸಂದರ್ಭದಲ್ಲಿ ಪ್ರಸ್ತುತವಾಗಿದ್ದೂ ಪರ್ಯಾಯ ಸಂಸ್ಕೃತಿಯ ಹುಡುಕಾಟದ ನೆಲೆಯೂ ಇಂದು ಅನಿವಾರ್ಯವಾಗಿದೆಯೆಂಬ ಆಶಯ ನನ್ನದಾಗಿದೆ.

**೩.೨.೭. ಮಹಿಳಾ ಪ್ರಶ್ನೆ**

ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಅನೇಕ ಜನಪರ ಚಳುವಳಿಗಳು ಕಾಣಿಸಿಕೊಂಡು ಅನೇಕ ಸಾಮಾಜಿಕ ಸ್ಥಿತ್ಯಂತರಗಳು ಜರುಗಿದವು. ಈ ಸಂದರ್ಭದಲ್ಲಿ ಮಹಿಳಾ ಸಮುದಾಯಗಳು ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದು ಅನೇಕ ತಾತ್ವಿಕ ಚರಿತ್ರೆಗಳು ಸಾರಿಹೇಳುತ್ತವೆ. ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀ ಸಂವೇದನೆಯೆನ್ನುವಂತದ್ದು ಪ್ರಧಾನಧಾರೆಯಾಗಿ ಕಾಣಿಸಿಕೊಂಡು ಮಹತ್ವದ ಸೃಜನಶೀಲ ಕೃತಿಗಳ ಹುಟ್ಟಿಗೆ ಕಾರಣವಾಯಿತು. ಅದರಲ್ಲೂ ವಸಾಹತೋತ್ತರ ಸಂದರ್ಭದಲ್ಲಿ ಸ್ತ್ರೀವಾದ ಎನ್ನುವಂತಹದ್ದು ಪ್ರಮುಖ ಪರಿಕಲ್ಪನೆಯಾಗಿ ಕಾಣಿಸಿಕೊಂಡು ಅನೇಕ ಚರ್ಚೆಗಳಿಗೆ ಕಾರಣವಾಯಿತು. ತೊಂಬತ್ತರ ದಶಕದ ಪ್ರಾರಂಭವು ಭಾರತೀಯ ಸ್ತ್ರೀವಾದದ ಒಂದು ತಿರುವಿನಕಾಲವೆಂದು ಅನೇಕರು ಗುರುತಿಸುತ್ತಾರೆ. ಇಂದು ಬದಲಾಗುತ್ತಿರುವ ಮಹಿಳಾ ಬದುಕಿನ ಬದಲಾವಣೆಗಳನ್ನು ಅನೇಕ ಜ್ಞಾನ ಶಾಖೆಗಳು ವಿಶ್ಲೇಷಣೆಗೆ ಒಳಪಡಿಸುತ್ತಲೇಬಂದಿವೆ. ಮಹಿಳೆಯನ್ನು ಕುರಿತಾದಂತಹ ಒಂದು ಸಂಸ್ಕೃತಿಯ ದೃಷ್ಟಿಕೋನಕ್ಕೂ ಆ ಸಂಸ್ಕೃತಿಯನ್ನೊಳಗೊಂಡ ಸಮಾಜದ ನೈತಿಕ ಚೈತನ್ಯಕ್ಕೂ ನೇರವಾದಂತಹ ಸಂಬಂಧವಿದೆಯೆನ್ನುವುದು ಮರೆಯುವಂತಿಲ್ಲ.

ಇಂದು ಮಹಿಳಾ ಪ್ರಶ್ನೆ ಎಲ್ಲಾ ರಂಗಗಳಲ್ಲಿ ತನ್ನ ಇರುವಿಕೆ, ಪಾಲ್ಗೊಳ್ಳುವಿಕೆಯ ಬಗ್ಗೆ ಚರ್ಚೆಗಳು, ವಾಗ್ವಾದಗಳೂ ಸೃಷ್ಟಿಯಾಗುತ್ತಿವೆ. ಇಂದು ಈ ಮಹಿಳಾ ಪ್ರಶ್ನೆ ಪ್ರಭುತ್ವಶಕ್ತಿಗಳಿಗೆ ಪರ್ಯಾಯ ಶಕ್ತಿಯಾಗುವ ಎಲ್ಲಾ ಸಾಧ್ಯತೆಗಳನ್ನು ಪಡೆಯುತ್ತಿದೆ. ಮಹಿಳಾ ಸಬಲೀಕರಣಕ್ಕೆ ಸಂಬಂಧಿಸಿದಂತೆ ಅನೇಕ ಚಿಂತನೆಗಳು, ಹೋರಾಟಗಳೂ ನಡೆದಿವೆ ನಡೆಯುತ್ತಿವೆ. ಇಂದಿನ ಮಹಿಳಾ ಬರಹಗಾರ್ತಿಯರು ಸಮಾಜದಲ್ಲಿ ಸ್ತ್ರೀವಾದಿ ನೆಲೆಯನ್ನು ಪ್ರಸ್ತಾಪಿಸುತ್ತಲೇ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನ ಮಾನವನ್ನು ಕುರಿತು ಬರೆಯುತ್ತಿರುವುದು ಕಾಣುತ್ತಿದ್ದೇವೆ. ಈ ಮಹಿಳೆಯರು ಇಂದಿನ ಸಾಮಾಜಿಕ ಚಳುವಳಿಯ ಮುಖ್ಯವಾಹಿನಿಯಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಲೇ ತಮ್ಮ ಇರುವಿಕೆಯನ್ನು ಅನನ್ಯತೆಯನ್ನು ಅನೇಕ ಕ್ಷೇತ್ರಗಳಲ್ಲಿ ಸಾಧನೆಯ ಮೂಲಕ ತೋರಿಸಿಕೊಟ್ಟಿದ್ದಾರೆ. ''ಭಾರತೀಯ ಸ್ತ್ರೀವಾದಿ ಸಂಸ್ಕೃತಿ ಚಿಂತಕರು ವಸಾಹತೋತ್ತರವಾದದ ಮೂಲಕ ಭಾರತೀಯ ಮಹಿಳೆಯನ್ನು ಕುರಿತು ಆಧುನಿಕ ಪಾಶ್ಚಾತ್ಯ ಕಥನಗಳು ಏನೇನು ಅಸಮರ್ಪಕ ಕಲ್ಪನೆಗಳನ್ನು ಕಟ್ಟಿವೆ ಎಂಬುದನ್ನು ವಿಶ್ಲೇಶಿಸಿದ್ದಾರೆ. ಭಾರತಿಯ ಸ್ತ್ರೀಯರನ್ನು ಕುರಿತು ಆಧುನಿಕ ಕಾನೂನುಗಳು ಸೃಷ್ಟಿಸಿದ ಅಸಂಗತತೆಯನ್ನು ಎತ್ತಿತೋರಿಸುವ ಸ್ತ್ರೀವಾದಿಚಿಂತನೆ ಮಂಡಿಸಿದ ಮಧುಕೇಶ್ವರ್ ಅವರು ಭಾರತೀಯ ಸ್ತ್ರೀಯರ ಕುರಿತ ಕಾನೂನುಗಳ ಸುಧಾರಣೆಯನ್ನು ತುರುವ ಘೋಷಣೆಯಿಂದ ರಚಿಸಿದ ಏಕರೂಪಿ ಹಿಂದೂ ಕಾನೂನು ಸಂಹಿತೆಯ ಮಿತಿಗಳನ್ನು ವಿಮರ್ಶೆಗೊಳಪಡಿಸುತ್ತಾರೆ.''[೨] ಇಂದು ಮಹಿಳಾ ಬದುಕು ಅನೇಕ ಬದಲಾವಣೆಗಳಿಗೆ ಒಳಗಾಗುತ್ತಿದೆ.

''ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಎಲ್ಲೆಡೆ ಇರುವಂತೆ ತೋರುತ್ತಿದ್ದಾರೆ. ಕೆಲವು ಅಭಿವೃದ್ಧಿ ತಜ್ಞರು ಮೂರನೆ ಜಗತ್ತಿನ ಬಡತನಕ್ಕೆ ಲಿಂಗಪಕ್ಷಪಾತವೇ ಕಾರಣವೆಂದು''[೩೩] ಸೂಚಿಸುತ್ತಿದ್ದಾರೆ. ಮಹಿಳೆಗೆ ಸಮಾನತೆಯ ಹಕ್ಕು ಬದ್ಧತೆಗಳನ್ನು ನೀಡುವುದರ ಮುಖಾಂತರ ಸಮಾಜದ ಮುಖ್ಯವಾಹಿನಿಗೆ ತರಬೇಕೆಂಬ ನಿಲುವುಗಳು ವ್ಯಕ್ತವಾದವು. 'ಅನೇಕ ಜನ ಸಂಖ್ಯಾ ಯೋಜಕರೂ ಕೂಡ ಭಾರತೀಯ ಮಹಿಳೆಯರ ಸಬಲೀಕರಣದ ವಿಷಯದಲ್ಲಿ ತಮ್ಮ ಬದ್ಧತೆಯನ್ನು ಘೋಷಿಸಿರುವುದು' ಕಂಡುಬರುತ್ತಿದೆ. ಇತ್ತೀಚಿನ ಸಾಂಸ್ಕೃತಿಕ ಬದುಕಿನ ಪ್ರಶ್ನೆ ಬಂದಾಗ ಅನೇಕ ಅರ್ಥಶಾಸ್ತ್ರಜ್ಞರೂ ಕೂಡ ಭಾರತೀಯ ಶ್ರಮಶಕ್ತಿಯ ಸಂದರ್ಭದಲ್ಲಿ ಸ್ತ್ರೀಲಿಂಗೀಕರಣದ ಕುರಿತು ಮಹಿಳಾ ಸಬಲೀಕರಣ ಕುರಿತು ಚಿಂತಿಸುತ್ತಿದ್ದಾರೆ. ''ಇದಲ್ಲದೆ ೧೯೮೧ರಲ್ಲಿ ಸಿ.ಪಿ.ಐ ಎಂ.ಎಲ್ ಪೀಪಲ್ಸ್ ವಾರ್‌ಗ್ರೂಪ್‌ನವರು ಲೈಂಗಿಕ ಮತ್ತು ಕೌಟುಂಬಿಕ ಹಿಂಸೆ, ವರದಕ್ಷಿಣೆ ದೇಶೀಯ ಶರಾಬಿನ ವಿರುದ್ಧ ನಡೆದ ಚಳುವಳಿಗೆ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ'' ಇದನ್ನು ತಾತ್ವಿಕ ಚರಿತ್ರೆಗಳು ದಾಖಲಿಸಿವೆ. ಮಹಿಳೆ ತನ್ನ ಬದುಕಿನ ಸುತ್ತ ಕಟ್ಟಿಕೊಳ್ಳುತ್ತಿದ್ದ ಸಾಮಾಜಿಕ ಚಳುವಳಿಗಳೂ ಕೂಡ ಆ ಸಂದರ್ಭದ ಸಾಂಸ್ಕೃತಿಕ ಬದುಕಿನ ಪರ ಎಚ್ಚರಿಕೆಯ ಧ್ವನಿಗಳಾಗಿದ್ದವು. ಮಹಿಳೆಯರು ತಮ್ಮ ಸುತ್ತ ಕಟ್ಟಲ್ಪಟ್ಟಿರುವ ಸಾಂಪ್ರದಾಯಿಕ ಮೌಲ್ಯಗಳನ್ನು, ಜವಾಬ್ದಾರಿಗಳನ್ನು ತಿರಸ್ಕರಿಸುವುದರ ಜೊತೆಗೆ ಎಷ್ಟೋ ಕಾಲದಿಂದ ಸ್ಥಿರವಾಗಿರುವ ಮಾನ್ಯವಾಗಿರುವ ಸಾಮಾಜಿಕ ವ್ಯವಸ್ಥೆಯನ್ನು ತೀವ್ರವಾಗಿ ಪ್ರಶ್ನಿಸುವ ನೆಲೆಯಲ್ಲಿಂದು ಇದ್ದಾರೆ. ಇಂದು ಮಹಿಳೆಯರ ಶೋಷಣೆಗೆ ಕುಟುಂಬವೇ ಪ್ರಧಾನ ಕೇಂದ್ರವಾಗಿ ಕಾಣುತ್ತಿದೆ. ಮನೆಯಲ್ಲಿರುವ ಗೃಹಿಣಿಯ ಕಾಲಿಗೆ ಸಂಪ್ರದಾಯದ ಸರಪಳಿಯನ್ನು ಬಿಗಿದು ಮೂಲೆ ಗುಂಪು ಮಾಡಲಾಗಿದೆ. ಇಂದಿನ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ಶೋಷಣೆ ಮಾಡುತ್ತಿರುವ ಈ ಸಂದರ್ಭದಲ್ಲಿ ಅನೇಕ ಯೋಜನೆಗಳು ಮಹಿಳೆಯ ಬದುಕಿನ ಸುತ್ತ ನೆಲೆಯೂರಿ ಮೇಲೆತ್ತಲು ಕಾಣಿಸಿಕೊಂಡಿವೆ. ಮಹಿಳಾ ಸಬಲೀಕರಣ, ಸ್ತ್ರೀ ಸ್ವ ಸಹಾಯ ಗುಂಪುಗಳು ಅವರ ಆರ್ಥಿಕ ಸ್ವಾವಲಂಬನೆಗಾಗಿ ಹೊಸ ಯೋಜನೆಗಳು ಸೃಷ್ಟಿಯಾಗಿವೆ. ಸ್ತ್ರೀಯರು ಇಂದು ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ಸಮಾನತೆಯ ನೆಲೆ ಕಾಣಲು ಹೋರಾಟದ ಹಾದಿಯಿಡಿದು ಸಾಗಿದ್ದಾರೆ. ''ಮಂಡಲವರದಿಯ ವಿರುದ್ಧದ ಪ್ರತಿಭಟನೆಗಳಲ್ಲಿ ಮೇಲ್ಜಾತಿಯ ಸ್ತ್ರೀಯರು ಸೇರಿಕೊಂಡು ಹೆಚ್ಚಿನ ಸಂಖ್ಯೆಯಲ್ಲಿ ಬೀದಿಗಿಳಿದು ಹೋರಾಟ ಮಾಡಿದ್ದಾರೆ. ಹಾಗೇ ದೇಶದಲ್ಲಿ ಹುಟ್ಟುಹಾಕಲ್ಪಟ್ಟ ರಾಮಜನ್ಮ ಭೂಮಿ ಚಳುವಳಿಯಲ್ಲಿ ಪ್ರಖ್ಯಾತ ನಾಯಕರ ಗುಂಪಿನಲ್ಲಿ ಸಾಕಷ್ಟು ಜನ ಮಹಿಳೆಯರು ಪಾಲ್ಗೊಂಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಭಾರತೀಯ ಜನತಾಪಕ್ಷವು ಚುನಾವಣಾ ಪ್ರಚಾರ ಸಭೆಗಳಲ್ಲಿ ಮಹಿಳೆಯರನ್ನು ಮತ್ತು ದಲಿತರನ್ನು ಪ್ರಮುಖ ತಲುಪುಬಿಂದುಗಳಾಗಿ ಗುರುತಿಸಿಕೊಂಡಿದೆ.''[೩೪] ಉಮಾಭಾರತಿ, ಮಮತಾ ಬ್ಯಾನರ್ಜಿ, ಮಾಯಾವತಿ, ಸೋನಿಯಾಗಾಂಧಿ ಮುಂತಾದವರು ತಾವು ನಂಬಿದ ರಾಜಕೀಯ ಸಿದ್ಧಾಂತಗಳೊಂದಿಗೆ ಹೋರಾಟಕ್ಕೆ ನಿಂತು ವಿವಿಧ ರಾಜಕೀಯ ಸ್ಥಿತ್ಯಂತರಗಳಿಗೆ ಕಾರಣವಾಗಿದ್ದನ್ನು ಇಲ್ಲಿ ಮಹಿಳಾ ಪ್ರತಿನಿಧಿಕರಣದ ನೆಲೆಯಲ್ಲಿ ಗುರುತಿಸಬಹುದು. ಪರಿಸರ ಚಳುವಳಿ ಹಾಗೂ ನರ್ಮದಾ ಬಚಾವತ್ ಆಂಧೋಲನದ ಮೂಲಕ ಪ್ರಸಿದ್ಧಿಯಾದ ಮೇಧಾಪಾಟ್ಕರ್ ಹೆಸರನ್ನೂ ಇಲ್ಲಿ ಉಲ್ಲೇಖಿಸಬೇಕು.

ಸಾಕ್ಷರತಾ ಚಳುವಳಿಗಳಲ್ಲಿಯೂ ಕೂಡ ಮಹಿಳಾ ಪ್ರತಿನಿಧಿಕರಣವನ್ನು ಗುರಿತಿಸಬಹುದಾಗಿದೆ. ಪಾಂಡಿಚೇರಿ ಮತ್ತು ಆಂಧ್ರ ಪ್ರದೇಶದ ರಾಜ್ಯಗಳಲ್ಲಿ ಮಹಿಳೆಯರು ಈ ಸಾಕ್ಷರತಾ ಚಳುವಳಿಗಳಲ್ಲಿ ವಿಪುಲವಾದ ಸಂಖ್ಯೆಯಲ್ಲಿ ಭಾಗವಹಿಸಿರುವುದನ್ನು ಚರಿತ್ರೆಗಳು ಹೇಳುತ್ತವೆ. ಆಂಧ್ರ ಪ್ರದೇಶದ ಗ್ರಾಮೀಣ ಮಹಿಳೆಯರು ಪಾನ ನಿರೋಧ

ಚಳುವಳಿಯಲ್ಲಿ ಪಾಲ್ಗೊಂಡಿದ್ದರ ಪರಿಣಾಮವಾಗಿ ಆ ರಾಜ್ಯದ ಅರ್ಥ ವ್ಯವಸ್ಥೆಯನ್ನೇ ಅಸ್ಥಿರಗೊಳಿಸಿತು. ಹೀಗೆ ಒಂದು ಕಾಲದಲ್ಲಿ ಸಂಪ್ರದಾಯದ ಉರುಲಿಗೆ ಬಲಿಯಾಗಿದ್ದ ಮಹಿಳೆ ಇಂದು ಸಾರ್ವಜನಿಕ ಬದುಕಿನಲ್ಲಿ ತನ್ನ ಸ್ಥಾನವನ್ನು ಕಂಡುಕೊಳ್ಳುತ್ತಿದ್ದಾಳೆ. ಇಂದಿನ ಪ್ರಸ್ತುತ ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಸ್ತ್ರೀಯರು ಹೊಸದಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ''ಬಿ.ಜೆ.ಪಿಯ ಸಂಸದೆಯಾಗಿದ್ದ ಉಮಾಭಾರತಿ ಸರಾಯಿ ವಿರೋಧಿ ಚಳುವಳಿಯಲ್ಲಿ ಭಾಗವಹಿಸಿದ್ದ ಹೆಂಗಸರನ್ನು ಪ್ರಶಂಸಿಸುತ್ತಾ ಸ್ತ್ರೀಯರು ವರದಕ್ಷಿಣೆ ವಿರುದ್ಧ ವಿದೇಶಿ ವಸ್ತುಗಳ ಬಗೆಗಿನ ಮೋಹದ ವಿರುದ್ಧ ಮತ್ತು ಭ್ರಷ್ಟಾಚಾರದ ವಿರುದ್ಧ ಸಹ ಚಳುವಳಿ ಮಾಡಬೇಕು. ಸ್ತ್ರೀಯರು ಸ್ವದೇಶಿ ಜಾಗರಣವನ್ನು ಸೃಷ್ಟಿಸಲು ಸಹಾಯ ಮಾಡಬೇಕು''[೩೫] ಎಂಬುದು ಅವರ ಇಚ್ಛೆಯಾಗಿತ್ತು.

ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಭವಿಸಿದ ಅನೇಕ ಸಾಮಾಜಿಕ, ಆರ್ಥಿಕ ಬದಲಾವಣೆಗಳನ್ನು ಗಮನಿಸಿದಾಗ ''ಈ ಸ್ತ್ರೀವಾದಿ ಸಿದ್ಧಾಂತಕ್ಕಿದ್ದ ಮುಖ್ಯ ಕೆಲಸವೆಂದರೆ ಬೇರೆ ಬೇರೆ ವಿಧದಲ್ಲಿ ಸಾರ್ವತ್ರೀಕರಣಗಳಿಂದ ಅದೃಶ್ಯವಾಗಿದ್ದಂತ 'ಲಿಂಗ'ವನ್ನು ಒಂದು ಸ್ಪಷ್ಟವಾಗಿ ಸ್ಥಾಪಿಸುವುದಾಗಿತ್ತು. ಹೈದರಾಬಾದ್‌ನಲ್ಲಿ ಹೆಂಗಸರನ್ನು ಛೇಡಿಸುವುದರ ವಿರುದ್ಧ ಸ್ತ್ರೀಯರು ಕೈಗೆತ್ತಿಕೊಂಡ ಚಳುವಳಿಯು ವಿಶ್ವವಿದ್ಯಾಲಯದಲ್ಲಿ ಮಾತ್ರವಲ್ಲ ಬೀದಿಗಳಲ್ಲಿ ಮತ್ತು ಎಲ್ಲ ರೀತಿಯ ಕೆಲಸದ ಸ್ಥಳಗಳಲ್ಲಿ ಹೆಂಗಸರು ಪ್ರತಿದಿನವೂ ಎದುರಿಸುತ್ತಿರುವ ಪರಿಸ್ಥಿತಿಯನ್ನು ಬೆಳಕಿಗೆ ತಂದಿತು''[೩೬] ಈ ಸಂದರ್ಭದಲ್ಲಿ ಮಹಿಳೆಯರು ಸಾಂಸ್ಕೃತಿಕ ಮತ್ತು ಆರ್ಥಿಕ ಸಂಬಂಧಗಳನ್ನು ಕುರಿತು ಹೆಚ್ಚಿನ ಸೂಕ್ಷ್ಮತೆಯನ್ನು ಹೊಂದುವಂತೆ ಕಾನೂನು ಮಾರ್ಪಡಿಸುವಂತ ಬದಲಾವಣೆಗಾಗಿ ಮಹಿಳೆಯರು ಒತ್ತಾಯಿಸಿದರು. ಮಹಿಳೆಯರ ಸಾಂಸ್ಕೃತಿಕ, ಆರ್ಥಿಕ ಸಂಬಂಧಗಳನ್ನು ಕುರಿತು ನಡೆಸುತ್ತಿದ್ದ ಹೋರಾಟಗಳಲ್ಲಿ ಮಹಿಳಾ ಸಂಘಟನೆಗಳ ಪಾತ್ರವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಕಳೆದ ಕಾಲು ಶತಮಾನದಲ್ಲಿ ಭಾರತೀಯ ಸ್ತ್ರೀವಾದಿ ಚಿಂತನೆಯ ಹೊಸ ಹೊಸ ಮಗ್ಗಲುಗಳಿಗೆ ಬಾಚಿಕೊಳ್ಳುತ್ತಾ ತನ್ನ ಚಲನಶೀಲತೆಯ ಮೂಲಕ ವ್ಯಾಪಕವಾಗಿ ವಿಸ್ತಾರಗೊಳಿಸಿಕೊಳ್ಳುತ್ತಿದೆ. ಭಾರತದಲ್ಲಿ ಮಹಿಳಾವಾದಿ ಪ್ರಜ್ಞೆಯು ಹೊಸ ಆಲೋಚನ ಕ್ರಮದಲ್ಲಿಂದು ಸಾಗುತ್ತಿದೆ. ಇದಕ್ಕೆ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯ ಪ್ರಭಾವ ಕಂಡರೂ ಕಾಲಾಂತರದಲ್ಲಿ ಇವುಗಳನ್ನು ಮೀರಿ ಭಾರತೀಯ ಸ್ತ್ರೀವಾದದ ಮುಖ್ಯ ಬೆಳವಣಿಗೆಯಾಗಿದೆ. ಇಂದಿನ ಮಹಿಳಾ ನೆಲೆಯ ಅಸ್ತಿತ್ವವನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು. ಒಂದು ಬೌದ್ಧಿಕ ಮಟ್ಟದ ಉನ್ನತ ಚಿಂತನೆಗಳು ಆರಂಭದಲ್ಲಿ ಶೈಕ್ಷಣಿಕ ವಲಯದ ಬುದ್ಧಿಜೀವಿಗಳಿಗೆ ಸೀಮಿತಗೊಂಡರೂ ಮುಂದೆ ಶ್ರಮಜೀವಿಗಳ ತನಕವೂ ಹರಿದು ಬಂದು ವೇದಿಕೆಗಳಾಗಿ ಮಹಿಳಾ ಸಂಘಟನೆಗಳಾಗಿದ್ದುದನ್ನು ಮರೆಯುವಂತಿಲ್ಲ. ಇಂದಿನ ಮಹಿಳಾ ಪರ ಚಿಂತನೆಗಳು ಕೂಡ ಮುಖ್ಯವಾಗಿ ದೇಶೀವಾದದ ಸಂಸ್ಕೃತಿ ಚಿಂತನೆಗಳ ಪ್ರಭಾವಲಯದಲ್ಲಿ ವಿಭಿನ್ನ ಮಗ್ಗಲುಗಳಲ್ಲಿ ಮೈಚಾಚಿಕೊಳ್ಳುತ್ತಿದೆ. ಸ್ತ್ರೀವಾದಿ ನೆಲೆಯು ರಾಜಕೀಯ, ಸಾಮಾಜಿಕ, ಸಾಹಿತ್ಯಕ ವಲಯಗಳಲ್ಲಿ ತನ್ನನ್ನು ಗುರುತಿಸಿಕೊಂಡಿರುವುದನ್ನು ಕಾಣುತ್ತೇವೆ.

ಜಾಗತೀಕರಣದ ಪ್ರಭಾವ ಮತ್ತು ಕಾರಣಗಳಿಂದ ಸಾರ್ವಜನಿಕ ಶಿಕ್ಷಣ, ಆರೋಗ್ಯ, ಉದ್ಯೋಗ ಕ್ಷೇತ್ರಗಳಲ್ಲಿ ಅನೇಕ ಬದಲಾವಣೆಗಳು ಉಂಟಾದವು. ಈ ಬದಲಾವಣೆಯ ಪರಿಣಾಮ ಬೀರಿರುವುದು ಮೊದಲು ಮಹಿಳೆಯ ಮೇಲಾಗಿದೆ. ಈಗಿನ್ನು ಮೀಸಲಾತಿ ಯೋಜನೆಗಳ ಫಲವನ್ನು ಅನುಭವಿಸಲು ಆರಂಭಿಸಿರುವ ದಲಿತ ಶೂದ್ರ ಮಹಿಳೆಯರಿಗೆ ಜಾಗತೀಕರಣ ಪ್ರಕ್ರಿಯೆಯಿಂದಾಗಿ ಮತ್ತೆ ಹಿನ್ನಡೆ ಉಂಟಾಗುತ್ತಿದೆ. ಅನಿಶ್ಚಿತ ಉದ್ಯೋಗ ಪರಿಸ್ಥಿತಿಗಳು

ಅವಳ ಆದಾಯ ಮೂಲಗಳ ಮೇಲೆ ವಿಪರೀತವಾದ ಪರಿಣಾಮವನ್ನು ಉಂಟುಮಾಡುತ್ತಿವೆ. ಆರ್ಥಿಕ ಉದಾರೀಕರಣ ನೀತಿಯಿಂದ ಶಿಕ್ಷಣ ಕ್ಷೇತ್ರಕ್ಕೆ ಅನುದಾನವನ್ನು ಸರ್ಕಾರಗಳು ಕಡಿತಗೊಳಿಸಲಾಯಿತು. ಶಿಕ್ಷಣ ಮುಂದೆ ಶ್ರೀಮಂತ ಸಂಘ ಸಂಸ್ಥೆಗಳಿಂದ ಈ ಶಿಕ್ಷಣ ಸಂಸ್ಥೆಗಳು ನಡೆಯುವಂತಾದಾಗ ಮೇಲ್ವರ್ಗದ ಶ್ರೀಮಂತ ಮಹಿಳೆಯರು ಮಾತ್ರ ಶಿಕ್ಷಣ ಪಡೆಯಲು ಸಾಧ್ಯವಾಯಿತು. ಗ್ರಾಮೀಣ ಮಹಿಳೆಯರು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿಯ ಬಡ ಹಾಗೂ ಹಿಂದುಳಿದ ಮಹಿಳೆಯರು ಶಿಕ್ಷಣ ಪಡೆಯಲು ಹೋಗ ಬಹುದಾದ ಸಾಧ್ಯತೆಗಳು ಕಡಿಮೆಯಾದವು.

''ಎಂಬತ್ತರ ಕೊನೆಯ ಮತ್ತು ತೊಂಬತ್ತರ ಮೊದಲ ವರ್ಷಗಳ ಕಾಲಮಾನದಲ್ಲಿ ಜರುಗಿದ ಮಂಡಲ ವರದಿ, ಮಂದಿರ ಮಸೀದಿ ಚರ್ಚೆ, ಫಂಡ್ ಬ್ಯಾಂಕ್ ವರ್ಷಗಳು ಮಹಿಳೆಯನ್ನು ರಾಜಕೀಯವಾಗಿ ಅನೇಕ ಕಟ್ಟೊಂದಕ್ಕೆ ಮುಖಾಮುಖಿಯಾಗಿಸಿದೆ. ಹೊಸ ಸಂಬಂಧಗಳನ್ನು ಕಟ್ಟಿಕೊಳ್ಳುವ ಮೂಲಕ ಮಹಿಳಾ ರಾಜಕಾರಣ ಹೊಸ ರೂಪಗಳನ್ನು ವಿಸ್ತರಿಸಿಕೊಳ್ಳಲು ಪ್ರಾರಂಭಿಸಿದ್ದಾರೆ.''[೩೭] ಪ್ರಸ್ತುತ ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಎಂತಹ ಸಂದಿಗ್ಧತೆಗಳು ನಮ್ಮ ಮುಂದೆ ಸೃಷ್ಟಿಯಾಗಿವೆಯೆಂದರೆ ಮೊದಲಿಟ್ಟಿದ್ದ ಹೆಜ್ಜೆಗಳಲ್ಲಿ ಗುಪ್ತಗಾಮಿಯಾಗಿದ್ದ ವೈರುದ್ಯಗಳು ಸೃಷ್ಟಿಯಾಗುತ್ತಿವೆ. ಮಂಡಲ್ ವಿರೋಧಿ ಪ್ರತಿಭಟನೆಯಲ್ಲಿ ಹೆಂಗಸರು ಅನೇಕ ಬಾರಿ ಮುಕ್ತ ಸಮಾನ ಪ್ರಜೆಗಳ ಹಾಗೆ ಕಾಣಿಸುತ್ತಾರೆಯೇ ಹೊರತು ಲಿಂಗವಿರುವ ಜೀವಿಗಳಾಗಿ ಅಲ್ಲ. ಇಲ್ಲಿ ಮಹಿಳೆಯ ಪ್ರತಿಭಟನೆ ಮಾಡುತ್ತಿದ್ದುದು ಗಂಡಸರ ಸಹಾನುವರ್ತಿಗಳಾಗಿ ತಮ್ಮ ಹಕ್ಕುಗಳು ಕರಗಿ ಹೋಗುತ್ತಿರುವ ವಿರುದ್ಧ ಜತೆ ಜತೆಯಾಗಿ ಪ್ರಭಟಿಸುತ್ತಿರುವವರಾಗಿ ಕಾಣಿಸಿಕೊಂಡಿದ್ದಾರೆ. ಈ ಚಳುವಳಿಯ ಸಂದರ್ಭದಲ್ಲಿ ಮಾಧ್ಯಮಗಳು ಮಹಿಳೆಯರನ್ನು ಎದ್ದು ಕಾಣುವಂತೆ ಮನ್ನೆಲೆಗೆ ತಂದದ್ದಷ್ಟೆ ಅಲ್ಲ. ಮಹಿಳೆಯರೂ ಕೂಡ ದೊಡ್ಡ ಸಂಖ್ಯೆಯಲ್ಲಿ ಹೋರಾಟದಲ್ಲಿ ಭಾಗವಹಿಸಿದ್ದರು.

ಹಿಂದುತ್ವಕ್ಕೆ ಸಂಬಧಿಸಿದಂತೆ ''ಬಲ ಪಂಥೀಯ ಹೆಂಗಸರೂ ಸಹ ಸ್ತ್ರೀವಾದಿ ಎಂದು ಕರೆಯಬಹುದಾದ ಅವಕಾಶವೊಂದನ್ನು ಕಲ್ಪಿಸಿದ್ದಾರೆ. ರಾಷ್ಟ್ರ ಸೇವಿಕಾ ಸಮಿತಿ (ಆರ್.ಎಸ್.ಎಸ್.ಮಹಿಳಾ ವಿಭಾಗ)ಯನ್ನು ಕುರಿತ ಅಧ್ಯಯನವೊಂದರಲ್ಲಿ ತನಿಖಾ ಸರ್ಕಾರ ಸೂಚಿಸುವಂತೆ ಮಹಿಳೆಯರು ಕೇವಲ ಸಮಿತಿಯಲ್ಲಿ ಮಾತ್ರ ಸಕ್ರೀಯ ರಾಜಕೀಯ ಪ್ರಜೆಗಳಲ್ಲವೆಂದೂ ಬದಲಾಗಿ ಹೆಚ್ಚು ವಿಶಾಲ ವ್ಯಾಪ್ತಿಯನ್ನು ಹೊಂದಿರುವ ಕೋಮು ರಾಜಕಾರಣದಲ್ಲಿ ಭಾಗಿಗಳಾಗಿದ್ದಾರೆ. ಬಿ.ಜೆ.ಪಿ.ಯ ಮಹಿಳಾ ನಾಯಕಿಯರು ಆಪಕ್ಷದ ಪುರುಷ ನಾಯಕರ ಮಕ್ಕಳು ಹೆಂಡತಿಯರು ಅಥವಾ ತಾಯಿಯರಲ್ಲ. ಅವರು ತಮ್ಮ ಕಾಲ ಮೇಲೆ ನಿಂತಿದ್ದಾರೆ. ಮತ್ತು ತಮಗಾಗಿ ವಿಶಿಷ್ಟವಾದ ರಾಜಕೀಯ ಪಾತ್ರಗಳನ್ನು ಮತ್ತು ಅಸ್ಮಿತತೆಗಳನ್ನು ಸೃಷ್ಟಿಸಿಕೊಂಡಿದ್ದಾರೆ.''[೩೮] ಎಂಬ ನಿಲುವೂ ವ್ಯಕ್ತವಾಗಿದೆ.

೧೯೯೨ರ ಅಯೋಧ್ಯೆಯ ಕರಸೇವೆಯಲ್ಲಿ ಹೆಂಗಸರು ವಿಪುಲ ಸಂಖ್ಯೆಯಲ್ಲಿ ಭಾಗವಹಿಸಿದ್ದನ್ನು ಕೆಲವು ಛಾಯ ಚಿತ್ರಗಳು ತೋರಿಸಿಕೊಟ್ಟಿವೆ. ಬಾಬರಿ ಮಸೀದಿಯನ್ನು ಉರುಳಿಸಿದ ಗುಂಪನ್ನು ಸಾಧ್ವಿರಿತಾಂಬರಾ ಮತ್ತು ಉಮಾಭಾರತಿಯವರು ಹುರಿದುಂಬಿಸಿದ್ದನ್ನು ಅನೇಕ ಪತ್ರಿಕೆಗಳು ವರಧಿಮಾಡಿವೆ. ಮಂಡಲ ವರದಿ ಚಳುವಳಿ ಹಿಂದುತ್ವವನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ನಡೆದ ಚಳುವಳಿಗಳಲ್ಲಿ ಮಹಿಳೆಯರು ವಿಪುಲ ಸಂಖ್ಯೆಯಲ್ಲಿ ಭಾಗವಹಿಸಿರುವುದನ್ನು ಇಲ್ಲಿಸ್ಮರಿಸಿಕೊಳ್ಳಬಹುದಾಗಿದೆ.

ಇಂದು ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಮಾತ್ರ ಪ್ರಧಾನ ಮೌಲ್ಯಗಳ ಸಮಾಜಗಳು ಕ್ರಮೇಣ ನಶಿಸಿಹೋಗುತ್ತಿವೆ. ಆದರೂ ಕೆಳಜಾತಿ ಮತ್ತು ಆದಿವಾಸಿ ವರ್ಗಗಳಲ್ಲಿ ಮಹಿಳಾ ಬದುಕಿನ ಪ್ರಶ್ನೆಯನ್ನು ಕುರಿತು ಹೇಳುವುದಾದರೆ ಆ ಸಮುದಾಯಗಳು ಶಕ್ತಿ ಶಾಲಿಯಾಗಿವೆ.

ಕೊನೆಯಲ್ಲಿ ಮಹಿಳಾ ಬದುಕಿನ ಪ್ರಶ್ನೆಗೆ ಕನ್ನಡ ಸಾಹಿತ್ಯ ಸ್ಪಂದಿಸಿರುವ ರೀತಿಯೂ ಅನನ್ಯವಾಗಿರುವಂತದ್ದಾಗಿದೆ. ಇಂದು ಸ್ತ್ರೀವಾದಿ ಸಾಹಿತ್ಯದ ಮುಖ್ಯ ಗುಣವೆಂದರೆ ತಾರ್ಕಿಕತೆ ಮತ್ತು ಪಾರದರ್ಶಕತೆ ಸ್ತ್ರೀ ಬದುಕಿನ ಅನನ್ಯ ನೆಲೆಯನ್ನು ತಾರ್ಕಿಕವಾಗಿ ಚಿತ್ರಿಸಿರುವುದು ಈ ತಾರ್ಕಿಕ ಪಾರದರ್ಶಕ ಗುಣ ಮಹಿಳಾ ಸಾಹಿತ್ಯದ ಆಕೃತಿಯಲ್ಲಿ ನಿರ್ಣಾಯ ಅಂಶಗಳಾಗಿವೆ. ಹೀಗೆ ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಮಹಿಳಾ ಪ್ರಶ್ನೆಯು ಅನನ್ಯ ರೀತಿಯಲ್ಲಿ ಹೊಸ ಬೆಳವಣಿಗೆಯಾಗಿ, ವಿದ್ಯಮಾನವಾಗಿ, ಕಾಣಿಸಿಕೊಂಡಿದೆ.

**೩.೨.೮. ಜಾಗತೀಕರಣದ ಪ್ರಭಾವ**

ಕನ್ನಡ ಸಾಹಿತ್ಯ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿ ಸಂದರ್ಭದಲ್ಲಿ ಜಾಗತೀಕರಣ ಪ್ರಭಾವವು ಬಹುಮುಖಿಯಾದ ಚರ್ಚೆಗೆ ಒಳಗಾಗುತ್ತಿರುವ ಸಂಗತಿಯಾಗಿದೆ. ಜಾಗತೀಕರಣದ ವಿರುದ್ಧ ಹುಟ್ಟಿಕೊಂಡಿರುವ ಸಾಮಾಜಿಕ ಚಳುವಳಿಗಳು ಇಂದು ಹೊಸ ಹೊಸ ಬದುಕನ್ನು ಕಟ್ಟಿಕೊಡುವ ಪ್ರಸ್ತಾಪಗಳನ್ನು ಎತ್ತುತ್ತಿವೆ. ನಮ್ಮ ಸಂಸ್ಕೃತಿಯನ್ನು ಜಾಗತೀಕರಣವು ಕುರೂಪಗೊಳಿಸುತ್ತವೆಯೆಂಬ ಅಪವಾದವೂ ಇಂದು ಕೇಳಿಬರುತ್ತಿದೆ.

ಹಾಗಾದರೆ ಈ ಜಾಗತೀಕರಣವೆಂದರೇನು? ಎಂಬ ಪ್ರಶ್ನೆಗೆ ವಿಭಿನ್ನವಾದಂತಹ ವಿಚಾರ ಧಾರೆಗಳು ನಾನಾ ರೂಪದಲ್ಲಿ ಅರ್ಥೈಸಿವೆ. ಜಾಗತೀಕರಣವೆನ್ನುವುದು ವಿಶ್ವ ಆರ್ಥಿಕ ಸಂಬಂಧಗಳು, ವಿಶ್ವರಾಜಕೀಯ ಸಂಪರ್ಕದಿಂದ ಹಳೆಯ ಜಗತ್ತಿನ ಹಿಂದುಳಿದ ಸಮುದಾಯಗಳ ಜೊತೆಗೆ ರೂಪಿಸಿಕೊಳ್ಳುತ್ತಿರುವ ಆಧುನಿಕ ಸಾಂಸ್ಕೃತಿಕ ರೂಪಾಂತರಗಳ ವಿಕಾಸವೂ ಆಗಿದೆ. ಮತ್ತೊಂದು ನೆಲೆಯಲ್ಲಿ ವಿಶ್ಲೇಷಿಸುವುದಾದರೆ ಉತ್ಪಾದನೆ ಮತ್ತು ವಿತರಣೆಗಳ ನಡುವೆ ಕಾಲ, ದೇಶವನ್ನು ಅಳಿಸಿ ಹಾಕುವುದೇ ಜಾಗತೀಕರಣವಾಗಿದೆ. ಇಂದಿನ ಹೊಸ ಜಗತ್ತಿನ ತಂತ್ರಜ್ಞಾನ ವಿಜ್ಞಾನದ ಕುಶಲತೆ ಹಾಗೂ ಬೌದ್ಧಿಕ ಸಂಯೋಗ ಕ್ರಿಯೆಗಳನ್ನು ವಿಕೇಂದ್ರಿಕರಣಗೊಳಿಸುವ ಹಂತವಾಗಿ ಜಾಗತೀಕರಣವು ತೃತೀಯ ಜಗತ್ತಿನ ನಾಗರೀಕತೆಯ ಸವಾಲುಗಳನ್ನು ಮುಖಾಮುಖಿಯಾಗಿಸುವುದಾಗಿದೆ. ಈ 'ಜಾಗತೀಕರಣ'ವೆನ್ನುವಂತದ್ದು ಮನುಷ್ಯನ ಸಾಮಾಜಿಕ ಜೀವನದ ವಿಸ್ತೃತ ಚಾರಿತ್ರಿಕ ಪ್ರಕ್ರಿಯೆಯಲ್ಲಿ ಹೆಣೆದುಕೊಂಡಿರುವ ಒಂದು ಸಂಕೀರ್ಣ ಪ್ರಕ್ರಿಯೆಯೂ ಆಗಿದೆ. 'ಜಾಗತೀಕರಣ'ವು ಮುಕ್ತ ವ್ಯಾಪಾರ-ವ್ಯವಹಾರಗಳ ನೆಪಮಾಡಿಕೊಂಡು, ದೈಹಿಕ ಲೋಲುಪತೆಯನ್ನೆ ಮುಖ್ಯ ಪ್ರಾಣವಾಗಿಸಿಕೊಂಡಿರುವ ಕೀಳಾದ 'ಪಾಶ್ಚಾತ್ಯ ಸಂಸ್ಕೃತಿ'ಯನ್ನು ನಮ್ಮ ಮೇಲೆ ಹರಿಬಿಡುತ್ತಿದೆ. ಈ ಪ್ರಕ್ರಿಯೆಯಿಂದ ಶ್ರೇಷ್ಠವೂ ಅನನ್ಯವೂ ಆದ 'ನಮ್ಮ ಸಂಸ್ಕೃತಿಯು' ಅಪಾಯದಲ್ಲಿ ಸಿಲುಕಿಬಿಟ್ಟಿದೆ. ಈ ರೀತಿಯಲ್ಲಿ ಜಾಗತೀಕರಣವು ದೇಶೀಯ ಸಂಸ್ಕೃತಿಯ ಮೇಲೆ ಪರಕೀಯ ಸಂಸ್ಕೃತಿಯು ನಡೆಸುತ್ತಿರುವ ಆಕ್ರಮಣವಾಗಿದೆ. ಇದು ವಸಾಹತುಶಾಹಿಯ ಮುಂದುವರಿಕೆಯೂ ಆಗಿದೆ.

''ವಸಾಹತುಶಾಹಿಯಲ್ಲಿ ತೃತೀಯ ಜಗತ್ತಿನ ದೇಶಗಳ ಮೇಲೆ ಯಜಮಾನಿಕೆ ನಡೆಸಿದ್ದು ಐರೋಪ್ಯ ದೇಶಗಳಾದರೆ ಜಾಗತೀಕರಣದಲ್ಲಿ ಯಜಮಾನಿಕೆ ಅಮೇರಿಕದಲ್ಲಿ ಕೇಂದ್ರಿಕೃತವಾಗಿದೆ. ಅಮೇರಿಕ ಇದನ್ನು ಸಾಧಿಸಿರುವುದು ತನ್ನ ಪ್ರಜಾಪ್ರಭುತ್ವದಿಂದ ಅಲ್ಲ. ತನ್ನ ವೈಚಾರಿಕತೆಯಿಂದಲೂ ಅಲ್ಲ. ಅಮೇರಿಕದ ಯಜಮಾನಿಕೆಯ ಹಿಂದೆ ಅಮೇರಿಕದ

ಮಿಲಿಟರಿ ಶಕ್ತಿಯಿದೆ. ಇದರಿಂದಾಗಿ ಮೂರನೇ ಜಗತ್ತಿನ ದೇಶಗಳ ಪ್ರಜಾಸತ್ತಾತ್ಮಕ ಹೋರಾಟಗಳನ್ನು ಉಗ್ರವಾಗಿ ದಮನಿಸಿದ ಕರಾಳ ಚರಿತ್ರೆಯೂ ಅಮೇರಿಕದ್ದಾಗಿದೆ.''[೫೯] ಎಂಬ ಜಿ.ರಾಜಶೇಖರರ ವಿಶ್ಲೇಷಣೆಯ ಹಿಂದೆ ಜಾಗತೀಕರಣ ಪರಿಣಾಮಗಳೂ ಚರ್ಚಿತವಾಗಿವೆ.

ಈ ಜಾಗತೀಕರಣದ ಹಿನ್ನಲೆಯತ್ತ ಚರ್ಚೆಯನ್ನು ಬೆಳೆಸಿದಾಗ ಅಮೇರಿಕಾದ ಸಮಾಜ ವಿಜ್ಞಾನಿ ಮಾರ್ಶಲ್ ಮೊಹನ್ ೧೯೬೦ ರಲ್ಲಿ 'ಎಕ್ಸ್‌ಪ್ಲೋರೇಷನ್ ಇನ್ ಕಮ್ಯುನಿಕೇಷನ್' ಎಂಬ ಗ್ರಥದಲ್ಲಿ ಮೊದಲ ಬಾರಿಗೆ 'ಗ್ಲೋಬಲ್ ವಿಲೇಜ್' ಎಂಬ ಪದವನ್ನು ಬಳಸಿ ವಿವರಿಸಿದ 'ಗ್ಲೋಬಲ್' ಎಂದರೆ ಸದೃಢತೆ, ವಿಶ್ವಪ್ರಜ್ಞೆ, ಹೊಸತನ, ಸಮುಷ್ಠಿ ಎಂಬ ಅರ್ಥಗಳು ಆಕ್ಸ್‌ಫರ್ಡ್ ಯೂನಿವರ್ಸಿಟಿಯ ಅರ್ಥಕೋಶದಲ್ಲಿವೆ.

ಇಂದು ಮಾಹಿತಿ ತಂತ್ರಜ್ಞಾನದ ಮೂಲಕವೇ ಜಗತ್ತಿನ ಎಲ್ಲಾ ಚಟುವಟಿಕೆಗಳನ್ನು ನಿಯಂತ್ರಿಸುವ, ರೂಪಿಸುವ ಕ್ರಾಂತಿಕಾರಿಯುಗಕ್ಕೆ 'ಜಾಗತೀಕರಣ' ಪ್ರೇರೇಪಿಸುತ್ತದೆ. ಇಡೀ ಜಗತ್ತಿಗೆ, ಅಂದರೆ ದೇಶ ದೇಶಗಳ ನಡುವೆ ಆರ್ಥಿಕ ನಿಯಮಗಳನ್ನು ಅಳಿಸಿಹಾಕಿ ಮುಕ್ತವಾದ ಆರ್ಥಿಕ ಸಂಬಂಧವನ್ನು ನೆಲೆಗೊಳಿಸುವುದು, ಜಗತ್ತಿಗೆ ನಿಕಟವಾದ ಸಂಬಂಧವನ್ನು ಏರ್ಪಡಿಸುವುದು. ಮತ್ತು ಇಡೀ ಜಗತ್ತೆ ಒಂದು ಹಳ್ಳಿಯೆಂದು ಕರೆಯುವುದರ ಮೂಲಕ ಜಗತ್ತಿನ ಎಲ್ಲಾ ಮಾನವ ಸಂಪರ್ಕಗಳು ಅರ್ಥಪೂರ್ಣವಾಗಿ ವಿಕಾಸವಾಗುವುದರ ಅಗತ್ಯವನ್ನು ಜಾಗತೀಕರಣ ಪ್ರತಿಪಾದಿಸುತ್ತದೆ. ಜೊತೆಗೆ ಇಂದಿನ ನಮ್ಮ ಭಾಷಿಕವಾದಂತ ಜೀವನಶೈಲಿಯನ್ನು ತನ್ನ ಆಧೀನಕ್ಕೆ ತೆಗೆದುಕೊಳ್ಳುವುದಾಗಿದೆ. ಜೊತೆಗೆ ಸಂಸ್ಕೃತಿಗಳನ್ನು ಸಂಗಮಗೊಳಿಸಿ ಹಳೆಯ ಜಗತ್ತಿನ ಸಂಸ್ಕೃತಿಗಳನ್ನು ಅವುಗಳ ಅನನ್ಯತೆಯನ್ನು ಉಳಿಸಿಕೊಂಡು ವಿಶ್ವಸಂಸ್ಕೃತಿಯ ಆಕಾರದಲ್ಲಿ ಒಂದಾಗಿಸುವುದಾಗಿದೆ. ಜಗತ್ತಿನ ವಿವಿಧ ಸಮುದಾಯಗಳ ಅಂತರವನ್ನು ಆರ್ಥಿಕವಾಗಿ, ತಾಂತ್ರಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಕಡಿಮೆಮಾಡುವುದು ಅಥವಾ ಎಲ್ಲಾ ದೇಶಗಳಲ್ಲೂ ಇವು ಒಂದೇ ವೇಗದಲ್ಲಿ ಸಾಗುವಂತೆ ಮಾಡುವುದು. ''ಜಾಗತೀಕಣದ ಮತ್ತೊಂದು ನೆಲೆಯೆಂದರೆ ಭಾವನೆಗಳ ಹೊಂದಾಣಿಕೆ, ಜಗತ್ತಿನ ಎಲ್ಲಾ ಚಟುವಟಿಕೆಗಳ ಭಾವನೆಯಲ್ಲಿ ಏಕ ಸೂತ್ರತೆಯನ್ನು ಕಾಣುವ, ಬಯಸುವ, ರೂಪಿಸುವ ಉದ್ದೇಶದಲ್ಲಿ ವಿಶ್ವಭಾತೃತ್ವವನ್ನು ಪ್ರತಿಪಾದಿಸುವುದು ವಿಶ್ವದ ಎಲ್ಲಾ ಸಮುದಾಯಗಳ ಭಾವನೆಯಲ್ಲಿ ಒಂದೇ ಸಂವೇದನೆ ಸಾಧ್ಯ ಎಂಬ ನಂಬಿಕೆಯಿಂದ ಜಾಗತಿಕ ಸಮಸ್ಯೆಗಳಿಗೆ ತುಡಿಯುವುದನ್ನು ಇದರಲ್ಲಿ ಪ್ರತಿಬಿಂಬಿಸಲಾಗುತ್ತದೆ.''[೬೦] ಎನ್ನುವ ಮೊಗಳ್ಳಿ ಗಣೇಶರು ಇನ್ನೊಂದೆಡೆ ''ವಿಶ್ವದ ಶೋಧನೆಗಳು ಕೂಡಿ ವಿಶ್ವವನ್ನು ಅರಿಯುವುದು. ಬಹುಪಾಲು ಎಲ್ಲಾ ದೇಶಗಳ ವೈಜ್ಞಾನಿಕ ಸಂಶೋಧನೆಯ ಜೊತೆ ಸಮುದಾಯಗಳನ್ನು ಹೆಚ್ಚು ಹೆಚ್ಚುವಿಜ್ಞಾನದ ಜ್ಞಾನಕ್ಕೆ ಅಳವಡಿಸುವ ಪ್ರಕ್ರಿಯೆ ಜಾಗತೀಕರಣದ ಇನ್ನೊಂದು ಉದ್ದೇಶವಾಗಿದೆ'' ಎನ್ನುತ್ತಾರೆ. ಹಾಗೇ ಮುಂದುವರಿದು ಜಾಗತೀಕರಣ ಒಳದನಿಗಳನ್ನು ವಿಶ್ಲೇಷಿಸುವ ಮೊಗಳ್ಳಿಯವರು ತಂತ್ರಜ್ಞಾನದ ಸಮರ್ಥಬಳಕೆಯಿಂದ ಕೈಗಾರಿಕಾ ಜಗತ್ತಿನ ಉನ್ನತಿಗೂ ಆ ಮೂಲಕ ಆಧುನಿಕ ಜೀವನ ಶೈಲಿಗೂ ಅನುಗುಣವಾದ ತಾಂತ್ರಿಕೃತ ಆರ್ಥಿಕ ವ್ಯವಸ್ಥೆಯನ್ನು ಕಟ್ಟಿದ ಪ್ರಕ್ರಿಯೆ ಇದರಲ್ಲಿದೆ, ತಂತ್ರಜ್ಞಾನದ ಕೊರತೆಯಿಂದಲೇ ಹಿಂದುಳಿದ ದೇಶಗಳ ಆರ್ಥಿಕ ನೀತಿ ಸ್ಥಿತಿ ಹಿಂದೆ ಬಿದ್ದಿದ್ದು. ಮೊದಲ ಜಗತ್ತಿನ ದೇಶಗಳ ತಂತ್ರಜ್ಞಾನವನ್ನು ವಿಸ್ತರಿಸಲು ಜಾಗತೀಕರಣ ಅನಿವಾರ್ಯವಾಗುತ್ತದೆ''[೬೧] ಎನ್ನುತ್ತಾರೆ.

ಜಾಗತೀಕರಣಕ್ಕೂ, ಸಂಸ್ಕೃತಿಗೂ ಸಂಬಂಧವಿದೆ. ಆದರೆ ಜಾಗತೀಕರಣವು ನಾವು ಇಂದು ಗುರುತಿಸುವ ಪ್ರಕ್ರಿಯೆ ಮೂಲಭೂತವಾಗಿ ಒಂದು ಆರ್ಥಿಕ ವಿದ್ಯಮಾನ. ಜಾಗತಿಕ ಬಂಡವಾಳದ ಒತ್ತಾಸೆಯಿಂದ ಮೂಡಿಬಂದ ಒಂದು

ಉತ್ಪಾದನೆ ಮತ್ತು ಬಳಕೆಯ ವಿಧಾನವಾಗಿದೆ. ಸಹಜವಾಗಿಯೇ ಜಾಗತೀಕರಣದಿಂದ ಸಾಮಾಜಿಕ, ರಾಜಕೀಯ ಸಾಂಸ್ಕೃತಿಕ ಪರಿಣಾಮಗಳಾಗುತ್ತವೆ. ಇಂದು ಈ ಜಾಗತೀಕರಣವನ್ನು ಸಂಸ್ಕೃತಿ ಮೇಲಿನ ದಬ್ಬಾಳಿಕೆ ಎನ್ನುವ ನೆಲೆಯಲ್ಲಿ ನೋಡದೆ ನಮ್ಮ ಇಂದಿನ ಆರ್ಥಿಕ ಚೌಕಟ್ಟನ್ನು ಮತ್ತು ಜನರ ಒಟ್ಟಾರೆ ಏಳಿಗೆಯ ಪರಿಕಲ್ಪನೆಯನ್ನು ಸಂಪೂರ್ಣವಾಗಿ ಪ್ರಶ್ನಿಸುವ ಪ್ರಕ್ರಿಯೆಯೆಂದು ನೋಡುವುದು ಹೆಚ್ಚು ಮುಖ್ಯವಾಗುತ್ತದೆ. ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ನೆಲೆಯಿಂದ ಜಾಗತೀಕರಣವನ್ನು ಅರ್ಥೈಸುವುದು ಕೆಲವೊಮ್ಮೆ ಅಪೂರ್ಣವೂ ಮತ್ತು ಗರ್ವವೂ ಆಗಿಬಿಡುತ್ತದೆ ಏಕೆಂದರೆ ನಾವು ಈ ಪ್ರಕ್ರಿಯೆಯಿಂದ ಹೊರನಿಂತು ವ್ಯಾಖ್ಯಾನಿಸುತ್ತೇವೆ. ಜಾಗತೀಕರಣದ ಮೇಲ್ಪದರನ್ನು ಮಾತ್ರ ಮುಟ್ಟುತ್ತೇವೆ ''ಕಳೆದ ನಲವತ್ತು ವರ್ಷಗಳಲ್ಲಿ ಅಭಿವೃದ್ಧಿಶೀಲ ದೇಶಗಳು ಅಂತರಾಷ್ಟ್ರೀಯ ಹಣಕಾಸು ವ್ಯವಸ್ಥೆಯೊಳಗೆ ತೀರ ಅಗತ್ಯವೆಂದು ಬೇಡಿಕೆಯಿಟ್ಟಿದ್ದ ಅಂಶಗಳಾಗಿವೆ. ಜಾಗತೀಕರಣವೆನ್ನುವುದು ಒಂದು ನವ ಸ್ವಯಂ ತಂತ್ರವಾದೀ ಪ್ರಕ್ರಿಯೆಯಾಗಿದೆ. ಇದರ ಮೂಲ ಸ್ವಯಂ ತಂತ್ರವಾದೀ ಅಸ್ತ್ರಗಳು ಮೊದಲಿನ ನವ ಬಂಡವಾಳ ಶಾಹಿಯಲ್ಲಿದೆಯೆನ್ನುವುದು ಒತ್ತಿ ಹೇಳಬಯಸುತ್ತೇನೆ.''[೪೨] ಎನ್ನುವ ಚಿಂತಕ ಯಶವಂತ ಡೋಂಗ್ರೆಯವರು ಇಷ್ಟು ಹಳೆಯಾದ ಹಾಗೂ ನಾವೇ ಕಾಡಿ, ಬೇಡಿ ಪಡೆದ ಅಂಶಗಳುಳ್ಳ ಈ ವಿದ್ಯಾಮಾನದ ಬಗ್ಗೆ ಅನಗತ್ಯ ಭಯದ ಅಗತ್ಯವಿಲ್ಲ. ಒಂದು ಆರ್ಥಿಕ ಕಲ್ಪನೆಯಾಗಿ ಜಾಗತೀಕರಣವು ಎಲ್ಲರೂ ಒಪ್ಪಬಹುದಾದ ಪ್ರಕ್ರಿಯೆಯಾಗಿದೆ. ಇದರಿಂದ ಬದುಕುವ ಹೋರಾಟಕ್ಕೆ ಅಣಿಯಾಗದಿದ್ದರೆ ನಾವು ಹೆಚ್ಚು ಹೆಚ್ಚಾಗಿ ಬದುಕಿನ ದುರಂತದ ಅಂಚಿಗೆ ಸೇರಬೇಕಾಗುತ್ತದೆ. ಇದರಿಂದ ಹಲವಾರು ದೇಶಗಳ ಬಾಯಿಗೆ ನಾವು ಸುಲಭದ ತುತ್ತಾಗುತ್ತೇವೆ. ಅದಕ್ಕಾಗಿ ನಾವು ಜಾಗತೀಕರಣದೊಂದಿಗೆ ಹೆಜ್ಜೆ ಹಾಕಬೇಕಿದೆ ಎಂದಿದ್ದಾರೆ.

ಮೊಗಳ್ಳಿ ಗಣೇಶರು ಸಂಸ್ಕೃತಿ ಮತ್ತು ಜಾಗತೀಕರಣ ಕುರಿತಾದ ಸಂಬಂಧವನ್ನು ಕುರಿತು ಬರೆಯುತ್ತಾ ''ಸಂಸ್ಕೃತಿಗಳಿಗೆ ರೂಪಾಂತರವನ್ನು ತಂದು ಕೊಂಡುವುದು ಸ್ಥಗಿತ ಸಂಸ್ಕೃತಿಗಳು ಬದುಕುಳಿಯಲಾರವು ಎಂಬುದನ್ನು ಮನಗಂಡು ಇವತ್ತು ಅನೇಕ ಸಂಸ್ಕೃತಿಗಳು ಆಧುನಿಕ ರೂಪಾಂತರಗಳಿಗೆ ಸಿದ್ಧವಾಗುತ್ತಿವೆ. ಅದಕ್ಕೆ ತಕ್ಕ ವೇದಿಕೆಯನ್ನು ಜಾಗತೀಕರಣ ನಿರ್ಮಿಸುತ್ತಿದೆ. ಇಲ್ಲಿ ಸಂಸ್ಕೃತಿಗಳು ರೂಪಾಂತರವಾಗುವ ಪ್ರಕ್ರಿಯೆಯಲ್ಲಿ ಆಯಾ ಸಮುದಾಯಗಳ ಸಂದರ್ಭವನ್ನು ಅವುಗಳೇ ತಮ್ಮ ಆಕಾರಕ್ಕೆ ತಕ್ಕಂತೆ ನಿರ್ಧರಿಸಿಕೊಳ್ಳಬೇಕಿರುತ್ತದೆ. ಜಾಗತೀಕರಣದ ರೂಪಾಂತರದ ಪ್ರವಾಹ ಸಂಸ್ಕೃತಿಗಳನ್ನು ಸವಾಲಿಗೆ ಒಡ್ಡುವುದರ ಜೊತೆಗೆ ಅವುಗಳ ತಾಳಿಕೆಯ ಶಕ್ತಿ ಮೇಲೆ ಒತ್ತಡ ಹೇರಿ ಅವು ಭಿನ್ನವಾಗಿ ವಿಕಾಸವಾಗಲು ಪ್ರೇರೇಪಿಸುತ್ತದೆ''[೪೩] ಮತ್ತು ಈ ಜಾಗತೀಕರಣ ಎಂಬುದು ಅತ್ಯಂತ ಸಂಕೀರ್ಣವಾದ ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಭೌದ್ಧಿಕ ಸವಾಲುಗಳನ್ನು ಎಸೆಯುವ ಒಂದು ಪ್ರಕ್ರಿಯೆಯಾಗಿದೆ. ಯುದ್ಧಗಳನ್ನು ರೂಪಿಸುವ ನಿವಾರಿಸುವ ನಿಷೇದಿಸುವ ಅಂತರಾಷ್ಟ್ರೀಯ ಶಕ್ತಿ ಜಾಗತೀಕರಣವಾಗಿದೆ ಎಂದು ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಸಂಸ್ಕೃತಿಗಳ ರೂಪಾಂತರ ಪ್ರಕ್ರಿಯೆಗೆ ಜಾಗತೀಕರಣ ವೇದಿಕೆಯಾಗಿದ್ದಲ್ಲದೆ. ಪ್ರವಾಹ ಸಂಸ್ಕೃತಿಗಳನ್ನು ಸವಾಲಿಗೆ ಒಡ್ಡುವುದರ ಜೊತೆಗೆ ಸಂಸ್ಕೃತಿಗಳ ವಿಕಾಸಕ್ಕೆ ಪ್ರೇರಣೆ ಜಾಗತಿಕರಣವಾಗಿದೆ ಎನ್ನುವ ಮೊಗಳ್ಳಿಯವರ ವಿಶ್ಲೇಷಣೆ ವಿಭಿನ್ನ ಆಯಾಮದಲ್ಲಿ ಜಾಗತೀಕರಣ ಕುರಿತು ಮಾಡಿದ ಹೊಸ ಚಿಂತನೆಯಾಗಿದೆ.

ಇಂದು ಜಾಗತೀಕರಣ ಪ್ರಕ್ರಿಯೆಯಿಂದ ಕೃಷಿ ಕ್ಷೇತ್ರದಲ್ಲಿ ಉಂಟಾಗುತ್ತಿರುವ ತೀವ್ರ ಬದಲಾವಣೆಗಳು ಗ್ರಾಮಾಂತರ ಮಹಿಳೆಯರ ಜೀವನದ ಮೇಲೆ ತೀವ್ರ ಪ್ರಭಾವವನ್ನು, ಪರಿಣಾಮವನ್ನು ಉಂಟು ಮಾಡುತ್ತಿದೆ. ಕೃಷಿ ಪದ್ಧತಿ ಜಾಗತೀಕರಣದಿಂದ ವಾಣಿಜ್ಯೀಕರಣಗೊಂಡಾಗ ಮಹಿಳೆ ಕೃಷಿ ಕಾರ್ಯದಲ್ಲಿ ತನ್ನ ಸಂಪ್ರದಾಯಿಕ ಸ್ಥಾನವನ್ನು ಕಳೆದುಕೊಳ್ಳುತ್ತಾಳೆ. ಇದರಿಂದ ಆಕೆ ಸಮಾಜದ ಮುಖ್ಯವಾಹಿನಿಯಿಂದ ಹೊರಗೆ ಉಳಿಯುತ್ತಾಳೆ. ಇಂದು ವಾಣಿಜ್ಯ ಬೆಳೆಗಳು ಹೆಚ್ಚಾಗಿ ಕೃಷಿಕಾರ್ಯದಲ್ಲಿ ತನ್ನ ಸಂಪ್ರದಾಯಿಕ ಸ್ಥಾನವನ್ನು ಕಳೆದುಕೊಳ್ಳುತ್ತಾಳೆ. ಇದರಿಂದ ಆಕೆ ಸಮಾಜದ ಮುಖ್ಯ ವಾಹಿನಿಯಿಂದ ಆಕೆ ಹೊರಗೆ ಉಳಿಯುತ್ತಾಳೆ. ಇಂದು ವಾಣಿಜ್ಯ ಬೆಳೆಗಳು ಹೆಚ್ಚಾಗಿ ಕೃಷಿಪದ್ಧತಿ ಯಾಂತ್ರೀಕರಣಗೊಂಡಾಗ ದೈಹಿಕ ಶ್ರಮವೂ ಕಾಣೆಯಾಗುತ್ತಿದೆ. ಶ್ರಮದಿಂದ ದೂರ ಉಳಿದ ಮಹಿಳೆ ತನ್ನ ಸ್ಥಾನವನ್ನು ಕಳೆದುಕೊಳ್ಳುತ್ತಾಳೆ. ಕೃಷಿಯ ವಾಣಿಜ್ಯೀಕರಣ ನೀತಿಯಿಂದಾಗಿ ಆಹಾರ ದಾನ್ಯಗಳ ಪೂರೈಕೆ ಕಡಿಮೆಯಾಗಿ ಅವುಗಳ ಬೆಲೆ ಗಗನಕ್ಕೇರುತ್ತವೆ. ಇದರಿಂದ ಸಾಮಾಜಿಕ, ಆರ್ಥಿಕ ಬದುಕಿನಲ್ಲಿ ಅನೇಕ ಏರುಪೇರುಗಳಾಗುತ್ತವೆ. ರೈತ ಹೊಲಕ್ಕೆ ಹಾಕುವ ರಾಸಾಯನಿಕ ಗೊಬ್ಬರ ಕ್ರಿಮಿನಾಶಕಗಳ ಬೆಲೆ ಗಗನಕ್ಕೇರಿ ರೈತ ಕಂಗಾಲಾಗುತ್ತಾನೆ. ತನ್ನ ಭೂಮಿಯ ಬೆಳೆದಕ್ಕದೇ ಹೋದಾಗ ಮಾಡಿದ ಸಾಲದ ಚಿಂತೆ ಕಾಡತೊಡಗಿ ರೈತ ಆತ್ಮಹತ್ಯೆಗೆ ಶರಣಾಗುತ್ತಾನೆ. ಇಂದು ರೈತರ ಆತ್ಮಹತ್ಯೆಯ ವರದಿಗಳು ಪತ್ರಿಕೆಗಳು ಪ್ರಕಟಿಸುತ್ತಲೇಯಿರುವುದನ್ನು ಕಾಣುತ್ತೇವೆ. ಇದು ಜಾಗತೀಕರಣದ ಅಟ್ಟಹಾಸದಿಂದ ಕೃಷಿಯನ್ನು ನಂಬಿಕೊಂಡ ರೈತನ ಮೇಲಾಗುತ್ತಿರುವ ಪರಿಣಾಮವಾಗಿದೆ.

ಕೃಷಿಯ ಬದುಕಿನಲ್ಲಿ ಜಾಗತೀಕರಣ ಒಡ್ಡಿದ ಸವಾಲು ಒಂದು ರೀತಿಯಾದರೆ ಇಂದಿನ ಶಿಕ್ಷಣ ಸಂಸ್ಕೃತಿಯ ಮೇಲೆ ಬೀರಿದ ಪ್ರಭಾವವು ಮತ್ತೊಂದು ರೀತಿಯದಾಗಿದೆ. ''ಜಾಗತೀಕರಣದಿಂದ ಶಿಕ್ಷಣದಲ್ಲೂ ಏಕರೀತಿಯ ಸಂಸ್ಕೃತಿ ಪ್ರಚಂಡ ರಭಸದಲ್ಲಿ ಹರಡುವುದಕ್ಕೆ ಕಂಪ್ಯೂಟರ್ ಕಾರಣವಾಗಿದೆ. ಒಂದು ಅಂದಾಜು ವರಧಿಯ ಪ್ರಕಾರ ಶೇ.೯೦ರಷ್ಟು ಜಾಲಗಳು ಇಂಗ್ಲೀಷ್ ಭಾಷೆಯಲ್ಲಿವೆ. ಪ್ರೊ.ಕೆನ್ನೆತ್‌ಕೆನ್‌ಸ್ಟರ್ ರವರ ಪ್ರಕಾರ ಜಾಗತಿಕ ಏಕ ಸಂಸ್ಕೃತಿ ಟಿ.ವಿ., ಸಿ.ಎನ್ ವರ್ಲ್ಡ್ ಕಪ್ ಆಟಗಳು, ಮೈಕ್ರೊ ಸಾಪ್ಟ್ ಇನ್‌ಟೆಲ್ ಇತ್ಯಾದಿಗಳಲ್ಲಿ ಅಡಗಿವೆ. ಒಳ್ಳೆಯ ಇಂಗ್ಲೀಷನ್ನು ಮಾತನಾಡಲು ಓದಲು ಮತ್ತು ಬರೆಯಲು ಬಾರದ ಯಾರೂ ಕಂಪ್ಯೂರ್‌ರನ್ನು ಬಳಸಲು ಅಸಾಧ್ಯ'' ಎನ್ನುತ್ತಾ, ಮಹೇಶನ್ ಅವರು ''ಇಂದು ಕಂಪ್ಯೂಟರ್ ನಿಂದ ಪ್ರಪಂಚದ ಸಾಂಸ್ಕೃತಿಕ ವೈವಿದ್ಯತೆಗೆ ಧಕ್ಕೆ ಉಂಟಾಗುತ್ತಿದೆ. ಭಾರತದ ಅನೇಕ ಸ್ಥಳೀಯ ಭಾಷೆಗಳನ್ನು ಇಂಗ್ಲೀಷ್ ಭಾಷೆ ಅದರಲ್ಲೂ ಅಮೇರಿಕನ್ ಇಂಗ್ಲೀಷ್ ಭಾಷೆ ನುಂಗಿ ಹಾಕುತ್ತಿದೆ. ಇಂತಹ ಸಂಕಷ್ಟದ ಸಂದರ್ಭದಲ್ಲಿ ತತ್‌ಕ್ಷಣದಿಂದಲೇ ಸ್ಥಳೀಯ ಭಾಷೆಗಳಲ್ಲಿ ಸಾಪ್ಟ್‌ವೇರ್‌ಗಳನ್ನು ರೂಪಿಸದಿದ್ದರೆ ಶಕ್ತರು ಅಶಕ್ತರು ಎಂಬ ಕಂದರ ವಿಸ್ತಾರವಾಗುವುದಲ್ಲದೆ, ಸ್ಥಳೀಯ ಭಾಷೆಗಳ ಸಂಸ್ಕೃತಿಗಳು ಅಪಮೌಲ್ಯಗೊಳ್ಳುತ್ತವೆ. ಈ ಕೊರತೆಯನ್ನು ಸಮರ್ಥವಾಗಿ ತುಂಬುವ ವಿದ್ಯಮಾನಗಳು ಭರದಿಂದ ನಡೆಯುತ್ತಿವೆ. ಇದೊಂದು ಅತ್ಯಂತ ಹರ್ಷದಾಯಕವಾದ ಬೆಳವಣಿಗೆಯಾಗಿದೆ. ಸ್ಥಳೀಯ ಭಾಷೆಗಳಲ್ಲಿ ಅವಿಷ್ಕರಿಸಿರುವ ಸಾಪ್ಟ್‌ವೇರ್‌ಗಳು ಕಂಪ್ಯೂಟರ್ ಬಳಕೆಯಲ್ಲಿ ಕ್ರಾಂತಿಯನ್ನು ತಂದಿವೆ. ಕನ್ನಡದಲ್ಲಿ ಸಾಪ್ಟ್‌ವೇರ್‌ಗಳು ಗಮನಾರ್ಹ ರೀತಿಯಲ್ಲಿ ಬೆಳೆದಿವೆ. ಮೈಕ್ರೋ ಸಾಪ್ಟ್‌ನ ಒಡೆಯ ಬಿಲ್‌ಗೇಟ್ಸ್ ನಮ್ಮ ಭಾಷೆಯ ಅಳವಡಿಕೆಯಲ್ಲಿ ಅದ್ಭುತ ಪ್ರಗತಿಯನ್ನು ದಾಖಲಿಸಿದ್ದಾರೆ''[೪] ಎಂದಿದ್ದಾರೆ ಚಿಂತಕ ಮಹೇಶನ್.

ಕಳೆದ ಒಂದೂವರೆ ದಶಕದಲ್ಲಿ ದೇಶ, ನಾಡು ಸಾಕಷ್ಟು ಬದಲಾವಣೆಗಳನ್ನು ಕಂಡಿದೆ. ಭಾರತದಲ್ಲಿ ಪರ್ಸನಲ್ ಕಂಪ್ಯೂಟರ್‌ಗಳ ಯುಗ ಶುರುವಾಗಿದೆ. ಸಾಪ್ಟ್‌ವೇರ್ ತಂತ್ರಜ್ಞಾನ ಯಾರು ಊಹಿಸಲಾರದಷ್ಟು ವೇಗವಾಗಿ ಬೆಳೆದಿದೆ.

ರಸ್ತೆಯಲ್ಲಿ ಇವತ್ತು ನವ ನವೀನವಾದ ಮಾದರಿಯ ಸ್ಕೂಟರ್, ಬೈಕ್, ಕಾರುಗಳು ಓಡಾಡುತ್ತಿವೆ. ಕೇಬಲ್ ಟಿ.ವಿ.ಜಾಲವು ಜಗತ್ತನ್ನು ನಮ್ಮ ಪಡಸಾಲೆಗೆ ತಂದು ನಿಲ್ಲಿಸಿವೆ. ಕಂಡು ಕೇಳದ ಗ್ರಾಹಕ ಸರಕುಗಳು ನಮ್ಮ ಅಂಗಡಿಗಳಲ್ಲಿ ದೊರೆಯುತ್ತಿವೆ. ಅಮೇರಿಕ, ಯುರೋಪುಗಳಲ್ಲಿ ಕೆಲಸ ಹುಡುಕಿಕೊಂಡು ಹೋಗುವವರ ಸಂಖ್ಯೆಯೂ ಗಣನೀಯವಾಗಿ ಹೆಚ್ಚಾಗಿವೆ. ಅನಿವಾಸಿ ಭಾರತೀಯರು ತಾವು ಇರುವ ಕಡೆಯಲೆಲ್ಲಾ ಪ್ರಭಾವಶಾಲಿಯಾದ ಸ್ಥಾನವನ್ನುಗಳಿಸಿಕೊಳ್ಳುತ್ತಿದ್ದಾರೆ. ನಮ್ಮ ದೇಶವು ಸಶಕ್ತ ಆಧುನಿಕ ಸಮುದಾಯವಾಗಿ ರೂಪು ಪಡೆಯುತ್ತಿದೆ. ಈ ಹೊಸ ವಾತಾವರಣದಿಂದಾಗಿ ಹಿಂದೆ ನಾವು ಯೋಚಿಸಲು ಕೂಡ ಸಾಧ್ಯವಿಲ್ಲದಂತಹ ಹೊಸ ಕ್ಷೇತ್ರಗಳಲ್ಲಿ ಸಾಕಷ್ಟು ಉದ್ಯೋಗಗಳು ಸೃಷ್ಟಿಯಾಗುತ್ತಿವೆ. ಇವೆಲ್ಲಾ ಜಾಗತೀಕರಣ ಪ್ರಕ್ರಿಯೆಯಿಂದ ಸಾಧ್ಯವಾಗಿದೆವೆನ್ನಬಹುದು.

ಇಂದು ಜಾಗತೀಕರಣದ ಪರ್ಯಾಯ ಸಾಧ್ಯತೆಗಳನ್ನು ಕುರಿತು ಯೋಚನೆ ಮಾಡಿದಾಗ ಈ ಜಾಗತೀಕರಣ ಮತ್ತು ಮತೀಯ ಮೂಲಭೂತವಾದವು ಅನೇಕ ಸಾಮ್ಯ ಲಕ್ಷಣಗಳಿಂದ ಒಂದನ್ನೊಂದು ಪೋಷಿಸಿಕೊಂಡಿರುವ ಮತ್ತು ಪರಸ್ಪರ ಶಕ್ತಿಯನ್ನು ಪಡೆದುಕೊಳ್ಳುತ್ತಿರುವ ಇಂದಿನ ಪ್ರಮುಖ ವಿದ್ಯಮಾನವಾಗಿದೆ. ಮತೀಯ ಮೂಲಭೂತವಾದದ ನೆಲೆ ಧರ್ಮವಾದರೆ, ಜಾಗತೀಕರಣದ ಮೂಲ ನೆಲೆ ವಿಜ್ಞಾನದ್ದಾಗಿದೆ. ಈ ಧರ್ಮ ಮತ್ತು ವಿಜ್ಞಾನಗಳು ಉದಾತ್ತಾರ್ಥದಲ್ಲಿ ಸತ್ಯಶೋಧನೆ ವರ್ಗವಾಗಿ ಬಿಡುಗಡೆಯತ್ತ ಮುನ್ನಡೆಸುವವುಗಳು. ಆದರೆ ಇವು ಎರಡೂ ಸ್ವಹಿತಾಸಕ್ತಿಗಳಿಂದ ದುರ್ಬಳಕೆಗೊಳಪಟ್ಟು ಮೂಲಗುಣ ಕಳಕೊಂಡು ಭ್ರಷ್ಟಗೊಂಡಿವೆ, ಧರ್ಮವೂ ಸಾಂಸ್ಥೀಕರಣಗೊಂಡು ಮತೀಯ ಕಟ್ಟುನಿಟ್ಟಿನ ಅಂಧಮತಾಚರಣೆಗಳಾಗಿ ಭ್ರಷ್ಟಗೊಳ್ಳುತ್ತಾ ಹೋಯಿತು. ಮುಂದೆ ಮತ ಮತಗಳ ಮೇಲಾಟದಲ್ಲಿ ಧರ್ಮವು ಕೇವಲ ಮತೀಯ ಮೂಲಭೂತವಾದಿಗಳ ಗುಂಪುಗಳಾಗಿ ಹರಳುಗಟ್ಟುತ್ತಾಹೋಗಿ ಜಡ್ಡುಗಟ್ಟಿತು. ಇತ್ತ ವಿಜ್ಞಾನವೂ ವಾಣಿಜ್ಯಹಿತಾಸಕ್ತಿಗಳಿಂದ ಸುಖಭೋಗಗಳನ್ನು ತಣಿಸುವ ತಂತ್ರಜ್ಞಾನವಾಗಿ ಮುಂದೆ ಕೇವಲ ನಿಯಂತ್ರಣಾತೀತ ಮಾರುಕಟ್ಟೆ ಆಧಾರಿತ ಅಭಿವೃದ್ಧಿ ಮಾದರಿಯನ್ನು ಪೋಷಿಸುವ ಸಾಧನ ಜಾಗತೀಕರಣವಾಯಿತು.

ಸಂಸ್ಕೃತಿ ಚಿಂತಕರಾದ ಜಿ.ರಾಜಶೇಖರ ಅವರು ಜಾಗತೀಕರಣದ ಪ್ರಕ್ರಿಯೆಯ ವಿನಾಶದ ಪರಿಣಾಮಗಳನ್ನು ಕುರಿತು ಹೇಳಿದ್ದಾರೆ. ಅವರು ಒಟ್ಟು ನಿಲುವನ್ನು ಸಾರಾಂಶೀಕರಿಸಿ ಹೇಳುವುದಾದರೆ; ''ಭಾರತದಮಟ್ಟಿಗೆ ಈ ಜಾಗತೀಕರಣದ ಪ್ರಕ್ರಿಯೆ ಬಿರುಸುಗೊಂಡುದ್ದು ಎಂಬತ್ತರ ದಶಕದಲ್ಲಿ ಭಾರತ ತನ್ನ ಅಲಿಪ್ತ ನೀತಿಯನ್ನು ಬಿಟ್ಟುಕೊಟ್ಟು ಅಮೇರಿಕಕ್ಕೆ ಹತ್ತಿರವಾಗತೊಡಗಿದ್ದೂ ಅದೇ ಕಾಲದಲ್ಲಿ. ಆ ದಶಕದ ಇನ್ನೊಂದು ಬೆಳವಣಿಗೆ, ಹೆಚ್ಚುತ್ತಹೋದ ಹಿಂದುತ್ವವಾದದ ಪ್ರಭಾವ. ರಾಜೀವ್‌ಗಾಂಧಿ ಮತ್ತು ಮನಮೋಹನ್ ಸಿಂಗ್ ಜಾಗತೀಕರಣದ ಕಾರ್ಯಕ್ರಮಗಳನ್ನು ಒಂದೊಂದಾಗಿ ಕೈಗೆತ್ತಿಕೊಳ್ಳುತ್ತಿದ್ದ ಕಾಲವೇ ರಾಮಜನ್ಮಭೂಮಿ ಚಳುವಳಿಯ ಉನ್ಮಾದ ಮತ್ತು ಹಿಂಸೆಗಳ ಕಾಲವೂ ಆಗಿತ್ತು. ರಾಮಜನ್ಮಭೂಮಿ ಚಳುವಳಿಯ ಸಮೂಹ ಸನ್ನಿಯಲ್ಲಿ ಅಧಿಕಾರಕ್ಕೆ ಏರಿದ ಬಿ.ಜೆ.ಪಿ, ಕಾಂಗ್ರೆಸ್ ಅನುಷ್ಠಾನಕ್ಕೆ ತಂದ ಜಾಗತೀಕರಣದ ಕ್ರಮಗಳನ್ನು ಚಾಚೂತಪ್ಪದೇ ಮುಂದುವರಿಸಿಕೊಂಡು ಹೋಗುತ್ತಿದೆ. ಅಷ್ಟು ಮಾತ್ರವೇ ಅಲ್ಲ, ಬಿ.ಜೆ.ಪಿ ಸರಕಾರ, ಅಮೇರಿಕಾದ ಅಧ್ಯಕ್ಷರ ಎದುರು ತಗ್ಗಿ ಬಗ್ಗಿ ನಡೆದುಕೊಂಡಷ್ಟು ವಿಧೇಯವಾಗಿ ಹಿಂದಿನ ಯಾವ ಸರಕಾರವೂ ನಡೆದುಕೊಂಡಿರಲಿಲ್ಲ. ಬಿ.ಜೆ.ಪಿ.ಯದ್ದು ಜಗತ್ತಿನಲ್ಲಿ ಎಲ್ಲಿಯೂ ದೊರೆಯದ ಬ್ರಾಂಡಿನ ರಾಷ್ಟ್ರೀಯವಾದ ಅದರಲ್ಲಿ ಎನ್ರಾನ್‌ನಂತಹ ತಲೆಬೋಳಿಸುವ ಒಪ್ಪಂದಕ್ಕೂ ಅವಕಾಶವಿದೆ. ಅಮೇರಿಕದ

ಅಧ್ಯಕ್ಷರಿಗೆ ಚೆಂಬು ಹಿಡಿಯುವುದಕ್ಕೂ ಮನ್ನಣೆ ಇದೆ.''[೪] ಎನ್ನುವ ಚಿಂತಕ ಜಿ.ರಾಜಶೇಖರರು ಇಂತಹ ಪರಿಸ್ಥಿತಿಯಲ್ಲಿ ಜಾಗತೀಕರಣವನ್ನು ವಿರೋಧಿಸುವುದು ಎಂದರೆ ಅಮೇರಿಕದ ಸಾಮ್ರಾಜ್ಯಶಾಹಿ ಮತ್ತು ಈ ದೇಶದಲ್ಲಿ ಅದರ ಕಮಿಷನ್ ಏಜೆಂಟರಂತೆ ವರ್ತಿಸುವ ರಾಜಕೀಯ ಪಕ್ಷಗಳನ್ನು ವಿರೋಧಿಸುವುದೇ ಆಗಿದೆಎನ್ನುತ್ತಾರೆ.

ಇಂದು ಜಾಗತೀಕರಣವು ಒಂದು ಆಧುನಿಕ ವಿದ್ಯಮಾನವಾಗಿದೆ. ವ್ಯಾಪಾರ ಬಂಡವಾಳ, ತಂತ್ರಜ್ಞಾನಗಳ, ಪ್ರಪಂಚದ ವಿವಿಧ ದೇಶಗಳ 'ವಿಶ್ವಗ್ರಾಮ'ವನ್ನು ಸಾಧ್ಯವಾಗಿಸಿದ ಪ್ರಕ್ರಿಯೆ ಇದಾಗಿದೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಜರುಗಿದ ಅನೇಕ ಸಾಂಸ್ಕೃತಿಕ ವಿದ್ಯಮಾನಗಳು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಅನೇಕ ಸ್ಥಿತ್ಯಂತರಗಳಿಗೆ ಕಾರಣವಾದವು. ಈ ಸಾಂಸ್ಕೃತಿಕ ಚಿಂತನೆಯುಳ್ಳ ಅನೇಕ ಪಲ್ಲಟಗಳಿಗೆ ಕಾರಣವಾದ ಈ ವಿದ್ಯಮಾನಗಳನ್ನು ವಸಾಹತು ಪೂರ್ವ ಮತ್ತು ವಸಾಹತೋತ್ತರ ಕಾಲಘಟ್ಟದ ನೆಲೆಯಲ್ಲಿ ವಿಶ್ಲೇಷಣೆ ಮಾಡಿದ್ದೇನೆ.

ವಸಾಹತು ಪೂರ್ವ ಕಾಲಘಟ್ಟದಲ್ಲಿ ಉಂಟಾದ ಕೋಮುವಾದದ ಕರಾಳ ನೆರಳು ಸಾಮಾಜಿಕ, ಧಾರ್ಮಿಕ ಆರ್ಥಿಕ ಬದುಕಿನ ಮೇಲೆ ಉಂಟುಮಾಡಿದ ಗಾಯಗಳನ್ನು ಕುರಿತು ವಿವರಿಸಿದ್ದೇನೆ. ಹಾಗೇ ವಸಾಹತೋತ್ತರ ಕಾಲಘಟ್ಟದಲ್ಲಿ ಮಂಡಲವರದಿ ಜಾರಿಗೆ ಕುರಿತು ಮಾಡಿದ ಹೋರಾಟಗಳು ದೇಶೀಯ ನೆಲೆಯ ಹುಡುಕಾಟ, ರೈತರ ಬದುಕಿನ ಮೇಲಾದ ಪರಿಣಾಮಗಳು ಅವರು ರೂಪಿಸಿಕೊಂಡ ಭೂ ಹೋರಾಟಗಳು, ಸಾಂಸ್ಕೃತಿಕ ಬದುಕಿನಲ್ಲಿ ಕಾಣಿಸಿಕೊಂಡ 'ಪುನರ್‌ಮೌಲ್ಯೀಕರಣ' ಪ್ರಶ್ನೆ, ಉಪಸಂಸ್ಕೃತಿಯ ಚಿಂತನೆಯ ನೆಲೆಗಳು. ಮಹಿಳಾ ಬದುಕಿನ ಪ್ರಶ್ನೆ, ಜಾಗತೀಕರಣದ ಪ್ರಭಾವದಿಂದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದುಕಿನಲ್ಲಿ ಉಂಟಾದ ಪರಿಣಾಮಗಳು, ಈ ಎಲ್ಲಾ ವಿದ್ಯಮಾನಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಿದ್ದೇನೆ. ಈ ಎಲ್ಲಾ ವಿದ್ಯಮಾನಗಳು ಇಪ್ಪತ್ತನೆ ಶತಮಾನದಲ್ಲಿ ಕಾಣಿಸಿಕೊಂಡ ಈ ಸಮಸ್ಯೆಗಳು ಇಂದಿಗೂ ಬಗೆಹರಿಯದ ಪ್ರಶ್ನೆಗಳಾಗಿ ಕೆಲವು ಜ್ವಲಂತ ಸಮಸ್ಯೆಗಳಾಗಿ ಉಂಟುಮಾಡಿದ ಬದಲಾವಣೆ, ಪರಿಣಾಮಗಳನ್ನು ಈ ಅಧ್ಯಾಯದ ವ್ಯಾಪ್ತಿಯಲ್ಲಿ ಚರ್ಚೆಗೆ ಒಳಪಡಿಸಿದ್ದೇನೆ.

**ಟಿಪ್ಪಣಿಗಳು**

೧. ಡಾ.ಎಸ್.ಚಂದ್ರಶೇಖರ್ - ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ
ವಸಾಹತು ಆಡಳಿತ ಹೊಸ ಸಾಮಾಜಿಕ ವರ್ಗಗಳ ಉದಯ - ಡಾ.ಎಸ್.ಚಂದ್ರಶೇಖರ್ (ಪು.೨೦)

೨. ಡಾ.ಎಸ್.ಚಂದ್ರಶೇಖರ್ - ವಸಾಹತು ಆಡಳಿತ ಹಾಗೂ ಹೊಸ ವರ್ಗಗಳ ಉದಯ ಅದೇ (ಪು.೨೨)

೩. ಡಾ.ರಾಜಾರಾಮಹೆಗಡೆ - ಸಾಂಸ್ಕೃತಿಕ ಮುಖಾಮುಖಿ: ವಸಾಹತುಶಾಹಿ ಇತಿಹಾಸ ಮತ್ತು ರಾಷ್ಟ್ರೀಯ ರಾಜಕೀಯ
ಗತಕಥನ - ರಾಜಾರಾಮಹೆಗಡೆ - (ಪು.೪)

೪. ಅದೇ (ಪು.೭)

೫. ಡಾ.ಎಸ್.ಚಂದ್ರಶೇಖರ್ - ವಸಾಹತು ಆಡಳಿತ ಹಾಗೂ ಸಾಮಾಜಿಕ ವರ್ಗಗಳ ಉದಯ - (ಪು.೪೮)
೬. ಡಾ.ಎಸ್.ಚಂದ್ರಶೇಖರ್ - ಕೋಮುವಾದಿ ಹಾಗೂ ಜಾತಿವಾದಿ ರಾಜಕಾರಣ (ಪು.೬೭, ೬೮)
೦೭. ಜಿ.ರಾಜಶೇಖರ - ಕೋಮುವಾದದ ರಾಜಕೀಯ (ಪು.೬)
೦೮. ಡಾ.ವಿ.ಕೃಷ್ಣ ಅನಂತ್ - ಕೋಮುವಾದದ ರಾಜಕೀಯ ಅರ್ಥಶಾಸ್ತ್ರ (ಪು.೧೫)
೦೯. ಡಾ.ಎಸ್.ಚಂದ್ರಶೇಖರ್ - ಕೋಮುವಾದಿ ಹಾಗೂ ಜಾತಿವಾದಿ ರಾಜಕಾರಣ (ಪು.೮೨, ೮೩)
೧೦. ಡಾ.ವಿ.ಕೃಷ್ಣ ಅನಂತ್ - ಕೋಮುವಾದದ ರಾಜಕೀಯ ಅರ್ಥಶಾಸ್ತ್ರ (ಪು.೧೬, ೧೭)
೧೧. ಡಾ.ರಾಜಾರಾಮ ಹೆಗಡೆ - ಪ್ರಸ್ತಾವನೆ-ಭಾರತೀಯ ಇತಿಹಾಸ ಸಮಾಜ ಮತ್ತು ಸಂಸ್ಕೃತಿ (ಪು.೧೬)
೧೨. ಪ್ರೊ.ಬಿ.ಕೆ.ನಾರಾಯಣ - ಕರ್ನಾಟಕ ಸರ್ಕಾರಕ್ಕೆ ಸಲ್ಲಿಸಿದ 'ಮಂಡಲ ವರದಿ' ಉತ್ಥಾನ-ಮಾಸ ಪತ್ರಿಕೆ-
ನವಂಬರ್-೧೯೮೩ (ಪು.೪, ೫, ೭, ೮)
೧೩. ಡಾ.ಡಿ.ಆರ್.ನಾಗರಾಜ್ - ಪಂಚಾಯತ್ ರಾಜ್ ಬಗೆಗೆ,
ಸಂಸ್ಕೃತಿ ಕಥನ-ಅಗ್ರಹಾರ ಕೃಷ್ಣಮೂರ್ತಿ (ಸಂ) (ಪು.೩೦೨, ೩೦೩)
೧೪. ರಾಜೇಂದ್ರ ಚೆನ್ನಿ - ದೇಶೀವಾದ
ಅದೇ (ಪು.೨)
೧೫. ಟಿ.ಪಿ.ಅಶೋಕ - ಇತ್ತೀಚಿನ ಕನ್ನಡ ಸಾಹಿತ್ಯ ವಿಮರ್ಶೆ, ಅನ್ಯ ಪ್ರಭಾವಗಳು ಸಾಧನೆಗಳು,
ಸಾಹಿತ್ಯ ವಿಮರ್ಶೆ- ೧೯೮೩, (ಸಂ) (ಪು.೯)
೧೬. ಡಾ.ಜಿ.ಎಸ್.ಶಿವರುದ್ರಪ್ಪ - ಕರ್ನಾಟಕ ಜಾನಪದ (ಪು.೪೪)
೧೭. ಡಾ.ವಿಜಯ್ ತಂಬಂಡ ಪೂಣಚ್ಚ - ರೈತ ಚಳುವಳಿಗಳು (ಪು.೭)
೧೮. ಜಿ.ಎನ್.ಕೀರ್ತಿನಾಥ್ - ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿ ಚಳುವಗಳು, ಎಂ.ಫಿಲ್ ಕಿರುಪ್ರಬಂಧ
೧೯೯೫, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಅಪ್ರಕಟಿತ)
೧೯. ಡಾ.ಡಿ.ಆರ್.ನಾಗರಾಜ್ - ದಲಿತ ಚಳುವಳಿ ಕುರಿತು
ಸಂಸ್ಕೃತಿ ಕಥನ - ಅಗ್ರಹಾರ ಕೃಷ್ಣಮೂರ್ತಿ (ಸಂ) (ಪು.೧೯)
೨೦. ಪ್ರೊ.ಬರಗೂರು ರಾಮಚಂದ್ರಪ್ಪ - ಬಂಡಾಯ ಸಾಹಿತ್ಯ ಚಳುವಳಿ ಸಾಹಿತ್ಯ ಮತ್ತು ರಾಜಕಾರಣ (ಪು.೩)
೨೧. ಡಾ.ಸಿದ್ಧಲಿಂಗಯ್ಯ - ದಲಿತ ಸಾಹಿತ್ಯ, ದಲಿತಮಾರ್ಗ, ಡಾ.ಅರವಿಂದ ಮಾಲಗತ್ತಿ (ಸಂ) (ಪು.೬೫)
೨೨. ಪ್ರೊ.ಬರಗೂರು ರಾಮಚಂದ್ರಪ್ಪ - ಪ್ರಸ್ತಾವನೆ, ಪುನರ್ ಮೌಲ್ಯೀಕರಣ ಮಾಲೆ (ಪು.೧೨, ೧೩)
ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ - ಬರಗೂರು ರಾಮಚಂದ್ರಪ್ಪ (ಪ್ರಧಾನ ಸಂಪಾದಕರು)
೨೩. ಪ್ರೊ.ಬರಗೂರು ರಾಮಚಂದ್ರಪ್ಪ - 'ಸಂಸ್ಕೃತಿ-ಉಪಸಂಸ್ಕೃತಿ' ಪ್ರಸ್ತಾವನೆ, ಅದೇ (ಪು.೧೮, ೧೯)

೨೪. ಡಾ.ರಹಮತ್ ತರೀಕೆರೆ - ಮರದೊಳಗಣ ಕಿಚ್ಚು, (ಪು.೧೨, ೧೩)

೨೫. ಕೋಟಗಾನಹಳ್ಳಿ ರಾಮಯ್ಯ - ಸಿಂಧ್ ಮಾದಿಗರ ಸಂಸ್ಕೃತಿ (ಪು.೨೬೪)

೨೬. ಡಾ.ಕೆ.ವಿ.ನಾರಾಯಣ - ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ, ಆಶಯ ಲೇಖನ (ಪು.೧)

೨೭. ಡಾ.ಕೆ.ವಿ.ನಾರಾಯಣ, ಅದೇ (ಪು.೩)

೨೮. ಡಾ.ಕೆ.ವಿ.ನಾರಾಯಣ, ಅದೇ (ಪು.೮, ೯)

೨೯. ಡಾ.ಕೆ.ವಿ.ನಾರಾಯಣ, ಅದೇ (ಪು.೭)

೩೦. ಡಾ.ರಹಮತ್ ತರೀಕೆರೆ - ಪ್ರತಿ ಸಂಸ್ಕೃತಿಯೆಂದರೆ,
ಮರದೊಳಗಣ ಕಿಚ್ಚು, (ಪು.೯)

೩೧. ಡಾ.ರಹಮತ್ ತರೀಕೆರೆ - ಪ್ರತಿ ಸಂಸ್ಕೃತಿಯೆಂದರೆ,
ಅದೇ (ಪು.೩೭)

೩೨. ಡಾ.ರಾಜಾರಾಮ ಹೆಗಡೆ (ಸಂ) ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ
ಪ್ರಸ್ತಾವನೆ ಲೇಖನ (ಪು.xviii)

೩೩. ಎಲ್.ಜಿ.ಮೀರಾ -ಸಮಕಾಲೀನ ಲಿಂಗೀಯ ತತ್ವ ಎದುರಿಸುತ್ತಿರುವ ಸಮಸ್ಯೆಗಳು (ಅನುವಾದ)
ಡಾ.ರಾಜಾರಾಮ ಹೆಗಡೆ (ಸಂ) ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ (ಪು.೫೦ )

೩೪. ಅದೇ (ಪು.೫೧)

೩೫. ಅದೇ (ಪು.೭೬)

೩೬. ಅದೇ (ಪು.೫೧)

೩೭. ಅದೇ (ಪು.೫೨)

೩೮. ಅದೇ (ಪು.೬೯)

೩೯. ಜಿ.ರಾಜಶೇಖರ - 'ಜಾಗತೀಕರಣ' ವೆಂಬ ಅಮೇರಿಕದ ಯಜಮಾನಿಕೆ
ರಾಜೇಂದ್ರ ಚೆನ್ನಿ/ ಸಿರಾಜ್ ಅಹಮದ್ (ಸಂ)-ಜಾಗತೀಕರಣ-ಒಂದು ಸಮಗ್ರ ಮಂಥನ (ಪು.೧೨೫)

೪೦. ಡಾ.ಮೊಗಳ್ಳಿ ಗಣೇಶ್-ದಲಿತರು ಮತ್ತು ಜಾಗತೀಕರಣ (ಪು.೧೮)

೪೧. ಅದೇ (ಪು.೧೯)

೪೨. ಯಶವಂತ ಡೊಂಗ್ರೆ-ಜಾಗತೀಕರಣದೊಂದಿಗೆ ಉಳಿದುಕೊಳ್ಳಬೇಕಾದ ಅನಿವಾರ್ಯತೆ
ರಾಜೇಂದ್ರ ಚೆನ್ನಿ/ಸಿರಾಜ್ ಅಹಮದ್ (ಸಂ)-ಜಾಗತೀಕರಣ-ಒಂದು ಸಮಗ್ರ ಮಂಥನ (ಪು.೨೦೪)

೪೩. ಡಾ.ಮೊಗಳ್ಳಿ ಗಣೇಶ್-ದಲಿತರು ಮತ್ತು ಜಾಗತೀಕರಣ (ಪು.೩೦)

೪೪. ಮ.ಮಹೇಶನ್-'ಜಾಗತೀಕರಣ ಪ್ರಕ್ರಿಯೆ ಮತ್ತು ಸಂವಹನ ಮಾಧ್ಯಮಗಳು'

ಮ.ಮಹೇಶನ್ - ಜಾಗತೀಕರಣ (ಪು.೭೭)

೪೫. ಜಿ.ರಾಜಶೇಖರ-'ಜಾಗತೀಕರಣವೆಂಬ ಅಮೇರಿಕದ ಯಜಮಾನಿಕ'

ರಾಜೇಂದ್ರ ಚೆನ್ನಿ/ಸಿರಾಜ್ ಅಹಮದ್ (ಸಂ) ಜಾಗತೀಕರಣ ಒಂದು ಸಮಗ್ರ ಮಂಥನ (ಪು.೧೩೦, ೧೩೧)

* * * * *

# ಅಧ್ಯಾಯ : ನಾಲ್ಕು

## ದಲಿತ ಅನನ್ಯತೆ

# ಅಧ್ಯಾಯ : ನಾಲ್ಕು

# ದಲಿತ ಅನನ್ಯತೆ

## ೪.೧. ದಲಿತ ಸಾಹಿತ್ಯ ಚಿಂತನೆ

ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ವಿಚಾರಧಾರೆಯೊಂದಿಗೆ ಅಭಿವ್ಯಕ್ತಿಯ ಸ್ವರೂಪ ಪಡೆದ ದಲಿತ ಸಾಹಿತ್ಯವು ನಡೆದುಬಂದ ಹೆಜ್ಜೆ, ಪಡೆದುಕೊಂಡ ನಿಲುವುಗಳು ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ತುಂಬ ಅನನ್ಯವಾಗಿರುವಂತದ್ದಾಗಿದೆ. ಈ ದಲಿತ ಸಾಹಿತ್ಯ ರಚನೆಗೆ ಪ್ರೇರಕವಾದಂತಹ ಕೆಲವು ಅಂಶಗಳ ಕಡೆ ಗಮನಹರಿಸಿ ನಂತರ ದಲಿತ ಕಥಾ ಸಾಹಿತ್ಯದ ಅನನ್ಯತೆಯನ್ನು ವಿಶ್ಲೇಷಿಸುತ್ತೇನೆ. ಕನ್ನಡ ಸಂಸ್ಕೃತಿ ಸಂದರ್ಭದಲ್ಲಿ ದಲಿತ ಚಳುವಳಿಗೀಗ ಕಾಲು ಶತಮಾನ. ಈ ಅವಧಿಯಲ್ಲಿ ಸಾಕಷ್ಟು ಏಳುಬೀಳುಗಳನ್ನು ಈ ಚಳುವಳಿ ಕಂಡಿದೆ. ದಲಿತ ಚಳುವಳಿ ಎನ್ನುವುದು ಒಂದು ಚಾರಿತ್ರಿಕ ಸತ್ಯ. ದಲಿತ ಚಳುವಳಿಯ ಹುಟ್ಟು ಬೆಳವಣಿಗೆಯನ್ನು ಅಧ್ಯಾಯ ಎರಡರಲ್ಲಿ ಚರ್ಚಿಸಿರುವುದರಿಂದ ಇಲ್ಲಿ ದಲಿತ ಸಾಹಿತ್ಯವನ್ನಷ್ಟೆ ಲಕ್ಷ್ಯದಲ್ಲಿಟ್ಟುಕೊಂಡು ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ದಲಿತ ಬದುಕಿನ ಕಾಳಜಿಗಳನ್ನಿಟ್ಟುಕೊಂಡು ರಚನೆಗೊಂಡ ಈ ದಲಿತ ಸಾಹಿತ್ಯದ ಅನನ್ಯತೆಯನ್ನು ಕಥೆಗಳ ಮೂಲಕ ಚರ್ಚೆಗೆ ಒಳಪಡಿಸಿದ್ದೇನೆ.

ದಲಿತ ಸಾಹಿತ್ಯ ಇದು ಇತ್ತೀಚೆಗೆ ಆಧುನಿಕ ಕನ್ನಡ ಸಾಹಿತ್ಯ ಹಾಗೂ ಸಾಮಾಜಿಕ ವಲಯಗಳಲ್ಲಿ ಬಹಳಷ್ಟು ಚಲಾವಣೆಯಲ್ಲಿರುವ ಹೆಸರು. ಮೂಲತಃ ದಲಿತ ಎಂದರೆ ಹಿಂದುಳಿದವರು, ದಮನಕ್ಕೆ ಒಳಗಾದವರು ಸಾಮಾಜಿಕವಾಗಿ ಆರ್ಥಿಕವಾಗಿ ಕೆಳಮಟ್ಟದವರು, ರಾಜಕೀಯ ಹಾಗೂ ಶೈಕ್ಷಣಿಕವಾಗಿ ಹಿಂದುಳಿದವರು ಎಂದೂ ವ್ಯಾಖ್ಯಾನಿಸಲಾಗಿದೆ. ದಲಿತ ಸಾಹಿತ್ಯ ಸಂದರ್ಭದಲ್ಲಿ ಮುಖ್ಯ ಲೇಖಕರೂ ಚಿಂತಕರೂ ಆದಂತಹ ಡಾ. ಅರವಿಂದ ಮಾಲಗತ್ತಿಯವರು-ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನೆಯೆಂಬ ಲೇಖನದಲ್ಲಿ ''ಶತಮಾನಗಳಿಂದ ಜನಸಮುದಾಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಬಿತರಾಗಿ ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ

ದಲಿತರೆನಿಸಿಕೊಳ್ಳುತ್ತಾರೆ"[1] ಎಂಬ ವ್ಯಾಖ್ಯಾನವೇ ಒಪ್ಪತಕ್ಕದ್ದೆಂದು ನಾನು ಈ ಸಂದರ್ಭದಲ್ಲಿ ಈ ವ್ಯಾಖ್ಯೆಯನ್ನು ಬಳಸಿಕೊಂಡಿದ್ದೇನೆ. ಮೇಲಿನ ಮಾತುಗಳಲ್ಲಿ ಶೋಷಣೆಗೆ ಒಳಗಾದ ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಒಳಗಾದ ಜನಸಮುದಾಯವಾಗಿ ಶೋಷಿತ ಆಚರಣೆಗಳೊಳಗಿದ್ದು ಜೀವಂತಿಕೆಯಿಂದ ಬಾಳಿ ಬದುಕಿದ ಜನರಿವರು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತರ ಬದುಕಿನ ನೋವು-ನಲಿವು ದುಃಖ ದುಮ್ಮಾನಗಳನ್ನು ಅನಾವರಣಗೊಳಿಸುತ್ತಾ ದಲಿತ ಪ್ರಪಂಚದ ಅಸ್ತಿತ್ವವನ್ನು ತೋರಿಸಿಕೊಟ್ಟವರು ಹಲವರು. ಶಿವರಾಮ ಕಾರಂತರ ಚೋಮನದುಡಿ, ಕುಡಿಯರ ಕೂಸು, ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು', ಅನಂತಮೂರ್ತಿಯವರ 'ಭಾರತೀಪುರ', ಮಾಸ್ತಿಯವರ ಜೋಗತಿ, ಭಾರತೀಪ್ರಿಯರ 'ಮೋಚಿ' ಗೋವಿಂದ ಪೈಗಳ ಹೊಲೆಯನ ದೂರು? ಮೊದಲಾದ ಕೃತಿಗಳಲ್ಲಿ ದಲಿತ ಬದುಕಿನ ಸೂಕ್ಷ್ಮ ಚಿತ್ರಣಗಳಿವೆ.

ದಲಿತರು ಬರೆದದ್ದು ದಲಿತ ಸಾಹಿತ್ಯವೆಂದೂ, ದಲಿತ ಜನಾಂಗದಲ್ಲಿ ಹುಟ್ಟಿದ ಲೇಖಕ ಮಾತ್ರ ತನ್ನ ಜನಾಂಗದ ನೋವು ನಲಿವುಗಳನ್ನು ಸಮರ್ಥವಾಗಿ ದಾಖಲಿಸಲು ಸಾಧ್ಯವೆಂಬ ಕೆಲವರ ವಾದವೂ ಇದೆ. ಏನೇ ಇರಲಿ ದಲಿತರಲ್ಲದ ಅನೇಕ ಲೇಖಕ ಲೇಖಕಿಯರೂ ಕೂಡ ದಲಿತರ ಬದುಕಿನ ದಮನಿತ ಸಮಸ್ಯೆಗಳನ್ನಿಟ್ಟುಕೊಂಡು ಸಾಹಿತ್ಯ ರಚನೆಮಾಡಿರುವುದನ್ನು ಮರೆಯುವಂತಿಲ್ಲ.

ದಲಿತರ ಬಗ್ಗೆ ಸಾಹಿತ್ಯದಲ್ಲಿ ದಾಖಲಾತಿ ಹೆಚ್ಚಾದಂತೆ ದಲಿತ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಗಟ್ಟಿ ಸ್ಥಾನವನ್ನು ಪಡೆದುಕೊಳ್ಳತೊಡಗಿತು. ಕನ್ನಡ ಸಾಹಿತ್ಯದಲ್ಲಿ ಅಭಿವ್ಯಕ್ತಿಗೊಂಡ ದಲಿತರ ಅನುಭವಗಳೆಂದರೆ ಬಡತನ, ಸಿಟ್ಟು, ಆಕ್ರೋಶ ಮತ್ತು ಶೋಷಣೆಯೆಂಬುದು ಅತ್ಯಂತ ಗಮನಾರ್ಹವಾದದ್ದು. ದೇವನೂರು ಮಹಾದೇವರ 'ದ್ಯಾವನೂರು', 'ಒಡಲಾಳ' ಕೃತಿಗಳಲ್ಲಿ ದಲಿತರ ಬಡತನದ ವ್ಯಥೆಯ ಚಿತ್ರಣವಿದೆ. ಸಿದ್ದಲಿಂಗಯ್ಯನವರ ಕವಿತೆಗಳಲ್ಲಿ, ಅರವಿಂದ ಮಾಲಗತ್ತಿಯವರ 'ಕಾರ್ಯ'ಕೃತಿಯಲ್ಲಿ ಮಾನವನ ಕ್ಷುದ್ರತೆಗಳೂ ದಾಖಲಾಗಿವೆ. ಇವರೆಲ್ಲರ ಸಾಮಾಜಿಕ ಅನುಭವಗಳು ಕಲಾಕೃತಿಯಲ್ಲಿ ಮೂಡಿಬರುವಾಗ ಕೇವಲ ಬಡತನ, ಸಿಟ್ಟು, ಆಕ್ರೋಶ ಮತ್ತು ಕ್ಷುದ್ರತೆಗಳನ್ನು ಮಾತ್ರ ಕಟ್ಟಿಕೊಟ್ಟದ್ದೇಕೆ ಇವುಗಳನ್ನು ಮಾತ್ರ ದಲಿತ ಪ್ರಪಂಚದ ಸರ್ವಸ್ವಗಳೇ ಎಂಬ ಪ್ರಶ್ನೆಯೂ ಬರುತ್ತದೆ. ಅಂದರೆ ಇದುವರೆಗಿನ ದಲಿತ ಬರಹಗಳು ಅಭಿವ್ಯಕ್ತಿಸಿದ ವಿಚಾರಗಳು ಒಟ್ಟು ದಲಿತ ಪ್ರಪಂಚವನ್ನು ಗಮನದಲ್ಲಿರಿಸಿಕೊಂಡು ನೋಡಿದಾಗ ತುಂಬಾ ಆಂಶಿಕ ಹಾಗೂ ಪಾರ್ಶ್ವಿಕವೆಂದು ನನಗನಿಸುತ್ತದೆ. ಇಂದು ದಲಿತರು ಬರೆಯಲು ಬಳಸುವ ಭಾಷೆ ಸಾಹಿತ್ಯದ ಆಕೃತಿಗಳು ಈಗಾಗಲೇ ಸವರ್ಣೀಯರಿಂದ ನಿರ್ಮಿತವಾದವುಗಳು. ಕನ್ನಡ ಸಂದರ್ಭದಲ್ಲಿ ಗಮನಿಸಿದಾಗ ನವೋದಯ, ಪ್ರಗತಿಶೀಲ, ನವ್ಯದವರಿಂದ ನಿರ್ಮಿಸಲ್ಪಟ್ಟುದುದು. ಹೀಗೆ ಅನ್ಯ ಸಾಹಿತ್ಯದ ಪರಿಭಾಷೆಯಲ್ಲಿ ಅಸ್ಪೃಶ್ಯರು ಮಾತನಾಡಬೇಕಾಗಿ ಬಂದಿರುವುದು ಒಂದು ದೊಡ್ಡ ಸಮಸ್ಯೆಯಾಗಿಯೂ ಪರಿಣಮಿಸಿದೆ. ಈ ಸಮಸ್ಯೆ ದಲಿತರ ಸಾಹಿತ್ಯಾಭಿವ್ಯಕ್ತಿಗೆ ಒಂದು ಸೀಮಿತ ಚೌಕಟ್ಟನ್ನು ನಿರ್ಮಿಸಿದ ಹಾಗೇ ಓದುಗರಿಗೂ ಒಂದು ಚೌಕಟ್ಟನ್ನು ನಿರ್ಮಿಸಿದೆ. ಹೀಗಾಗಲು ಕಾರಣವನ್ನು ಒಟ್ಟಾರೆ ದಲಿತ ಸಾಹಿತ್ಯಕ್ಕೆ ದೊರಕಿದ ಪ್ರೇರಣೆಗಳಲ್ಲಿ ಹುಡುಕಬಹುದಾಗಿದೆ.

ಈ ದಲಿತ ಮತ್ತು ಬಂಡಾಯ ಚಳುವಳಿಗೆ ಮೂರು ರೀತಿಯ ಪ್ರೇರಣೆಗಳಿವೆ. ೧. ಅಂಬೇಡ್ಕರ್‌ವಾದ ೨. ಲೋಹಿಯಾವಾದ. ೩. ಮಾರ್ಕ್ಸ್‌ವಾದ. ಅಂಬೇಡ್ಕರ್‌ವಾದಿಗಳು ಅಸ್ಪೃಶ್ಯತೆಯ ಬಗ್ಗೆ ಎಚ್ಚರ ಹುಟ್ಟಿಸಿದರೆ,

ಲೋಹಿಯಾವಾದಿಗಳು ಗ್ರಾಮೀಣ ಜನ ಜೀವನದತ್ತ ಒಲವು ತೋರಿಸಿದರು. ಮಾರ್ಕ್ಸ್‌ವಾದಿಗಳು ಎಲ್ಲ ಜನರ ಬಡತನದ ಬಗ್ಗೆ ವರ್ಗಕಾಳಜಿ ವಹಿಸಿ ದುಡಿಯುವ ಜನರ ದನಿಯಾದರು. ಈ ಮೂರು ರೀತಿಯ ಪ್ರೇರಣೆಗಳನ್ನು ದಲಿತ ಸಾಹಿತ್ಯ ರಚನೆಗೆ ತೊಡಗಿದ ಬರಹಗಾರರು ಸ್ವೀಕರಿಸಿ ದಲಿತ ಸಾಂಸ್ಕೃತಿಕ ಲೋಕದ ಅನನ್ಯತೆಯನ್ನು ತಮ್ಮ ಕೃತಿಗಳಲ್ಲಿ ಪುನರ್ ಸೃಷ್ಟಿಸಿದರು.

''ಇಂದಿನ ದಲಿತ ಬರಹಗಾರರಿಗೆ ಮೂರು ರೀತಿಯ ಸಮಸ್ಯೆಗಳಿವೆ. ಒಂದು ಸಾಕ್ಷರ ಸಂಸ್ಕೃತಿ, ಎರಡು ಪರಿಸರ, ಮೂರು ಭಾಷೆ; ಸ್ವಾತಂತ್ರ್ಯಾನಂತರ ಸಾಮಾಜಿಕ ಸಾಂಸ್ಕೃತಿಕ ಬದಲಾವಣೆಯ ಗಾಳಿ ದಲಿತ ಪ್ರಪಂಚದೊಳಕ್ಕೆ ನಿಧಾನವಾಗಿ ಪ್ರವೇಶಿಸತೊಡಗಿದ್ದು; ಪ್ರಜ್ಞಾವಂತ ದಲಿತರ ಎಚ್ಚರ, ಅಸ್ಪೃಶ್ಯತಾ ನಿವಾರಣೆಯ ಹೋರಾಟಗಳು, ಅಸ್ಪೃಶ್ಯತಾ ನಿವಾರಣಾ ಕಾನೂನು ಮತ್ತು ಅದರ ಬಗೆಗಿನ ಭಯ, ಹಿಂದೂ ಧರ್ಮದ ಬಹುದೊಡ್ಡ ಭಾಗವಾದ ದಲಿತರಿಗೆ ಏನನ್ನಾದರೂ ಮಾಡಬೇಕೆಂದು ಅರಿವು ಮೂಡಿಸಿಕೊಂಡದ್ದು, ಸಮಾಜ ಸುಧಾರಕರ ನಿರಂತರ ಪ್ರಯತ್ನ ಇವು ದಲಿತ ಜಗತ್ತಿನ ಕೋಟೆಗಳಿಗೆ ಲಗ್ಗೆ ಹಾಕಿದಾಗ ಅವರು ಅಲ್ಪ ಸ್ವಲ್ಪ ಇತರರೊಂದಿಗೆ ಬೆರೆತು ಸಾಕ್ಷರ ಸಂಸ್ಕೃತಿಯ ಪರಿಧಿಯೊಳಗೆ ಹೆಜ್ಜೆಯಿಡಲು ಸಹಾಯಮಾಡಿತು.''³

ಸಾಮಾಜಿಕವಾಗಿ ದೂರವಾಗಿ ಆರ್ಥಿಕವಾಗಿ ಶೋಚನೀಯ ಸ್ಥಿತಿಯಲ್ಲಿದ್ದ ದಲಿತರಲ್ಲಿ ಮೊದಮೊದಲು ಶಿಕ್ಷಣದ ಬಗ್ಗೆ ಭಯ ಮತ್ತು ಅವೆಲ್ಲ ನಮಗೆ ಅಗತ್ಯ ಇಲ್ಲವೆಂಬ ಉದಾಸೀನ ಭಾವವೇ ತುಂಬಿಕೊಂಡಿತ್ತು. ಈ ಉದಾಸೀನಕ್ಕೆ ಪರಿಸರ ಮತ್ತು ಭಾಷೆಯೇ ಕಾರಣವಾಗುತ್ತದೆ. ಯಾಕೆಂದರೆ ದಲಿತ ತನ್ನದಲ್ಲದ ಭಾಷೆಯಲ್ಲಿ ವಿದ್ಯಾಭ್ಯಾಸ ಮಾಡಬೇಕಾಗಿದೆ. ಊರ ಹೊರಗೆ ತನ್ನವರ ನಡುವೆ ಇದ್ದ ಆತ ಏಕಾಂಗಿಯಾಗಿ ತನ್ನನ್ನು ಶತಮಾನಗಳಿಂದ ದೂರವಿಟ್ಟವರ ನಡುವೆ ಕುಳಿತು ಕಲಿಯಬೇಕಾದುದು ಭಯ ಹುಟ್ಟಿಸಿದ್ದು, ಸಹಜವೇ. ಇದುವರೆಗೆ ಅಸ್ಪೃಶ್ಯನಾಗಿದ್ದ ಆತ ಸ್ಪೃಶ್ಯರೊಡನೆ ಮನಃ ಪೂರ್ವಕವಾಗಿ ಬೆರೆಯಲು ತುಂಬಾ ಕಷ್ಟಪಡಬೇಕಾಗುತ್ತದೆ. ಯಾಕೆಂದರೆ ಸಾಮಾಜಿಕ ಜೀವನದಲ್ಲಿ ತನಗಿರುವ ತುಚ್ಛತೆಯ ಸ್ಥಾನ ಅವನನ್ನು ಸದಾ ಮುಳ್ಳಿನಂತೆ ಚುಚ್ಚುತ್ತಿರುತ್ತದೆ. ಈ ಮಾನಸಿಕ ವಿಪ್ಲವದೊಂದಿಗೆ ತನ್ನದಲ್ಲದ ಭಾಷೆಯಲ್ಲಿ ಕಲಿಯಬೇಕಾಗಿರುವುದು ಬರಹಗಾರರನ್ನು ದೃತಿಗೆಡಿಸಿದೆ.

ಮೊದಲ ಬಾರಿಗೆ ಅಕ್ಷರ ಪಡೆದ ದಲಿತರು ಅದರಿಂದ ವಿಮೋಚನೆಯ ಕನಸುಗಳನ್ನು ತುಂಬಿಕೊಂಡ ಕೋಟ್ಯಾಂತರ ಭಾರತೀಯ ಯುವ ಜನಾಂಗ ಅಸ್ಪೃಶ್ಯತೆಯ ಶಾಪದಿಂದ ನರಳುತ್ತಿದ್ದು, ಅವರನ್ನು ಬೆಳಕಿಗೆ ತರಬೇಕೆಂಬ ಹಂಬಲದಿಂದ ದಲಿತ ವಿಮೋಚನಾ ಹೋರಾಟವನ್ನು ಅರವತ್ತರ ದಶಕದಿಂದ ಪ್ರಾರಂಭಿಸಿತು. ಈ ದಲಿತ ಹೋರಾಟಕ್ಕೆ ಹಿಂದೂ ಸಮಾಜದ ಎಲ್ಲಾ ಓರೆಕೋರೆಗಳನ್ನು ತಿದ್ದುವ ತಿರಸ್ಕರಿಸುವ ಮಾನವ ಪ್ರೇಮದ ಹಂಬಲವಿತ್ತು. ಸಾಮಾಜಿಕ ಅಪರಾಧಗಳು ಕೊನೆಯಾಗಿ ಎಲ್ಲಾ ಜನರು ನೆಮ್ಮದಿಯಾಗಿ ಸ್ವಾಭಿಮಾನದಿಂದ ಬದುಕು ನಡೆಸುವಂತಾಗಬೇಕಂಬ ಆಸೆಯಿತ್ತು. ಜಾತಿ ಅಸಮಾನತೆಯ ಗೋಡೆಯನ್ನು ಕೆಡವಿ ಅಲ್ಲಿ ಹೂಗಿಡಗಳನ್ನು ನಡೆಸಬೇಕೆಂಬ ಛಲವಿತ್ತು. ಆತಂಕ ಹೋರಾಟ ಅಂಬೇಡ್ಕರ್ ಅವರ ವಿಚಾರಗಳಿಂದ ಈ ನೆಲದಲ್ಲಿ ಚಿಗುರಲು ಪ್ರಯತ್ನ ಮಾಡುತ್ತಲೇಇತ್ತು.

ದಲಿತ ಸಾಹಿತ್ಯಕ್ಕೆ ಸೌಂದರ್ಯ, ಛಂದಸ್ಸು ಶೈಲಿಗಳಿಗಿಂತ ಸಾಮಾಜಿಕ ಜವಾಬ್ದಾರಿ ಮುಖ್ಯವಾಯಿತು. ಆದರೆ ಸಾಹಿತ್ಯಿಕ ನಡಿಗೆಯನ್ನು ಬದಲಾಯಿಸುವ ಶಕ್ತಿ ಈ ದಲಿತ ಚಳುವಳಿಗಿತ್ತು. ಭಾರತೀಯ ದಲಿತ ಸಾಹಿತ್ಯದ ಮುಂಚೂಣಿ ಲೇಖಕರು ಮರಾಠಿ ಭಾಷೆಯಲ್ಲಿದ್ದಾರೆ. ಮರಾಠಿ ಭಾಷೆಯ ಅಭಿವ್ಯಕ್ತಿಯ ತಂತ್ರದ ಸೃಜನಶೀಲತೆಯು ದಲಿತ ಸಾಹಿತ್ಯವಾಗಿದೆ.

ಭಾರತೀಯ ಭಾಷೆಗಳಲ್ಲಿ ಮರಾಠಿ ನಂತರದ ಸ್ಥಾನ ಕನ್ನಡ ದಲಿತ ಸಾಹಿತ್ಯಕ್ಕಿದೆ. ಗುಜರಾತಿ, ತೆಲುಗು, ಹಿಂದಿ ಭಾಷೆಗಳಲ್ಲೂ ಗಣನೀಯ ಪ್ರಮಾಣದಲ್ಲಿ ದಲಿತ ಲೇಖಕರು ಬರೆಯುತ್ತಿದ್ದರೂ, ದಲಿತ ಸಾಹಿತ್ಯ ಚಳುವಳಿಯು ವಿಶಿಷ್ಟ ಸ್ವರೂಪ ಪಡೆದು ಗುಣಮಟ್ಟದಲ್ಲೂ ಉತ್ತಮವಾದುದನ್ನೇ ನೀಡುತ್ತಾ ಬಂದಿರುವ ಕನ್ನಡ ಭಾಷೆಯ ಲೇಖಕರೂ ಜನಪ್ರಿಯರಾಗಿದ್ದಾರೆ. ದಲಿತ ಸಾಹಿತ್ಯವನ್ನು ಒಟ್ಟು ಸಾಹಿತ್ಯದಿಂದ ಪ್ರತ್ಯೇಕವಾಗಿ ನೋಡುವುದು ಸರಿಯಾದ ಕ್ರಮವೇಎಂಬ ಅನೇಕ ಪ್ರಶ್ನೆಗಳೂ ನಮ್ಮ ಮುಂದೆ ಬರುತ್ತವೆ. ಆದರೂ ಅಧ್ಯಯನ ಮತ್ತು ಅನುಭವದ ದೃಷ್ಟಿಯಿಂದ ಈ ರೀತಿಯ ವಿಭಾಗೀಕರಣ ಸಾಧುವಾದದ್ದಾಗಿದೆ. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತರ ಬದುಕನ್ನು ಕುರಿತು ಬರೆದ ಕಥೆ-ಕಾದಂಬರಿಗಳಿವೆ. ಆದರೆ ದಲಿತರೇ ತಮ್ಮ ನೋವನ್ನು ತಮ್ಮ ಭಾಷೆಯಲ್ಲಿ ಹೇಳಿಕೊಳ್ಳುವುದು ಹೆಚ್ಚು ಅಧಿಕೃತವಾದದ್ದು. ಅನುಭವದ ಪ್ರಥಮ ಸಂವೇದನೆಗಳು ಅಲ್ಲಿ ದೊರೆಯುತ್ತವೆ. ಅಸ್ಪೃಶ್ಯತೆಯನ್ನುಂಡು ವ್ಯಕ್ತಿಯ ಮನಸ್ಸಿನ ಅಂತರಾಳವನ್ನು ಬಿಚ್ಚಿಡುವುದು ದಲಿತನಿಂದ ಮಾತ್ರ ಸಾಧ್ಯ. ದಲಿತ ಅನುಭವ ಪ್ರಪಂಚವು ವಿಶಿಷ್ಟವಾದುದು. ಭಾರತದಲ್ಲಿ ದಲಿತರಿಗಲ್ಲದೆ ಬೇರೆಯವರಿಗೆ ಅದರ ಬಿಸಿ ತಟ್ಟುವುದು ಕಷ್ಟದ ಮಾತು. ಇಂತಹ ಅಸ್ಪೃಶ್ಯತೆಯ ಕುಲುಮೆಯಿಂದ ಬಂದ ಲೇಖಕ ತನ್ನ ಅನುಭವಗಳನ್ನು ಕಲಾತ್ಮಕತೆಯೊಂದಿಗೆ ಕೃತಿಯನ್ನು ರಚನೆ ಮಾಡಿ ಓದುಗರ ಪ್ರಪಂಚಕ್ಕೆ ನೀಡುವ ಸಾಮಾಜಿಕ ಜವಾಬ್ದಾರಿಯನ್ನು ದಲಿತ ಲೇಖಕ ಹೊಂದಿದವನಾಗಿದ್ದಾನೆ.

ದಲಿತ ಕತೆಗಳಿಗೆ ಡಾ. ಎಲ್. ಹನುಮಂತಯ್ಯ ಮತ್ತು ಬಿ. ಚಿನ್ನಸ್ವಾಮಿಯವರು ಬರೆದಿರುವ ''ದಲಿತರ ಬದುಕಿನ ಆಚರಣೆ ಸಂಪ್ರದಾಯಗಳನ್ನು ದಲಿತರ ಆಸೆ ಆಕಾಂಕ್ಷೆಗಳನ್ನು ಒಳಗೊಂಡ ದಲಿತ ಪ್ರಜ್ಞೆ ಅಥವಾ ದಲಿತ ಸಂವೇದನೆಯಿಂದ ದಲಿತ ಲೇಖಕರು ತಾವುಂಡ ನೋವಿನ ಲೋಕದಲ್ಲಿಯೇ ವಿಮೋಚನೆ ಕನಸು ಕಂಡಿರುವ ಅವರ ಜೀವನೋತ್ಸಾಹ ಅನನ್ಯವಾದದ್ದು''[೩] ಎಂಬ ಸಾಲುಗಳು ಪ್ರಸ್ತುತವಾಗಿವೆ. ಇಂದು ಈ ದಲಿತ ಸಾಹಿತ್ಯದ ಅನನ್ಯತೆಯನ್ನು ಗುರುತಿಸುವ ಈ ಸಾಂಸ್ಕೃತಿಕ ಸಂದರ್ಭದಲ್ಲಿ ದಲಿತ ಸಂವೇದನೆ ಎಂಬುದು ವಿಶಿಷ್ಟ ಸಂವೇದನೆಯಾಗಿದೆ. ಅಸ್ಪೃಶ್ಯತೆಯ ಅನುಭವವುಳ್ಳ ಒಬ್ಬ ಲೇಖಕ ತನ್ನ ಅನುಭವ ದ್ರವ್ಯವನ್ನು ಜೀವಂತವಾಗಿರಿಸಿಕೊಂಡು ಸೃಜನಶೀಲತೆಯ ಮೂಲಕ ಸ್ಪಂದಿಸುವುದೇ ದಲಿತ ಸಂವೇದನೆಯ ಮೂಲದ್ರವ್ಯ ಮತ್ತು ಅನನ್ಯತೆಯೂ ಆಗಿದೆ.

ಅಸ್ಪೃಶ್ಯತೆ ದಲಿತ ಸಾಹಿತ್ಯದ ಸ್ಥಾಯೀಭಾವ. ಒಂದೇ ಮಾತಿನಲ್ಲಿ ಹೇಳುವುದಾದರೆ ದಲಿತ ಸಾಹಿತ್ಯದ ವಿಶಿಷ್ಟತೆಯೆಂದರೆ ಅಸ್ಪೃಶ್ಯತೆಯೆ, ಮಾನವ ಜನಾಂಗದಲ್ಲಿ ಯಾರೂ ಅನುಭವಿಸಲಾರದಂತಹ ಒಂದು ವಿಚಿತ್ರ ಅನುಭವ ಇಂಡಿಯಾದ ಅಸ್ಪೃಶ್ಯರಿಗೆ ಮಾತ್ರ ಆಗುತ್ತದೆ. ಪ್ರಾಣಿಗಳ ವಿರುದ್ಧವೂ ಆಚರಿಸದ ಇಂಥ ಒಂದು ಆಚರಣೆ ಒಂದು ವರ್ಗದ ಮನುಷ್ಯರ ವಿರುದ್ಧ ಯಾಕೆ ಆಚರಿಸಲಾಗುತ್ತಿದೆ. ಇದೊಂದೆ ವಿಷಯ ಭಾರತೀಯ ಸಂಸ್ಕೃತಿಯನ್ನು ತಲೆತಗ್ಗಿಸುವಂತೆ ಮಾಡುತ್ತದೆ. ಮೇಲ್ವರ್ಗದ ಸಂಸ್ಕೃತಿ ಪಂಡಿತರು ಎಷ್ಟೇ ಮೇರುಧ್ವನಿಯಲ್ಲಿ ತಮ್ಮದು ಉದಾತ್ತ ಸಂಸ್ಕೃತಿ ಎಂದೂ ಅರಚಿದರೂ ಅನ್ಯಧರ್ಮೀಯರು ಶ್ರೀಮಂತ, ಬಡವರೆನ್ನದೆ ಈ ವಿಚಿತ್ರ ಆಚರಣೆಯನ್ನು ಕಂಡು ಒಳಗೊಳಗೆ ನಗುತ್ತಿರುತ್ತಾರೆ ಎಂಬುದು ಗಮನಿಸಬೇಕಾದ ಅಂಶ. ಅಷ್ಟಾದರೂ ಹಿಂದೂ ಮೂಲಭೂತವಾದಿಗಳು ತಲೆಯೆತ್ತಿ ನಗುತ್ತಿರುರುವುದು ಪ್ರಗತಿಗಾಮಿತನದ ಧೋರಣೆಯಾಗುತ್ತದೆ. ಎಲ್ಲಿಯವರೆಗೆ ಒಬ್ಬ ಹಿಂದೂ ತನ್ನ ಧರ್ಮದ ಬಗ್ಗೆ ನಾಚಿಕೆ ಪಟ್ಟುಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅಸ್ಪೃಶ್ಯತೆ

ಜೀವಂತವಾಗಿರುತ್ತದೆ. ಈ ಅಮಾನವೀಯ ಅನುಭವವೇ ದಲಿತ ಸಾಹಿತ್ಯದ ಮೂಲ ದ್ರವ್ಯ ಇದರಿಂದ ಬಿಡುಗಡೆ ಹೊಂದುವ ಬಗೆಯೇ ದಲಿತ ಸಾಹಿತ್ಯದ ಅನನ್ಯತೆಯಾಗಿದೆ.

ದಲಿತ ಸಾಹಿತ್ಯವು ಜಿಡ್ಡು ಹಿಡಿದ ಸಂಪ್ರದಾಯಬದ್ಧವಾದ ಮನಸ್ಸನ್ನು ಮಾನವೀಕರಣಗೊಳಿಸುವ ಪ್ರಕ್ರಿಯೆಯೆಂದು ನಾನು ಅರ್ಥೈಸುತ್ತೇನೆ. ಇಂದು ದಲಿತ ಸಾಹಿತಿಯೊಬ್ಬನಿಗೆ ಹಲವಾರು ಸವಾಲುಗಳಿವೆ. ''ಕೇವಲ ಉದ್ವೇಗದಿಂದ ಸಾಹಿತ್ಯ ಸೃಷ್ಟಿಯಾಗುವುದಿಲ್ಲ''. ಎಂಬ ಜಿ. ರಾಮಕೃಷ್ಣರ ಮಾತುಗಳನ್ನು ಇಲ್ಲಿ ನೆನೆಪಿಡಬೇಕು. ಉದ್ವೇಗವನ್ನು ಕಾಲದ ಕುಲುಮೆಯೊಳಗಿಟ್ಟರೆ ನಮ್ಮ ನೋವಿಗೆ ಹದವಾದ ಅಭಿವ್ಯಕ್ತಿ ದೊರೆಯುತ್ತದೆ. ಅನ್ಯಾಯ, ಅಸಮಾನತೆಗಳ ವಿರುದ್ಧ ಸತತವಾದ ಹೋರಾಟ ಪ್ರಸ್ತುತ ಸಂದರ್ಭದಲ್ಲಿ ಅನಿವಾರ್ಯವೆನಿಸಿದರೂ ಸಾಹಿತ್ಯದ ಮಿತಿಯನ್ನು ಬರಹಗಾರ ಅರ್ಥಮಾಡಿಕೊಳ್ಳಬೇಕಿದೆ''[೪] ಎಂಬ ನಿಲುವು ಕೂಡ ಇಂದಿನ ದಲಿತ ಸಾಹಿತ್ಯ ಸಂಸ್ಕೃತಿ ಸಂದರ್ಭದಲ್ಲಿ ವಿವೇಚನೆಗೆ ಒಳಪಡಿಸಿಕೊಳ್ಳಬೇಕಾದ ಜವಾಬ್ದಾರಿಯಾಗಿದೆ.

''ದಲಿತ ಸಾಹಿತ್ಯದ ಮೇಲೆ ಡಾ. ಅಂಬೇಡ್ಕರ್‌ರವರನ್ನು ಬಿಟ್ಟರೆ ಆಗಿರುವ ಮತ್ತೊಂದು ಪ್ರಭಾವ ಕಾರ್ಲ್‌ಮಾರ್ಕ್ಸ್ ಅವರದು. ಅಲ್ಪಸಂಖ್ಯಾತ ದಲಿತ ಸಾಹಿತಿಗಳ ಮೇಲೆ ಮಾರ್ಕ್ಸ್‌ರವರ ಪ್ರಭಾವ ಆಗಿದ್ದರೂ ಅಂಬೇಡ್ಕರ್‌ರವರಷ್ಟೇ ಆಳವಾದದ್ದೂ, ದಟ್ಟವಾದದ್ದೂ ಆಗಿದೆ. ಈ ಗುಂಪಿನ ದಲಿತ ಸಾಹಿತಿಗಳು ಕನ್ನಡವನ್ನು ಒಳಗೊಂಡಂತೆ ಭಾರತದ ಎಲ್ಲಾ ಭಾಷೆಗಳಲ್ಲಿ ಕಂಡು ಬರುತ್ತಾರೆ. ತಮ್ಮೆಲ್ಲಾ ರಾಜಕೀಯ, ಆರ್ಥಿಕ ವಿಶ್ಲೇಷಣೆಗೆ ಮಾರ್ಕ್ಸ್‌ವಾದಿ ವಿಶ್ಲೇಷಣೆಯನ್ನು ಇವರು ಬಳಸಿಕೊಳ್ಳುವುದು ಸಹಜವೇ ಆಗಿದೆ. ಅಂಬೇಡ್ಕರ್‌ವಾದಿ ಮತ್ತು ಮಾರ್ಕ್ಸ್‌ವಾದಿ ದಲಿತ ಸಾಹಿತಿಗಳ ನೋವು ಒಂದು ಬಗೆಯಾದರೆ ಆ ಸಮಸ್ಯೆಯನ್ನು ವಿವರಿಸುವ ರೀತಿ ಬೇರೆ ಬೇರೆ ಬಗೆಯದು. ಇತ್ತೀಚೆಗೆ ಮಾರ್ಕ್ಸ್‌ವಾದಿ ದಲಿತರು ವರ್ಣ, ವರ್ಗ ಹೋರಾಟದ ಅಗತ್ಯವನ್ನು ಒತ್ತಿ ಹೇಳುತ್ತಿರುವುದು ಕಂಡು ಬರುತ್ತಿದೆ.''[೫]ಎಂಬ ಸಿದ್ದಲಿಂಗಯ್ಯನವರ ನಿಲುವು ಕೂಡ ಈ ಸಂದರ್ಭದಲ್ಲಿ ಔಚಿತ್ಯಪೂರ್ಣವಾದದ್ದು.

ತಮ್ಮನ್ನು ತುಳಿತಕ್ಕೆ ಒಳಪಡಿಸಿದ ಮೇಲು ಸಂಸ್ಕೃತಿಯ ಜನ ವಿರೋಧಿ ಮೌಲ್ಯಗಳನ್ನು ಈ ದಲಿತ ಸಾಹಿತ್ಯವು ತಿರಸ್ಕರಿಸುತ್ತದೆ. ಜನಪರ ಮೌಲ್ಯಗಳಿಂದ ತುಂಬಿದ ಹೊಸ ಮೌಲ್ಯಗಳ ಆವಿಷ್ಕಾರದಲ್ಲಿ ಅದು ತೊಡಗುತ್ತದೆ. ಒಬ್ಬ ಸಾಹಿತಿ ಹುಟ್ಟಿನಿಂದ ದಲಿತನೇ ಆಗಿದ್ದರೂ ಮೇಲು ಸಂಸ್ಕೃತಿಯ ಮೌಲ್ಯಗಳನ್ನು ಕೈ ಬಿಡದೆ ಹೋದರೆ ಅವನು ದಲಿತ ಸಾಹಿತ್ಯಕ್ಕೆ ಅತ್ಯುತ್ತಮ ಕೊಡುಗೆಯನ್ನು ನೀಡಲಾರ. ಹಾಗೆಯೇ ತನ್ನನ್ನು ತುಳಿಯುವ ಸಂಸ್ಕೃತಿಯನ್ನು ತಿರಸ್ಕರಿಸದೆ ಅರ್ಥಪೂರ್ಣವಾದುದನ್ನು ದಲಿತ ಸಾಹಿತ್ಯ ಸೃಷ್ಟಿಸಲು ಸಾಧ್ಯವಿಲ್ಲ. ದಲಿತರನ್ನು ಕೀಳಾಗಿಸುವ ಅವಮಾನಗೊಳಿಸುವ ಮೇಲು ಸಂಸ್ಕೃತಿಯ ಪುರಾಣ, ದೇವರು ಹಬ್ಬಗಳು, ಆಚರಣೆಗಳು, ನಂಬಿಕೆ ಐತಿಹ್ಯಗಳಿಗೆ ದಲಿತ ಮನಸ್ಸಿನಲ್ಲೂ, ದಲಿತ ಸಾಹಿತ್ಯದಲ್ಲೂ ಯಾವುದೇ ಸ್ಥಾನವಿಲ್ಲವೆಂಬ ಮಾತು ಕೂಡ ಸೂಕ್ತವಾದದ್ದಾಗಿದೆ.

ಇತ್ತೀಚೆಗೆ ನಡೆದ ಸ್ಮರಣೀಯ ರೈತ ಜಾಥದಲ್ಲಿ ಸಿದ್ದಲಿಂಗಯ್ಯನವರ 'ದಲಿತರು ಬಂದರು ದಾರಿ ಬಿಡಿ' ಎಂಬ ಪದ್ಯ 'ರೈತರು ಬಂದರು ದಾರಿ ಬಿಡಿ' ಘೋಷಣೆಯಾಗಿ ರೂಪುಗೊಂಡದ್ದು 'ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು' ಸೇರಿದ್ದು ಕೂಡ ದಲಿತ ಸಾಹಿತ್ಯ ಬಡವರನ್ನು, ಜನ ಸಾಮಾನ್ಯರನ್ನು ಎಷ್ಟು ಬೇಗ ಮುಟ್ಟಬಲ್ಲದು ಎಂಬುದಕ್ಕೆ ಸಾಕ್ಷಿಯಾಗಿದೆ.

ಇಂದು ದಲಿತ ಸಾಹಿತ್ಯ ರಚಿಸುತ್ತಿರುವವರಲ್ಲಿ ಸಮಾಜದ ಕೆಳಹಂತಗಳಿಂದ ಬಂದವರೇ ಹೆಚ್ಚಾಗಿದ್ದಾರೆ ಎಂಬ ಮಾತಿದೆ. ಇದೂ ನಿಜ. ಇದಕ್ಕೆ ಕಾರಣ ಈ ವರ್ಗದ ಜನ ಹೆಚ್ಚು ಹೆಚ್ಚಾಗಿ ಈಗ ವಿದ್ಯಾವಂತರಾಗಿರುವುದು.

ರಾಜಕೀಯ ಪ್ರಜ್ಞೆ ಗಳಿಸಿರುವುದು ಮತ್ತು ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧ ಪ್ರತಿಭಟಿಸುವ ಶಕ್ತಿಯನ್ನು ಬೆಳೆಸಿಕೊಂಡಿರುವುದು ದಲಿತರ ಅನನ್ಯ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ದಲಿತ ಸಾಹಿತ್ಯದ ಅನನ್ಯತೆಯ ಕುರಿತು ವಿವರಿಸುವಾಗ ಅನೇಕ ಸಾಹಿತಿ ಮತ್ತು ವಿಚಾರವಾದಿಗಳು ದಲಿತ ಸಾಹಿತ್ಯದ ನಿಲುವುಗಳನ್ನು ಅನೇಕ ರೀತಿಯಲ್ಲಿ ವಿವರಿಸಿದ್ದಾರೆ. ಅವರಲ್ಲಿ ಪ್ರಮುಖರಾದಂತಹ, ಬಂಡಾಯ ಸಾಹಿತ್ಯದ ಪ್ರಮುಖ ವಕ್ತಾರರಲ್ಲಿ ಒಬ್ಬರಾದ ಪ್ರೊ.ಬರಗೂರು ರಾಮಚಂದ್ರಪ್ಪನವರ ಪ್ರಕಾರ. ''ಶೋಷಿತ ಜನತೆಯ ಪರವಾದ ನಿಲುವು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದು, ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ನೀತಿಯ ವಿರುದ್ಧ ಹೋರಾಟ ಕಟ್ಟುವುದು, ಎಲ್ಲ ಜನಪರ ಹೋರಾಟಗಳೊಂದಿಗೆ ಕ್ರಿಯಾತ್ಮಕ ಸಂಬಂಧ ಬೆಳೆಸಲು ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಎಡಪಂಥೀಯ ವಿಚಾರಧಾರೆಯನ್ನು ನೆಲೆಗೊಳಿಸಲು ನಾವು ಬದ್ಧರು''[೬] ಎಂಬ ಬರಗೂರರ ಈ ಮಾತುಗಳು ದಲಿತ ಸಾಹಿತ್ಯದ ನೆಲೆ, ಬೆಲೆಗಳನ್ನು ಸ್ಥೂಲವಾಗಿ ವಿವೇಚಿಸುತ್ತವೆ. ಕಳೆದ ಐದಾರು ವರ್ಷಗಳಿಂದ ಗ್ರಾಮೀಣ ಅನುಭವದ ಹಾಗೂ ದಲಿತರ ಕ್ಷೋಭೆಯ ಚಿತ್ರಗಳು ಕನ್ನಡ ಸಾಹಿತ್ಯಕ್ಕೆ ಪ್ರವೇಶ ಮಾಡಿದವು. ಕೆಳವರ್ಗ ಮತ್ತು ಕೆಳ ಮಧ್ಯಮ ವರ್ಗದ ಜನತೆಯ ಆಶಯಗಳು ಸಾಮಾಜಿಕ ಚಳುವಳಿಯಿಂದ ಚಿತ್ರಿಸಲ್ಪಟ್ಟವು. ದಲಿತ ಸಾಹಿತ್ಯದಲ್ಲಿ ಕೃತಿಯ ವಸ್ತು, ಧೋರಣೆಯೂ ಕೂಡ ವಿಶಿಷ್ಟವಾಗಿರುತ್ತದೆ.

ಡಾ.ರಹಮತ್ ತರೀಕೆರೆಯವರು ದಲಿತ ಸಾಹಿತ್ಯದ ತಾತ್ವಿಕ ನೆಲೆಗಳನ್ನು ಕುರಿತು ''ಇಂದು ದಲಿತ ಸಾಹಿತ್ಯದ ಸ್ವರೂಪಕ್ಕೂ ದಲಿತ ಸಮುದಾಯಗಳಲ್ಲಿ ಉಂಟಾಗಿರುವ ಪರಿವರ್ತನೆಗಳಿಗೂ ಇರುವ ಸಂಬಂಧ ಕಾರ್ಯಕಾರಣ ರೀತಿಯದ್ದಲ್ಲ. ಆದರೂ ಅವುಗಳ ನಡುವೆ ಒಂದು ಬಗೆಯ ಸಾವಯವ ಸಂಬಂಧವಿದೆ'' ಎಂದು ಹೇಳುತ್ತಾ, ''ಸದ್ಯಕ್ಕಂತೂ ದಲಿತ ಲೇಖಕರ ವಿಷಾದಗಳಿಗೂ ದಲಿತ ಚಳುವಳಿಗೂ ಇರುವ ಸಂಬಂಧ ಅಂತಹದ್ದು, ಇದಕ್ಕೆ ದಲಿತ ಸಂಘಟನೆ ಛಿದ್ರವಾಗಿ, ಪರಸ್ಪರ ಬಣಗಳು ಕಿತ್ತಾಡುವುದು, ಅವು ವಿಶಾಲ ದಲಿತ ಸಮುದಾಯದ ಹಿತಾಸಕ್ತಿಯನ್ನು ಪ್ರತಿನಿಧಿಸುವ ರಾಜಕೀಯ ಪ್ರಜ್ಞೆಯನ್ನು ಕಳೆದುಕೊಳ್ಳುತ್ತಿರುವುದು, ದಲಿತ ನಾಯಕರು ನೈತಿಕತೆಯನ್ನು ಕಳೆದುಕೊಂಡಿರುವುದು, ಅವರನ್ನು ಬೇರೆ ಬೇರೆ ರಾಜಕೀಯ ಪಕ್ಷಗಳು ಬಳಸಿಕೊಳ್ಳುತ್ತಿರುವುದು, ದಲಿತ ಚಳುವಳಿ ಎಡಗೈ-ಬಲಗೈ ಎಂದು ಒಡೆದು ಹೋಗಿರುವುದು, ಕೋಮುವಾದವು ತಲೆಯೆತ್ತಿರುವುದು, ಜಾಗತೀಕರಣದ ಯುಗವು ಬಂದು ದಲಿತರಿಗೆ ಇದ್ದ ಮೀಸಲಾತಿಯ ಪರಿಕಲ್ಪನೆಯನ್ನೇ ಅಸಂಬದ್ಧಮಾಡಿರುವುದು,''[೭] ಇತ್ಯಾದಿ ಕಾರಣಗಳೆಂದು ವಿವರಿಸುತ್ತಾ, ಈ ಎಲ್ಲಾ ಬಿಕ್ಕಟ್ಟುಗಳ ಒಳಗೆ ಹೊಸ ದಲಿತ ಲೇಖಕರ ಚಿಂತಕರ ಕಾರ್ಯಕರ್ತರ ತಲೆಮಾರು ವಿಚಿತ್ರವಾದ ಗೊಂದಲ ಹಾಗೂ ದಿಕ್ಕೆಟ್ಟ ಸ್ಥಿತಿಯಲ್ಲಿದೆ ಎನ್ನುತ್ತಾರೆ. ರಹಮತ್ ತರೀಕೆರೆಯವರ ಈ ಒಟ್ಟು ನಿಲುವು ಕೂಡ ಇಂದಿನ ದಲಿತ ಸಾಹಿತ್ಯ, ಸಂಸ್ಕೃತಿ ಸಂದರ್ಭದಲ್ಲಿ ಔಚಿತ್ಯಪೂರ್ಣವಾದುದು. ದಲಿತ ಸಾಹಿತ್ಯದ ಅನನ್ಯತೆಯ ಮತ್ತೊಂದು ಮಗ್ಗಲಿನಲ್ಲಿ ದಲಿತ ಸಾಹಿತ್ಯದ ಗೊಂದಲ ಮಾರ್ಗವೂ ಇದೆ.

ಕೋಮುವಾದದ ಸಂದರ್ಭದಲ್ಲಿ ದಲಿತ ಚಿಂತಕರು ಹಾಗೂ ಲೇಖಕರು ಒಂದು ಬಗೆಯ ಸ್ಪಷ್ಟತೆಯನ್ನು ಪ್ರಕಟಿಸಿದ್ದಾರೆ. ಆದರೂ ಹೆಚ್ಚಿನ ದಲಿತರಿಗೆ ಕೋಮುವಾದ ಒಂದು ಗಂಭೀರ ಸಮಸ್ಯೆಯಾಗಿ ಕಂಡಿಲ್ಲ. ದಲಿತ ಲೇಖಕರಿಗೆ ಕೋಮುವಾದ ಹೆಚ್ಚೆಂದರೆ ದಲಿತ ವಿರೋದಿಯಾದ ಬ್ರಾಹ್ಮಣ ಸನಾತನವಾದ ಪುನರುತ್ಥಾನವಾದವಾಗಿ

ಕಂಡಿದೆ. ಈ ಸನ್ನಿವೇಶ ನಿರ್ಮಾಣಕ್ಕೆ ಕಾರಣ ಕರ್ನಾಟಕದ ದಲಿತರಿಗೆ ದೈನಿಕ ಬದುಕಿನಲ್ಲಿ ಮೂರ್ತ ಮತ್ತು ನೇರ ಎದುರಾಳಿಯಾಗಿರುವುದು, ಗ್ರಾಮೀಣ ಮಧ್ಯಮ ಜಾತಿಗಳ ಭೂಮಾಲಿಕ ವ್ಯವಸ್ಥೆಯಾಗಿದೆ.

ಜಾಗತೀಕರಣ ಸಂದರ್ಭದಲ್ಲಿಯೂ ದಲಿತ ಚಿಂತಕರಿಗೆ ಜಾಗತೀಕರಣ ಕುರಿತು ಗೊಂದಲಗಳಿವೆ. ಈ ಜಾಗತೀಕರಣವು ಈ ದೇಶದ ಆರ್ಥಿಕತೆಯನ್ನು ಯಾವ ಬಗೆಯಲ್ಲಿ ಬದಲಿಸ ಬಲ್ಲುದು ಎಂಬ ಮೊದಲ ಪ್ರಶ್ನೆಯನ್ನು ಬಿಟ್ಟುಕೊಟ್ಟು ಜಾಗತೀಕರಣದ ಅಂಗಾಂಗಗಳಂತಿರುವ ಬಹುರಾಷ್ಟ್ರೀಯ ಕಂಪನಿಗಳಲ್ಲಿ ದಲಿತರಿಗೆ ಮೀಸಲಾತಿ ಇರುತ್ತದೆಯೇ ಇಲ್ಲವೇ ಎಂಬ ಪ್ರಶ್ನೆಯನ್ನು ಕೂಡ ಚರ್ಚಿಸಲಾಗುತ್ತಿದೆ. ಜಾಗತೀಕರಣವನ್ನು ತಾತ್ವಿಕವಾಗಿ ಒಪ್ಪಿಕೊಂಡ ಬಳಿಕ ಹುಟ್ಟುವ ಪ್ರಶ್ನೆಯಿದು. ಇಂದು ದಲಿತ ಸಮುದಾಯಗಳು ಬದಲಾಗುತ್ತಿರುವ ಸಾಮಾಜಿಕ, ರಾಜಕೀಯ, ಆರ್ಥಿಕ ಸನ್ನಿವೇಶಗಳಲ್ಲಿ ನಮಗಾಗುವ ಲಾಭವೇನು? ಎಂಬ ನೆಲೆಯಲ್ಲಿ ಯೋಚಿಸುತ್ತಿರುವುದರ ಪರಿಯಾಗಿದೆ''.[೧] ಬುದ್ಧ, ಬಸವ, ಅಂಬೇಡ್ಕರ್, ಪುಲೆಯವರ ಚಿಂತನೆಗಳು ಹಾಗೂ ದಲಿತರ ಸ್ವತಃ ಅನುಭವಗಳು. ಜಾತಿ ಹಾಗೂ ಭೂಮಾಲಿಕ ಪದ್ಧತಿಯ ಕಾರ್ಯಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತಿವೆ. ಇಂದಿನ ಕೆಲವು ದಲಿತ ಚಿಂತಕರು ಮಾತ್ರ ಭಾರತದ ಬಂಡವಾಳಶಾಹಿ ವ್ಯವಸ್ಥೆಗೂ ಕೋಮುವಾದಕ್ಕೂ ಅಂತರ ರಾಷ್ಟ್ರೀಯ ಸಾಮ್ರಾಜ್ಯಶಾಹಿಗೂ ಇರುವ ಆಂತರಿಕ ಸಂಬಂಧಗಳನ್ನು ಅರಿಯ ಬಲ್ಲವರೂ ಆಗಿದ್ದಾರೆ. ದಲಿತರು ತಮ್ಮ ಅನನ್ಯ ವ್ಯಕ್ತಿತ್ವ ಚಿಂತನೆಯನ್ನು ಇಂದಿನ ಸಾಮಾಜಿಕ ಸಂದರ್ಭಗಳಲ್ಲಿ ಬದಲಾಯಿಸಿಕೊಳ್ಳುತ್ತಾಸಾಗುವುದನ್ನು ಕಾಣಬಹುದಾಗಿದೆ.

**೪.೨. ದಲಿತ ಕಥೆಗಳ ಅನನ್ಯತೆ**

ದಲಿತರ ಜೀವನ, ಸಂಸ್ಕೃತಿ, ಸಂಪ್ರದಾಯಗಳನ್ನು ಕುರಿತು ದಲಿತೇತರರು ಬರೆದರೆ ಅದು ಭಿನ್ನವಾಗಿರುತ್ತದೆ ನಿಜ, ಆದರೆ ದಲಿತರೆ ಬರೆದಾಗ ಮಾತ್ರ ಅವರ ನೋವು ನಲಿವುಗಳ ಅವರ ಅಂತರಂಗದ ತುಡಿತ ಮಿಡಿತಗಳ ಅವರ ಬದುಕಿನ ಪ್ರಾಮಾಣಿಕ ಅನಿಸಿಕೆಗಳ ಸ್ಪಷ್ಟ ಚಿತ್ರಣ ಮೂಡಿಬರುವುದು ಸಾಧ್ಯ. ದಲಿತರು ಸೃಷ್ಟಿಸಿದ ಸಾಹಿತ್ಯವನ್ನು ಪ್ರತ್ಯೇಕವಾಗಿ ಅಧ್ಯಯನ ವ್ಯಾಪ್ತಿಗೆ ತಂದರೆ ದಲಿತ ಸಾಹಿತ್ಯದ ಅನನ್ಯತೆಯ ಒಲವು ನಿಲುವು ಸ್ಪಷ್ಟವಾಗುತ್ತದೆ.

ದಲಿತಕತೆಗಳು ಕಟ್ಟಿಕೊಡುವ ದಲಿತರ ಬದುಕು ಮತ್ತು ಅದರ ಸತ್ವ ಹಾಗೂ ನಡಿಗೆಯನ್ನು ಗಮನಿಸಿದರೆ ದಲಿತ ಕಾವ್ಯ ತಲುಪಿದ ಭಿನ್ನ ಮಜಲುಗಳನ್ನು, ಕತೆಗಳಿಗಾಗಲಿ ಕಾದಂಬರಿ ನಾಟಕಗಳಿಗಾಗಲಿ ತಲುಪಲಿಲ್ಲವೆಂದು ಹೇಳಬಹುದು. ಆದರೆ ಕಾವ್ಯದ ನಂತರದ ಸ್ಥಾನವನ್ನು ಸಣ್ಣಕತೆಗಳೇ ಆಕ್ರಮಿಸುತ್ತವೆ ಎನ್ನುವುದರಲ್ಲಿ ಎರಡನೇ ಮಾತಿಲ್ಲ. ದಲಿತ ಕಥಾಸಾಹಿತ್ಯದ ಒಟ್ಟು ಆಶಯ ಮತ್ತು ಅನನ್ಯತೆಯನ್ನು ಗುರುತಿಸುವ ಸಂದರ್ಭದಲ್ಲಿ ಕೆಲ ದಲಿತ ಲೇಖಕರು ಈ ಸಾಹಿತ್ಯ ಪ್ರಕಾರದಲ್ಲಿ ಕಂಡುಕೊಳ್ಳುವ ನಿಲುವುಗಳನ್ನು ಇಲ್ಲಿ ಉಲ್ಲೇಖಿಸಬೇಕು. ನಾಡಿನ ಪ್ರಸಿದ್ಧ ಲೇಖಕರಾದ ಶ್ರೀ ದೇವನೂರು ಮಹಾದೇವ ಅವರು ತಮ್ಮ ಸಾಹಿತ್ಯ ಕೃಷಿಯನ್ನು ಕುರಿತು ''ನಾನು ಕತ್ತಲ ರಾಜ್ಯದಿಂದ ಬಂದಂಥವನು. ಕಲಾ ಮಾಧ್ಯಮದಲ್ಲಿ ನಾನು ಕಂಡುಕೊಳ್ಳುತ್ತಿರುವುದು ಒಂದು ಆಕಸ್ಮಿಕವೇ. ನಾನು ಇದುವರೆಗೆ ಬರೆದಿರುವುದು ನಮ್ಮ ರಾಜ್ಯದ ಮನುಷ್ಯನ ಆರೇಳು ಬೆರಳುಗಳು ಹೆಚ್ಚೆಂದರೆ ಒಂದು ಹಸ್ತ ಇದ್ದೀತು. ಅದಷ್ಟೇ ಕನ್ನಡ ಸಾಹಿತ್ಯದ ಗತಿಯನ್ನು ಅಲ್ಲಾಡಿಸುವಲ್ಲಿ ತನ್ನ ಪ್ರಮಾಣಕ್ಕಿಂತ ಹೆಚ್ಚಾಗಿ ಅಲ್ಲಾಡಿಸಿದೆ. ಒಂದೆರಡು ಬೆರಳುಗಳು ಹಸ್ತಕ್ಕೆ ಇಷ್ಟವಾಗುವುದಾದರೆ, ಕತ್ತಲ ರಾಜ್ಯದ ಇಡೀ ಮನುಷ್ಯ ಮಾತನಾಡುವುದಾದರೆ, ಅದರಿಂದ ಉಂಟಾಗುವ ಬದಲಾವಣೆಯು ಕಲ್ಪನೆಗೆ ಎಟುಕದಷ್ಟಾಗಬಹುದು, ಆ ಬದಲಾವಣೆಗಾಗಿ ಈ ಮನುಷ್ಯ ನುಡಿಗೆ

ನುಡಿ ಕೊಡಲು ನೂರಾರು ಜನ ಹುಟ್ಟಬೇಕಾದಿತು. ಒಂದು ಅಂದೋಲನ ಇದನ್ನು ಕಾಣಹುದೇನೋ'' ಎಂಬ ದೇವನೂರರು ತುಂಬಾ ಗಾಢವಾದ ಚಿಂತನೆ ಮೂಲಕ ದಲಿತರಲ್ಲಡಗಿರುವ ಸುಪ್ತ ಪ್ರತಿಭೆಯ ಕಡೆ ಬೆಳಕು ತೋರುತ್ತಾರೆ. ಈ ಬಗೆಯ ಅನೇಕ ಪ್ರತಿಭೆಗಳು ಕಮರಿ ಹೋದವು ಎಂಬುದು ವಿಷಾದದ ಸಂಗತಿಯೂ ಆಗಿದೆ. ಈ ವಿಷಾದದ ಸಂಗತಿಯ ನಡುವೆ ಕೂಡ ಸಮಾದಾನದ ಸಂಗತಿಯೆಂದರೆ, ಅಂಬೇಡ್ಕರ್ ಅವರ ಮಹಾನ್ ತ್ಯಾಗದಿಂದ ಸಂವಿಧಾನಿಕವಾಗಿ ಸಿಕ್ಕ ಸೌಲಭ್ಯಗಳಿಂದ ದಲಿತರು ಜಾಗೃತರಾದದ್ದು. ಈ ಬಗೆಯ ಜಾಗೃತಿಯಿಂದ ದಲಿತರಿಂದ ಹುಟ್ಟುತ್ತಿರುವ ಸಾಹಿತ್ಯ, ಕಲೆ ಇನ್ನಿತರೆ ಕ್ಷೇತ್ರದ ಸಾಧನೆಗಳಿಗೆ ಉಂಟಾಗುತ್ತಿರುವ ಆತ್ಮ ವಿಶ್ವಾಸಗಳಿಗೆ ದಲಿತರ ಜಾಗೃತ ಸಂವೇದನೆ ಕಾರಣವಾಗಿದೆ. ಇದಕ್ಕೆ ಅಂಬೇಡ್ಕರ್ ಅವರೇ ಮುಖ್ಯ ಪ್ರೇರಣೆಯಾಗಿದ್ದಾರೆ.

**೪.೩. ದೇವನೂರು ಮಹಾದೇವರ ಕಥಾಜಗತ್ತು**

ದಲಿತ ಕಥಾ ಸಾಹಿತ್ಯದಲ್ಲಿ ವಿಶ್ವದ ಶ್ರೇಷ್ಠ ಕತೆಗಾರರ ಸಾಲಿನಲ್ಲಿ ಸೇರಬಹುದಾಗಿರುವ ಪ್ರಖ್ಯಾತ ಕತೆಗಾರ ದೇವನೂರು ಮಹಾದೇವ ಅವರು 'ದ್ಯಾವನೂರು' ಕಥಾ ಸಂಕಲನದಲ್ಲಿ ದಲಿತ ಜನಾಂಗದ ಜೀವನಾನುಭವಗಳ ಹೊಸ ಲೋಕವನ್ನು ಅನಾವರಣ ಮಾಡಿದ್ದಾರೆ. ದೇವನೂರು ಮಹಾದೇವ ದಲಿತ ಲೋಕದ ನೋವು ನಲಿವುಗಳನ್ನು ಕಟ್ಟಿಕೊಟ್ಟ ಮಹತ್ವದ ಕತೆಗಾರರು. ಹಾಗೆಯೇ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮುಖ್ಯ ಲೇಖಕರೂ ಆಗಿದ್ದಾರೆ. ಮಹಾದೇವರ ನೆಲೆ ದಲಿತ ಸಾಂಸ್ಕೃತಿಕ ಲೋಕದಿಂದ ಹುಟ್ಟಿರುವಂತದ್ದು 'ದ್ಯಾವನೂರು' ಕಥಾ ಸಂಕಲನದಿಂದ ದಲಿತ ಲೋಕದ ಅನನ್ಯತೆಯನ್ನು ಬಿತ್ತುವ ಕೆಲಸ ಮಾಡಿದರು. ದೇವನೂರರ ಪಾತ್ರಗಳು ವ್ಯವಸ್ಥೆಯ ಭಾಗವಾಗಿದ್ದು, ದಲಿತರ ಹಚ್ಚ ಹಸರಿನ ಬದುಕನ್ನು ಹೊದ್ದುಕೊಂಡು ಹುಟ್ಟಿದ ಪಾತ್ರಗಳು. ಮಹಾದೇವರು ದಲಿತ ಲೋಕದ ಮೂಲಕ ಹೊರ ಜಗತ್ತನ್ನು ನೋಡುವಂತೆಯೇ ಅವರು ಸೃಷ್ಟಿಸಿದ ಪಾತ್ರಗಳ ಅಂತರಂಗಗಳು ಬೆಂದ ಮಾಂಸದ ಮುದ್ದೆಗಳಂತೆ ಅಂತರ್ಯದಲ್ಲಿ ಕುದಿಯುತ್ತವೆ ಮತ್ತು ಹೊರಗೆ ವ್ಯವಸ್ಥೆಯ ಭಾಗವಾಗಿರುತ್ತವೆ.

**'ದ್ಯಾವನೂರು'** ಕತೆಗಳಲ್ಲಿ ಬರುವ ನಿರೂಪಕ ದಲಿತರ ಹಟ್ಟಿಯಲ್ಲಿ ನಿಂತು ತನ್ನ ಸುತ್ತ ನಡೆಯುವದನ್ನು ನೋಡುತ್ತಾನೆ. ಹೊಲೆಯರ ಹಟ್ಟಿಯ ಇಂಚಿಂಚು ಬದುಕನ್ನು ಅವರ ಆಚಾರ ವಿಚಾರಗಳ ಸಂಘರ್ಷವನ್ನು ಮೇಲ್ಜಾತಿ-ಕೆಳಜಾತಿಗಳ ಸಂಬಂಧವನ್ನು ಬಿಚ್ಚಿ ನೋಡುವ ಪ್ರಯತ್ನವಾಗಿ ಕಾಣುತ್ತವೆ. ದೇವನೂರರ ಕತೆಗಾರಿಕೆಗಿಂತಲೂ ವಸ್ತುವಿನ ಆಯ್ಕೆ ಮಾಡಿಕೊಂಡ ದಾರಿ ದಲಿತ ಸಂಸ್ಕೃತಿಯ ಕೋಟೆಯನ್ನು ಬೇಧಿಸಿ ಅದರ ಅಂತರಂಗದ ಒಳಕೆಡುಕುಗಳನ್ನು ಹೊರಜಗತ್ತಿಗೆ ಅನಾವರಣಗೊಳಿಸುತ್ತಾರೆ. ಮಹಾದೇವ ದಲಿತರ ಹಟ್ಟಿಯ ಮೂಲಕ ತನ್ನ ಜನರ ಸ್ಥಿತಿಗತಿಗಳನ್ನು ಹೇಳುತ್ತಲೇ ಅದಕ್ಕೆ ಕಾರಣಗಳನ್ನು ಹುಡುಕಲು ಓದುಗನನ್ನೇ ಬೇಟೆಗಾರರನ್ನಾಗಿ ಮಾಡುತ್ತಾರೆ.

**'ಮಾರಿಕೊಂಡವರು'** ಕತೆಯ ಬೀರ ಮತ್ತು ಲಕ್ಷ್ಮಿ ಅನಾಥರಾಗಿದ್ದಾರೆ. ತಮ್ಮ ಬದುಕನ್ನು ಊರ ಗೌಡರಿಗೆ ಮಾರಿಕೊಂಡಿದ್ದಾರೆ. ಬೀರನೇ ಲಕ್ಷ್ಮಿಯ ವ್ಯಭಿಚಾರವನ್ನು ಕಂಡು ಕಾಣದವನಾಗಿದ್ದಾನೆ. ಆದರೆ ಅವನ ಕುಡಿತದ ಅಮಲಿನಲ್ಲಿ ಸತ್ಯವನ್ನು ಬಚ್ಚಿಡಲಾಗದೆ ಎಲ್ಲವನ್ನು ಹೇಳಿಬಿಡುತ್ತಾನೆ. ಲಕ್ಷ್ಮಿ ನಡಗುತ್ತಾಳೆ. ಆ ಕ್ಷಣದ ಸತ್ಯವನ್ನು ಕೇಳಿ ಥರಗುಟ್ಟುತ್ತಾಳೆ. ಅಮಲು ಇಳಿದ ಮಾರನೆಯ ಬೆಳಿಗ್ಗೆ ಪ್ರಪಂಚವೇ ತಣ್ಣಗಿರುತ್ತದೆ. ಲಕ್ಷ್ಮಿ ಬೀರನಿಗೆ ಹೆಂಡತಿಯಾಗಿ, ಜೀತಗಾರನ ಜೀತದ ಹೆಣ್ಣಾಗುತ್ತಾಳೆ, ಜೀವನಸಾಗುತ್ತದೆ. ಮಹಾದೇವರು ಕತೆಯ ಮೂಲಕ ಹೇಳುವುದಕ್ಕಿಂತಲೂ ಕತೆಯ ಆಚೆಯ ಕ್ರೌರ್ಯವನ್ನು ಹೇಳುವುದೇ ಹೆಚ್ಚಾಗಿದೆ. ಇದಕ್ಕೆ 'ಮಾರಿಕೊಂಡವರು' ಅಮಾಸ, ಒಂದು ದಹನದ ಕತೆಗಳು ಸಾಕ್ಷಿಯಾಗಿವೆ.

''ಕಿಟ್ಟಪ್ಪ ಕೊಟ್ಟಿರುವ ರಗ್ಗು ಲಚಮೀನ ಕವುಚಿಕೊಂಡಿದೆ. ಕಿಟ್ಟಪ್ಪ ಕಟ್ಟಿಸಿರುವ ಮನೆ ಇಬ್ಬರನ್ನು ಕವುಚಿಕೊಂಡಿದೆ. ನನ್ನನ್ನು ಆದರೆ ಚಿಂತೆಯಿಲ್ಲ ಲಚುಮಿಯನ್ನಾದರೆ.''[೮] ಈ ಮಾತು ದಲಿತರ ಬದುಕನ್ನು ಕವುಚಿಕೊಂಡಿರುವ ಸತ್ಯವನ್ನು ಒಪ್ಪಿಕೊಂಡಿದೆ. ಗೌಡರ ಮನೆ ಇಬ್ಬರ ಬದುಕನ್ನು ಸೆರೆಯಲ್ಲಿ ಬಂಧಿಸಿದೆ. ಅದು ಅವರಿಗೆ ಸಹಾಯವಾಗಿ ಪರಿಣಮಿಸಿದೆ. ಸರಾಪು ಕುಡಿಸಿ ಲಕ್ಷ್ಮಿಯನ್ನು ಭೋಗಿಸುವ ಕಿಟ್ಟಪ್ಪ ತಲೆತಲಾಂತರದ ವೈಭಿಚಾರಿಯಾಗಿ ಲಕ್ಷ್ಮಿಯ ಅಸಹಾಯಕತೆಯನ್ನೇ ಶೋಷಕಮಾರ್ಗ ಮಾಡಿಕೊಂಡು ಅವರ ಜೀವನದ ಜೊತೆ ತನ್ನ ಅಧಿಕಾರದ ಅಮಲನ್ನು ಬೆರೆಸುತ್ತಾನೆ. ಇದು ಮೇಲ್ಜಾತಿಯ ಜನ ಕೆಳವರ್ಗದ ಹೆಣ್ಣುಗಳನ್ನು ಮತ್ತು ಅವರ ಬದುಕನ್ನು ದುರುಪಯೋಗ ಮಾಡಿಕೊಂಡ ರೀತಿಯಲ್ಲಿ ಲೈಂಗಿಕ ಶೋಷಣೆ ಮಾಡುವ ಹಿಂದಿನಿಂದಲೂ ಬೆಳೆದು ಬಂದಿದೆ. ಜಮೀನ್ದಾರರ ದಬ್ಬಾಳಿಕೆಗೆ ಕ್ರೌರ್ಯದ ಕೆಲಸವನ್ನೇ ಗೌಡರ ಮಗ ಕಿಟ್ಟಪ್ಪ ಮುಂದುವರಿಸುತ್ತಾನೆ. ಬೀರನ ಮುಗ್ಧ ಮನಸ್ಸು ಅಮಲಿನಲ್ಲಿ ನರಳುತ್ತದೆ. ವಾಸ್ತವಕ್ಕೆ ಶರಣಾಗುತ್ತದೆ. ಈ ರೀತಿ ಬಹುತೇಕ ದಲಿತರು ಬದುಕಿಗೆ ಶರಣಾಗಿರುವ ಸತ್ಯ ನಮ್ಮ ಮುಂದೆ ಇಂದಿಗೂ ಇದೆ.

ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ ಕಥೆಯಲ್ಲಿ ಬರುವ ರಂಗಪ್ಪನದು ಅನಾಥ ದಲಿತ ಪಾತ್ರ. ಅವನ ಹೆಂಡತಿ ಮತ್ತು ಪುಟ್ಟಬಾಲಕ ಮಗ ಇದೇ ಅವನ ಆಸ್ತಿಗಳಾಗಿವೆ. ''ಅವನು ಮಾಡೋ ಉಳುಮೆಗೆ ಗೌಡರ ಹಟ್ಟಿ ಕಂಬ ನಿಂತದೆ ನೋಡಿ ಅಂತ ಊರವರು ಅಂತಾರೆ, ಅಂತೆ ಅವನ ಜೋಪಡಿ ಅವನ ಹೆಂಡತಿ ಅವನ ಮಗ ಅವನ ರಟ್ಟೆಯ ಬಲದ ಮೇಲೆ ನಿಂತಿವೆ.''[೯] ಪ್ರಪಂಚದಾದ್ಯಂತ ಶ್ರಮಜೀವಿಗಳ ಆಸ್ತಿ ಅವರ ರಟ್ಟೆಮಾತ್ರ. ಆದರೆ ಅವರು ಸಾವುಕಾರರ ಮನೆಯ ಹಟ್ಟಿಯ ಕಂಬಗಳಾಗಿದ್ದರೂ ಅವರಿಗೆ ಹಾಗೆನಿಸುವುದಿಲ್ಲ. ''ಆದರೆ ಅವನು ಹಾಗಂದುಕೊಂಡಿಲ್ಲ. ಗೌಡರು ಕಣ್ಣು ಬಿಟ್ಟರೆ ತನ್ನ ಹೊಟ್ಟೆ ಒಳಗೆ ಜೀವ ಆಡುತ್ತೆ ಅಂತ ಅವ''[೧೦] ಇಡೀ ಜೀತಗಾರರ ಶ್ರಮ ಜೀವಿಗಳ ಅನಿಸಿಕೆಗಳನ್ನು ಎರಡೇ ಸಾಲಿನಲ್ಲಿ ಮಹಾದೇವ ಹೇಳುತ್ತಾರೆ. ಈ ರಂಗಪ್ಪ ಒಪ್ಪೊತ್ತಿನ ಊಟಕ್ಕೆ ಪಡುವ ಬವಣೆಯನ್ನು, ಹಸಿವಿನ ಲೋಕದ ಜನಗಳು ತಮ್ಮ ಹಸಿವನ್ನು ಮುಚ್ಚಿ ಕೊಳ್ಳಲು ನಡೆಸುವ ನಾಟಕಗಳನ್ನು ಕಥೆ ಹೇಳುತ್ತಾ ಹೋಗುತ್ತದೆ. ಈ ಕಥೆಯಲ್ಲಿ ಬದಲಾವಣೆಯ ನಡಿಗೆಯನ್ನು ಕಾಣಿಸುವ ಕೆಲಸವನ್ನು ಮಹದೇವ ಮಾಡಿದ್ದಾರೆ. ನಿದ್ದೆಯ ಮಂಪರಿನಿಂದ ದಿಗ್ಗನೆದ್ದ ಪಾರೋತಿಯ ಮಗ ರಾಜ ತಾನು ಕಂಡ ಕನಸನ್ನು ಹೀಗೆ ಹೇಳುತ್ತಾನೆ. ''ಶಂಭಪ್ಪ ಇಸ್ಕೂಲು ಬುಡ್ತಲೆ ಅಂದ ನೀವು ವಲಾರ್ರು ಕಲಾ ಅದ್ಕ ನಿನ್ನ ರಾಜ ಅನ್ನಾಕಿಲ್ಲ, ಗೀಜ ಅಂತೀನಿ ಅಂದ'' ಈ ಮಾತಿಗೆ ಪಾರೋತಿ ಬಳಿ ಉತ್ತರವಿಲ್ಲ. ಆದರೆ ಸಮಾಜದಲ್ಲಿ ಈ ವ್ಯತ್ಯಾಸಕ್ಕೆ ಉತ್ತರವಿಲ್ಲದಿರುವಾಗ ಪಾರೋತಿ ತನ್ನ ಮಗ ರಾಜನನ್ನು ಸಮಾಧಾನಪಡಿಸಲು ದಾರಿಕಾಣದೆ. ''ನೀ ಜಾಣಕಪ್ಪ ಅವ್ರ ಸಿಂತಗೆಲ್ಲ ಹೋಗ್ಬ್ಯಾಡ'' ಎನ್ನುತ್ತಾಳೆ. ತನ್ನ ಮಾತನ್ನು ಮುಂದವರಿಸಿದ ರಾಜ ಮತ್ತೊಂದು ಅಚ್ಚರಿಯ ಸುದ್ದಿಯನ್ನು ಹೇಳುತ್ತಾನೆ. ಅದೇ ನಮ್ಮ ಹೊಸ ಮೇಷ್ಟ್ರು ನೋಡಿದ್ದ. ಅವ್ರು ನಮ್ಮ ಜಾತೀನಂತೆ! ಮುಂದುವರಿದು ದೊಡ್ಡ ಮೇಸ್ಟ್ರು ಹಟ್ಟೀಲಿ ಅವರ್ರ ಗಳಸ್ನೆ ನೀರು ಕುಡೀತಾರೆ. ಅಮೆಕ್ಕೆ ಅವರ ಜಗುಲಿ ಮೇಕ್ಕೊ ಹೋಯ್ತರೆ'', ಅನ್ನುತ್ತಾನೆ.

ಅಸ್ಪೃಶ್ಯರು ಎಂದೂ ಮೇಲ್ಜಾತಿಯ ಜನರ ಜಗುಲಿ ಹತ್ತದಿದ್ದಾಗ ಎಳೆ ಮನಸ್ಸಿನ ಹುಡುಗನಿಗೆ ಅವರ ಮನೆಯ ನೀರು ಕುಡಿದಿದ್ದು ಸೋಜಿಗವಾಗಿ ಕಾಣುತ್ತದೆ. ಅವರ ಮನೆ ಗ್ಲಾಸಿನಲ್ಲಿ ನೀರು ಕುಡಿದಿದ್ದು ಹೊಸ ವಿಚಾರದಂತೆ ಕಾಣುತ್ತದೆ. ಈ ಸಂಗತಿ ವಿದ್ಯೆಯ ಮೂಲಕ ಕಾಲಿಡುತ್ತಿದ್ದ ಬದಲಾವಣೆಯ ಹೆಜ್ಜೆಗಳನ್ನು ಈ ಕತೆ ದಾಖಲಿಸುತ್ತದೆ.

ಹೊಲೇರ ಅಕ್ಷರಸ್ಥ ಮೇಸ್ಟ್ರು, ಶಾಸ್ತ್ರಿ ಮೇಸ್ಟ್ರು ಜೊತೆ ಮಾತನಾಡುತ್ತಾ ಕುಳಿತಿರುವಾಗಲೇ ಅದೇ ಜಾತಿಯ ರಂಗಪ್ಪ ನೀರಿಗಾಗಿ ಬಂದಾಗ ಅಷ್ಟೆ ಸಹಜವೆಂಬಂತೆ ಶಾಸ್ತ್ರಿಗಳ ಮಗಳು ನೀರು ತಂದು ಅವನ ಬೊಗಸೆಗೆ ಮೇಲಿಂದ ಸುರಿಯುತ್ತಾಳೆ. ಈ ಜಾತಿ ಪದ್ಧತಿಯ ಈ ನಡವಳಿಕೆ ಏಕ ಕಾಲದಲ್ಲಿ ಇಬ್ಬರಿಗೂ ಬೇರೆ ಬೇರೆಯಾಗಿರುತ್ತದೆ. ಈ ವ್ಯವಸ್ಥೆ ಇವತ್ತಿಗೂ ಗ್ರಾಮೀಣ ಭಾರತದಲ್ಲಿ ಅಲಿಖಿತ ಶಾಸನದಂತೆ ಜಾರಿಯಲ್ಲಿರುವುದು ಮಹಾದೇವರು ನೊಂದು ಕಥೆಯಾಗಿಸುತ್ತಾರೆ. ದಲಿತ ಸಂಸ್ಕೃತಿಯ ಒಳಹೊಕ್ಕು ನೋವಿನ ಎಳೆಗಳನ್ನು ಬಿಡಿಸಿ ತೋರಿಸುವ, ಬರೆಯುವ ಮಹದೇವರ ಬರವಣಿಗೆ ದಲಿತರ ಅನನ್ಯ ವ್ಯಕ್ತಿತ್ವದ ಕೈಗನ್ನಡಿಯಾಗಿ ನಮ್ಮ ಮುಂದೆ ಪ್ರತಿಫಲನಗೊಳ್ಳುತ್ತಾ ಹೋಗುತ್ತದೆ.

ದೇವನೂರರ "ಅಮಾಸ" ಸಾಂಸ್ಕೃತಿಕವಾಗಿ ದಲಿತರ ಬದುಕಿನ ಸಾಧ್ಯತೆಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡಿರುವ ಕತೆ. ಅಮಾಸ ಮತ್ತು ಕುರಿಯಯ್ಯ ದಲಿತರ ಸಾಂಸ್ಕೃತಿಕ ಲೋಕದ ಪ್ರತಿನಿಧಿಯಂತೆಕಾಣುತ್ತಾರೆ. ಊರಿನ ಮಠ ಮತ್ತು ಮಾರಿಗುಡಿ ಅವರನ್ನು ಉಳಿಸಿ ಬೆಳೆಸಿದೆ. ಮೇಲ್ಜಾತಿಯ ಮಠ ಮತ್ತು ಮಾರಿಗುಡಿಗಳು ಊರಿನ ಸಾಂಸ್ಕೃತಿಕ ಕೇಂದ್ರಗಳಾಗಿವೆ. ಮಠದ ಊಟವನ್ನು ನೆಚ್ಚಿಕೊಂಡು ಅಮಾಸ ಕುರಿಯಯ್ಯ ಇಬ್ಬರೂ ಬದುಕುತಳ್ಳಿದ್ದಾರೆ. ಇಲ್ಲಿ ಮಾರಿಗುಡಿ ಹೆಸರಲ್ಲಿ ಊರಿನ ಮಾರಿಹಬ್ಬ ದಲಿತರಿಗೆ ಎಲ್ಲ ಹಬ್ಬಗಳಿಗಿಂತ ದೊಡ್ಡ ಹಬ್ಬವಾಗಿದೆ. ಈ ಸಂದರ್ಭದಲ್ಲಿ ನಡೆಯುವ ಮಾರಿಕುಣಿತ, ಹುಲಿವೇಷ, ಮರಿಗಳ ಬಲಿ ಹೆಂಡ ಬಾಡು ದಲಿತರಿಗೆ ಹಬ್ಬದಲ್ಲಿ ಮುಖ್ಯವಾಗುತ್ತದೆ. ಈ ಮಾರಿಹಬ್ಬವು ದಲಿತರಿಗೆ ಹಳೆಯ ನೆನಪುಗಳ ಹೊಸ ಬಯಕೆಗಳನ್ನು ಒಟ್ಟೊಟ್ಟಿಗೆ ನೆರವೇರಿಸಿಕೊಳ್ಳುವ ಸಂದರ್ಭವಾಗುತ್ತದೆ. ಈ ಹಬ್ಬವು ದಲಿತರಿಗೆ ಸಾಂಸ್ಕೃತಿಕ ಬದುಕಿನ ಹೊಸ ಚಲನೆಯಂತೆ ಕಾಣುತ್ತದೆ. ಎಷ್ಟೆ ಕಷ್ಟವಿದ್ದರೂ ದಲಿತರು ಈ ಹಬ್ಬದಲ್ಲಿ ಸಾಲ ಸೂಲವನ್ನಾದರೂ ಮಾಡಿ ಬಿದ್ದುಹೋಗಿರುವ ತಮ್ಮ ಬದುಕನ್ನು ಎರೆಡು ದಿನದ ಮಟ್ಟಿಗಾದರೂ ಎತ್ತಿ ನಿಲ್ಲಿಸಿಕೊಳ್ಳುತ್ತಾರೆಂಬ ಕನಸು ಕಾಣುತ್ತಾರೆ.

ಕುರಿಯಯ್ಯ ಅಮಾಸನ ವಯಸ್ಸಿನವನಿದ್ದಾಗ ಮಾರಿಹಬ್ಬದಲ್ಲಿ ಹುಲಿ ವೇಷವನ್ನು ಹಾಕಿ ಕುಣಿದು, ಘರ್ಜಿಸಿ ಮೆರೆದು ತನ್ನ ಪ್ರತಿಭೆಯನ್ನು ತೋರಿಸಿದ್ದ. ಅದರ ಪ್ರತಿಫಲವಾಗಿ ಊರಿನ ಗೌಡರು ಹುಲಿ ವೇಷಕ್ಕೆ ತಲೆಬಾಗಿ ಇನಾಮು ಕೊಟ್ಟಿರುತ್ತಾರೆ.. ಗೌಡರು ಕೊಡುವ ಇನಾಮು ಅಂಗಿ ಬಟ್ಟೆ ಮಾತ್ರವಾಗಿದೆ. ಈ ಸಂದರ್ಭದಲ್ಲಿ ಗಮನಿಸಬೇಕಾದ ಅಂಶವೆಂದರೆ ಗೌಡರು ಕುರಿಯಯ್ಯನನ್ನು ಬೆನ್ನು ತಟ್ಟಿ ಪ್ರೋತ್ಸಾಹಿಸಲಿಲ್ಲ ಹೂವು ಕೊಡಲಿಲ್ಲ, ಅದಕ್ಕೆ ಬದಲಾಗಿ "ನೀ ಇರುವಷ್ಟು ಕಾಲ ನಮ್ಮ ಹಟ್ಟಿಲೇ ಇರು ನೀನು ಉಂಡ ಊಟ, ಹಾಕೊಂಡ ಬಟ್ಟೆ, ಒಂದಿಷ್ಟು ಕುರಿ ನೋಡ್ಕೊ ಅಷ್ಟೇನೆ."[೨೧] ಎಂದು ಬಹುಮಾನ ನೀಡುತ್ತಾರೆ. ಇಲ್ಲಿ ಕುರಿಯಯ್ಯನ ಕಲಾಪ್ರತಿಭೆ ಶೋಷಣೆಗೆ ಒಳಗಾಗುತ್ತದೆ. ಕುರಿಯಯ್ಯ ಗೌಡರ ಸ್ವತ್ತಾಗುತ್ತಾನೆ. ಆದರೆ ಈ ಕುರಿಯಯ್ಯನ ಗರಡಿಯಲ್ಲಿ ಬೆಳೆದ ಹೊಸ ಪೀಳಿಗೆಯ ಅಮಾಸ ಊರಿನ ಮಾರಿಹಬ್ಬದಲ್ಲಿ ಹುಲಿವೇಷ ಹಾಕಿ ಎಲ್ಲರಿಗಿಂತಲೂ ವೈನಾಗಿ ಕುಣಿದು ಊರಿನ ಬಂಗಾರಿಯಂಥ ಹುಡುಗಿಗೆ ನಿದ್ದೆಗೆಡಿಸುತ್ತಾನೆ. ಗೌಡರಿಗೆ ಅಮಾಸನ ಹುಲಿ ವೇಷ ಗಂಭೀರವಾದಂತಹ ಬದಲಾವಣೆ ತರುತ್ತದೆ. ಭಯದಿಂದ ಬೀಡಿಯ ಹೊಗೆಯನ್ನು ನುಂಗುತ್ತಾರೆ. ಗೌಡರು ಜೀತಗಾರನೊಂದಿಗೆ "ಅದೇ ಮರಿ ಹುಲಿ ಮಾಡಿತ್ತಲ್ಲ ಆ ಹೈದ ಯಾರ್‍ದು.." ಎಂದರು. ಜೀತಗಾರ ಅದೇ ಅಳಿ. ಅಮಾಸ ಅಂತ" ಅಂದನು. 'ಅಮಾಸ ಅಂದ್ರ? "ಎಂದೂ ಮತ್ತೂ ಕೇಳಿದರು. ಅದಕ್ಕವ" ಅದೇ ಅಳಿ.. ಆ ಕುರಿಯನ್ನು ಜೊತೇಲಿ ಒಂದು ತಾಯಿತಂದೆಯಿಲ್ದ ತಬ್ಬಲಿ ಹೈದ ಇತ್ತಲ್ಲ ಬುದ್ದಿ ಅದೇನೆ" ಅಂದನು. ಗೌಡರು ಅತ್ಯಾಶ್ಚರ್ಯ ಆದರು. "ಎಲಾ

ಅಷ್ಟ ಆ ಮಠದ ಮುಂದ ಹೋಗೆ ಕೇಳ್ತಾ ನಿಂತ್ಕಳ್ಳೊ ಆ ಅಬ್ಬೇಪಾರಿನಹುಲಿಯಾವದಲ್ಲಿ ಎಷ್ಟು ಬೆಳೆದಂಗೆ ಕಾಣ್ತಾನೆ ನೋಡು''[೨] ಅಂದರು. ಆದರೆ ಗೌಡರು ಆತನಿಗೆ ಇನಾಮು ಕೊಡಲಿಲ್ಲ, ಜೀತಕ್ಕಿಟ್ಟುಕೊಳ್ಳಲಿಲ್ಲ. ಅಮಾಸನ ಹುಟ್ಟಿಗೆ ಗೌಡರು ಕಾರಣವಾಗಿ ಅವರ ಪಾಪ ಪ್ರಜ್ಞೆಯಿಂದ ಬಿಟ್ಟಿರಬಹುದೆನಿಸುತ್ತದೆ. ಇಲ್ಲವೆ ದಿಕ್ಕುದೆಸೆಯಿಲ್ಲದ ಅಮಾಸನನ್ನು ಜೀತಕ್ಕಿಟ್ಟುಕೊಂಡರೆ ಊರಿನವರಿಗೆ ಅನುಮಾನ ಬರಬಹುದೇ? ಎಂದಾಗಿರಬಹುದು. ಇಲ್ಲಿಯ ದಲಿತ ಲೋಕದ ಅಮಾಸನ ಪಾತ್ರವನ್ನು ದೇವನೂರರು ಚಲನಶೀಲವಾದ ಸಾಂಕೇತಿಕ ಪಾತ್ರವಾಗಿ ಸೃಷ್ಟಿಸಿದ್ದಾರೆ. ದಲಿತರ ಸಾಂಸ್ಕೃತಿಕ ಬದುಕಿನ ಅನನ್ಯ ಪಾತ್ರವಾಗಿ ಅಮಾಸ ಮೂಡಿ ಬಂದಿದ್ದಾನೆ.

''ಡಾಂಬರು ಬಂದದು'' ಈ ಕತೆಯಲ್ಲಿ ಮಹಾದೇವರು ಹಳೆಯ ಮೌಲ್ಯಗಳ ಹೊಸ ವಿಚಾರಧಾರೆಗಳ ಮಧ್ಯೆ ನಡೆಯುವ ಸಂಘರ್ಷದ ನೆಲೆಗಳನ್ನು ಧ್ವನಿಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ. ಈ ಕತೆಯಲ್ಲಿ ಮಹಾದೇವರು ನಂಜನಗೂಡಿನ ಪ್ರಾದೇಶಿಕ ಉಪಭಾಷೆಯನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಸುಮಾರು ಎಂಭತ್ತು ಮನೆಗಳುಳ್ಳ ಒಂದು ಚಿಕ್ಕಹಳ್ಳಿಗೆ ಡಾಂಬರು ರಸ್ತೆ ಬರುವ ಸುದ್ದಿ ಊರಲ್ಲಿ ಹಬ್ಬುತ್ತಿದ್ದಂತೆ ಊರ ಜನ ಆಧುನಿಕತೆಯನ್ನು ಕುರಿತು ಧ್ಯಾನಿಸುತ್ತಲೇ ಹೊಸ ಸ್ಪಂದನೆಗೆ ಹಾತೊರೆಯುತ್ತಾರೆ. ಇಡೀ ಊರಲ್ಲಿ ಮೆಟ್ರಿಕ್ ಓದಿದ ಲಕುಮ (ದಲಿತ), ರಾಜಪ್ಪ, ಮಾಧು, ಶಂಭು ಜೀವದ ಗೆಳೆಯರಾಗಿದ್ದಾರೆ. ದಲಿತ ಲಕುಮನ ಜೊತೆಗೆ ಉಳಿದವರು ತಿರುಗುವುದು ಮೇಲ್ಜಾತಿಯ ಜನರಿಗೆ ರೋಷ ಹೆಚ್ಚಿಸಿದೆ. ಊರ ಪಟೇಲ ಡಾಂಬರು ರಸ್ತೆಯ ಕಂಟ್ರಾಕ್ಟರ್ ತೆಗೆದುಕೊಂಡಿದ್ದರು. ರಸ್ತೆಯ ನಿರ್ಮಾಣದ ಸರ್ಕಾರಿ ದುಡ್ಡು ಉಳಿಸಿ ಊರಿನ ಪಾಳುಬಿದ್ದ ದೇವಸ್ಥಾನ ಜೀರ್ಣೋದ್ಧಾರಗೊಳಿಸುವುದಾಗಿ ಸುದ್ದಿ ಹಬ್ಬಿಸಿದಾಗ ಮೇಲಿನ ವಿದ್ಯಾವಂತ ಹುಡುಗರು ಪತ್ರಿಕೆಗೆ ಸರ್ಕಾರಿ ಹಣದ ದುರುಪಯೋಗವೆಂದು ಸುದ್ದಿ ಹಾಕಿಸಿ ಕೆಲಸ ನಿಲ್ಲಿಸುತ್ತಾರೆ. ಪಾಟೇಲರಿಗೆ ಕೆಂಡ ಮಂಡಲ ಸಿಟ್ಟಾಗಿ ಊರಿನ ಪಂಚಾಯ್ತಿ ಕರೆದು ಕೇಳಿದಾಗ ಹುಡುಗರು ವಾಸ್ತವ ವಿವರ ತಿಳಿಸಿ ಪಟೇಲರ ದರ್ಪಕ್ಕೆ ತಕರಾರು ಒಡ್ಡುತ್ತಾರೆ. ಮರುದಿನ ಟಾರಿನ ಡ್ರಮ್ಮುಗಳು ನಾಪತ್ತೆಯಾಗುತ್ತವೆ. ತನಿಖೆ ಶುರುವಾಗುತ್ತವೆ. ''ರಂಗಪ್ಪನ ಮಗ ಊರ ಹೊರಗೆ ಚೆಲ್ಲಿ ಹೋದ ಗುಂಡಿಯಲ್ಲಿ ಬಿದ್ದಿದ್ದಾನೆ. ಮೈಯೆಲ್ಲಾ ಟಾರು ಮೆತ್ತಿಕೊಂಡಿದೆ ಅವನ ಮೈಯೊಳಗೆ ಇನ್ನು ಜೀವಯಿತ್ತು ಎಂದು ಕತೆಯ ಸಾಲುಗಳು ವಿವರಿಸುತ್ತವೆ.[೨] ಈ ಕತೆಯಲ್ಲಿ ಮಹಾದೇವರು ಭಾರತದ ಒಂದು ಕುಗ್ರಾಮಕ್ಕೆ ಆಧುನಿಕತೆಯು ಸಂಕೇತವಾಗಿ ಬರುವ ಡಾಂಬರು ರಸ್ತೆಯ ಮೇಲೆ ಇಡೀ ಊರಿನಲ್ಲಿ ಹುಟ್ಟಿಕೊಳ್ಳುವ ಬದಲಾವಣೆಯ ಸ್ವರೂಪವನ್ನು ಧ್ವನಿಪೂರ್ಣ ಸಂಭಾಷಣೆಯ ಮೂಲಕ ಕಟ್ಟಿಕೊಡುತ್ತಾರೆ. ಈ ಕತೆಯ ದಲಿತ ಲಕುಮ ಜಾತಿ ವ್ಯವಸ್ಥೆಯ ಕಟ್ಟುಪಾಡಿನಲ್ಲಿ ಉಳಿದ ಜಾತಿಯ ಹುಡುಗರ ಸ್ನೇಹ ಸಂಪಾದಿಸಿದ್ದಾನೆ. ಇವರ ಮಧ್ಯೆ ಶಿಕ್ಷಣವು ಜಾತಿಯ ಗೋಡೆಯನ್ನು ಒಡೆದು ಹಾಕಿದೆ. ದೇವನೂರು ಮಹಾದೇವರು ಈ ಕತೆಯಲ್ಲಿ ಆಧುನಿಕತೆಯ ಪ್ರವೇಶದಿಂದ ಒಂದು ಹಳ್ಳಿಯ ಒಡಲಿನಲ್ಲಿ ಉಂಟು ಮಾಡುವ ಕಂಪನಗಳ ವಿವಿಧ ಮುಖಗಳನ್ನು ಸಮರ್ಥವಾಗಿ ದಾಖಲಿಸಿದ್ದಾರೆ.

**ಒಂದು ದಹನದ ಕತೆ**ಯಲ್ಲಿ ದೇವನೂರರು ಜಾತಿಯ ವ್ಯವಸ್ಥೆಯ ಹೊಸ ಮುಖವೊಂದರ ಪರಿಚಯವನ್ನು ಮಾಡಿಸುತ್ತಾರೆ. ಈ ಕತೆಯಲ್ಲಿನ ನಾಯಕ ದಲಿತನಾಗಿದ್ದಾನೆ. ಮೇಲ್ಜಾತಿಯ ಕಮಲಿ ಎಂಬ ಹುಡುಗಿಯು ಈತನ ಜೊತೆಗಿನ ಸಂಪರ್ಕದಿಂದ ಬಸುರಾದ ಸುದ್ದಿ ಊರಲ್ಲಿ ತಿಳಿದು ನ್ಯಾಯಕ್ಕೆ ಸೇರಿಸುತ್ತಾರೆ. ಬಹಳ ಸುಲಭವಾಗಿ ನ್ಯಾಯವನ್ನು ಬಗೆಹರಿಸಿಕೊಂಡ ನಾಯಕ ದೊಡ್ಡಪ್ಪ ಹೇಳುವ ಮಾತುಗಳು ಕುತೂಹಲ ಕರವಾಗಿದೆ. ''ಅವರ ಜಾತೀಲೇ ಒಬ್ಬ ಕಾರಣ ಅಂತ ಒಪ್ಪಿಸಿ ಬಿಟ್ಟಿವಿನಿ. ಅವಳಿಗೆ ಹಣ ಕಟ್ಟಾಕೆ ಇನ್ನೂರು ರೂಪಾಯಿ ಕೊಟ್ರೆ ತೀರಿತು

ಈ ಕಾಟವೆಯಿಲ್ಲ. ಎಂದಾಗ ಕಮಲಿ ಒಪ್ಪಿಕೊಂಡ್ಲಾ ಅಂದದ್ದಕ್ಕೆ ''ಅವ್ರು ಮೇಲ್ಜಾತಿಯವರಾದ್ದರಿಂದ ಅವರ್ಗೂ ಅವಮಾನ ನೋಡು''[೧೩] ಎನ್ನುತ್ತಾನೆ. ಮೇಲ್ಜಾತಿಯ ಹುಡುಗಿ ಕೆಳಜಾತಿಯವನ ಜೊತೆ ಕೂಡಿದ್ದು, ಮಿಲನವಾದದ್ದನ್ನೂ ಹೇಳಿಕೊಳ್ಳಲಾಗದೆ ಇಲ್ಲ ನಮ್ಮದೇ ಜಾತಿಯವನಿಂದ ಆದದ್ದು ಎಂದು ಒಪ್ಪಿಸುವ ತಂತ್ರ ಮಹಾದೇವ ಅವರಿಗೆ ಮಾತ್ರ ಸಾಧ್ಯ. ಆದರೆ ಇದು ವಾಸ್ತವದಿಂದ ದೂರವೆಂದು ಭಾವಿಸಬಹುದು. ಹೀಗೆ ದೇವನೂರು ಈ ಕತೆಯಲ್ಲಿ ಜಾತಿ ವ್ಯವಸ್ಥೆಯ ಕರಾಳ ಮುಖದ ಹಿಂದೆ ನಡೆಯುವ ಮೇಲ್ಜಾತಿಯ ಜನ ಮಾಡಿಕೊಳ್ಳುವ ತಂತ್ರಗಳನ್ನು ಕತೆ ಸಾಬೀತುಮಾಡುತ್ತದೆ. ದಲಿತ ಬರಹಗಾರರಂತೆ ದೇವನೂರ ಮಹಾದೇವರೂ ದಲಿತರ ಬಡತನ ಅಜ್ಞಾನ, ಅಸಾಯಕತೆಗಳ ಬಗ್ಗೆ ಬರೆದಿದ್ದಾರೆ. ನೂರಾರು ಬವಣೆಗಳ ಮಧ್ಯದಲ್ಲೂ ಮಿನುಗುವ ದಲಿತರ ಜೀವ ಚೈತನ್ಯವನ್ನು ಅವರು ಗುರುತಿಸುತ್ತಾರೆ.

'ದ್ಯಾವನೂರು' ಕಥಾಸಂಕಲನದಲ್ಲಿ ಮಹಾದೇವರು ದಲಿತ ಸ್ಥಿತಿ ಗತಿ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದರೂ, ಆ ಬರವಣಿಗೆಯ ಪಾತ್ರಗಳಲ್ಲಿ ದಲಿತರ ಹೊಸ ಜಗತ್ತನ್ನು ಚಿತ್ರಿಸಿದ್ದಾರೆ. ಮಹಾದೇವರ ಕೃತಿಯಲ್ಲಿ ನಾವು ಸುಧಾರಣೆಯ ಮಾರ್ಗ ಬಂಡಾಯದ ಮಾರ್ಗ, ಗಾಂಧಿ ಮಾರ್ಗ, ಅಂಬೇಡ್ಕರ್ ಮಾರ್ಗದ ವಿವಿಧ ವಿಚಾರ ಧಾರೆಗಳ ಚಿಂತನೆಯ ಫಲ ಶ್ರುತಿಯನ್ನೂ ಕಾಣಬಹುದಾಗಿದೆ. ದಲಿತರ ಬದುಕಿನ ಸ್ಥಿತಿಯನ್ನು ಮಾತ್ರ ದಾಖಲಿಸುವುದು ದೇವನೂರರ ಸಾಹಿತ್ಯದ ಏಕ ಮಾತ್ರ ಉದ್ದೇಶವಲ್ಲ. ದಲಿತ ಬದುಕಿನ ಸಾಧ್ಯತೆಗಳ ಕಾಣ್ಕೆಯೂ ಅವರ ಕೃತಿಗಳ ಮಹತ್ವದ ಅಂಶವಾಗಿದೆ. ದೇವನೂರರ ಕಾಣ್ಕೆಗಳು ಕೇವಲ ಕ್ರಾಂತಿಕಾರೀ ಕನಸುಗಾರಿಕೆಯ ಫಲಗಳಲ್ಲ. ದಲಿತ ಬದುಕಿನ ನಿಷ್ಠುರ ಗ್ರಹಿಕೆಗಳಿಂದ ಮತ್ತು ಐತಿಹಾಸಿಕ ಸಂದರ್ಭಗಳಿಂದ ಅವರ ಬರವಣಿಗೆ ಸದಾ ತುಡಿಯುತ್ತಿರುತ್ತದೆ.

### ೪.೪. ಅರವಿಂದ ಮಾಲಗತ್ತಿಯವರ ಕತೆ

ಪ್ರಾದೇಶಿಕ ಹಿನ್ನೆಲೆಯಿಂದ ಉತ್ತರ ಕರ್ನಾಟಕದ ಭಾಷಾ ಬದುಕಿನ ನೆಲೆಯಲ್ಲಿ ಅರವಿಂದ ಮಾಲಗತ್ತಿ ಪ್ರಮುಖ ಬರಹಗಾರರು. ಮಾಲಗತ್ತಿಯವರು ದಲಿತ ಬದುಕಿನ ಸ್ಥಿತಿಗತಿಗಳನ್ನು ತೆರೆದಿಡುತ್ತಲೇ ವಿಮುಕ್ತಿಯ ಕಡೆ ತುಡಿಯುವುದು ಇವರ ಕಥೆಗಳ ವೈಶಿಷ್ಟ್ಯವಾಗಿದೆ.

**ತೂತಿನ ದುಡ್ಡು** ಮತ್ತು ನೀರು ಈ ಕತೆಯಲ್ಲಿ ದಲಿತರು ಸಹಜವಾಗಿ ಅನುಭವಿಸುವ ಕುಡಿಯುವ ನೀರಿನ ಸಮಸ್ಯೆಯನ್ನು ಕತೆ ಬಿಂಬಿಸುತ್ತದೆ. ''ಅಸ್ಪೃಶ್ಯತೆಯ ಕಾರಣದಿಂದಾಗಿ ಸವರ್ಣೀಯರ ಬಾವಿಯಿಂದ ನೀರು ಹಾಕಿಸಿಕೊಂಡು ತಂದು ಬದುಕಬೇಕಾದ ದೀನ ಸ್ಥಿತಿಯನ್ನು ಕಥೆ ಹೇಳುತ್ತದೆ.'' ದಲಿತರಲ್ಲೆ ಇರುವ ಸೈದನೆಂಬುವವ ಮುದ್ದೇನೂರಿನ ಬಸವೇಶ್ವರ ಮಠದಲ್ಲಿದ್ದ ಮೇಲು ಜಾತಿಯವರ ಶುದ್ಧ ನೀರಿನ ಬಾವಿಯಿಂದ ರಾತ್ರಿ ನೀರನ್ನು ಕದ್ದು ತರುವಾಗ ಸಿಕ್ಕಿ ಬೀಳುತ್ತಾನೆ. ಊರಿನ ಪಂಚಾಯ್ತಿಯಲ್ಲಿ ಅವನಿಗೆ ದಂಡ ವಿಧಿಸುತ್ತಾರೆ. ತನ್ನಲ್ಲಿದ್ದ ತೂತಿನ ಕಾಸನ್ನು ದಂಡವಾಗಿ ಕಟ್ಟಿ ಕಷ್ಟವನ್ನು ಬಗೆಹರಿಸಿಕೊಳ್ಳುತ್ತಾನೆ. ಮಠದ ಬಾವಿಯ ನೀರು ಸೇದಿ ಮಲಿನಗೊಳಿಸಿದ್ದಕ್ಕಾಗಿ ಸೈದನ ತಲೆ, ಮೀಸೆ ಬೋಳಿಸುತ್ತಾರೆ. ಆತ ನೀಡಿದ ದಂಡದ ದುಡ್ಡಿಗೆ ತೂತು ಮಾಡಿ ಮುದ್ದೇನೂರಿನ ಮಠದ ಬಾಗಿಲಿಗೆ ಬಡಿಯುತ್ತಾರೆ. ಇದು ಸೈದನೆಂಬ ದಲಿತನು ''ಆತನ ಅಪರಾದ ಮುಂದಿನವರೆಗೆ ತಲೆ ತಲಾಂತರವಾಗಿ ಉಳಿಯಲೆಂದು ಐತಿಹಾಸಿಕವಾಗಿ ಮಠದ ಬಾಗಿಲಿಗೆ ಬಡೆದಿರುವುದು ಇಂದಿಗೂಯಿದೆ''[೧೪]ಯೆಂದು ಕತೆಯ ಕೊನೆಯಲ್ಲಿ ವಿವರಿಸಿದೆ.

ಈ ಕತೆಯಲ್ಲಿ ಅರವಿಂದ ಮಾಲಗತ್ತಿಯವರು ದಲಿತ ಜನಾಂಗ ಗ್ರಾಮೀಣ ಪ್ರದೇಶದಲ್ಲಿ ಸಾರ್ವಜನಿಕ ಸ್ಥಳಗಳಾದ ಕುಡಿಯುವ ನೀರು, ಗುಡಿ, ಮುಂತಾದ ಸ್ಥಳಗಳಲ್ಲಿ ಅವರನ್ನು ನಿಷೇಧಿಸಿದ ವ್ಯವಸ್ಥೆಯ ವಿರುದ್ಧ ಇವರ ಕತೆಯ ಪಾತ್ರಗಳು ಸಿಡಿದು ನಿಂತಿವೆ.

**೪.೫. ಮ.ನ.ಜವರಯ್ಯನವರ ಕಥೆಗಳು**

'ವಾಗಿ' ಕಾದಂಬರಿಯ ಮೂಲಕ ದಲಿತ ಸಾಂಸ್ಕೃತಿಕ ಹೊಸ ಜಗತ್ತನ್ನು ತೆರೆದು ತೋರಿಸಿದ ಮ.ನ.ಜವರಯ್ಯನವರು ಆಧುನಿಕ ಕಥನ ಸಾಹಿತ್ಯದ ಬಹು ಮುಖ್ಯ ಬರಹಗಾರರಾಗಿ ರೂಪುಗೊಂಡಿರುವಂತಹವರು.

'ಮ.ನ.ಜ. ಅವರ ಈ 'ಸ್ಫೋಟ' ಕತೆಯು ದಲಿತ ಚಳುವಳಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿತವಾದ ಕತೆ. ಇದರಲ್ಲಿ ದಲಿತ ಜನಾಂಗದ ಗುಡ್ಡಯ್ಯನ ನೋವಿನ ಬದುಕು ದಲಿತರ ದಮನಿತ ಬದುಕಾಗಿ ಹೆಪ್ಪುಗಟ್ಟಿದೆ. ಗ್ರಾಮೀಣ ಭಾರತದ ದಲಿತರ ಬದುಕನ್ನು ಕಟ್ಟಿಕೊಡುವ ಈ ಕತೆಯಲ್ಲಿ ಉಳ್ಳವರ ಹೊಲಗಳಲ್ಲಿ ಕೂಲಿಯಾಳುಗಳಾಗಿ ದುಡಿಯುತ್ತಿದ್ದ ದಲಿತರ ಪರವಾಗಿ, ಜೀತ ಪದ್ಧತಿಯ ವಿರುದ್ಧ ದಲಿತ ಸಂಘದ ವಿದ್ಯಾವಂತ ಮುಖಂಡರು ತಾಲೂಕು ಕಛೇರಿಯ ಮುಂದೆ ಧರಣಿ ನಡೆಸಿ ಊರಿನ ಮೇಲ್ಜಾತಿ ಜನರ ಶೋಷಣೆಯನ್ನು ತಪ್ಪಿಸಬೇಕೆಂದು ನಿರ್ಧರಿಸುತ್ತಾರೆ. ದಲಿತ ಸಂಘದ ವಿರುದ್ಧ ಇಡೀ ಊರಿನ ಮೇಲ್ಜಾತಿಯ ಸಮುದಾಯ ಹೊಸ ತಂತ್ರ ರೂಪಿಸಿ ಹೋರಾಟವನ್ನು ಮುರಿಯಲು ದಲಿತ ಜನಾಂಗದ ಗುಡ್ಡಯ್ಯನ ಮಗಳನ್ನು ಅಪಹರಿಸಿ ದಲಿತ ಮುಖಂಡನಾದ ಸತ್ಯ ಮೂರ್ತಿಯ ಮೇಲೆ ಆರೋಪ ಮಾಡಿ ದಲಿತ ಜನಾಂಗದಲ್ಲಿ ಒಡಕು ತಂದೊಡ್ಡುತ್ತಾರೆ. ಇಲ್ಲಿ ದಲಿತ ಪ್ರತಿಭಟನೆಯ ಹಕ್ಕನ್ನು ತಂತ್ರಗಾರಿಕೆಯಿಂದ ಬಗ್ಗು ಬಡಿಯುವ ಬಲಾಢ್ಯ ಜಾತಿಗಳ ಮಾದರಿ ಕತೆಯಲ್ಲಿ ಮನೋಜ್ಞವಾಗಿ ಚಿತ್ರಿತವಾಗಿದೆ. ಗುಡ್ಡಯ್ಯ ತನ್ನ ಮಗಳ ಮೇಲೆ ಅತ್ಯಾಚಾರ ಮಾಡಿದವರನ್ನು ಹಿಡಿಯುವವರೆಗೆ ಧರಣಿ ನಡೆಸುತ್ತೇನೆನ್ನುವುದು ದಲಿತರ ನೋವಿನ ಬದುಕಿನ ಮತ್ತೊಂದು ಮುಖವನ್ನು ಕತೆ ಚಿತ್ರಿಸುತ್ತದೆ.

ಮನಜ ಅವರ ಕಥೆಗಳ ವಿದ್ಯಾವಂತರು ಪ್ರಜ್ಞಾವಂತರಾಗಿ, ಸಂಘರ್ಷಕ್ಕಿಳಿಯುವರು. ಆ ಮೂಲಕ ದಲಿತರ ವಿಮೋಚನೆಯನ್ನು ಬಯಸುವವರಾಗಿ ಕಂಡು ಬರುತ್ತಾರೆ. ಇವರ ''ಕಾಲ'' ಕತೆಯಲ್ಲಿ ದಲಿತರ ಬದುಕು ಗ್ರಾಮೀಣ ಭಾಗದಲ್ಲಿ ಸಾಕಷ್ಟು ಬದಲಾವಣೆಯಾಗಿರುವುದನ್ನು ಕತೆ ಹೇಳುತ್ತದೆ. ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯವಾಗಿ ವಿದ್ಯಾವಂತ ಹುಡುಗರು ಪ್ರಜ್ಞೆ ಬೆಳೆಸಿಕೊಂಡಿದ್ದಾರೆ. ಹಳ್ಳಿಯಲ್ಲಿ ನಡೆಯುವ ಅನ್ಯಾಯ, ರಾಜಕೀಯ ಭ್ರಷ್ಟತೆಯನ್ನು ವಿರೋಧಿಸುವುದರ ಮೂಲಕ ಹೊಸ ಪೀಳಿಗೆಯ ಹುಡುಗರು ಹಳ್ಳಿಯನ್ನು ಸುಧಾರಿಸುವ ಚಿತ್ರಣ ಇಲ್ಲಿದೆ. ಹೊಸ ಪೀಳಿಗೆಯ ದಲಿತ ನಾಯಕ ಕವಾಲಿ ಕಾಳಭೈರ ಊರಿನಲ್ಲಿ ಸಾಮಾಜಿಕವಾಗಿ, ಸಾಂಸ್ಕೃತಿಕವಾದ ಕಲಾಪ್ರತಿಭೆಯ ಜೊತೆಯಲ್ಲಿ ಯುವಕರಲ್ಲಿ ಜಾಗೃತಿ ಮೂಡಿಸಿದ್ದಾನೆ. ಅದಕ್ಕೆ ಸಾಕ್ಷಿಯೆಂಬಂತೆ ಊರಿನ ಸಿದ್ದಪ್ಪಾಜಿಯ ಗುಡಿಯ ಸಭಾಂಗಣದಲ್ಲಿ ಅಂಬೇಡ್ಕರ್‌ರ ಆಳೆತ್ತರದ ಫೋಟೋ ಹಾಕಲಾಗಿದೆ. ಇನ್ನೊಂದು ಕಡೆ ನಾಲ್ವಡಿ ಕೃಷ್ಣರಾಜ ಒಡೆಯರ ಫೋಟೋ ಹಾಕಲಾಗಿದೆ. ಮತ್ತೊಂದು ಕಡೆ ಬ್ರಿಟೀಷರ ಕಾಲದಲ್ಲಿ ಕೊಟ್ಟಿದ್ದ ಗಂಟೆ ಹೊಡೆಯುವ ಗೋಡೆ ಗಡಿಯಾರವನ್ನು ಹಾಕಿಸಲಾಗಿದೆ. ಅದು ಗಂಟೆ ಗಂಟೆಗೆ ಕಾಲವನ್ನು ಬದಲಾಯಿಸಿ ಗಂಟೆಯೊಡೆದು ಜನರನ್ನು ಎಚ್ಚರಿಸುವ ರೀತಿಗೆ ಸೂಚನೆಯಾಗಿದೆ. ಅಲ್ಲದೆ ಆ ಗಡಿಯಾರದ ಜೊತೆಯಲ್ಲಿ ಊರಿಗೆ ಲೋಕಲ್ ಫಂಡ್ ಆಸ್ಪತ್ರೆ, ಸ್ಕೂಲ್‌ಗಳು ಬಂದಿರುವ ನೆನಪಿಗಾಗಿ ಮುಖ್ಯವಾಗುತ್ತದೆ. ಆ ಗಡಿಯಾರಕ್ಕೆ ಕವಾಲಿ ಕಾಳಭೈರ ಅದರ ಮೇಲೆ 'ಕಾಲದೂತ' ಅಂತ ಬರೆದಿದ್ದಾನೆ. ಆ ಮೂಲಕ ಬಹಳ ಮುಖ್ಯವಾಗಿ ಕತೆಯಲ್ಲಿ ಬ್ರಿಟೀಷ್ ಕಾಲದ ಗಡಿಯಾರದ

ಕಾಲ ಸೂಚಿಯಲ್ಲಿ ಕತೆಗಾರ ದಲಿತರ ಪ್ರಗತಿಯನ್ನು ಪರೋಕ್ಷವಾಗಿ ಸೂಚಿಸಿದ್ದಾರೆ. ಪ್ರತಿ ಐದು ವರ್ಷಕ್ಕೊಮ್ಮೆಯಂತೆ ಆ ವರ್ಷವೂ ''ಮುನಿಸಿಪಾಲಿಟಿ ಎಲೆಕ್ಷನ್'' ಬಂದಿದೆ. ಅದರಂತೆ ಸಾತನೂರು ರಾಜ ಪುರೋಹಿತರ ಮುಖಂಡತ್ವದಲ್ಲಿ ಎಲೆಕ್ಷನ್ ವಿಚಾರವಾಗಿ ಭಾಷಣ ಮಾಡಲು ಸಿದ್ದಪ್ಪಾಜಿ ಗುಡಿಯ ಸಭಾಂಗಣದಲ್ಲಿ ಜನ ಸೇರಲಾಗಿದೆ. ದಲಿತ ಮುಖಂಡ ಮರಿ ತಿಮ್ಮಯ್ಯನವರ ಹಾಜರಾತಿಯಲ್ಲಿ ಭಾಷಣ ಮಾಡಿ ರಾಜ ಪುರೋಹಿತರು ತಿಮ್ಮಯ್ಯನ ಪರವಾಗಿ ಮಾತನಾಡಿದಾಗ ಸಭೆಯಲ್ಲಿ ಗೊಂದಲ ಶುರುವಾಗುತ್ತದೆ. ದಲಿತ ಹುಡುಗರು ಅವರಿಬ್ಬರು ಗುಟ್ಟಾಗಿ ಮಾಡಿಕೊಂಡಿರುವ ಒಪ್ಪಂದದ ರಾಜಕೀಯವನ್ನು ಬಹಿರಂಗಪಡಿಸಲು ಆಗ್ರಹಪಡಿಸುತ್ತಾರೆ. ಓಟಿಗೊಂದು ರೂಪಾಯಿಯಂತೆ ಮಾಡಿ ಕೊಂಡ ಒಪ್ಪಂದ ಹಾಗೂ ಕೇರಿಯಲ್ಲಿರುವ ದೊಡ್ಡ ದೊಡ್ಡ ನೇರಳೆ ಮರ, ಬೇವಿನ ಮರಗಳನ್ನು ಪುರೋಹಿತರಿಗೆ ದಲಿತ ಮುಖಂಡ ಮರಿ ತಿಮ್ಮಯ್ಯ ಕೊಡಲು ಮಾಡಿಕೊಂಡಿದ್ದ ಒಪ್ಪಂದವನ್ನು ಪ್ರಶ್ನೆ ಮಾಡಿ ಬಹಿರಂಗಪಡಿಸಿ ಅವರಿಬ್ಬರಿಗೂ ಅವಮಾನಮಾಡುತ್ತಾರೆ. ಹೀಗೆ ಕಾಳ ಭೈರನ ಮುಖಂಡತ್ವದಲ್ಲಿ ಹಳ್ಳಿಯ ದಲಿತ ಹುಡುಗರು ರಾಜಕೀಯವಾಗಿ ಪ್ರಜ್ಞೆ ಬೆಳಸಿಕೊಂಡಿರುವುದು ಕತೆಯ ಮೂಲಕ ಮ.ನ.ಜ ಹೇಳಿದ್ದಾರೆ.

ದಲಿತ ಚಳುವಳಿಯ ವ್ಯಾಪ್ತಿಯ ದೃಷ್ಟಿಯಿಂದ ಆಶಾದಾಯಕ ಬೆಳವಣಿಗೆ ಮುಂದಿನ ದಿನಗಳಲ್ಲಿ ಈ ದಲಿತರು ತಮ್ಮ ಬದುಕು ಅಸ್ತಿತ್ವಕ್ಕಾಗಿ ಹೋರಾಡಬೇಕಾಗಿರುವ ಅನಿವಾರ್ಯತೆಯನ್ನು ಕತೆ ಸೂಕ್ಷ್ಮವಾಗಿ ಹೇಳುತ್ತದೆ. ಅದು ದಲಿತರ ಸಾಮಾಜಿಕ ಕಳಕಳಿಯೂ ಅಗಬೇಕೆಂಬ ನಿಲುವು ಮ.ನ.ಜ ಅವರ ಕತೆಗಳಲ್ಲಿದೆ.

**೪.೬. ಮೊಗಳ್ಳಿ ಗಣೇಶ್‌ರವರ ಕಥಾಜಗತ್ತು**

ದೇವನೂರು ಮಹಾದೇವರ ನಂತರ ದಲಿತ ಸಾಹಿತ್ಯದ ಅನನ್ಯತೆಯನ್ನು ಪ್ರಮುಖವಾಗಿ ದಾಖಲಿಸಿದ ಕೀರ್ತಿ ಮೊಗಳ್ಳಿ ಗಣೇಶರಿಗೆ ಸೇರಬೇಕು. ಮೊಗಳ್ಳಿ ಗಣೇಶರು ಬುಗುರಿ (೧೯೯೨), ಅತ್ತೆ (೧೯೯೭), ಭೂಮಿ (೨೦೦೦) ಮತ್ತು ಇತ್ತೀಚೆಗೆ ಮಣ್ಣು (೨೦೦೪) ಯೆಂಬ ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಮೊಗಳ್ಳಿಯವರು ಸಮಕಾಲೀನ ತಾತ್ವಿಕ ಚರ್ಚೆಗಳೊಂದಿಗೆ ಬರವಣಿಗೆಗೆ ತೊಡಗುತ್ತಾರೆ.

೧೯೯೬ ರಲ್ಲಿ 'ದಲಿತರು ಮತ್ತು ಜಾಗತೀಕರಣ' ಯೆಂಬ ಕೃತಿ ರಚಿಸಿರುವ ಮೊಗಳ್ಳಿಯವರು ದಲಿತ ಜಗತ್ತಿನ ಹೊಸ ಅನುಭವಗಳನ್ನು ಕಟ್ಟಿಕೊಡುತ್ತಾರೆ. ಈ ಕೃತಿಯಲ್ಲಿ 'ದಲಿತ' ಪದವನ್ನು ಪುನರ್ವ್ಯಾಖ್ಯಾನಿಸುತ್ತಾ ''ದಲಿತಯೆಂಬುದು ಇವತ್ತಿನ ಸಂದರ್ಭದಲ್ಲಿ ಕೆಳಜಾತಿಗಳ ಅರಿವಿನ ವಿಕಾಸವನ್ನು ಹಕ್ಕೊತ್ತಾಯದ ಧ್ವನಿಯಲ್ಲಿ ಸಕಾರಾತ್ಮಕವಾದ ಸಾಮಾಜಿಕ, ರಾಜಕೀಯ ಆರ್ಥಿಕ, ಶೈಕ್ಷಣಿಕ ಮಾನವೀಯ ಒಪ್ಪಂದಗಳನ್ನು ನಿರ್ಮಿಸುವ ಸಂಕಥನಗಳ ಸಂಕೇತವಾಗಿದೆ. ಜಾತಿಯ ಮಿತಿಗಳನ್ನು ಮೀರುವ ಆಶಯಗಳ ಸೂಚಿಯಾಗಿದೆ''[೫೫] ಎನ್ನುತ್ತಾರೆ.

ಮೊಗಳ್ಳಿಯವರು ದಲಿತ ಸಂವೇದನೆಯ ನೆಲೆಗಳನ್ನು ಕೂಡ ಹೊಸದಾಗಿ ಶೋಧಿಸುತ್ತಾರೆ. ಪ್ರಾದೇಶಿಕ ಸ್ವಭಾವದ ಅಭಿವ್ಯಕ್ತಿ, ಅಲಕ್ಷಿತ ಸಮುದಾಯಗಳ ಅನುಭವಗಳ ಶೋಧನೆ, ಮಾನವೀಕರಣ, ಜಾನಪದೀಯತೆಯ ಲಕ್ಷಣವಾದ ಸಮಷ್ಟಿ ಪ್ರಜ್ಞೆ, ಕಥನ ರೂಪಗಳನ್ನಾಧರಿಸಿದ ಅಭಿವ್ಯಕ್ತಿ ಇವು ಅವರ ಸಾಹಿತ್ಯದ ಪ್ರಧಾನವಾದ ನೆಲೆಗಳು.

''೧೯೯೨ ರಲ್ಲಿ ಪ್ರಕಟವಾದ 'ಬುಗುರಿ' ಕಥಾಸಂಕಲನದಲ್ಲಿ ಎಂಟು ಕಥೆಗಳಿದ್ದರೂ 'ಬುಗುರಿ' ಮೊಗಳ್ಳಿಯವರ ಮಹತ್ವದ ಕತೆಗಳಲ್ಲಿ ಒಂದು. ಈ ಕತೆಯಲ್ಲಿ ಎರಡು ಮುಖ್ಯ ಘಟನೆಗಳು ನಡೆಯುತ್ತವೆ. ಈ ಎರಡು ಘಟನೆಗಳು ಕಕ್ಕಸು ಗುಂಡಿಗೆ ಸಂಬಂಧಿಸಿದವು. ಮೊದಲಿನದರಲ್ಲಿ ಚೆಲುವನ ಪ್ರೀತಿಯ ಬುಗುರಿ, ಆತನ ಅಪ್ಪನ ಕೌರ್ಯ ಅಸಹನೆಯಿಂದಗಿ ಕಕ್ಕಸು ಗುಂಡಿಯನ್ನು ಸೇರುತ್ತದೆ. ಎರಡನೇಯದರಲ್ಲಿ ನಾಯಿಗಳು ಅಟ್ಟಿಸಿಕೊಂಡು ಬಂದ

ಹಂದಿಯೊಂದು ದಿಕ್ಕೆಟ್ಟು ಇದೇ ಗುಂಡಿಯಲ್ಲಿ ಬಿದ್ದಿರುತ್ತದೆ. ದಲಿತ ಕೇರಿಯ ವ್ಯವಸ್ಥೆಗೆ ಹೊರತಾದ ಈ ಕಕ್ಕಸು ಗುಂಡಿಯ ಸುತ್ತ ಈ ಕತೆಯ ಘಟನೆಗಳು ನಡೆದು ಇತಿಹಾಸವೊಂದು ಸೃಷ್ಟಿಯಾಗುತ್ತದೆ. ಪೂಜಾರಿ ಗುಂಜಾರಯ್ಯನ ಕಿರಿಯ ಮಗ ಶಾಂತರಾಜನಿಗೆ ಮೈಸೂರಿನಿಂದ ಹೆಣ್ಣು ತಂದಾಗ ನಗರ ಜೀವನಕ್ಕೆ ಒಗ್ಗಿಕೊಂಡ ನೆಂಟರ ಅನುಕೂಲಕ್ಕೆಂದು ಕಟ್ಟಿದ ಆಧುನಿಕ ಕಕ್ಕಸು ಮನೆಯ ಕಕ್ಕಸೆಲ್ಲಾ ಸಂಗ್ರಹವಾಗಿ ಈ ಕಕ್ಕಸು ಗುಂಡಿ ನಿರ್ಮಾಣವಾಗಿರುತ್ತದೆ. ಊರವರೆಲ್ಲರೂ ಹೇಳಿದರೂ ಕಲ್ಲು ಮತ್ತು ತಗಡುಗಳನ್ನು ಕೊಳ್ಳಲು ತ್ರಾಣವಿಲ್ಲದ ಗುಂಜಾರಯ್ಯ ಅದನ್ನು ತೆಂಗಿನ ಗರಿಗಳಿಂದ ಮುಚ್ಚಿರುತ್ತಾನೆ.

ಈ ಕಕ್ಕಸು ಗುಂಡಿ ಒಬ್ಬೊಬ್ಬರಿಗೆ ಒಂದೊಂದು ಥರ ಕಾಣುತ್ತದೆ. ಬುಗುರಿ ಕಕ್ಕಸುಗುಂಡಿಯಲ್ಲಿ ಬಿದ್ದಿದ್ದು ಚಲುವನ ದೃಷ್ಟಿಯಲ್ಲಿ ಒಂದು ದುರಂತವಾಗಿದ್ದರೂ ಅದರಲ್ಲಿ ಉಳಿದವರಿಗೆ ಆಸ್ಥೆಯಿರುವುದಿಲ್ಲ. ಆದರೆ ಹಂದಿ ಬಿದ್ದಿದ್ದು ಮಾತ್ರ ಹೊಲಗೇರಿಯ ಇತಿಹಾಸದಲ್ಲಿಯೇ ಮಹತ್ವದ ಘಟನೆಯ ಸ್ವರೂಪವನ್ನು ತಾಳುತ್ತದೆ. ಗುಂಜಾರಯ್ಯನ ಮನೆಯ ಹೆಂಗಸರಿಗೆ ಇಂದೊಂದು ಕೇಡಿನ ಸೂಚನೆ. ವರಹ ಅವತಾರದ ವಿಷ್ಣುವಿನಿಂದ ನಡೆದ ರಾಕ್ಷಸ ಸಂಹಾರದ ನೆನಪು ತಂದುಕೊಡುವ ಸಂಕೇತ. ಆದರೆ ಚಿಕ್ಕಣ್ಣ ಅದನ್ನು ನೋಡುವ ದೃಷ್ಟಿ ಬೇರೆ. ಅದು ಅವನಿಗೆ 'ಬಯಸದೇ ಬಂದ ಭಾಗ್ಯ'. ಹಂದಿಯನ್ನು ಲಪಟಾಯಿಸಲು ತನ್ನ ಗೆಳೆಯ ಕುಡಿತದ ಚಾಂಪಿಯನ್ ಇತಾರಿಯೊಂದಿಗೆ ಮಂತ್ರಾಲೋಚನೆ ನಡೆಸಿ ಆತ ನೀಲ ನಕ್ಷೆಯನ್ನು ತಯಾರಿಸುತ್ತಾನೆ. ಗುಂಡಿಗಿಳಿದು ಹಂದಿಯನ್ನು ಕಂಬಳಿಯ ಚೀಲದಲ್ಲಿ ಕಟ್ಟಿ ಹಾಕಿ ಮೇಲೆಳೆಯುವುದನ್ನೇ ಉತ್ತಮ ಉಪಾಯವೆಂಬ ನಿರ್ಣಯಕ್ಕೆ ಇವರಿಬ್ಬರೂ ದೀರ್ಘ ಚರ್ಚೆಯ ನಂತರ ಬರುತ್ತಾರೆ. ಆದರೆ ಪ್ರತ್ಯಕ್ಷ ಪ್ರಯೋಗದಲ್ಲಿ ಅನಿರೀಕ್ಷಿತ ಘಟನೆಗಳು ನಡೆದು ಹೋಗುತ್ತವೆ. ಆಯ ತಪ್ಪಿ ಗುಂಡಿಯಲ್ಲಿ ಬಿದ್ದ ಚಿಕ್ಕಣ್ಣ ಇತಾರಿಯ ನಗೆಯಿಂದ ಅವಮಾನಿತನಾಗಿ ಅವನನ್ನು ಗುಂಡಿಗೆ ತಳ್ಳುತ್ತಾನೆ. ಇದನ್ನೆಲ್ಲಾ ನೋಡುತ್ತಿದ್ದ ಗುಂಜಾರಯ್ಯನಿಗೆ ಊರ ಪೂಜಾರಿಯೇ ಅಪವಿತ್ರವೆನಿಸುತ್ತದೆ. "ಯಾವ ಕರ್ಮ ಮಾಡಿದ್ರೋ ಪಾಪಿಗೊಳಾ" ಎಂದು ಅವನು ಕಿರುಚಿಕೊಂಡಾಗ ಚಿಕ್ಕಣ್ಣ ಗುಂಜಾರಯ್ಯನ ಮೇಲೆ ಏರಿ ಹೋಗುತ್ತಾನೆ. ತನಗಾದ ಅನ್ಯಾಯದಿಂದ ರೊಚ್ಚಿಗೆದ್ದ ಇತಾರಿ ಊರನ್ಯಾಯ ಕೇಳುತ್ತಾನೆ. ಚಿಕ್ಕಣ್ಣ ನಡೆಸುತ್ತಿದ್ದ ಹೋಟೆಲಿಗೆ ಬಹಿಷ್ಕಾರ ಹಾಕುತ್ತಾರೆ. ಇಂಥ ಅವಕಾಶಕ್ಕಾಗಿ ಕಾದುಕೊಂಡಿದ್ದ ತಿಪ್ಪೇಗೌಡನ ಸಹಾಯ ಪಡೆದು ಪೋಲಿಸು ಕಂಪ್ಲೇಟು ಕೊಡುತ್ತಾನೆ. ಪರಿಸ್ಥಿತಿಯ ಲಾಭ ಪಡೆದು ಪೋಲಿಸರು ಚಿಕ್ಕಣ್ಣ, ಇತಾರಿಯನ್ನು ಬೆದರಿಸಿ ಅವರಿಂದ ಸ್ಟೇಶನ್‌ನಿನ ಕಕ್ಕಸುಗುಂಡಿಯಿಂದ ಕಕ್ಕಸು ಎತ್ತುವ ಕೆಲಸ ಮಾಡಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಹೀನಾಯವಾಗಿ ಬೈದು ಅವರನ್ನು ಅವಮಾನಗೊಳಿಸುತ್ತಾರೆ. ಹೀಗೆ ಗುಪ್ತವಾಗಿ ನಡೆಯಬೇಕಾಗಿದ್ದ ಚಿಕ್ಕಣ್ಣನ ಕಾಯಕ ಸಂಕೀರ್ಣ ಸಾಮಾಜಿಕ ಸ್ವರೂಪವನ್ನು ಪಡೆದುಕೊಳ್ಳುತ್ತದೆ.

ಈ ಘಟನೆಯಲ್ಲಿ ಚಲುವನಿಗೆ ಕ್ರಿಯಾಶೀಲ ಪಾತ್ರವಿರದೇ ಹೋದರೂ ಅದು ಅವನನ್ನು ಗಾಢವಾಗಿ ಒಳಗೊಳ್ಳುತ್ತದೆ. ಬುಗುರಿಯನ್ನು ಕಸಿದುಕೊಂಡು ಗುಂಡಿಗೆ ಬಿಸಾಕಿದ ಅಪ್ಪ ಚಲುವನಿಗೆ ರಾಕ್ಷಸನಂತೆ ಕಾಣುತ್ತಾನೆ. 'ಯಾಕರ ಸಾಯುವುದಿಲ್ಲ ಬೇವರ್ಸಿ' ಎಂದು ಚಲುವ ಅವನನ್ನು ಶಪಿಸುತ್ತಾನೆ. ಚಿಕ್ಕಣ್ಣ ಇತಾರಿಯರ ಕಾಯಕ ನೋಡಿ ಹೇಸಿಗೆ ಬಂದರೂ ತನ್ನ ಬುಗುರಿ ಹೇಗಾದರೂ ಸಿಕ್ಕಿತೇ ಎಂದು ಕಾಯುತ್ತಿರುತ್ತಾನೆ. ಗುಂಡಿ ಮುಚ್ಚುವ ಸಾಧ್ಯತೆಗಳು ಕಂಡಾಗ ಅಪ್ಪ ಇನ್ನು ಮೇಲೆ ಬುಗುರಿಯನ್ನು ಅದರಲ್ಲಿ ಎಸೆಯಲಾರ ಎಂದೆನಿಸಿ ಅವನಿಗೆ ಖುಷಿಯಾಗುತ್ತದೆ.

ಕತೆಯ ಕೊನೆಯಲ್ಲಿ ಚಿಕ್ಕಣ್ಣ ದೊಣ್ಣೆಯಿಂದ ಗುಡಾಣ ಕುಕ್ಕಿದಾಗ ಭಿತ್ತನೆ ರಾಗಿಯೊಂದಿಗೆ ಚಲುವನ ತಾಯಿ ಬಚ್ಚಿಟ್ಟಿದ ಅವನ ಇನ್ನೊಂದು ಬುಗುರಿಯೂ ಹೋರಬರುತ್ತದೆ. ಆದರೆ ಅಪ್ಪನ ರಾಕ್ಷಸೀ ಕೃತ್ಯಗಳಿಂದ ಜರ್ಜರಿತನಾದ ಚಲುವನಿಗೆ ಬುಗುರಿ ಸಂತೋಷ ತರುವುದಿಲ್ಲ. ಅವನ ಆಸೆ ಈಗ ಸತ್ತು ಹೋಗಿರುತ್ತದೆ. ತನ್ನ ಅಪ್ಪ ಇನ್ನೊಂದು ಬುಗುರಿಯನ್ನು ಬಿಸಾಕಿದಂತೆ ಇದನ್ನು ಚಲುವ ದೂರ ಬಿಸಾಕಿ ಬಿಡುತ್ತಾನೆ. ಕತ್ತಲಲ್ಲಿ ಅವ್ವನನ್ನು ಹುಡುಕಿಕೊಂಡು ಅವಳ ಕಿಬ್ಬೊಟ್ಟೆಗೆ ಮುತ್ತಿಕೊಂಡು ''ಅವ್ವೋ ನನ್ನ ನಿನ್ನೊಟ್ಟೆವೊಳಕೆ ಸೇರಿಸ್ಕಬುಡವಾ''[೯] ಎಂದು ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ. ಚಿಕ್ಕಣ್ಣನ ಅವಮಾನದ ಅನುಭವದಷ್ಟೆ ಧಾರುಣವಾದ ಅನುಭವ ಎಳೆಯ ಚಲುವ ಬದುಕಿರುವುದರಲ್ಲಿ ಅಸ್ಥೆಯನ್ನೇ ಕಳೆದುಕೊಳ್ಳುವುದು. ಈ ಕತೆಯಲ್ಲಿ ಮೊಗಳ್ಳಿಯವರು ದಲಿತರ ಬದುಕಿನ ವಿವರಗಳನ್ನು, ಹೊಲಗೇರಿಯ ವ್ಯವಸ್ಥೆಗೆ ಹೊರತಾದ ಈ ಕಕ್ಕಸು ಗುಂಡಿಯ ಸುತ್ತ ಈ ಕತೆಯ ಘಟನೆಗಳು ನಡೆಯುತ್ತಲೇ ಇತಿಹಾಸವೊಂದು ಬೆಳೆಯುವ ಕ್ರಮವನ್ನು ಕತೆಗಾರರು ಸಮರ್ಥವಾಗಿ ನಿರೂಪಿಸಿದ್ದಾರೆ.

**"ಒಂದು ಹಳೇ ಚಡ್ಡಿ"** ಈ ಕತೆ ಬುಗುರಿ ಕತೆಯನ್ನು ಹೇಳುತ್ತಿರುವಂತೆ ಭಾಸವಾಗುತ್ತಿದ್ದರೂ ಹೊಸ ನೋವಿನ ಮುಖಗಳು ಕತೆಯಲ್ಲಿ ಅನಾವರಣಗೊಂಡಿವೆ. ಶೀನಿಯ ಚಡ್ಡಿ ಕಳೆದು ಹೋದುದೇ ಒಂದು ನೆವವಾಗಿ ಇಲ್ಲಿ ಹದಗೆಟ್ಟ ಕೌಟುಂಬಿಕ ಸಂಬಂಧಗಳು ತೆರೆದುಕೊಳ್ಳುತ್ತವೆ. ನಾಗರಾಜನ ಕ್ರೌರ್ಯ, ಅಸೂಯೆಗಳು ಅವರ ಮೂರನೆ ಹೆಂಡತಿ ಸಿದ್ಧಿಯ ಗೋಳು, ಅವನ ಎಂಬತ್ತು ವರ್ಷ ವಯಸ್ಸಿನ ತಂದೆಯ ಹತಾಶೆ, ಇವೆಲ್ಲವುಗಳ ನಡುವೆ ಸಿಕ್ಕು ಅದೇ ಮದುವೆಯಾದ ಶಾಂತಿ ಅನುಭವಿಸುವ ಅವಮಾನ ಕೊನೆಗೆ ಅಪಘಾತವೊಂದರಲ್ಲಿ ಶೀನಿಯ ಸಾವು ಇವೆಲ್ಲವೂ ಒಟ್ಟಾಗಿ ಕತೆಯಲ್ಲಿ ಯಾತನೆಯ ಶಿಬಿರವನ್ನು ನಿರ್ಮಿಸುತ್ತವೆ.

ಮೊಗಳ್ಳಿಯವರು ಕಟ್ಟಿಕೊಡುವ ದಲಿತ ಜಗತ್ತು ತನ್ನ ಅನನ್ಯತೆಯೊಂದಿಗೆ ನೋವಿನ ಮಿಡಿತಗಳನ್ನು ಶೋಧಿಸುತ್ತವೆ. ಇವರ ಎರಡನೆ ಕೃತಿ 'ಅತ್ತೆ'ಯಲ್ಲಿ ಹತ್ತು ಕತೆಗಳಿದ್ದರೂ ಆ ಎಲ್ಲಾ ಕತೆಗಳಲ್ಲಿ ನೋವಿನ, ಅವಮಾನದ, ಸೋಲಿನ ಲೋಕ ಚಿತ್ರಿತವಾಗಿದೆ. ಈ ಲೋಕದ ಸಂಕಟವನ್ನು ನಿರೂಪಿಸುವುದು ಕತೆಗಾರರಿಗೆ ಅನಿವಾರ್ಯವಾದ ಸಾಂಸ್ಕೃತಿಕ ಒತ್ತಡವಾಗಿದೆ. ಈ ಲೋಕವನ್ನು ಪ್ರತಿನಿಧಿಸುವವರಲ್ಲಿ ಸ್ತ್ರೀಯರೇ ಹೆಚ್ಚಿನ ಸಂಖ್ಯೆಯಲ್ಲಿರುವುದಕ್ಕೆ ಕಾರಣ ಕೂಡ ಲೇಖಕರು ಸೂಚಿಸಿದ್ದಾರೆ.

ಈ ಸಂಕಲನದ ಕೆಲ ಕತೆಗಳಲ್ಲಿ ನಿವೇದಕನೇ ಕತೆಯ ಪಾತ್ರವಾಗಿರುವುದು ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ಈ ಸಂಕಲನದ ಒಳ್ಳೆಯ ಕತೆಗಳಲ್ಲೊಂದಾದ 'ಕಾಳಿ' ಯ ನಿವೇದಕ ತನ್ನ ಬಗ್ಗೆ ಹೇಳಿರುವುದನ್ನು ಗಮನಿಸಬಹುದು. ''ಇದನ್ನೆಲ್ಲಾ ಈಗ ನಾಚಿಕೆಯಿಂದ ಹಾಗೆಯೇ ಹೆಮ್ಮೆಯಿಂದ ನೆನಪಿಸಿಕೊಳ್ಳುತ್ತಿರುವುದರ ಹಿಂದೆ ಯಾವುದೋ ಅವ್ಯಕ್ತ ಸಂಕಟವಿದೆ. ಬೆಳೆಯುತ್ತಿರುವಂತೆಯೇ ಬುಡದಿಂದ ದೂರವಾಗುವ ಬುದ್ಧಿಯನ್ನು ಯಾರಿಂದ ಹೇಗೆ ಯಾವಾಗ ಎಲ್ಲಿ ಕಲಿತೆನೋ ನನಗೆ ಗೊತ್ತಾಗಲಿಲ್ಲ''[೧೦]

ತಾನು ಅತ್ಯಂತವಾಗಿ ಪ್ರೀತಿಸುವ ಹಾಗೂ ಗೌರವಿಸುವ ಕಾಳಿಯ ಜೊತೆ ರಂಪ ಮಾಡಿ ಬೈಯ್ದುಕೊಂಡು ಬಂದಿದ್ದ ಘಟನೆಯನ್ನು ಅವನು ಮರೆಯುವುದಿಲ್ಲ. ಈ ಸಂಕಲನದ ಕತೆಗಳಲ್ಲಿ ಬರುವ ಸ್ತ್ರೀಯರೆಲ್ಲರೂ 'ಅತ್ತೆ' ಕತೆಯ 'ಅತ್ತೆ', 'ಬಾಳು' ಕತೆಯ 'ಮಾಗಿ' 'ಬಾಡೂಟ'ದ ಕತೆಯ ಮಾದೇವಿ-ಬಲಿಪಶುಗಳೇ. ಆದರೆ ಕಾಳಿ ಗಟ್ಟಿಯಾದ ಹೆಂಗಸು. ಅವಳಷ್ಟು ಗಟ್ಟಿಯಿರದಿದ್ದರು 'ಕೋಮಲ ಕಾಯ'ದ ನಾಯಕಿಯರಲ್ಲಿ ಭವಿಷ್ಯವನ್ನು ಎದುರಿಸುವ ಧೈರ್ಯವಿದೆ. ಸಾವಿತ್ರಿಯ ಸಾವಿಗೆ ಕಾರಣನಾದ ಮನುಷ್ಯನ ಮಗನನ್ನೆ ಅವಳು ಪ್ರೀತಿಸುವುದರಲ್ಲಿ ದಾರುಣ ವ್ಯಂಗ್ಯ

ವಿದ್ದರೂ ಅವಳಿಗೆ ಈ ವ್ಯಂಗ್ಯವನ್ನು ದಾಟುವ ನಿರ್ಧಾರವಿದೆ. ಈ ಸಂಕಲನದ ಕತೆಗಳಾದ 'ಅತ್ತೆ' 'ಬಾಳು' 'ಕೋಮಲ ಕಾಯ' ಬಾಡೂಟ 'ಕಟ್ಟು' ಇತ್ಯಾದಿ ಬಹಳಷ್ಟು ಲೈಂಗಿಕತೆ ವಸ್ತುವನ್ನೊದಗಿಸಿದೆ. ಇಲ್ಲಿಯ ಕತೆಗಳಲ್ಲಿಯ ಲೈಂಗಿಕ ಸಂಬಂಧಗಳಲ್ಲಿ ಗಂಡಸಿನ ಕ್ರೌರ್ಯವೇ ಮಹತ್ವದ ಪಾತ್ರವಹಿಸಿದೆ.

ಮೊಗಳ್ಳಿ ಗಣೇಶರ ಮೂರನೇ ಸಂಕಲನವಾದ ಭೂಮಿ ಅವರ ಮೊದಲೆರಡು ಸಂಗ್ರಹಗಳಿಗಿಂತ ಒಂದೆರೆಡು ಮಹತ್ವದ ಪಾತ್ರವಹಿಸಿದೆ. ಈ ಕೃತಿಯಲ್ಲಿ ಕತೆಗಾರರ ಸೃಜನಶೀಲತೆ ದಲಿತ ನೆಲೆಯಲ್ಲಿಯೇ ತನ್ನ ಸ್ವರೂಪವನ್ನು ಪಡೆದುಕೊಳ್ಳುತ್ತಿದೆಯಾದರೂ, ಅವರ ಆಸೆಗಳ ವ್ಯಾಪ್ತಿ ದಲಿತ ಸಮುದಾಯಕ್ಕೆ ಮಾತ್ರ ಸೀಮಿತವಾಗಿಲ್ಲ. ಇದರ ಪರಿಣಾಮವಾಗಿಯೇ, ಏನೋ ಅವರ ಭಾಷೆ ಕೂಡ ತನ್ನ ಅತಿ ವಿಶಿಷ್ಟತೆಯನ್ನು ಬಿಟ್ಟುಕೊಟ್ಟು ಹೆಚ್ಚು ಸಾಮಾಜಿಕವಾಗಿದೆ. ಬಹುಶಃ ಈ ಶೈಲಿಯ ಬೆಳವಣಿಗೆಗಳು ದಲಿತ ಸಾಹಿತ್ಯದ ಸ್ಥಿತ್ಯಂತರಗಳ ಲಕ್ಷಣವಾಗಿರಬಹುದು.

''ಮೊಗಳ್ಳಿಯವರ '**ಭತ್ತ**' ಇವರ ಯಶಸ್ವಿ ಕತೆಗಳಲ್ಲಿ ಒಂದಾಗಿದೆ. ಈ ಕತೆ ದಲಿತರ ಹಸಿವಿನ ಜೊತೆಗೆ ಜಾತಿ ಶೋಷಣೆಯನ್ನು ಪ್ರತಿಪಾದಿಸುವ ಕತೆಯಾಗಿದೆ. ಇಲ್ಲಿ ಹಸಿವಿನಿಂದ ಕಂಗಾಲಾದಂತ ದಲಿತರು ಅನ್ನ ಉಣ್ಣದೆ ಬಹಳ ವರ್ಷಗಳಾಗಿವೆ. ತಮ್ಮ ದುಡಿಮೆಯ ಮೂಲಕ ಸಿಗಬಹುದಾದ ಭತ್ತದ ಕನಸಿಗಾಗಿ ಕಾಯುತ್ತಾರೆ. ಅಲ್ಪ ಪ್ರಮಾಣದ ಕಳ್ಳತನದಲ್ಲಿ ಸಂಪಾದಿಸುವ ಪ್ರಯತ್ನ ಮಾಡುವುದು ಅವರ ದಾರಿದ್ರ್ಯದ ಸ್ಥಿತಿಗೆ ಕತೆ ಸಾಂಕೇತಿಕವಾಗಿದೆ. ಈ ಕತೆಯಲ್ಲಿ ಮೇಲ್ಜಾತಿಯವರ ಶೋಷಣೆ ಜಾತಿಯತೆಯಿಂದ ಕೂಡಿದ್ದು ಈ ಸಂದರ್ಭದಲ್ಲಿ ತಹಸಿಲ್ದಾರ್ ಕ್ರಮ ಕೈಗೊಂಡದ್ದು, ಇಲ್ಲಿ ಜಾತಿಯ ಬೆಂಬಲವೂ ಆಗಿದೆ. ಅದಕ್ಕೆ ವಿರುದ್ಧವಾಗಿ ಜಿಲ್ಲಾಧಿಕಾರಿಯ ದೌರ್ಜನ್ಯ ಮೇಲ್ಜಾತಿಯವರ ಪರವಾಗಿ ನಿಲ್ಲುತ್ತದೆ. ಇದನ್ನು ದೇಶ ರಕ್ಷಣೆಯಾಗಿ ಕಾಣುವುದು ವ್ಯವಸ್ಥೆಯ ವ್ಯಂಗ್ಯವಾಗಿದೆ. ಮಾಯಮ್ಮ ಭತ್ತವನ್ನು ಬೇಯಿಸುವ ನೆಪದಲ್ಲಿ ಅದನ್ನು ಬಚ್ಚಿಡುವ ತಂತ್ರ ಮಾಡುತ್ತಾಳೆ. ಇವುಗಳೆಲ್ಲಾ ದಲಿತರ ಹೋರಾಟದ ಪ್ರತಿಕವೇ ಆಗಿವೆ. ಇಲ್ಲಿ ದಲಿತರು ಬದುಕುವ ಚೈತನ್ಯಗಳಾಗಿದ್ದಾರೆ. ಈ ರೀತಿಯ ಚೈತನ್ಯ ಶೀಲತೆಯಿಂದಲೇ ದಲಿತರು ಬದುಕಿರುವುದನ್ನು, ವ್ಯವಸ್ಥೆ ಅವರನ್ನು ತುಳಿದು ನಾಶಮಾಡಿರುವ ಚಿತ್ರ ಕಣ್ಣಿಗೆ ಕಟ್ಟುವಂತೆ ಮೊಗಳ್ಳಿಯವರು ಚಿತ್ರಿಸಿದ್ದಾರೆ. ಇಲ್ಲಿ 'ಭತ್ತ' ದಲಿತರ ಹಸಿವನ್ನು ಹಿಂಗಿಸುವ ಮಾಯೆಯಾಗಿ ಬಂದು ಬದುಕನ್ನು ಕಷ್ಟಕ್ಕೆ ಸಿಕ್ಕಿಸಿ, ವ್ಯವಸ್ಥೆಯ ನಗುವಿಗೆ ಕಾರಣವಾಗುತ್ತದೆ. ಅಧಿಕಾರಶಾಹಿವ್ಯವಸ್ಥೆ ಹೇಗೆ ನಡೆದುಕೊಳ್ಳುತ್ತದೆಯೋ ಹಾಗೇ ಭೂಮಾಲಿಕ ವ್ಯವಸ್ಥೆ ನಡೆದು ಕೊಂಡು ಬಂದಿರುವುದರಿಂದ ದಲಿತರ ಶೋಷಣೆ ನಿರಂತರವಾಗಿ ನಡೆದಿರುವುದು ಇಲ್ಲಿ ದುರಂತವೆನ್ನುವಂತೆ ಮೊಗಳ್ಳಿಯವರು 'ಭತ್ತ' ಕತೆಯ ಮೂಲಕ ಸಾಮಾಜಿಕ ಸಂಘರ್ಷದ ನೆಲೆಯನ್ನು ಅನಾವರಣಗೊಳಿಸಿದ್ದಾರೆ.

ಮೊಗಳ್ಳಿಯವರ ಕೆಲವು ಕಥೆಗಳು ದಲಿತರ ಚಾರಿತ್ರಿಕ, ಸಾಂಸ್ಕೃತಿಕ ವಿವರಗಳನ್ನು ತೆರೆದಿಡುತ್ತವೆ. ಅಂತಹ ಕಥೆಗಳನ್ನು 'ನನ್ನಜ್ಜನಿಗೊಂದಾಸೆಯಿತ್ತು' 'ತೋಪು' ಕಥೆಗಳು ಇಲ್ಲಿ ಮುಖ್ಯವಾಗುತ್ತವೆ. 'ನನ್ನಜ್ಜನಿಗೊಂದಾಸೆಯಿತ್ತು' ಕತೆ ತಾತನ ತಣಿಗೆಯೊಂದಿಗೆ ದಲಿತರ ಬದುಕು ತೆರೆದುಕೊಳ್ಳುತ್ತದೆ. ಈ ತಣಿಗೆಯು ಗೌಡರ ಮನೆಗೆ ಸಾಲಕ್ಕೆ ಅಡ್ಡವಿದ್ದಾಗಲೇ ದಲಿತರ ಬದುಕು ದಾರಿದ್ರ್ಯಕ್ಕೆ ಒಳಗಾಗಿತ್ತೆಂದು ತಣಿಗೆಯ ಜೀವನ ಶ್ರದ್ಧೆ, ಮೌಲ್ಯಗಳ ಕಡೆ ನಮ್ಮ ಗಮನ ಸೆಳೆಯುತ್ತದೆ. ಮನೆ ಭಾಗವಾದ ಮೇಲೆ ಯಾವುದೋ ಕಾರಣಕ್ಕೆ ಗೌಡರ ಮನೆಯಲ್ಲಿ ಅಡವಿಟ್ಟು ಬಿಡಿಸಿಕೊಳ್ಳಲಾಗದೇ ನಂತರ ಗೌಡರ ಮನೆಯಲ್ಲಿ ಹಳೇ ಹಂಡೆ ತೂತಾಗಿದ್ದರಿಂದ ತಣಿಗೆಯನ್ನು ಕತ್ತರಿಸಿ ಬಡಿದು ಬಿಟ್ಟಿದ್ದರು. ತಾತ ತನ್ನ ಕೊನೆಯ ಆಸೆಯಾದ ತಣಿಗೆಯನ್ನು ಬಿಡಿಸಿ ತಂದು ಕೊಡುವೆಯಾ ಎಂದು ಕೇಳುವುದು

ಗೌಡರ ಮನೆ ಅಡವಿಟ್ಟಿರುವ ದಲಿತರಾದ ನಿಮ್ಮ ಬದುಕನ್ನು ಬಿಡಿಸಿಕೊಂಡು ಬಂದು ಕೊಡಬಲ್ಲೆಯಾ ಎಂದು ಕೇಳುವಷ್ಟೇ ಧ್ವನಿಪೂರ್ಣವಾಗಿದೆ. ಆದರೆ ಆ ಬದುಕು ಗೌಡನ ದೌರ್ಜನ್ಯದ ಬೆಸುಗೆಯಾಗಿದೆ. ದಲಿತರ ಬದುಕಿನ ಸಮಸ್ಯೆಗಳನ್ನು ಮೊಗಳ್ಳಿಯವರು 'ತಣಿಗೆ' 'ಹೇಲುಗುಂಡಿ' 'ಚಡ್ಡಿ' ಮಿಂಚುಳ ಮುಂತಾದ ಪ್ರತಿಮಾಸಂಕೇತಗಳ ಮೂಲಕ ವಿಶಿಷ್ಟವಾಗಿ ಕತೆ ಹೇಳುತ್ತಾರೆ.

''ಮೊಗಳ್ಳಿಯವರ 'ತೋಪು' ಕತೆಗೆ ಎರಡು ಆಯಾಮಗಳಿವೆ. ಮೊದಲನೆಯದು ಸಮಕಾಲೀನ ಜೀವನದ ದುರಂತಗಳಗಳಲ್ಲಿ ಒಂದಾದ ಪರಿಸರ ನಾಶ, ಮರಗಳ ದೈವತ್ವದ ಸಾಂಕೇತಿಕತೆಯ ವರ್ಣನೆಯಿಂದ ಪ್ರಾರಂಭವಾಗುವ ಕತೆ ಇವುಗಳ ನಾಶದ ಚಿತ್ರದಲ್ಲಿ ಕೊನೆಗೊಳ್ಳುತ್ತದೆ. ಎರಡನೇಯದು ದಲಿತ ಸಮುದಾಯದಲ್ಲಿಯೇ ನಡೆದ ಅಷ್ಟೊಂದು ಆಶಾದಾಯಕವಲ್ಲದ ಪರಿವರ್ತನೆ ಹೇಗಾದರೂ ಮಾಡಿ ಮಜವಾಗಿ ಸುಖವಾಗಿ ಎಲ್ಲವನ್ನೂ ಪಡೆಯಬೇಕು ಎನ್ನುವ ಕನಸು ಹೊಂದಿದ ಈ ಸಮುದಾಯದ ಯುವಕರು ತಮ್ಮದೇ ಆದ ಸಂಘವನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಈ ಸಂಘದ ಉದ್ದೇಶ ತೋರಿಕೆಗೆ. ಸಾಮಾಜಿಕ ಸ್ವರೂಪವಾಗಿದ್ದರೂ ವಾಸ್ತವದಲ್ಲಿ ಸ್ವಾರ್ಥ ಪ್ರೇರೀತವಾಗುತ್ತದೆ. ತಾಯವ್ವ ಹೋಟೆಲ್‌ನ ಮೇಲೆ ಪ್ರಭುತ್ವ ಸಾಧಿಸುವುದು, ಹಾಗೂ ತಮ್ಮೆಲ್ಲರ ಆಕರ್ಷಣೆಯ ಕೇಂದ್ರವಾದ ಅವಳ ಮಗಳು ಊರ್ವಶಿಯನ್ನು ವಶಪಡಿಸಿಕೊಳ್ಳುವುದು ಸಂಘದ ಕಾರ್ಯಕ್ರಮವಾಗುತ್ತದೆ. ಇದು ಊರಗೌಡನಾದ ಸುಬ್ಬೇಗೌಡನ ಕ್ರೋಧಕ್ಕೆ ಕಾರಣವಾಗಿ ಸಂಘದ ಸದಸ್ಯರ ದಮನದಲ್ಲಿ ಕೊನೆಗೊಳ್ಳುತ್ತದೆ. ಈ ಎಲ್ಲಾ ಘಟನೆಗಳಲ್ಲಿ ಮನಸ್ಸಿಲ್ಲದೆ ಪಾಲಾಗುವ ನಿವೇದಕ ವಿದ್ಯಾವಂತನಾದರೂ ಅವರಿಂದ ಪರಿಸ್ಥಿತಿಯನ್ನು ನಿಯಂತ್ರಿಸಲಾಗುವುದಿಲ್ಲ. ಈ ಕತೆಯಲ್ಲಿ ಕಥೆಗಾರರು ಪರಿನಾಶದ ಜೊತೆಗೆ, ದಲಿತ ಸಮುದಾಯ ಆರೋಗ್ಯ ಪೂರ್ಣಚಿತನೆಯ ನೆಲೆಯಲ್ಲಿ ಸಾಗದೆ ತಮ್ಮ ಸಾಂಘಿಕ ಬದುಕನ್ನು ವಿನಾಶಕ್ಕೆ ತಂದುಕೊಳ್ಳುವ ಪರಿಯನ್ನು ವಿವರಿಸಿದ್ದಾರೆ.

''ರೈಲುಜನ''ದ ಕತೆಯ ನಿವೇದಕ ತೋಪುಕತೆಯ ನಿವೇದಕನಿಗಿಂತ ಹೆಚ್ಚು ಗಟ್ಟಿಯಾದ ನೈತಿಕತೆಯಿದೆ. ತಿಮ್ಮಯ್ಯನಿಗೆ ಜಾಮೀನಾಗಿ ಅವನ ಸಾಲದ ಹೊರೆ ಹೊರ ಬೇಕಾಗಿ ಬಂದ ಇವರು ಅದರ ಪರಿಹಾರಕ್ಕಾಗಿ ರಾಜಕಾರಣಿಯೊಬ್ಬನಿಗೆ ಋಣಿಯಾಗಬೇಕಾಗುತ್ತದೆ. ಆದರೆ ಈ ಋಣದ ಸಂದಾಯಕ್ಕಾಗಿ ಭ್ರಷ್ಟ ಹಾಗೂ ಕ್ರೂರ ರಾಜಕಾರಣಿಯೊಬ್ಬನ ಕೈಯಾಳಾಗಿ ಕೊನೆಗೊಳ್ಳುತ್ತದೆ. ಬಹುಶಃ ಇಲ್ಲಿ ನಡೆಯುವ ಶ್ರೀಮಂತ ವಿವಾಹಿತ ಮಹಿಳೆಯ ಆತ್ಮಹತ್ಯೆಯಲ್ಲಿ ನಿವೇದಕನಿಗೆ ಅಪರಚಿತ ಸಮಾಜದ ನೋವು ಹಾಗೂ ಕ್ರೌರ್ಯಗಳ ಸೂಚನೆ ಇದ್ದಂತಿದೆ.

ಮೊಗಳ್ಳಿ ಗಣೇಶನ ಯಶಸ್ವಿ ಕತೆಗಳಲ್ಲಿ ಒಂದಾದ 'ಭೂಮಿ' ಯಲ್ಲಿ ಸಾಧಿಸಿದ ಕಲಾತ್ಮಕತೆ ಹಾಗೂ ಸಂಯಮ ಶ್ರೇಷ್ಟಮಟ್ಟದ್ದಾಗಿದೆ. ಆಕಾಶಕ್ಕೆ ಹಾರುವ ಶಕ್ತಿಯನ್ನು ದೊರಕಿಸುವ ಒಬ್ಬ ಅಸಾಮಾನ್ಯದೊಂಬ ಪಾಳೆಗಾರನೊಬ್ಬನ ಸವಾಲನ್ನು ಎದುರಿಸಿ ಯಶಸ್ವಿಯಾಗುವ ಕ್ರಿಯೆ ಈ ಕತೆಗೆ ಆಕೃತಿಯನ್ನೊದಗಿಸಿದೆ. ಈ ಕತೆಯ ನಾಯಕ ಒಬ್ಬ ದೊಂಬನಾಗಿರುವುದು ಹಾಗೂ ರಾಜಕೀಯ ಆಯಾಮದ ಸೂಚನೆಯಾಗಿದೆ. ದೊಂಬ ಶಿಖರದ ತುದಿಯಿಂದ ಹಾರಬೇಕು ಎನ್ನುವ ಪಾಳೆಯಗಾರನ ಶರತ್ತು ದುರುದ್ದೇಶದಿಂದ ಕೂಡಿದ್ದರೆ, ತಾನು ಆವರಿಸಿಕೊಳ್ಳುವ ಭೂಮಿಯೆಲ್ಲಾ ತನ್ನ ಸಮುದಾಯಕ್ಕೆ ಸೇರಬೇಕೆಂಬ ದೊಂಬರ ಶರತ್ತಿಗೆ ಲೋಕ ಕಲ್ಯಾಣದ ಗುರಿಯಿದೆ. ನಿರೀಕ್ಷಿಸಿದಂತೆ ಪಾಳೆಗಾರನಿಂದ ಮೋಸ ನಡೆಯುತ್ತದೆ. ಹಾಗೂ ಈ ಗುರಿಯ ಸಾಧನೆಗಾಗಿ ದೊಂಬ ತನ್ನ ಪ್ರಾಣವನ್ನು ಕಳೆದುಕೊಳ್ಳಬೇಕಾಗುತ್ತದೆ. ಆದರೆ ದೊಂಬನ ಹೆಂಡತಿಯ ಶಾಪ ಕತೆಗೆ ಅನಿರೀಕ್ಷಿತ ತಿರುವು ಕೊಡುತ್ತದೆ. ''ಆ ಮೇಲೆ ಎಷ್ಟೋ ವರುಷಗಳು

ಜಾರಿ ತೂರಿ ಹೋದವು. ದೊಂಬನ ದೇಹ ಬೆಳೆದು ಸಾವಿರಾರು ಹೂವಾಗಿ, ಮೊಗ್ಗಾಗಿ ಗಿಡ ಮರ ಬಳ್ಳಿ ಲತೆ ಬೀಜವಾಗಿ ಮರವಾಗಿ ಪಚ್ಚೆ ಪೈರು ಹಸಿರು ಸಿರಿಯಾಗಿ, ಹೂ ಮಣ್ಣು ಗಂಧವಾಗಿ, ಬೀಜ ಜೀವವಾಗಿ ಆ ಬಯಲೆಲ್ಲವನ್ನು ರಂಗುಗೊಳಿಸುವಂತೆ ಕಂಗೊಳಿಸಿ ಬೆಳೆದು ಹೋಗಿತ್ತು.''[೧೮] ಮೊಗಳ್ಳಿಯವರು ದೊಂಬನ ಭೂಮಿಯ ಕನಸಿಗೆ ಕತೆಗಾರರು ಹೊಸ ಕನಸಿನಪ್ರಪಂಚ ನಿರ್ಮಿಸಿದ್ದಾರೆ.

ಭೂಮಿ ಕಥಾಸಂಕಲನದಲ್ಲಿ ಬರುವ ಕತೆಗಳಾದ 'ಜೀವ', 'ಕಾಲ', 'ಪ್ರಾರ್ಥನೆ' ಪ್ರಯೋಗ ಶೀಲತೆಯಿಂದ ಗಮನ ಸೆಳೆಯುವ ಕತೆಗಳಾಗಿವೆ. ಮೊಗಳ್ಳಿ ಗಣೇಶರ ಒಟ್ಟು ಕಥಾ ಸಾಹಿತ್ಯದಲ್ಲಿ ಕಂಡು ಬರುವ ಸಾಮಾಜಿಕ ಕಳಕಳಿ, ದಲಿತ ಲೋಕದ ನೋವು, ಇಡೀ ಕಥಾ ಸಾಹಿತ್ಯದಲ್ಲಿ ಅವರು ಬಳಸಿರುವ ಹೊಸ ಪ್ರಯೋಗ ಶೀಲತೆ ಯಾವುದೇ ಒಂದು ವಸ್ತುವನ್ನು ಘಟನೆಯನ್ನು ಚಿಂತನೆಯಿಂದ ಕಟ್ಟಿಕೊಡುವ ಹೊಸ ಸ್ವರೂಪ ಮೆಚ್ಚುವಂತದ್ದು. ದೇವನೂರು ಮಹಾದೇವರ ನಂತರ ದಲಿತ ಬದುಕಿನ ಅನನ್ಯತೆಯನ್ನು ತಮ್ಮ ವಿಶಿಷ್ಟ ಶೈಲಿಯ ಮೂಲಕ ಕಟ್ಟಿಕೊಡುವ ಮತ್ತೊಬ್ಬ ಸಮರ್ಥ ಕಥೆಗಾರ ಮೊಗಳ್ಳಿ ಗಣೇಶರೆಂದರೆ ಅತಿಶಯೋಕ್ತಿಯೆನಲ್ಲ.

**೪.೭. ಇತರ ದಲಿತ ಕಥಾಜಗತ್ತು**

''ಸುಬ್ಬು ಹೊಲೆಯರ್ ಅವರ 'ದನಕಾಯದವನು' ಈ ಕತೆ ಆತ್ಮಕಥನದಂತಿರುವ ಪುಟ್ಟಕತೆ. ಗ್ರಾಮೀಣ ಭಾರತದ ದಲಿತರ ಸಂಕಟದ ಅನುಭವಗಳನ್ನು ತುಳಿತಕ್ಕೆ ಒಳಗಾದ ಜನಾಂಗದ ಹತಾಶೆಯ ಭಾವಸ್ಥಿತಿಗಳನ್ನು ಕತೆ ಅರ್ಥಪೂರ್ಣವಾಗಿ ಕಟ್ಟಿಕೊಡುತ್ತದೆ. ದಲಿತ ಜನಾಂಗದ ಒಬ್ಬ ಬಾಲಕನಲ್ಲಿ ವಿದ್ಯೆ ಕಲಿಯಬೇಕೆಂಬ ಹಂಬಲ ಅದಮ್ಯವಾಗಿರುವಾಗ ಆತನ ತಾಯಿಗೌಡರ ಮನೆಯಲ್ಲಿ ಸಗಣಿ ಬಳಿಯುವ ಚಾಕರಿಯಲ್ಲಿರುತ್ತಾಳೆ. ಆತನಿಗೆ ಶಾಲೆಗೆ ಹೋಗಲು ಪೆನ್ನಿಗೆ ಇಂಕ್ ಹಾಕಿಸಿಕೊಳ್ಳಲು ಐದು ಪೈಸೆ ಕೇಳಲು ತಾಯಿ ಚಾಕರಿಯಲ್ಲಿದ್ದ ಗೌಡರ ಮನೆಗೆ ಬರುತ್ತಾನೆ. ಗೌಡತಿ ಈ ಹುಡುಗನನ್ನು ಕಂಡು 'ಏ..ತಿಪ್ಪಿ ಇವ್ನೆ ಎನೇ ನಿನ್ಮಗ ಎಷ್ಟು ಉದ್ದ ಬೆಳೆದ್ಬಿಟ್ಟಿದ್ದಾನೆ ನಮ್ಮನೆ ದನಿಗಾರುಹಾಕೆ' ಅವ್ವ 'ಇಲ್ಲಿ ಕನಿಯಮ್ಮ ಅವನ್ನ ಇಸ್ಕೂಲಿಗೆ ಕಳಸ್ತಾಇದ್ದೀನಿ'. 'ಓಹೊ... ಇವೆಲ್ಲಾ ಓದಿ ನಿಂಗೆ ಅನ್ನ ಹಾಕ್ತವೇನೋ ''ಅಯ್ಯೋ.. ತಗಳಿ ಅನ್ನಹಾಕ್ತವೆ ಅಂತಲೇ ಸಾಕ್ತೀವ, ಓದಿಸ್ತೀವ, ಓದಗಂಟ ಓದ್ಲಿ ಆಮೇಲೆ ಕೂಲಿ ಮಾಡ್ಕಂಡು ತಿನ್ಲಿ. ಗೌಡಮ್ಮ ಅಸೂಯೆಯಿಂದಲೇ ನಿಮ್ಮಗೇನ್ ಬಿಡೆ ಏಳನೇಕ್ಲಾಸ್ ಓದಿದರೆ ಸಾಕು, ಬೀದಿ ಗುಡಿಸೋಕೆ ಸೇರಿಸ್ಕೋತಾರೆ.''[೧೯] ಈ ಮೇಲಿನ ಸಂಭಾಷಣೆಯಿಂದ ಒಬ್ಬ ನಿರ್ಗತಿಕ ದಲಿತ ಮಹಿಳೆಗೆ ಮಗನನ್ನು ಓದಿಸುವ ಹಂಬಲ, ಅದಕ್ಕೆ ಗೌಡತಿ ನೀಡುವ ನಿರ್ಲಕ್ಷ್ಯ ಉತ್ತರ, ದಲಿತರ ಓದುವ ಹಂಬಲಕ್ಕೆ ತಣ್ಣೀರೆರಚಲು ಪ್ರಯತ್ನಿಸುವ ಹುನ್ನಾರ ಕತೆಯಲ್ಲಿದೆ. ಗೌಡತಿ ತೂತು ಬಿದ್ದ ಚಿಪ್ಪಿನಲ್ಲಿ ಬಿಸಿ ಬಿಸಿಯಾದ ಚಹಾ ತಂದು ಸುರಿಯುತ್ತಾಳೆ. ಚಹಾ ಸೋರಿ ಮೈಯೆಲ್ಲಾ ಬೀಳುತ್ತದೆ. ಒಲ್ಲದ ಮನಸ್ಸಿನ ಒಬ್ಬ ದಲಿತ ಹುಡುಗನೊಬ್ಬನು ಅಕ್ಷರ ಲೋಕದ ಬಗ್ಗೆ ಇರುವ ಕನಸುಗಳನ್ನು ಮುರುಟಿ ಹಾಕುವ ಉಳ್ಳವರ ಅಟ್ಟಹಾಸ ಈ ಕತೆಯಲ್ಲಿದೆ. ಕತೆಗಾರರ ಆತ್ಮಕಥನದಂತಿರುವ ಈ ಪುಟ್ಟಕತೆ ಕಲಿತ ಹುಡುಗನೊಬ್ಬನ ಈಡೇರದ ಕನಸಿನ ನೋವು ಇಲ್ಲಿ ಕತೆಯಾಗಿದೆ. ಆತನ 'ಅವ್ವ ಗೌಡತಿ ಜೊತೆ ಏನೇನು ಮಾತಾಡುತ್ತಿದ್ದಾಗ ನಾನು ಇಂಕಿಗೂ ಕಾಸು ಕೇಳದೆ ಓಡಿಹೊಗಿದ್ದೆ'ಯೆಂದು ಕತೆಯ ಕೊನೆಯ ಸಾಲುಗಳಿವೆ. ಈ ಸಾಲುಗಳಲ್ಲಿ ದಲಿತ ಹುಡುಗ ತನ್ನನ್ನು ಜೀತಕ್ಕೆ ನೂಕಿದರೆ ಹೇಗೆಂಬ ಭಯ ಆತನ ಓಟದಲ್ಲಿದೆ. ಜೀತದ ಪ್ರತಿಭಟನೆಯ ಓಟವೂ ಈ ಕತೆಯಿಂದ ವ್ಯಕ್ತವಾಗುತ್ತದೆ.

ಬಿ.ಚಿನ್ನಸ್ವಾಮಿಯವರ 'ಮೂಗನಪಾಡು' ಕತೆ ದಲಿತ ಸಂವೇದನೆಯನ್ನು ಒಳಗೊಂಡಿದ್ದು ದಲಿತ ಜನಾಂಗದ ಜೀತಗಾರನಾದ ಮೂಕ ಬಸವನ ಅಂತಃಕರಣದ ಕತೆಯೂ ಹೌದು. ರಾಚಮ್ಮನ ಏಕೈಕ ಪುತ್ರನಾದ ಮೂಕ ಬಸವ ಜನರ ಬಾಯಲ್ಲಿ ಮೂಗ ಬಸವನಾಗಿ ನಂತರ ಮೂಗನಾಗಿ ಎಲ್ಲರ ಬಾಯಲ್ಲಿ ನಿಂತವನು.

ದಲಿತ ಜನಾಂಗದ ಮೂಗ ಚಲುವೇಗೌಡರ ಹಟ್ಟಿಯಲ್ಲಿ ಜೀತಕ್ಕಿದ್ದವನು ಹಟ್ಟಿಯ ಇತರೆ ಮೂಕ ಪ್ರಾಣಿಗಳಂತೆ ಈತನು ಮೂಕ ಪ್ರಾಣಿಯಂತಾದವನು. ಗೌಡರ ಹಟ್ಟಿಯಲ್ಲಿದ್ದ ಕಾಳನೆನ್ನುವ ಹೋರಿ ಇತನಿಗೆ ಕೊರಳಾಗಿತ್ತು. ಕಾಳನಿಗೆ ಬೆಳ್ಳಿಯೆಂಬ ಹೋರಿಯನ್ನು ಸಂತೆಯಿಂದ ಮೂಗ ಹುಡುಕಿ ತಂದು ಜೋಡಿಸಿದ್ದ, ಇದ್ದಕ್ಕಿದ್ದಂತೆ ಕಾಳನೆಂಬ ಹೋರಿಗೆ ರೋಗ ತಗುಲಿ ಚಿಕಿತ್ಸೆಗೆ ಗುಣಮುಖವಾಗದೆ ಸತ್ತೇ ಹೋಗುತ್ತದೆ. ಇದರಿಂದ 'ಮೂಗ'ನಿಗೆ ಪ್ರೀತಿಯ ಗೆಳೆಯನನ್ನು ಕಳೆದುಕೊಂಡಷ್ಟು ದುಃಖವಾಗುತ್ತದೆ. ಕಾಳನೆಂಬ ಹೋರಿ ಸತ್ತಾಗ ದಲಿತ ಕೇರಿಗೆ ಸಡಗರ ಸಂಭ್ರಮವಾಗುತ್ತದೆ. ಕಾರಣ ಅದರ ಮಾಂಸದ ರುಚಿ ಅವರ ಬಾಯಲ್ಲಿ ನೀರು ತರಿಸುತ್ತದೆ. ದಲಿತರಿಗೆ ಸತ್ತದನಗಳ ಮಾಂಸವೇ ಅವರ ಜೀವಕ್ಕೆ ಆಹಾರವಾಗಿರುತ್ತದೆ. ಸತ್ತ ಹೋರಿಯ ಮಾಂಸ ಎಲ್ಲಾ ಮನೆಯನ್ನು ಮುಟ್ಟುತ್ತದೆ. ರಾಚಮ್ಮನ ಮನೆಗೂ ಮಾಂಸದ ಪಾಲು ಬರುತ್ತದೆ. ಆಕೆ ಸಂಭ್ರಮದಿಂದ ಅಡುಗೆ ಮಾಡಿ ಮಗ ಮೂಗನಿಗಾಗಿ ಹುಡುಕುತ್ತಾಳೆ. ಮೂಗನಿಗೆ 'ಕಾಳ'ನ ಸಾವು ತಲ್ಲಣಗೊಳಿಸಿದೆ. ಆದೇ ಚಿಂತೆಯಲ್ಲಿ ಮನೆಗೆ ಬಂದಾಗ ತಾಯಿ ನೀಡಿದ ಕಾಳನೆಂಬ ಹೋರಿಯ ಮಾಂಸ ತಿನ್ನಲು ಹೋಗಿ ಜೀವದ ಗೆಳೆಯ ಕಾಳನೇ ಕೊಂಬಿನಿಂದ ಎದೆಗೆ ತಿವಿದಂತಾಗಿ ಹೌಹಾರಿ ಬಿದ್ದು ಪ್ರಜ್ಞೆ ತಪ್ಪುತ್ತಾನೆ. ತಾಯಿಯ ರೋಧನ ಮುಗಿಲು ಮುಟ್ಟುತ್ತದೆ.

ಈ ಕತೆಯಲ್ಲಿ ಜೀತಗಾರನಾದ ದಲಿತ 'ಮೂಗನ ಪಾಡು' ಸಾಮಾಜಿಕ ವ್ಯವಸ್ಥೆಯ ಕರಾಳ ಸಂಕೇತವಾಗಿದೆ. ಗೌಡರ ಹಟ್ಟಿಯ ಜೀತಕ್ಕಿರುವ ಮೂಗ ಗೌಡರ ಹಟ್ಟಿಯ ಪ್ರಾಣಿಗಳಂತೆಯೇ ಬದುಕಿರುವುದು ಗ್ರಾಮೀಣ ಭಾರತದ ದಲಿತರ ಚಿತ್ರಣವೇ ಆಗಿದೆ. ದಲಿತರ ನೋವಿನ ಸಾಮಾಜಿಕ ಬದುಕನ್ನು ಕತೆ ಸಮರ್ಥವಾಗಿ ನಿರೂಪಿಸುತ್ತದೆ.

''ಸೋಮಣ್ಣ ಹೊಂಗಳ್ಳಿಯವರು ಇತ್ತೀಚೆಗೆ ಬರೆಯುತ್ತಿರುವ ಕತೆಗಾರರು ದಲಿತ ಸಂವೇದನೆಯಿಂದ ರಚಿತವಾದ ''ಕೊಟ್ಟಿಗೆಗೆ ಬಂದ ಕಡಸು'' ಈ ಕತೆಯಲ್ಲಿ ಸಿದ್ದನೆಂಬ ದಲಿತ ದಾಸೇಗೌಡರ ಮನೆಯಲ್ಲಿ ಜೀತಕ್ಕಿದ್ದವನು. ಈತ ಹುಟ್ಟುವ ಮೊದಲೇ ತಂದೆ ತೀರಿದ್ದ, ತಾಯಿಯ ಆರೈಕೆಯಲ್ಲಿ ಬೆಳೆದ ಸಿದ್ಧ ಗೌಡರ ನಿಷ್ಠೆಯ ಬಂಟನಾಗಿ ಮನೆಯ ಮಗನಂತೆ ದುಡಿದವನು. ಆದರೆ ಊರಿನ ಜನ ಯಾವಾಗಲೂ ಸಿದ್ದನನ್ನು ಗೌಡರ ಮಗಳು ಭಾಗ್ಯಳ ಜೊತೆ ಸಂಬಂಧ ಕಲ್ಪಿಸಿ ರೇಗಿಸುತ್ತಿದ್ದರು. ಒಮ್ಮೆ ಗೌಡರ ಕೊಟ್ಟಿಗೆಯ ಹಸು ಕಳೆದಾಗ ಇನ್ನಿತರೆ ಜೀತದಾಳುಗಳೊಂದಿಗೆ ಹಸು ಹುಡುಕಲು ಹೊಲಗಳಲ್ಲಿ ಹೋದಾಗ. ಗೌಡರ ಹೊಲದ ಹುಲ್ಲಿನ ಬಣವೆಯ ಸಂಧಿಯಲ್ಲಿ ಸಿದ್ಧನ ಚಿಕ್ಕಪ್ಪನ ಮಗ ರಾಮನೊಂದಿಗೆ ಚಕ್ಕಂದವಾಡುತ್ತಿದ್ದ ಗೌಡರು ಮಗಳು ಭಾಗ್ಯಳನ್ನು ನೋಡುತ್ತಾನೆ. ಸುದ್ದಿ ಗೌಡರಿಗೆ ತಿಳಿಸದೆ ಗುಟ್ಟಾಗಿಟ್ಟರೂ ಕೊನೆಗೆ ಭಾಗ್ಯ ರಾಮನೊಂದಿಗೆ ಊರು ಬಿಡುತ್ತಾಳೆ. ರಾಮ ಪಕ್ಕದೂರಿನ ಅಕ್ಕನ ಮನೆಯಲ್ಲಿರುವುದು ಗೊತ್ತಾಗುತ್ತದೆ. ಗೌಡ ಹಿಡಿದು ತರಿಸುತ್ತಾನೆ. ಊರಿನಲ್ಲಿ ಉದ್ರಿಕ್ತ ಜನ ದಲಿತ ಕೇರಿಗೆ ಬೆಂಕಿ ಹಚ್ಚುತ್ತಾರೆ. ರಾಮನ ತಾಯಿಯನ್ನು ಪ್ರಜ್ಞೆ ತಪ್ಪುವವರೆಗೂ ಒಡೆದಿರುತ್ತಾರೆ. ಇತ್ತ ಗೌಡತಿ ಮಗಳ ಕೃತ್ಯಕ್ಕೆ ಹಾಸಿಗೆ ಹಿಡಿದಿರುತ್ತಾಳೆ. ಕೊನೆಯಲ್ಲಿ ಪೋಲೀಸರು ಗೌಡರಿಗೆ ''ನೀವೇ ನಿಂತು ಮದುವೆಮಾಡಿ' ಇಲ್ಲ ಸರ್ಕಾರಿ ಕಾನೂನಿನ ಪ್ರಕಾರ ಕೋರ್ಟಿಗೆ ಮೊಕದ್ದಮೆ ಹೂಡಲೋ''[೨೦] ಎಂದಾಗ ಗೌಡರು ಮೌನವಾಗುತ್ತಾರೆ. ರಾಮ

ತಾಯಿಯನ್ನು ಕಳೆದುಕೊಳ್ಳುತ್ತಾನೆ. ಆದರೆ ಭಾಗ್ಯಳ ಹೊಟ್ಟೆಯಲ್ಲಿ ಮೂರು ತಿಂಗಳ ಚೈತನ್ಯದ ಕುಡಿ ಬೆಳೆಯುತ್ತಿರುವುದು ಯಾರಿಗೂ ಗೊತ್ತಾಗುವುದಿಲ್ಲ.

ಈ ಕತೆಯಲ್ಲಿ ಸೋಮಣ್ಣ ಹೊಂಗಳ್ಳಿಯವರು ಪ್ರೀತಿ-ಪ್ರೇಮದ ಸಹಜ ಕತೆಯಂತೆ ಈ ಕತೆ ಬರೆದರೂ ದಲಿತ ಜನಾಂಗವೊಂದು ಮೇಲಸ್ತರದ ಜನರೊಂದಿಗೆ ಹೋರಾಡುವ ಗುಣ ಬೆಳೆಸಿಕೊಳ್ಳುತ್ತಿರುವ ಕಾಲಮಾನವನ್ನು ಇಲ್ಲಿ ಚಿತ್ರಿಸಿದ್ದಾರೆ. ದಲಿತ ಸಂಸ್ಕೃತಿಯ ಹಿಂದೆ ಜಮಿನ್ದಾರ ಅಟ್ಟಹಾಸ ಇನ್ನು ಜೀವಂತವಿರುವ ಕ್ಷಣಗಳನ್ನು ಕತೆಯಲ್ಲಿ ತಂದಿದ್ದಾರೆ. ಭಾಗ್ಯಳ ನಿರ್ಧಾರ ಜಾತಿಗೋಡೆ ದಾಟಿ ನಿಲ್ಲುವುದು ಕತೆಗೆ ಹೊಸ ತಿರುವು ನೀಡಿದಂತಿದೆ. ಗೌಡರು ಕಳೆದು ಹೋದ ಹಸು ಕೊಟ್ಟಿಗೆಗೆ ಬಂದಿರುವುದು ಹೊಸಕರುವಿನ ಜನ್ಮದೊಂದಿಗೆ. ಹಾಗೇ ಮಗಳು ಕೊಟ್ಟಿಗೆಗೆ (ಮನೆಗೆ) ಬಂದಿರುವುದು ಹೊಸ ಜನ್ಮದ ಶಿಶುವನ್ನಿಟ್ಟುಕೊಂಡು. ಕತೆ ಶೀರ್ಷಿಕೆ ಎರೆಡೂ ಅರ್ಥಭಾವ ಸಂಬಂಧಗಳ ಸಂಕೇತವಾಗಿ ಮೂಡಿ ಬಂದು ಕತೆಗೆ ಹೊಸ ಭಾವತುಂಬುತ್ತದೆ. ದಲಿತ ಜನಾಂಗದ ನೋವಿನ ನೆಲೆಗಳ ಮಗ್ಗಲುಗಳನ್ನು ಕತೆ ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದೆ.

ಜನಾರ್ಧನ ಎರ್ಪಕಟ್ಟೆಯವರ ಇತ್ತೀಚೆಗೆ ದಲಿತ ಸಂವೇದನೆಯೊಂದಿಗೆ ಬರೆಯುತ್ತಿರುವ ಕತೆಗಾರರು ಇವರ "ಅಸ್ಪೃಶ್ಯ" ಕತೆ ಬ್ರಾಹ್ಮಣ-ದಲಿತ ಜನಾಂಗಗಳ ಮಧ್ಯೆದ ಅಂತರ ವ್ಯಕ್ತಿತ್ವಗಳನ್ನು ಶೋಧಿಸುತ್ತದೆ. ಈ ಕತೆಯಲ್ಲಿ ಬರುವ ಬ್ರಾಹ್ಮಣ ಶಂಭಟ್ಟರ ಮಡಿವಂತಿಕೆಯ ಮನಸ್ಸಿನ ಸಂಪ್ರದಾಯದ ಭಾವಸ್ಥಿತಿಗಳನ್ನು ಕತೆಗಾರರು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಶಂಭಟ್ಟರ ಮಗ ಪಂಚಾಯ್ತಿಯ ಪ್ರೆಸಿಡೆಂಟರಾಗಿ ಜಾತಿ ಭೇದಗಳನ್ನು ಮೀರಿ ಅಧಿಕಾರದ ಸೂತ್ರ ಹಿಡಿಯಲು ಹವಣಿಸಿದರೆ ಸೊಸೆ 'ಸಾವಿತ್ರಿ' ಬ್ರಾಹ್ಮಣರ ಮಡಿವಂತಿಕೆ ಕೆಲ ಆಚಾರ-ವಿಚಾರಗಳ ಮೇಲೆ ಹಿಡಿತ ಸಡಿಲಿಸಿ ಎಲ್ಲಾ ಜಾತಿಗಳೊಂದಿಗೆ ಸಾಮರಸ್ಯ ಸಾಧಿಸಲು ಮುಂದುವರಿದರೆ ಮಾವ ಶಂಭಟ್ಟರ ಸಿಟ್ಟು ಆಕೆಯನ್ನು ಮೌನವಾಗಿಸುತ್ತದೆ. ಮಾದಿರ ಲಿಂಗಿಯನ್ನು ಸೊಸೆ ಅಂಗಳದ ತುಳಸಿ ಕಟ್ಟೆಯ ಪಕ್ಕ ನಿಲ್ಲಿಸಿಕೊಂಡು ಮಾತನಾಡಿದ್ದು ಶಂಭಟ್ಟರಿಗೆ ಸಿಟ್ಟು-ಅಸಹ್ಯ ತರಿಸುತ್ತಿದೆ. ಅದೇ ಮಾದಿಗರ ಲಿಂಗಿಯ ಮಗ ಓದಿ ತಹಶೀಲ್ದಾರನಾಗಿದ್ದು ತಿಳಿದು ಭಟ್ಟರು ಕುದ್ದು ಹೋಗುತ್ತಾರೆ. ಪ್ರೆಸಿಡೆಂಟನಾದ ಮಗ ಈ ತಹಶೀಲ್ದಾರನೊಂದಿಗೆ ಗಾಂಧಿಯ ತತ್ವಗಳನ್ನು ಅನುಷ್ಠಾನಕ್ಕೆ ತರಲು ದೇವಾಲಯಗಳ ಪ್ರವೇಶ-ಮಿಶ್ರಭೋಜನ ವ್ಯವಸ್ಥೆಯ ಕಾರ್ಯಕ್ರಮಗಳನ್ನು ಹಾಕಿಕೊಂಡಾಗ ಭಟ್ಟರು ಉರಿದು ಹೋಗುತ್ತಾರೆ. ಅದೇ ಮಾದಿರ ಲಿಂಗಿಯ ಮಗ ತಹಶೀಲ್ದಾರನಾಗಿ ಭಟ್ಟರ ಮನೆಯ ಅತಿಥಿಯಾಗಿ ಬಂದು ಅಂಗಳದಲ್ಲಿ ನಿಂತಾಗ ಭಟ್ಟರ ಉರಿಗಣ್ಣುಗಳನ್ನು ಕಂಡು ತಹಶೀಲ್ದಾರ ಸಾಹೇಬ ಭಟ್ಟರ ನಂಬಿಕೆಗಳಿಗೆ ವಿರೋಧವಾಗದೆ, ಮನ ನೋಯಿಸದೆ ಹೋದಾಗ, ಅಸ್ಪೃಶ್ಯನಾದ ಲಿಂಗಿಯ ಮಗನ ಗುಣದ ಮುಂದೆ ಶಂಭಟ್ಟರೆ ಅಸ್ಪೃಶ್ಯರಂತೆ ಕಾಣುತ್ತಾರೆ.

ಈ ಕತೆಯಲ್ಲಿ ದೇವಸ್ಥಾನ ಪ್ರವೇಶ ಮಾಡದ ತಹಶೀಲ್ದಾರ, ದಲಿತರ ಅನನ್ಯ ಸುಸಂಸ್ಕೃತ ವ್ಯಕ್ತಿಯಂತೆ ಕಂಡುಬರುತ್ತಾನೆ. ಕತೆ ಯಥಾಸ್ಥಿತಿವಾದವನ್ನು ಮಂಡಿಸುವಂತೆ ಕಂಡು ಬಂದರೂ ಸವರ್ಣೀಯರ ಮನಸ್ಸು ಬದಲಾವಣೆ ಮಾಡಬೇಕಾದ ಅನಿವಾರ್ಯತೆಯೂ ಇದೆಯೆಂಬ ತಾತ್ವಿಕತೆಯಲ್ಲಿ ವ್ಯಕ್ತವಾಗಿದೆ.

ಜನಾರ್ಧನ ಎರ್ಪಕಟ್ಟೆಯವರ ಈ ಕತೆಯಲ್ಲಿ ಜಾತಿಯ ವಿಷ ಭೀಜದ ದುರಂತ ಫಲವನ್ನು ಕತೆಯ ಹಂದರದಲ್ಲಿ ಸಂದೇಶವಾಗಿಸಿದ್ದಾರೆ. ಜೊತೆಗೆ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾದೇಶಿಕ ಉಪಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ಸ್ವಾತಂತ್ರ್ಯ ಬಂದು ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡ ಈ ನಾಡಿನಲ್ಲಿ ಜಾತ್ಯಾತೀತ ಸಮಾಜವನ್ನು ಕಟ್ಟಲಾಗದ ದಾರುಣ ಸ್ಥಿತಿಯನ್ನು ಇಂದಿಗೂ ಗ್ರಾಮೀಣ ಜಗತ್ತಿನಲ್ಲಿ ಅಸ್ಪೃಶ್ಯ ಜನಾಂಗದವರ ನೋವಿನ ಬದುಕು ಆ ಬದುಕಿನ ಸಂಕಟಗಳನ್ನು ಕತೆ ಮಾರ್ಮಿಕವಾಗಿ ವಿಶ್ಲೇಷಿಸುತ್ತದೆ.

ಕನ್ನಡ ರಂಗಭೂಮಿಯ, ಅದರಲ್ಲೂ ಮೈಸೂರು ರಂಗಾಯಣ ಚಟುವಟಿಕೆಗಳಲ್ಲಿ ಸದಾ ಕ್ರಿಯಾಶೀಲವಾಗಿರುವ ರಂಗಾಯಣದ ನಿರ್ದೇಶಕರಾಗಿ ಅನೇಕ ಅತ್ಯುತ್ತಮ ರಂಗ ನಾಟಕಗಳನ್ನು ನಿರ್ದೇಶಿಸಿರುವ ಸಿ.ಬಸವಲಿಂಗಯ್ಯನವರ ''ಗಾಳಿಪಟ' ಕತೆ ದಲಿತ ಜನಾಂಗದ ಬದುಕು ಗಾಳಿಪಟದಂತೆ ಸದಾ ಅತಂತ್ರವಾಗಿರುವ ಸ್ಥಿತಿಯನ್ನು ಈ ಕತೆಯಲ್ಲಿ ನಿರೂಪಿಸಿದ್ದಾರೆ.

ಇವರ 'ಗಾಳಿಪಟ' ಕತೆ ಇಂದಿನ ದಲಿತರ, ದಲಿತ ಕೇರಿಗಳ ದುರಾವಸ್ಥೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಈ ಕತೆಯ ಕಾಳಗಟ್ಟವ್ವ ಒಬ್ಬ ದಲಿತ ಮಹಿಳೆ ಆಕೆಯೂ ಗಂಡ ಕಾರೆ ಬಕ್ಕನೂ ಗಾರೆಯ ಕೆಲಸಕ್ಕೆ ಹೋಗಿ ಅದರಿಂದ ಉಪಜೀವನ ಮಾಡುತ್ತಿದ್ದವರು. ಒಮ್ಮೆ ತಾನು ಕೆಲಸ ಮಾಡುತ್ತಿದ್ದ ಕಾಂಟ್ರಕ್ಟರ್‌ನೊಂದಿಗೆ ಜಗಳವಾಡಿ ಆತನನ್ನು ಕೊಲೆ ಮಾಡಿ ನಾಪತ್ತೆಯಾಗುತ್ತಾನೆ, ನಂತರ ಸಾಮಾಜಿಕ ಅಸಮಾನತೆಯ ವಿರುದ್ಧ ಬಂಡೆದ್ದು ನಕ್ಸಲೈಟ್ ಚಳುವಳಿಯಲ್ಲಿ ಭಾಗವಹಿಸುತ್ತಾನೆ. ತಾಯಿ ಕಾಳಗಟ್ಟವ್ವ ಗಂಡ ಮನೆತೊರೆದು ಹೋದ ನಂತರ ಮಗ ಚುಂಚನನ್ನು ಕೂಲಿನಾಲಿ ಮಾಡಿ ಸಾಕುತ್ತಾಳೆ. ಆದರೆ ಕಾರೆಬಕ್ಕ ತಿಂಗಳಿಗೊಮ್ಮೆ ಪೋಲಿಸರ ಕಣ್ಣು ತಪ್ಪಿಸಿ ತಿಂಗಳಿಗೊಮ್ಮೆ ಮಧ್ಯರಾತ್ರಿಯಲ್ಲಿ ಮನೆಗು ಬಂದು ಹೋಗುತ್ತಿರುತ್ತಾನೆ. ಒಮ್ಮೆ ಪೋಲಿಸರಿಗೂ ನಕ್ಸಲೈಟರಿಗೂ ನಡೆದ ಗುಂಡಿನ ಕಾಳಗದಲ್ಲಿ ಕಾರೆ ಬಕ್ಕ ಪೋಲಿಸರ ಗುಂಡೇಟಿಗೆ ಸತ್ತುಹೋಗುತ್ತಾನೆ. ಗಂಡನ ಸಾವಿನಲ್ಲಿ ಕಾಳಗಟ್ಟವ್ವ ತತ್ತರಿಸಿ ಹೋಗುತ್ತಾಳೆ. ಅವಳ ಬದುಕು ಗಾಳಿಪಟದಂತೆ ತೂರಾಡತೊಡಗುತ್ತದೆ. ಆಕೆ ಗಂಡಿನಂತೆ ದುಡಿದು ಮನೆ ತೂಗಿಸಿಕೊಂಡು ಹೋಗುತ್ತಾಳೆ. ಕತೆಯ ಕೊನೆಯಲ್ಲಿ ಪೋಲಿಸರು ಕಾಳಗಟ್ಟವ್ವಳ ಮನೆಗೆ ನುಗ್ಗಿ ಮನೆ ಶೋಧಿಸಿ ಕೇಳಬಾರದ ಪ್ರಶ್ನೆಗಳನ್ನು ಕೇಳುತ್ತಾ ಚುಂಚನ ಅಜ್ಜ, ತಾಯಿಯನ್ನು ತಳಿಸತೊಡಗುತ್ತಾರೆ. ಕೇರಿಯ ಹುಡುಗರು ಈ ಘಟನೆಯನ್ನು ಗಾಳಿಪಟ ಆಡಿಸುತ್ತಿದ್ದ ಚುಂಚನಿಗೆ ಹೇಳಿದರೂ ಆತನ ಲಕ್ಷವೆಲ್ಲಾ ಬಾನಿನಲ್ಲಿ ಸ್ವೇಚ್ಛೆಯಾಗಿ ಹಾರುತ್ತಿದ್ದ ಗಾಳಿಪಟದ ಮೇಲಿರುತ್ತದೆ. ಕಾಳಗಟ್ಟವ್ವ, ಚುಂಚನ ಅಜ್ಜ ಪೋಲಿಸರ ವಶವಾಗುತ್ತಾರೆ. ದಲಿತ ಕೇರಿಯ ಸಿದ್ದೀರಕ್ಕನ ಮಗಳು ಮಂಗಿ ಬಂದು ''ಚುಂಚಾ-ಲೇ ಚುಂಚಾ ನಿಮ್ ಅಟ್ಟಿ ತಾವಾ ಪೋಲಿಸ್ರು ಬಂದು ನಿಮ್ಮವ್ವನೂ ಅಜ್ಜನ್ನೂ ವಡ್ದು ಎಳ್ಕೊಂಡೋಯ್ತುವ್ರೆ ಚುಂಚಾ..ಲೇ ಚುಂಚಾ''[೨೫] ಅಂತಿದ್ದರೂ ಅವನ ನೋಟ ಗಾಳಿಪಟದ ಮೇಲಿತ್ತು. ಈ ಕತೆಯಲ್ಲಿ ದಲಿತ ಕೇರಿಗಳು ದಲಿತರ ಕರಾಳ ಸಾವು ಬದುಕಿನ ಚಿತ್ರಣ ಇಲ್ಲಿದೆ.

ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಬಹುಮುಖ್ಯ ಬರಹಗಾರರಾಗಿ ದಲಿತ ಕವಿಯೆಂದೇ ಖ್ಯಾತರಾದ ಸಿದ್ಧಲಿಂಗಯ್ಯನವರು ದಲಿತ ಸಾಹಿತ್ಯ ಚಳುವಳಿಯ ಮುಂಚೂಣಿಯಲ್ಲಿದ್ದವರು. ದಲಿತ ಸಂವೇದನೆಯೊಂದಿಗೆ ರಚಿಸಿದ 'ಮತಾಂತರ' ಕತೆಯಲ್ಲಿ ದಲಿತರ ಪಾಡು, ಅವರು ಅನುಭವಿಸಿದ ನೋವಿನ ಬದುಕು ಇಲ್ಲಿದೆ. ಕತೆಗಾರರು ಗೆಳೆಯರೊಂದಿಗೆ ಆತನ ಊರಾದ ಆದಿಪುರಕ್ಕೆ ಬರುತ್ತಾನೆ. ಅಲ್ಲಿಯೂ ಆತನಿಗೆ ಹೊಲೆಯರ ಬದುಕಿನ ದೀನಸ್ಥಿತಿಯ ಅರಿವಾಗುತ್ತದೆ. ''ಗುಡಿ, ಸಾರ್ವಜನಿಕ ಕುಡಿಯುವ ನೀರಿನ ಬಾವಿಯಿಂದ ವಂಚಿತರಾದ'' ದಲಿತರು ಸಾಮಾಜಿಕ ಸೌಲಭ್ಯಗಳಿಗಾಗಿ ಕ್ರಿಶ್ಚಿಯನ್ನರಾಗಿ ನಂತರ ಮುಸ್ಲಿಂ ಜನಾಂಗಕ್ಕೆ ಮತಾಂತರ ಹೊಂದುತ್ತಾರೆ.

ಲೇಖಕರು ಜಾತಿಸಂಕರದ ವಿಷಬೀಜಗಳನ್ನು ಗ್ರಾಮೀಣ ಭಾರತದಿಂದ ಕಿತ್ತೊಗೆಯಬೇಕೆಂಬ ಧೋರಣೆ ಕತೆಯಲ್ಲಿದ್ದರೂ ಕತೆಗಾರರು ಆದಿಪುರದಲ್ಲಿ ಕಾಣುವ ಜಾತಿಯ ವಿಷ ಬೀಜದ ದುರಂತ ಮುಖಗಳನ್ನು ಕತೆ ಮಾರ್ಮಿಕವಾಗಿ ಚಿತ್ರಿಸುತ್ತದೆ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ದಲಿತ ಸಂಸ್ಕೃತಿಯ ವಿವಿಧ ನೆರಳು ಹೇಗೆ ಪ್ರತಿಫಲನವಾಗುತ್ತಾ ಹೋಗುತ್ತೆಂಬುದನ್ನು ಸಾರುವುದರ ಜೊತೆಗೆ ರಮೇಶನ ಅಂತರಾಳದಲ್ಲಿ ಜಾತಿ ಪ್ರಜ್ಞೆ ಕ್ರಮೇಣ ನಾಶವಾಗುವ ಪರಿಯನ್ನು ಕತೆಯ ಹಂದರದಲ್ಲಿ ಚಿತ್ರಸಿದ್ದಾರೆ.

ಶ್ರೀಮತಿ ಬಿ.ಟಿ.ಲಲಿತಾನಾಯಕ ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಮಹತ್ವದ ಲೇಖಕಿ. ಪ್ರಸ್ತುತ ''ಹಬ್ಬ ಮತ್ತು ಬಲಿ'' ಗ್ರಾಮೀಣ ಜಗತ್ತಿನಲ್ಲಿ ನೆಡೆಯುವ ಮಾರಿಹಬ್ಬದ ಸಂದರ್ಭದಲ್ಲಿ ದಲಿತ ಜನಾಂಗದ 'ಸಣ್ಣು'ಯೆಂಬಾತ ಊರಮ್ಮನ ಹಬ್ಬಕ್ಕೆ ಮೇಕೆಯನ್ನು ಬಲಿಕೊಟ್ಟು ತನ್ನ ಗುಡಿಸಲಲ್ಲಿ ಸಂಭ್ರಮದಿಂದ ಹಬ್ಬ ಮಾಡಬೇಕೆಂದು ಊರಿನ ಸಾಹುಕಾರನಲ್ಲಿ ಸಾಲ ಕೇಳುತ್ತಾನೆ. ಸಾವುಕಾರ ಹೊಲ-ಮನೆಯಿಲ್ಲದ ಇವರಿಗೆ ಸಾಲ ಕೊಡಲಾರದವನು, ಇನ್ನೂರ ಐವತ್ತು ರೂಪಾಯಿಗೆ ಒಂದು ವರ್ಷ ತಮ್ಮ ಮನೆಯಲ್ಲಿ ಜೀತಕ್ಕಿರಬೇಕೆಂದು ಕರಾರು ಹಾಕಿದಾಗ ಸಣ್ಣು ಹೌಹಾರಿ ಕೊನೆಗೆ ಎಲ್ಲಾರಂತೆ ತಾನು ಮಕ್ಕಳಿಗೆ ಬಟ್ಟೆ ತಂದು ಬೀಗರನ್ನು ಕರೆದು ಬಾಡಿನೂಟಕ್ಕಾಗಿ ಅಮ್ಮನ ಕೃಪೆಗೆ ಪಾತ್ರನಾಗಬೇಕೆಂದು ಸಾಹುಕಾರರ ಮನೆಯಲ್ಲಿ ಜೀತಮಾಡಲು ಒಪ್ಪಿಬಿಡುತ್ತಾನೆ. ಸಾಲ ಪಡೆದು ಅದ್ದೂರಿಯಾಗಿ ಹಬ್ಬಮಾಡಿ ಮಾರನೇ ದಿನವೇ ಸಾಹುಕಾರ ಮನೆಯ ಜೀತದ ಬಲೆಯಲ್ಲಿ ಸಿಕ್ಕಿ ಕೊಳ್ಳುತ್ತಾನೆ.

ಈ ಕತೆಯಲ್ಲಿ ದಲಿತ ಜನಾಂಗವು ಶತ ಶತಮಾನಗಳಿಂದ ಶೋಷಣೆಗೆ ಬಲಿಯಾಗುತ್ತಲೇ. ಹಬ್ಬದ ಆಚರಣೆಯ ನೆಪದಲ್ಲಿ ಸಣ್ಣುನಂತವರು ಬದುಕನ್ನು ಕಳೆದುಕೊಳ್ಳುವ ಚಿತ್ರಣ ಕತೆಯಲ್ಲಿ ವ್ಯಕ್ತವಾಗಿದೆ. ಆರಂಭದಲ್ಲಿ ಹಬ್ಬ ಮತ್ತು ಮಾರಿ ಬಲಿಯ ಸಂಭ್ರಮದಲ್ಲಿ ನಲಿದ ದಲಿತ ಕುಟುಂಬ ಮಾರನೇ ದಿನವೇ ಜೀತದ ಬದುಕಿನ ಕರಾಳ ನೆರಳಿಗೆ ಬಲಿಯಾಗುವ ದೃಶ್ಯ ಶತಮಾನದ ಶೋಷಣೆಯನ್ನು ಕರುಳಿರಿಯುವ ಹಾಗೆ ಚಿತ್ರಿಸಿದ್ದಾರೆ.

''ಬಾನಂದೂರು ಕೆಂಪಯ್ಯನವರ 'ಬಿಟ್ಟಗೂಸ' ಕತೆ ಬಾಲ್ಯದ ಆತ್ಮಕಥನದಂತೆ ಬರೆದಿದ್ದಾರೆ. ತಮ್ಮ ಊರಿನಲ್ಲಿ ಶಾಲೆ ಪ್ರಾರಂಭವಾಗಿ ಎಲ್ಲಾರಿಗೂ ಶಿಕ್ಷಣ ಕಲಿಯುವ ಸದಾವಕಾಶ ದೊರೆತಾಗ ತಮ್ಮ ಗೆಳೆಯರೊಂದಿಗೆ ಶಾಲೆಗೆ ಹೋದಾಗ ದಲಿತ ಮಕ್ಕಳನ್ನು ಶಾಲೆಯ ಮಾಸ್ತರುಗಳು ತಿರಸ್ಕಾರದಿಂದ ನೋಡಿಕೊಳ್ಳುತ್ತಿದ್ದ ಬಗೆ ವಿವರಿಸಿದ್ದಾರೆ. ''ಲೇ ಹರಿಜನ ಹುಡುಗ್ರ ನೀವು ದಿನಾಲೂ ಸ್ನಾನ ಮಾಡ್ಕೊಂಡು ಪೂಜೆ ಮಾಡಿ ವಿಭೂತಿ ಇಟ್ಕೊಂಡು ಸ್ವಚ್ಛವಾದ ಬಟ್ಟೆ ಹಾಕಿಕೊಂಡು ಶಾಲೆಗೆ ಬರ್‍ಬೇಕು ತಿಳೀತಾ ಎಂದರು ನಂತರ ತರಗತಿಗೆ ಬಂದ ಸಹಶಿಕ್ಷಕ ಬಿಡದಿಯ ಹಾರುವರ ಪೈಕಿಯ ಕೃಷ್ಣಪ್ಪಮಾಸ್ತರು ಶೂದ್ರ ಮುಂಡೇವ ನೀವ್ ಮೊದ್ಲು ಮಾಂಸತಿನ್ನೋದ ಬಿಡಬೇಕು. ಆಮೇಲೆ ಕೊಳಕ್ತನ ಮಾಡೋದು ಬಿಡ್ಬೇಕು. ದಿನಾಸ್ನಾನ ಮಾಡ್ಕೊಂಡು ಶಾಲೆಗ ಬರ್‌ಬೇಕು'' " ಯೆನ್ನುವ ಮಾಸ್ತರರ ಮಾತಿಗೆ ಬೆಲೆಕೊಟ್ಟು ತಾವೆಲ್ಲಾ ಒಮ್ಮೆ ಗೌಡರ ತೋಟದ ಕಾಲುವೆಗೆ ಸ್ನಾನಮಾಡಲು ಹೋಗಿ ಅವಮಾನಕ್ಕೆ ತುತ್ತಾದ ಬಗ್ಗೆ ವಿವರಿಸಿದ್ದಾರೆ. ಊರ ಮುಳ್ಳು ಮುಖದ ಗೌಡ ದಲಿತ ಹೆಣ್ಣು ಮಗಳು ಕುಂಟೇರಿಯೊಂದಿಗೆ ಚಕ್ಕಂದವಾಡುತ್ತಿದ್ದದನ್ನು ಕಂಡು, ಭಯಗೊಂಡು ಓಡಿಹೋಗುತ್ತಿದ್ದಾಗ, ಗೌಡ ಇವರನ್ನು ಹಿಡಿದು ಕಂಡ ದೃಶ್ಯಯಾರಿಗೆ ಹೇಳ ಬಾರದೆಂದು ಪ್ರಾಣ ಹೋಗುವವರೆಗೂ ಕಿವಿ ಹಿಂಡಿ ಬಿಡುತ್ತಾನೆ. ಅಷ್ಟಕ್ಕೂ ಬಿಡದ ಗೌಡ ತಮ್ಮ ದಲಿತಕೇರಿಯ ಹಟ್ಟಿಯ ಬಳಿಗೆ ಬಂದು ತಂದೆ ತಾಯಿಗೆ ಚಾಡಿ ಹೇಳಿ ಅವರಿಂದ ಮತ್ತಿಷ್ಟು ಬಿಟ್ಟಿಗೂಸಗಳನ್ನು ಕೊಡಿಸುತ್ತಾನೆ.

ಈ ಕತೆಯಲ್ಲಿ ವಾಸಿಯಾಗದ ಕಾಯಿಲೆಯಲ್ಲಿದ್ದ ಹೆಂಡತಿಯೊಂದಿಗೆ ಬಾಳಲಾರದ ಗೌಡ ಊರ ಹೆಣ್ಣು ಮಕ್ಕಳೊಂದಿಗೆ ಹಾದರ ಮಾಡುತ್ತಾ ಗುಣವಂತನ ಸೋಗು ಹಾಕಿಕೊಂಡಿರುವುದು, ಶಿಕ್ಷಣವೆನ್ನುವುದು ದಲಿತರಿಗೆ ಯಕ್ಷ ಪ್ರಶ್ನೆಯಾಗುವ ಜೊತೆಗೆ ಅದು ಉಳ್ಳವರ ಶಿವಾಲಯವಾಗಿರುವುದು, ದಲಿತರ ಹಸಿವಿನ ಪ್ರಶ್ನೆ, ಜೀತಪದ್ಧತಿಯ ಪ್ರಶ್ನೆ, ಇಂದಿಗೂ ಒಗಟಾಗಿ ಉಳಿದಿರುವ ಪರಿಯನ್ನು ಕತೆ ಬಿಂಬಿಸುತ್ತದೆ.

''ವೀರಯ್ಯ ಕಾಡುಕೊತ್ತನಹಳ್ಳಿಯವರು ರಚಿಸಿದ 'ಮಂದಿರದಿಂದ ಮಸೀದಿಯಡೆಗೆ' ಈ ಕತೆ ಹಿಂದೂ-ಮುಸ್ಲಿಂ ಬಾವಕ್ಯತೆಯ ಮಾದರಿಯಂತೆ ಈ ಕತೆ ಕೊನೆಗೊಂಡರೂ ಕತೆಯ ನಾಯಕ ನಿಂಗಯ್ಯ ದಲಿತ ಸಮುದಾಯದ ವ್ಯಕ್ತಿಯಾಗಿದ್ದು ಪದವಿ ಶಿಕ್ಷಣ ಪಡೆದು ತನ್ನ ಹೆಸರನ್ನು ನವೀನ್‌ಯೆಂದು ಬದಲಾಯಿಸಿಕೊಂಡು ಹುಟ್ಟೂರಿಗೆ ಬರುತ್ತಾನೆ. ಊರಿನಲ್ಲಿ ಆತನಿಗೆ ದಲಿತ ಜನಾಂಗದ ನೋವು ಶೋಷಿತ ಬದುಕು ಕಾಡುತ್ತದೆ. ಊರಿನ ನಿಸರ್ಗದ ಮಧ್ಯೆ ಎಲ್ಲಾ ಮರೆಯಲು ಯತ್ನಿಸುತ್ತಿರುವಾಗ ತಮ್ಮ ಕುಟುಂಬದೊಂದಿಗೆ ಅನನ್ಯ ಸಂಬಂಧವಿದ್ದ ಖಲೀಲ್ ಸಾಹೇಬರ ಕುಟುಂಬ ಆತನಿಗೆ ಆತ್ಮೀಯವಾಗುತ್ತದೆ. ನಂತರ ಖಲೀಲ್‌ಸಾಹೇಬರ ಮಗಳು ಫಾತಿಮಾಳೊಂದಿಗೆ ನವೀನ್ ಪ್ರೀತಿಯ ಸಂಬಂಧ ಬೆಳೆದು ಮದುವೆಯ ಹಂತಕ್ಕೆ ಬಂದಾಗ, ಊರಿನ ಜನ ಪಂಚಾಯ್ತಿ ಸಭೆ ಸೇರಿಸಿ ನವೀನನನ್ನು ಊರು ಬಿಟ್ಟು ಹೋಗಲು ಪಾಟೇಲರು ಪಂಚಾಯ್ತಿಸಭೆಯಲ್ಲಿ ನುಡಿದಾಗ ಅದಕ್ಕೆ ನವೀನ್ ''ಪಾಟೇಲರೇ ನಾನು ಹಿಂದು ನಾವೆಲ್ಲಾ ಒಂದೇ ಎನ್ನುವುದಾದರೆ ನನ್ನಿಂದ ಹಿಂದೂ-ಮುಸ್ಲಿಂಮರಿಗೆ ದಕ್ಕೆಯಾಗುವುದಾದರೆ ನಮ್ಮ ಮತವನ್ನು ಕಾಯ್ದುಕೊಳ್ಳಲು ನಿಮಗಿರುವ ಒಬ್ಬ ಮಗಳನ್ನ ನನಗೆ ಮಗುವೆ ಮಾಡಿಕೊಡಿ''[೨೩] ಎಂದಾಗ ಪಾಟೇಲರ ಸಿಟ್ಟು ನೆತ್ತಿಗೇರಿ ದಲಿತ ಕೇರಿಯನ್ನು ಬೆಂಕಿಯಿಂದ ಸುಟ್ಟುಹಾಕುತ್ತಾರೆ. ದಲಿತರ ರೋಧನ ಮುಗಿಲು ಮುಟ್ಟುತ್ತದೆ. ಈ ಸಂದರ್ಭದಲ್ಲಿ ಹಿಂದೂಗಳಿಂದಲೇ ಅವಮಾನಕ್ಕೆ ತುತ್ತಾಗಿದ್ದ ದಲಿತರು ಮುಸ್ಲಿಮರಿಂದ ಸಹಾಯ ಆಸರೆಯನ್ನು ಪಡೆಯುತ್ತಾರೆ. ಮುಸ್ಲೀಮರ ಭಾತೃತ್ವ ಭಾವನೆಗಳಿಗೆ ಸಹ ಸ್ಪಂದಿಸಿದ ನವೀನನ ದಲಿತ ಸಮುದಾಯದ ಸಂಗಡಿಗರು ಒಗ್ಗಟ್ಟಾಗಿ ಮುಸ್ಲಿಂ ಸಮುದಾಯದ ಕಡೆಗೆ, ಮಸೀದಿಯ ಕಡೆಗೆ 'ಅಲ್ಲಾ ಓ ಅಕ್ಬರ್' ಎಂದು ಕೂಗುತ್ತಾ ಮುಸ್ಲೀಮರ ದನಿಗೆ ತಮ್ಮದನಿ ಸೇರಿಸಿ ಅವರೊಂದಿಗೆ ಒಂದಾಗುತ್ತಾರೆ.

'ಮಂದಿರದಿಂದ ಮಸೀದಿಯೆಡೆಗೆ' ಈ ಕತೆಯಲ್ಲಿ ಹಿಂದೂ ಮತ್ತೊಬ್ಬ ದಲಿತ ಹಿಂದೂವನ್ನು ಪ್ರೀತಿಸಲಾರ, ಆದರೆ ಮುಸ್ಲಿಂ ಹಿಂದೂವನ್ನೂ ಪ್ರೀತಿಸುತ್ತಾನೆ. ಇಲ್ಲಿ ಧರ್ಮ-ಧರ್ಮಗಳಲ್ಲಿ ಜಾತಿಯ ವಿಷಭೀಜ ಕಾಣಿಸಿಕೊಳ್ಳದೇ ಸ್ವಧರ್ಮಗಳಲ್ಲಿ ಕೋಮುದುಳ್ಳುರಿ ಕಾಣಿಸಿಕೊಳ್ಳುವುದು ದೇಶದ ಮತ್ತೊಂದು ದುರಂತದ ಛಾಯೆಯನ್ನು ಕತೆ ಮಾರ್ಮಿಕವಾಗಿ ಕಟ್ಟಿಕೊಡುತ್ತದೆ.

ದಲಿತ ಕವಿ ಸಿದ್ಧಲಿಂಗಯ್ಯನವರ ರಚಿಸಿದ 'ಮತಾಂತರ' ಕತೆಯನ್ನು ಈ ಕತೆ ನೆನಪಿಸಿದರೂ ಈ ಕತೆಯು ವಿಭಿನ್ನ ನೆಲೆಯಲ್ಲಿ ದಲಿತ ಜನಾಂಗದ ಬದುಕನ್ನು ನಿರೂಪಿಸುತ್ತದೆ.

ಕೊನೆಯಲ್ಲಿ ದಲಿತ ಸಾಹಿತ್ಯದ ಅನನ್ಯತೆಯನ್ನು ಕುರಿತು ವಿವರಿಸುವುದಾದರೆ, ದಲಿತ ಸಾಹಿತ್ಯಕ್ಕೆ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ವಿಶಿಷ್ಟವಾದಂತಹ ಸ್ಥಾನವಿದೆ. ಏಕೆಂದರೆ, ಸಾವಿರಾರು ವರುಷಗಳಿಂದ ವಂಚನೆಗೆ, ಶೋಷಣೆಗೆ ಒಳಗಾಗಿದ್ದ ಸಮಾಜವೊಂದರ ಬಂಡೆದ್ದ ಸ್ವಾಭಿಮಾನದ ಧ್ವನಿಯ ಅಭಿವ್ಯಕ್ತಿ ಆದಾಗಿತ್ತು. ಮೇಲ್ವರ್ಗದ ಜಾತಿಗಳ ಕೇರಿಗಳನ್ನು ಪ್ರವೇಶಿಸದಂತೆ ಇದ್ದ ಕಟ್ಟಾಜ್ಞೆ, ಸಾರ್ವಜನಿಕ ಕೇಂದ್ರಗಳಾದ ಗುಡಿ, ಕುಡಿಯುವ ನೀರಿನ ಸ್ಥಳಗಳನ್ನು ಪ್ರವೇಶಿಸದ ಹಾಗೆ ಮಾಡಿದ ಕಟ್ಟಳೆ ಇವುಗಳನ್ನೆಲ್ಲಾ ತಮ್ಮ ಬದುಕಿನ ಹಕ್ಕೊತ್ತಾಯದ ಸಾಧನಗಳನ್ನಾಗಿ ಮಾಡಿಕೊಂಡ ದಲಿತ ಲೇಖಕರು ತಮ್ಮ ಜನಾಂಗದ ಅಂತರಾಳದ ನೋವುಗಳನ್ನು ತಮ್ಮಲ್ಲಿಯ ಬದುಕಿನ ಅನನ್ಯ

ವ್ಯಕ್ತಿತ್ವಗಳನ್ನು ಸಾಹಿತ್ಯದಲ್ಲಿ ದಾಖಲು ಮಾಡಿದರು. ಸಮಾಜದ ಪ್ರತಿಯೊಬ್ಬರಿಗೂ ಎಲ್ಲಾ ರಂಗಗಳಲ್ಲಿಯೂ ಸಿಗುವ ಸ್ವಾತಂತ್ರ್ಯ ಮತ್ತು ಸದಾವಕಾಶಗಳನ್ನು ಸಾಮಾಜಿಕ ನ್ಯಾಯದ ಮೂಲಕ ದಲಿತ ಲೇಖಕರು ಪ್ರಶ್ನಿಸಿದರು. ಆದರೆ ನಮ್ಮ ದೇಶದಲ್ಲಿ ಇಂಥ ಸಾಮಾಜಿಕ ಅಸಮಾನತೆಯ ಕೊರತೆಯಿದೆಯೆಂಬ ಕೂಗು ದಲಿತ ಸಾಹಿತ್ಯದ ಮೂಲಕ ಚಿತ್ರಿತವಾಯಿತು. ಇಂಥ ಸಾಮಾಜಿಕ ನ್ಯಾಯಕ್ಕೆ ಒತ್ತುಕೊಟ್ಟು ಸಂವಿಧಾನಾತ್ಮಕವಾಗಿ ಅದನ್ನು ಪ್ರತಿಷ್ಠಾಪಿಸಿದರು. ಹೀಗೆ ದಲಿತ ಸಾಹಿತ್ಯದ ಅನನ್ಯತೆಗೆ ಅಂಬೇಡ್ಕರ್‌ವಾದವೂ ಕೂಡ ಮೂಲ ಪ್ರೇರಣೆಯಾಯಿತು.

ಈ ದಲಿತ ಸಾಹಿತ್ಯದ ಆದರಲ್ಲೂ ಸಣ್ಣ ಕಥಾ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ಲೇಖಕರಾದ ದೇವನೂರು ಮಹಾದೇವ, ಅರವಿಂದ ಮಾಲಗತ್ತಿ, ಮನಜ, ಮೊಗಳ್ಳಿಗಣೇಶ, ಸಿದ್ದಲಿಂಗಯ್ಯ, ಸೋಮಣ್ಣ ಹೊಂಗಳ್ಳಿ, ಜನಾರ್ಧನ ಎರ್ಪಕಟ್ಟೆ, ಸಿ.ಬಸವಲಿಂಗಯ್ಯ, ಬಿ.ಟಿ.ಲಲಿತನಾಯಕ, ಬಾನಂದೂರು ಕೆಂಪಯ್ಯ, ವೀರಯ್ಯ ಕಾಡು ಕೊತ್ತನಹಳ್ಳಿ ಮುಂತಾದ ದಲಿತ ಲೇಖಕರು ತಮ್ಮ ಸಣ್ಣಕತೆಗಳಲ್ಲಿ ದಲಿತ ಜನಾಂಗದ ಕತ್ತಲು ಬೆಳಕಿನ ನೋವಿನ ಲೋಕವನ್ನು ತೆರೆದಿಟ್ಟಿದ್ದಾರೆ ಈ ಅಧ್ಯಾಯದಲ್ಲಿ ಕೆಲ ಲೇಖಕರ ಕೆಲವು ಕತೆಗಳನ್ನು ಮಾತ್ರ ಅಧ್ಯಯನ ಮಾಡಲು ಸಾಧ್ಯವಾಗಿದೆ. ಇದು ಅಧ್ಯಯನದ ಮಿತಿ ಆದರೂ ಒಟ್ಟು ಅಧ್ಯಯನ ಚೌಕಟ್ಟಿನ ದೃಷ್ಟಿಯಿಂದ ಈ ಸೂಕ್ಷ್ಮಾತ್ಮಕ ಮಾದರಿ ಬಿಟ್ಟು ಬೇರೆ ಮಾರ್ಗಗಳಿಲ್ಲ. ಇಪ್ಪತ್ತನೆಯ ಶತಮಾನದ ಬಹುಮುಖ್ಯ ಸಾಹಿತ್ಯದ ಅನನ್ಯತೆಗಳಲ್ಲಿ ದಲಿತ ಅನನ್ಯತೆಯೂ ಒಂದು. ಈ ಅನನ್ಯತೆಯ ಸ್ವರೂಪವನ್ನು ಆ ಕಥನ ಲೋಕದ ಮೂಲಕ ಕಂಡರಿಸುವುದು ಇಲ್ಲಿಯ ಆಶಯವಾಗಿದೆ. ಇದೊಂದೇ ವಿಷಯವನ್ನು ಆಯ್ದುಕೊಂಡು ಕೂಡ ಪ್ರತ್ಯೇಕ ಅಧ್ಯಯನವನ್ನು ನಡೆಸುವಷ್ಟು ಈ ದಲಿತ ಸಾಹಿತ್ಯ ಲೋಕವ್ಯಾಪ್ತಿ ಹೊಂದಿದೆ ಎಂಬುದರ ಅರಿವು ಈ ಅಧ್ಯಯನಕಾರನಿಗೆ ಇದೆ ಎಂಬುದನ್ನು ಹೇಳುತ್ತಾ, ಪ್ರಸ್ತುತ ಅಧ್ಯಯನದಲ್ಲಿ ಈ ಒಂದು ಎಳೆಯನ್ನು ಗುರುತಿಸಿ ಇನ್ನಿತರೆ ಅನನ್ಯತೆಗಳೆಡೆಗೆ ಕರೆದುಕೊಂಡು ಹೋಗಲು ಪ್ರಸ್ತುತ ಅಧ್ಯಯನ ಬಯಸುತ್ತದೆ.

**ಟಿಪ್ಪಣಿಗಳು**

೦೧. ಅರವಿಂದ ಮಾಲಗತ್ತಿ - ದಲಿತ ಸಾಹಿತ್ಯದ ತಾತ್ವಿಕ ನೆಲೆ
ದಲಿತಮಾರ್ಗ - ಅರವಿಂದ ಮಾಲಗತ್ತಿ (ಸಂ) (ಪು.೨೦)

೦೨. ಜನಾರ್ಧನ ಎರ್ಪಕಟ್ಟೆ - ದಲಿತ ಸಾಹಿತ್ಯ ಮತ್ತು ದಲಿತಾನುಭವ
ದಲಿತಮಾರ್ಗ - ಅರವಿಂದ ಮಾಲಗತ್ತಿ (ಸಂ) (ಪು.೧೧೯)

೦೩. ಎಲ್.ಹನುಮಂತಯ್ಯ ಮತ್ತು ಬಿ.ಚಿನ್ನಸ್ವಾಮಿ(ಸಂ) - ದಲಿತ ಕತೆಗಳು
ಪ್ರಸ್ತಾವನೆ - (ಪು.ix)

೦೪. ಮೂಡ್ನಕೋಡುಚಿನ್ನಸ್ವಾಮಿ - ದಲಿತ ಸಾಹಿತಿಯ ಒಂದು ಅನುಭವ
ದಲಿತಮಾರ್ಗ - ಅರವಿಂದ ಮಾಲಗತ್ತಿ (ಸಂ)

೦೫. ಸಿದ್ದಲಿಂಗಯ್ಯ - ದಲಿತ ಸಾಹಿತ್ಯ
ದಲಿತಮಾರ್ಗ - ಅರವಿಂದ ಮಾಲಗತ್ತಿ (ಸಂ) (ಪು.೬೩)

೦೬. ಪ್ರೊ.ಬರಗೂರು ರಾಮಚಂದ್ರಪ್ಪ - ಉದ್ಘಾಟನಾಭಾಷಣ
ಧಾರವಾಡ ಜಿಲ್ಲೆ ಸಾಹಿತ್ಯ ಸಮ್ಮೇಳನ - ಸಂಕ್ರಮಣ ಸಂಪುಟ

೦೭. ರಹಮತ್ ತರೀಕೆರೆ - ಕನ್ನಡ ದಲಿತ ಸಾಹಿತ್ಯದ ತಾತ್ವಕಿಕ ನೆಲೆಗಳು
ಕನ್ನಡ ಸಾಹಿತ್ಯ ಸಮಾಲೋಕನ - ಅರ್ಜುನ ಗೊಳಸಂಗಿ (ಪು.೧೫,೧೬)

೦೮. ದೇವನೂರು ಮಹದೇವ - ಮಾರಿಕೊಂಡವರು
ಸಮಗ್ರ ಕೃತಿಗಳು - ದೇವನೂರು ಮಹಾದೇವ (ಪು.೭)

೦೯. ದೇವನೂರು ಮಹದೇವ - ಮೂಡ ಸೀಮೇಲಿ ಕೊಲೆಗಿಲೆ ಮುಂತಾಗಿ
ಸಮಗ್ರ ಕೃತಿಗಳು - ದೇವನೂರು ಮಹಾದೇವ (ಪು.೮)

೧೦. ಅದೇ (ಪು.೧೦)

೧೧. ದೇವನೂರು ಮಹದೇವ - ಅಮಾಸ
ಸಮಗ್ರ ಕೃತಿಗಳು - ದೇವನೂರು ಮಹಾದೇವ (ಪು.೫೦)

೧೨. ಅದೇ (ಪು.೫೬)

೧೩. ದೇವನೂರು ಮಹದೇವ - ಒಂದು ದಹನದಕತೆ
ಸಮಗ್ರ ಕೃತಿಗಳು - ದೇವನೂರು ಮಹಾದೇವ

೧೪. ಅರವಿಂದ ಮಾಲಗತ್ತಿ- ತೂತಿನ ದುಡ್ಡು ಮತ್ತು ನೀರು
ದಲಿತ ಕತೆಗಳು - ಎಲ್ ಹನುಮಂತಯ್ಯ (ಸಂ) (ಪು.೮)

೧೫ . ಮೊಗಳ್ಳಿಗಣೇಶ್ - ದಲಿತರು ಮತ್ತು ಜಾಗತೀಕರಣ (ಪು.೨೪)

೧೬ . ಮೊಗಳ್ಳಿಗಣೇಶ್ - ಬುಗರಿ

೧೭ . ಮೊಗಳ್ಳಿಗಣೇಶ್ - ಕಾಳಿ

೧೮ . ಮೊಗಳ್ಳಿಗಣೇಶ್ - ಭೂಮಿ

೧೯ . ಸುಬ್ಬುಹೊಲೆಯರ್ - ದನಕಾಯದವನು
ದಲಿತಕತೆಗಳು - ಎಲ್.ಹನುಮಂತಯ್ಯ (ಸಂ) (ಪು.೨೪೯)

೨೦. ಸೋಮಣ್ಣ ಹೊಂಗಳ್ಳಿ - ಕೊಟ್ಟಿಗೆಗೆ ಬಂದ ಕಡಸು
ಅದೇ (ಪು.೨೬೦)

೨೧. ಸಿ.ಬಸವಲಿಂಗಯ್ಯ- ಗಾಳಿಪಟ
ಅದೇ (ಪು.೧೧೧)

೨೨. ಬಾನಂದೂರು ಕೆಂಪಯ್ಯ - ಬಿಟ್ಟಿಗೂಸ
ಅದೇ (ಪು.೧೩೧)

೨೩. ವೀರಯ್ಯ ಕಾಡುಕೊತ್ತನ ಹಳ್ಳಿ - ಮಂದಿರದಿಂದ ಮಸೀದಿಯಡೆಗೆ
ಅದೇ (ಪು.೨೬೬)

* * * * *

# ಅಧ್ಯಾಯ - ಐದು

# ಮುಸ್ಲಿಂ ಅನನ್ಯತೆ

## ೫.೧. ಮುಸ್ಲಿಂ ಸಾಹಿತ್ಯ ಸಂವೇದನೆ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ ಸಾಹಿತ್ಯದ ಅನನ್ಯತೆಯಂತೆ ಮುಸ್ಲಿಂ ಅನನ್ಯತೆಯೂ ಕೂಡ ಸಾಹಿತ್ಯದಲ್ಲಿ ಪ್ರಮುಖ ವಿಚಾರ ಧಾರೆಯಾಗಿ ಕಾಣಿಸಿಕೊಂಡಿತು. ಇಲ್ಲಿ ಮುಸ್ಲಿಂ ಜಗತ್ತಿನ ವಿವರದೊಂದಿಗೆ ಅವರ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ವಿವರಿಸಿ ಕತೆಗಳ ವಿಶ್ಲೇಷಣೆಗೆ ತೊಡಗುತ್ತೇನೆ. ಆಧುನಿಕ ಕನ್ನಡ ಕಥನ ಸಾಹಿತ್ಯ ಸಂದರ್ಭದಲ್ಲಿ ಮುಸ್ಲಿಂ ಸಂವೇದನೆಯು ಬಹು ಪ್ರಮುಖವಾದ ನೆಲೆಯಲ್ಲಿ ಪ್ರಕಟಗೊಂಡಿದೆ. ಹಾಗೆ ನೋಡಿದರೆ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಂವೇದನೆಗಳು ಚಿತ್ರಿತವಾದುದು ತೀರ ಇತ್ತೀಚೆಗೆಂದೇ ಹೇಳಬೇಕು. ಮುಸ್ಲಿಂ ಜನಾಂಗದ ಸಂಪ್ರದಾಯ, ನಂಬಿಕೆ, ಆಚರಣೆ, ಧರ್ಮ, ಶ್ರದ್ಧೆಗಳು ಕನ್ನಡ ಸಾಹಿತ್ಯದಲ್ಲಿ ಪ್ರವೇಶವನ್ನು ಪಡೆಯತೊಡಗಿದವು. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ವಿಶ್ಲೇಷಣೆಯ ಸಂದರ್ಭದಲ್ಲಿ ಈ ಸಮುದಾಯದೊಳಗಿನ ಸಾಮಾಜಿಕ ಸ್ಥಿತ್ಯಂತರಗಳ ತಲ್ಲಣಗಳನ್ನು ಮುಸ್ಲಿಂ ಕತೆಗಾರ ಮತ್ತು ಕತೆಗಾರ್ತಿಯರು ಸಾಹಿತ್ಯ ಸಂವೇದನೆಯ ಮೂಲಕ ದಟ್ಟವಾಗಿ ಚಿತ್ರಸಿದ್ದಾರೆ. ತಮ್ಮ ಜನಾಂಗದ ನೋವು ನಲಿವುಗಳನ್ನು ಅನನ್ಯವಾದ ಬದುಕಿನ ವಿವರಗಳನ್ನು ಕಥಾ ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿದ್ದಾರೆ. ಕಳೆದ ದಶಕಗಳಿಂದ ಮುಸ್ಲಿಂ ಬರಹಗಾರರು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕೃಷಿ ಮಾಡುತ್ತಿರುವುದು ಅವರಿಗೆ ಸಾಂಸ್ಕೃತಿವಾಗಿ ಬಹಳ ಮಹತ್ವದ ಸ್ಥಾನದಕ್ಕಿದ್ದಂತಾಗಿದೆ.

ಸಂಸ್ಕೃತಿ ಮತ್ತು ಉಪ ಸಂಸ್ಕೃತಿಗಳ ಅಧ್ಯಯನಕ್ಕೆ ಹೆಚ್ಚಿನ ಒತ್ತು ಬಿದ್ದಿರುವಂತಹ ಸಂದರ್ಭಗಳಲ್ಲಿ ಇದುವರೆಗೂ ಭೌತಿಕವಾಗಿ ಮತ್ತು ಭೌದ್ಧಿಕ ಅಪರಚಿತವಾಗಿದ್ದ, ಅಮೂರ್ತವಾಗಿದ್ದ ಈ ಸಮುದಾಯಗಳು ಇಂದು ತಮ್ಮ ಜನಾಂಗದ ಅಂತರಂಗವನ್ನು ತೆರೆದು ತೋರುವಂತಾಗಿದೆ. "ಈ ಮುಸ್ಲಿಂ ಸಂವೇದನೆಯು ಬಂಡಾಯ ಸಾಹಿತ್ಯದ ಪೂರ್ವದಲ್ಲಿ ಕಂಡಬಂದರೂ, ಅವು ಮುಸ್ಲಿಂ ಸಮಾಜದ ದಟ್ಟ ಅನುಭವಗಳಾಗುವಲ್ಲಿ ಸೋತವು. ಅದುವರೆಗೆ

ಕನ್ನಡ ಸಾಹಿತ್ಯ ಲೋಕಕ್ಕೆ ಅಪರಿಚಿತವಾದ ಈ ಜನಾಂಗದ ನಿಗೂಡ ಲೋಕವೊಂದು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ತೆರೆದುಕೊಂಡಿದ್ದು ಬಂಡಾಯದ ಸಂದರ್ಭದಲ್ಲಿ ಅದು ಇಸ್ಲಾಂ ಮೂಲಕ ಲೇಖಕರು ಅನಾವರಣಗೊಳಿಸಿದಂತೆ ಅವರ ಬದುಕನ್ನು ಬಹುತೇಕ ಹಿಂದಿನ ಬರಹಗಾರರು ಅನಾವರಣಗೊಳಿಸಲಿಲ್ಲ''[೧] ಎಂಬ ಮಾತಿನಲ್ಲಿ ಸತ್ಯಾಂಶವಿದೆ. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಮುಸ್ಲಿಂ ಅನನ್ಯ ಬದುಕಿನ ಚಿತ್ರಣ ಯಥೇಚ್ಚವಾಗಿ ಅಭಿವ್ಯಕ್ತಿಯ ರೂಪ ಪಡೆಯಿತು. ವಸಾಹತುಶಾಹಿಯ ಪರಿಣಾಮವಾಗಿ ಕೆಳವರ್ಗ, ಕೆಳಜಾತಿ ಹಾಗೂ ಅಲ್ಪ ಸಂಖ್ಯಾತ ಸಮುದಾಯಗಳಿಗೆ ಸಿಕ್ಕಿದ ವಿದ್ಯೆಯ ಲೋಕಾನುಭವದಿಂದಾಗಿ ಆ ಸಮುದಾಯಗಳಲ್ಲಿದ್ದ ಪ್ರಜ್ಞೆಯನ್ನು ವಿಸ್ತರಿಸುವ, ವಿವರಿಸುವ ವಿಶ್ಲೇಷಿಸುವ ಕಾರ್ಯ ಸಾಹಿತ್ಯದಲ್ಲಿಯು ಕಾಣಿಸಿಕೊಂಡಿತು. ಇದರಿಂದಾಗಿ ಮುಸ್ಲಿಂ ಕಥೆಗಾರರು ತಮ್ಮ ವಿಶಿಷ್ಟವಾದ ಅನುಭವನ್ನು ಗದ್ಯದ ಮೂಲಕ ಕಥಾ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಅರ್ಥವನ್ನು ತುಂಬಿದ್ದಾರೆ.

ಕನ್ನಡ ಸಾಹಿತ್ಯದ ಯಾವುದೇ ಒಂದು ಸಾಂಸ್ಕೃತಿಕ ಅಂಗದ ಬೆಳವಣಿಗೆಯು ಇಡೀ ಕನ್ನಡ ಸಾಹಿತ್ಯದ ಮೇಲೆ ಪರಿಣಾಮ ಬೀರುತ್ತದೆ. ವಿವಿಧ ಜನರು ಸಮುದಾಯಗಳ, ಜನಾಂಗಗಳ, ಬುಡಕಟ್ಟುಗಳ ಅಲೆಮಾರಿಗಳ ಸಾಂಸ್ಕೃತಿಕ ಕೊಡುಕೊಳ್ಳುವಿಕೆಯಿಂದ ಕನ್ನಡ ಸಾಹಿತ್ಯಕ್ಕೆ ಸಮಗ್ರತೆಯ ಹರಿವುಗಳನ್ನೊದಗಿಸುತ್ತದೆ. ಸಾಹಿತ್ಯದ ಆಳ ಅಗಲ, ಹರವುಗಳನ್ನು ಪಡೆದುಕೊಳ್ಳುವ ಚಾರಿತ್ರಿಕ ಅಂಶಗಳನ್ನು ಅಲ್ಲಗಳೆಯಲಾಗುವುದಿಲ್ಲ. ಒಂದು ಸಮಾಜದಲ್ಲಿ ಒಂದೇ ಸಾಂಸ್ಕೃತಿಕ ವಲಯದಲ್ಲಿ ಜೀವಂತವಾಗಿದ್ದ ವಿವಿಧ ಮನುಷ್ಯ ಸಂಬಂಧಗಳನ್ನು ಆತನ ಸಾಂಸ್ಕೃತಿಕ ಲೋಕಗಳ ಅಧಿಕೃತ ದಾಖಲೆಯೊಂದಿಗೆ ಸೆರೆಹಿಡಿದು ಅವುಗಳ ಸೌಹಾರ್ದ ನೆಲೆಗಳನ್ನು ಶೋಧಿಸಿ ಕಥೆಯಾಗಿಸುವುದು ಅನೇಕ ಮುಸ್ಲಿಂ ಲೇಖಕರಿಗೆ ಇಂದು ಸಾಧ್ಯವಾಗಿದೆ. ಸಾಮಾಜಿಕವಾದ ಬದುಕನ್ನು ದಿನಮಾನದ ಜಂಜಾಟಗಳ ಮೂಲಕ ದಟ್ಟ ವಿವರಗಳೊಂದಿಗೆ ಕಟ್ಟಿಕೊಡುವಂತೆ ಅದನ್ನು ವಿಮರ್ಶಾತ್ಮಕ ನೆಲೆಯಲ್ಲಿಯೂ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹೊಸ ಭೌದ್ಧಿಕ ಅರಿವಿನಲ್ಲಿ ಮುಸ್ಲಿಂ ಮತ್ತು ಮುಸ್ಲಿಂಯೇತರ ಸಮುದಾಯಗಳ ಬದುಕನ್ನು ಅನೇಕ ಬರಹಗಾರರು ಕಥಾ ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿದ್ದಾರೆ.

ವಿಭಿನ್ನವಾದ ದೃಷ್ಟಿಕೋನಗಳಿಂದ ನೋಡಿದಾಗ ಕಳೆದ ಹಲವು ವರ್ಷಗಳಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆಗುತ್ತಿರುವ ಕೆಲವು ಬದಲಾವಣೆಗಳು ಆಕರ್ಷಕವಷ್ಟೇ ಅಲ್ಲ, ಚರ್ಚಾಯೋಗ್ಯವೂ ಆಗಿದೆ. ದಲಿತರು ಒಂದು ಮಟ್ಟದಲ್ಲಿ ಸಾಂಸ್ಕೃತಿಕವಾಗಿ ಸಾಧಿಸುತ್ತಿರುವುದನ್ನು ಇತ್ತೀಚೆಗೆ ಕೆಲವು ಮುಸ್ಲಿಂ ಬರಹಗಾರರು ತಮ್ಮ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಸಾಧಿಸಿ ತೋರಿಸಿದ್ದಾರೆ. ಹಾಗೇ ನೋಡಿದರೆ ಒಂದು ಮಟ್ಟದಲ್ಲಿ ಹಿಂದೂಧರ್ಮದ ಚೌಕಟ್ಟಿನಲ್ಲೇಯಿದ್ದು ಭಾಷೆ, ಆಚಾರ-ವಿಚಾರ, ವಸ್ತ್ರ-ಊಟಗಳಲ್ಲಿ ತುಂಬಾ ಭಿನ್ನವಾಗಿಯೇ ಉಳಿದಿರುವ ಮುಸ್ಲಿಂ ಜನಾಂಗ ಕನ್ನಡ ಭಾಷೆ ಸಾಹಿತ್ಯದ ಮೂಲಕ ಹತ್ತಿರವಾಗುತ್ತಿರುವುದೂ ಕೂಡ ಇಂದು ಹೆಚ್ಚಿನ ಕುತೂಹಲ, ರೋಮಾಂಚನಗಳಿಗೆ ಕಾರಣವಾಗುತ್ತಿದೆ.

ಮುಸ್ಲಿಂ ಜನಾಂಗದಿಂದ ಬಂದಂತ ಅನೇಕ ಲೇಖಕರು ತಮ್ಮ ಸಮುದಾಯಕ್ಕೆ ಅಂಟಿಕೊಳ್ಳದೆ ಆತ್ಮ ವಿಶ್ವಾಸ, ಪ್ರಗತಿಪರತೆ, ತುಂಬಾ ಆರೋಗ್ಯ ಪೂರ್ಣವಾದ ವಿಚಾರಗಳೊಂದಿಗೆ ಕೃತಿಗಳನ್ನು ಕಟ್ಟಿಕೊಟ್ಟಿದ್ದಾರೆ. ಮುಸ್ಲಿಂ ಲೇಖಕರು ಜಾತ್ಯಾತೀತರಾಗುವ ಮೂಲಕ ಹಿಂದೂ ಮುಸ್ಲಿಂ ಜಗತ್ತುಗಳ ಭಾವನಾತ್ಮಕ ಅಂತರಗಳನ್ನು ತುಂಬ ಅರ್ಥಪೂರ್ಣವಾಗಿ ಮೂರ್ತಗೊಳಿಸಿದ್ದಾರೆ. ಒಂದು ಬಹುಸಂಖ್ಯಾತ ಕೋಮಿನೊಂದಿಗೆ ಅಲ್ಪ ಸಂಖ್ಯಾತ

ಕೋವೊಂದು ಸಹಬಾಳ್ವೆ ನಡೆಸುವಾಗಿನ ಪರಿಸ್ಥಿತಿ ಪರಸ್ಪರ ಅನುಮಾನಗಳಿಗೆ ಆತಂಕಗಳಿಗೆ ಹೇಗೆ ಕಾರಣವಾಗುತ್ತವೆಯೆಂಬುದನ್ನು ಗಂಭೀರವಾಗಿ ಕೆಲವು ಮುಸ್ಲಿಂ ಲೇಖಕರು ಕತೆಗಳಲ್ಲಿ ದಾಖಲಿಸಿದ್ದಾರೆ.

ಮುಸ್ಲಿಂ ಸಮುದಾಯ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಅಸಮಾನತೆಯ ನೆಲೆಯಲ್ಲಿರುವುದನ್ನು ಆಯಾ ಸಂದರ್ಭಗಳನ್ನು ಮುಸ್ಲಿಂ ಬರಹಗಾರರು ತೀವ್ರಸ್ವರೂಪದಲ್ಲಿ ತಮ್ಮ ಅಸಮಾಧಾನವನ್ನು ಸಾಹಿತ್ಯದ ಮೂಲಕ ದಾಖಲಿಸಿದ್ದಾರೆ. ಹಿಂದೂ ಮುಸ್ಲಿಂ ಸಮುದಾಯಗಳಲ್ಲಿ ಮನುಷ್ಯ ಸಂಬಂಧಗಳು ಎಷ್ಟೇ ಆತ್ಮೀಯವಾಗಿದ್ದರೂ ಧರ್ಮದ ವಿಚಾರದಲ್ಲಿ ಮಾತ್ರ ಎರಡು ಪಂಗಡಗಳು ಅತಿ ಸೂಕ್ಷ್ಮವಾಗಿ ವರ್ತಿಸುವುದು ಈ ದೇಶದ ಒಂದು ದೊಡ್ಡ ದುರಂತವೂ ಆಗಿದೆ. ಮತಾಂತರವೂ ತುಂಬಾ ಜಟಿಲವಾದ ಸಮಸ್ಯೆಯಾಗಿರುವುದು ಈ ಕಾರಣದಿಂದಲೇ. ಇಂದಿನ ಮುಸ್ಲಿಂ ಲೇಖಕರಲ್ಲಿ ಸಾಮಾಜಿಕ ವಿಷಮತೆಗಳ ಧಾರ್ಮಿಕ ಕ್ರೌರ್ಯಗಳ ಆರ್ಥಿಕ ಮತ್ತು ರಾಜಕೀಯ ಭ್ರಷ್ಟಾಚಾರಗಳ ಬಗ್ಗೆ ಹೇಸಿಗೆ, ಸಿಟ್ಟು, ಅಸಹನೆ, ಅಸಾಯಕತೆಯಿದೆ. ಆದರೂ ಈ ಲೇಖಕರು ಭಾವಾವೇಶಕ್ಕೊಳಗಾಗುವುದಿಲ್ಲ. ಒಂದು ಸಮುದಾಯವನ್ನು ಏರಿಸುವ ಇನ್ನೊಂದು ಸಮುದಾಯವನ್ನು ಇಳಿಸುವ ಸಿನಿಕತನವನ್ನು ತೋರುವುದಿಲ್ಲ. ದ್ವೇಷ ಅಸೂಯೆಗಳಿಗಿಂತ ವಸ್ತುನಿಷ್ಠ ವಿಮರ್ಶನ ಪ್ರಜ್ಞೆ, ಮಾನವೀಯ ಅನುಕಂಪ ಇಲ್ಲಿ ಎದ್ದು ಕಾಣುತ್ತದೆ.

ಮುಸ್ಲಿಂ ಲೇಖಕರು ಚಿತ್ರಿಸುವ ಪಾತ್ರಗಳೆಲ್ಲವೂ ಮನುಷ್ಯ ಸಂಬಂಧಗಳ ಮಾನವೀಯ ತುಡಿತಗಳೊಂದಿಗೆ ಕೂಡಿರುವಂತವು. ಹಾಗೇ ಹಿಂದೂ ಮುಸ್ಲಿಂ ಆಶೋತ್ತರಗಳನ್ನು ಒಳಗೊಂಡಿರುವಂತವುಗಳಾಗಿವೆ. ಭಾರತದಲ್ಲಿರುವ ಮುಸ್ಲೀಮರು ಬಡವರಾಗಿದ್ದು ತುಂಬಾ ನೋವು ಮತ್ತು ಅವಮಾನದಿಂದ ಬದುಕಿದವರು. ಅವರನ್ನು ಪಾಪ, ಕ್ರೌರ್ಯ, ವಿದ್ರೋಹ ಮುಂತಾದ ಅನಿಷ್ಟ ಸಂಕೇತಗಳನ್ನಾಗಿ ಪರಿವರ್ತಿಸುವ ಹುನ್ನಾರಗಳ ವಿರುದ್ಧ ದನಿಯೆತ್ತಿದ್ದಾರೆ. ಎಲ್ಲರಂತೆ ಮುಸ್ಲೀಮರು ಮನೆ,ಮಠ, ಆಸ್ತಿ, ಅಂತಸ್ತು, ಹಸಿವು, ನೀರಡಿಕೆ, ಕಾಮ, ಪ್ರೇಮ, ಮನೆಮಕ್ಕಳು, ಮದುವೆ, ವರದಕ್ಷಿಣೆ, ಉದ್ಯೋಗ ಕುಟುಂಬ, ಗೌರವ ಮುಂತಾದ ವಿಷಯಗಳಲ್ಲಿ ಗಂಭೀರವಾಗಿ ತೊಡಗಿಸಿಕೊಂಡವರಾಗಿದ್ದಾರೆ. ಮುಸ್ಲಿಂ ಸಮುದಾಯಕ್ಕೂ ಸೂಕ್ಷ್ಮ ಸಂವೇದನೆಗಳಿವೆ. ಅವರು ಅಪರಾಧಿಗಳಲ್ಲ ಅವರು ಮನುಷ್ಯರೇಯೆಂಬ ಗಾಢ ಸತ್ಯವನ್ನು ಅನೇಕ ಮುಸ್ಲಿಂ ಲೇಖಕರ ಕತೆಗಳು ಸಾಬೀತು ಪಡಿಸುತ್ತವೆ.

ಇಪ್ಪತ್ತನೆಯ ಶತಮಾನದ ಕೊನೆಯ ಕಾಲು ಶತಮಾನದಲ್ಲಿ ನಡೆದ ಕನ್ನಡದ ಹೊಸ ತಲೆಮಾರಿನ ಹುಡುಕಾಟಗಳು, ಸಂವೇದನೆಗಳು, ಸೃಜನಶೀಲತೆಗಳು, ಜಾಗತೀಕರಣದ ಸಂದರ್ಭಗಳು , ಬಹುರಾಷ್ಟ್ರೀಯ ಕಂಪನಿಗಳು, ಆರ್ಥಿಕ ಉದಾರೀಕರಣ ನೀತಿಗಳೂ ಸಾಹಿತ್ಯದ ಮೇಲೆ ಪ್ರಭಾವ ಬೀರತೊಡಗಿದವು. ಬಂಡಾಯ ಸಾಹಿತ್ಯದ ಸಂದರ್ಭದಲ್ಲಿ ಮುಸ್ಲಿಂ ಸಾಂಸ್ಕೃತಿಕ ಜಗತ್ತು ಅನೇಕ ಸ್ಥಿತ್ಯಂತರಗಳನ್ನು ತನ್ನ ಒಡಲೊಳಗೆ ಆಲಂಗಿಸಿಕೊಳ್ಳುತ್ತಾ ಹೊಸ ಹೊಸ ಸಾಧ್ಯತೆಗಳಿಗೆ ದಾರಿ ಮಾಡಿಕೊಟ್ಟಿತು. ಅನೇಕ ಪ್ರಾದೇಶಿಕ ಪ್ರಭಾವಗಳಿಗೆ ಒಡ್ಡಿಕೊಳ್ಳುವುದರ ಜೊತೆಗೆ ತನ್ನದೇ ಆದ ವಲಯಗಳ ಭಾಷಿಕ ಪ್ರಭಾವಗಳಿಗೂ ಒಳಗಾಯಿತು. ಅನೇಕ ಜನಪರ ಚಳುವಳಿಗಳು ಹುಟ್ಟಿಕೊಂಡಿದ್ದು ಈ ಕಾಲದಲ್ಲಿಯೇ.

ಕನ್ನಡ ಲೋಕಕ್ಕೆ ಅಪರಿಚಿತವಾಗಿದ್ದ ಮುಸ್ಲಿಂ ಜನಾಂಗದ ಲೋಕವನ್ನು ಎಪ್ಪತ್ತರ ದಶಕದಿಂದೀಚೆಗೆ ಇತರರಿಗೆ ತೆರೆದುಕೊಳ್ಳಲಾಂರಭಿಸಿತು. ಕನ್ನಡದಲ್ಲಿ ಈ ಸಂಸ್ಕೃತಿಯು ಗಮನಾರ್ಹವಾಗಿ ಬೆಳೆದದ್ದು ಬಂಡಾಯ ಸಾಹಿತ್ಯ

ಸಂದರ್ಭದಲ್ಲಿ. ಇಂದು ಈ ಜನಾಂಗ ಕನ್ನಡದಲ್ಲಿ ಸಾಹಿತ್ಯ ರಚಿಸ ತೊಡಗಿದ್ದು ಸಾಂಸ್ಕೃತಿಕವಾಗಿ ದಾಖಲೆಯಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಬರೆಯುತ್ತಿರುವ ಈ ಮುಸ್ಲಿಂ ಲೇಖಕರು ಒಬ್ಬೊಬ್ಬರು ಗುಮಾನಿಯಿಂದ ನೋಡಿ ದೂರಿಕರಿಸುವುದನ್ನು ಬಿಟ್ಟು ಎರಡು ಸಂಸ್ಕೃತಿಗಳನ್ನು ಬೆಸೆಯುವ ಕೊಂಡಿಗಳಾಗಿ ಈ ಸಾಹಿತಿಗಳು ಇಂದು ಸಾಹಿತ್ಯ ಕೃಷಿ ಮಾಡುತ್ತಿದ್ದಾರೆ.

**೫.೨. ಮುಸ್ಲಿ ಕಥಾ ಜಗತ್ತು**

ಕನ್ನಡ ಕಥಾ ಸಾಹಿತ್ಯ ಸಂದರ್ಭದಲ್ಲಿ ಇಸ್ಲಾಂ ಮೂಲದಿಂದ ಬಂದ ಮೊದಲ ಕತೆಗಾರ್ತಿಯೆಂದು ಮುಮ್ತಾಜ ಬೇಗಂ ಅವರನ್ನು ಗುರುತಿಸಲಾಗುತ್ತದೆ. ಇವರ **'ಅವ್ಯಕ್ತ'** ಕಥಾಸಂಕಲನ ಇಸ್ಲಾಂ ಸಂಸ್ಕೃತಿಯನ್ನು ಬಿಂಬಿಸುವ ಮೊದಲ ಕಥಾಸಂಕಲನವಾಗಿದೆ. ಯಾವ ಭಾವುಕತೆಗೂ ಬಣ್ಣದ ಮಾತುಗಾರಿಕೆಗೂ ಇಳಿಯದೇ ನವಿರಾದ ಅನುಭವದ ಹಿನ್ನಲೆಯಲ್ಲಿ ರಚಿಸಿದ ಕತೆಗಳಿವೆ. ಒಂಟಿ ಹೆಂಗಸಿನ ಅಂತರಾಳದ ತುಡಿತ, ನೋವು, ಆರ್ದ್ರತೆಯನ್ನು ಇಲ್ಲಿಯ ಕಥೆಗಳು ವಿಶ್ಲೇಷಿಸುತ್ತವೆ. **"ಒಂದು ಹತ್ಯೆ"** ಕತೆಯಲ್ಲಿ ಬಡಹೆಣ್ಣುಮಕ್ಕಳ, ಮಧ್ಯಮ ವರ್ಗದ ಮುಸ್ಲಿಂ ಸಮುದಾಯದ ಸಂಕಷ್ಟಗಳನ್ನು ಕತೆ ವಿವರಿಸಿದರೆ, **"ಎರೆಡು ಮನೆಗಳ ಒಂದು ಕತೆ"** ಯಲ್ಲಿ ಇಬ್ಬರು ಅಣ್ಣತಮ್ಮಂದಿರ ಮನಸ್ತಾಪದ ಹೊಯ್ದಾಟವಿದೆ. ಜೊತೆಗೆ ಇಲ್ಲಿ ಚಿತ್ರಿತವಾಗಿರುವ ಮುಸ್ಲಿಂ ಸಮುದಾಯದ ಬದುಕು ಅನನ್ಯತೆಯಿಂದ ಕೂಡಿರುವಂತದ್ದಾಗಿದೆ.

ಸಾರಾ ಅಬೂಬಕರ್ ಮುಸ್ಲಿಂ ಜನಾಂಗದ ತಲ್ಲಣಗಳನ್ನು, ಸ್ತ್ರೀ ಸಮುದಾಯದ, ಮುಸ್ಲಿಂ ಜಗತ್ತಿನ ಅನಂತ ಮುಖಗಳನ್ನು ತಮ್ಮ ಕತೆಗಳ ಮೂಲಕ ಅನಾವರಣಗೊಳಿಸಿದ್ದಾರೆ ಸಾರಾ ತಮ್ಮ ಕತೆಗಳಲ್ಲಿ 'ತಲಾಖ್‌ನ' ನಡವಳಿಕೆಯ ಬಗ್ಗೆ ಪ್ರಶ್ನಿಸುತ್ತಾರೆ. ಮಹಿಳೆಯ ಮೇಲೆ ಈ ತಲಾಖ್ ದೌರ್ಜನ್ಯವನ್ನು ಪ್ರತಿಭಟಿಸಬೇಕೆಂಬ ಜಿಜ್ಞಾಸೆಗೆ ಇವರ ಕತೆಗಳು ತೊಡಗುತ್ತವೆ. ಈ ತಲಾಖ್ ವಸ್ತುವಿನ ಬಗ್ಗೆ ಅನೇಕ ಮುಸ್ಲಿಂ ಲೇಖಕರಲ್ಲಿ ಸಮಾನ ಧೋರಣೆ ಕಂಡು ಬಂದರೂ ವಸ್ತು ನಿರ್ವಹಣೆಯಲ್ಲಿ ವೈವಿದ್ಯತೆ ಎದ್ದು ಕಾಣುತ್ತದೆ. ಸಾರಾ ಅವರ 'ಮುಸ್ಲಿಂ ಹುಡುಗಿ ಶಾಲೆ ಕಲಿತಿದ್ದು', 'ಧರ್ಮದ ಬಲೆ ಬೀಸಿದಾಗ', 'ಚಪ್ಪಲಿಗಳು', 'ಮಸೀದಿ ಕಟ್ಟುವವರು', ಮುಂತಾದ ಕತೆಗಳಲ್ಲಿ ಮುಸ್ಲಿಂ ಸಮುದಾಯದ ಸಮಸ್ಯೆಗಳನ್ನು ತಮ್ಮ ನೇರ ಹಾಗೂ ಸರಳ ನಿರೂಪಣೆಯ ಮೂಲಕ ಕಟ್ಟಿಕೊಡುತ್ತಾರೆ.

ಹೆಣ್ಣಿಗೆ ವಿಧ್ಯೆ ನಿಷಿದ್ಧವೆನ್ನುವ ಸಾಮಾಜಿಕ ವ್ಯವಸ್ಥೆಯಲ್ಲಿ ಮುಸ್ಲಿಂ ಬಾಲೆಯೊಬ್ಬಳು ದಿಟ್ಟತನದಿಂದ ವಿಧ್ಯೆಕಲಿಯಲು ಹೊರಡುವುದನ್ನು ಅವರ ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು ಕತೆಯಲ್ಲಿ ಕಾಣಬಹುದು. ಅತ್ಯಂತ ನೈಜತೆಯಿಂದ ಕೂಡಿದ ಖಾಸಗಿ ಅನುಭವದಂತೆ ಸಾರಾ ಕತೆ ಹೆಣೆದಿದ್ದಾರೆ. ಚಪ್ಪಲಿಗಳು ಕತೆಯಲ್ಲಿ ಸ್ತ್ರೀಯನ್ನು ಮನುಷ್ಯಳೆಂದು ಪರಿಗಣಿಸಲು ನಿರಾಕರಿಸುವ ಪುರುಷ ಪ್ರಧಾನ್ಯತೆಯನ್ನು ಕತೆ ನಿವೇದಿಸುತ್ತದೆ. ಮುಸ್ಲಿಂ ಸಮುದಾಯದ ಮಹಿಳೆ ಹಲವಾರು ನಿಯಂತ್ರಣಗಳ ಅಡಿಯಲ್ಲಿ ಬದುಕುತ್ತಿದ್ದಾಳೆ. ಪುರುಷ ಪ್ರಧಾನ ಆಶಯಗಳಿಗೆ ಚಾಲನೆ ದೊರೆತು ಸ್ತ್ರೀಪರ ಆಶಯಗಳು ಮೂಲೆ ಗುಂಪಾಗುವುದನ್ನು ಸಾರಾ ಕತೆಯ ಮೂಲಕ ಹೇಳುತ್ತಾರೆ.

ಮಸೀದಿಯು ಪ್ರತಿಪಾದಿಸುವ ಪ್ರತಿಗಾಮಿ ಆಶಯಗಳನ್ನು ಸಾರಾ ಅವರು ಧರ್ಮ ಬಲೆ ಬೀಸಿದಾಗ ಮತ್ತು ಮಸೀದಿ ಕಟ್ಟುವವರು ಕತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಮುಸ್ಲಿಂ ಸಮಾಜದ ಹೆಣ್ಣು ಹಿಂದೂ ಹೆಣ್ಣಿಗಿಂತ ಹೆಚ್ಚು ಸೃಜನಶೀಲವಾಗಿ ಕಂಡು ಬರುತ್ತಾಳೆ. ಮುಸ್ಲಿಂ ಸಮುದಾಯಗಳಲ್ಲಿ ಹೆಣ್ಣು ಅನುಭವಿಸುವಂತಹ ಯಾತನೆ ತುಂಬಾ

ಕ್ರೂರವಾದುದು. ಶೋಚನಿಯಯವಾದುದು. ಹೆಣ್ಣಿನ ಕನಸುಗಳು ನುಚ್ಚುನೂರಾಗುವುದನ್ನು ಮತ್ತು ಹೆಣ್ಣಿನ ಶೋಷಣೆಯ ವಿವಿಧ ಮುಖಗಳನ್ನು ಸಾರಾ ತೀವ್ರವಾಗಿ ಕತೆಗಳ ಮೂಲಕ ಹೇಳಿದ್ದಾರೆ.

ಮುಸ್ಲಿಂ ಸಂಸ್ಕೃತಿಯ ಕೆಲವು ಸೂಕ್ಷ್ಮ ವಿವರಗಳನ್ನು ಮತ್ತು ವಿಶಿಷ್ಟ ಸಮಸ್ಯೆಗಳನ್ನು ಬಾನುಮುಸ್ತಾಕರ ಕತೆಗಳು ಪ್ರಕಟಪಡಿಸುತ್ತವೆ. 'ಸರಿದ ಕಾರ್ಮೋಡ ಕತೆ' ತುಂಬಾ ಸಂಕೀರ್ಣವಾದ ಕತೆಯಾಗಿದೆ. ಮುಸ್ಲಿಂ ಕುಟುಂಬವೊಂದರಲ್ಲಿ ನಡೆಯುವ ಸಣ್ಣತನ, ಲೈಂಗಿಕ ಆಸೆ ಹಾಗೂ ಹೆಣ್ಣಿನ ಶೋಷಣೆ ಈ ಕತೆಯಲ್ಲಿ ಚಿತ್ರಿತವಾಗಿದೆ. ಬಾನು ಮುಷ್ತಾಕರ ಕತೆಗಳಲ್ಲಿ ಮೇಲು ನೋಟಕ್ಕೆ ಒಂದು ಪ್ರೇಮ ಪ್ರಣಯದ ವಸ್ತುವಿದ್ದರೂ ಅದರ ಅಂತರ್ಯದಲ್ಲಿ ಹೆಣ್ಣಿನ ಅನನ್ಯ ವ್ಯಕ್ತಿತ್ವದ ಹೋರಾಟದ ಫಲಶ್ರುತಿ ವಿಜಯದ ಬಂಡಾಯದ ಧ್ವನಿಯಾಗಿದೆ.

**'ಬೆಂಕಿಮಳೆ'** ಕತೆಯ ಬರವಣಿಗೆ ಸಂಯಮದ ಅಭಿವ್ಯಕ್ತಿ, ಇವರ ಕತೆಗಳ ಕೇಂದ್ರ ಪಾತ್ರಗಳು ಸ್ತ್ರೀ ಮುಸ್ಲಿಂ ಸಮುದಾಯದ ಮಹಿಳೆಯ ಮನಃಸ್ಥಿತಿಯ ಒಳನೋಟಗಳನ್ನು ನೀಡುವಲ್ಲಿ ಈ ಕತೆ ಯಶಸ್ವಿಯಾಗಿದೆ. ಆ ಕತೆಯಲ್ಲಿ ಮದುವೆಯಾದ ಮುಸ್ಲಿಂ ಹೆಣ್ಣು ಮಗಳು ಗಂಡನ ಒತ್ತಾಯದಿಂದ ಅಣ್ಣನ ಬಳಿ ಆಸ್ತಿ ಪಾಲಿಗಾಗಿ ಬರುತ್ತಾಳೆ. ಈಕೆಯ ಅಣ್ಣನಿಗೆ ಈ ವಿಷಯ ತಿಳಿದು ಆಶ್ಚರ್ಯವಾಗುತ್ತದೆ. ಆಗ ಆತನ ಮನಸ್ಸಿನಲ್ಲಿ ಉಂಟಾಗುವ ಸೂಕ್ಷ್ಮತೆಗಳನ್ನು ಈ ಕತೆಯು ಪರಿಣಾಮಕಾರಯಾಗಿ ಚಿತ್ರಿಸುತ್ತದೆ. ಮುಂದಿನ ಸ್ತ್ರೀವಾದಿ ನೆಲೆಯ ಅಧ್ಯಾಯದಲ್ಲಿ ಮುಸ್ಲಿಂ ಕತೆಗಾರ್ತಿಯರ ಕತೆಗಳ ಅನನ್ಯತೆಯನ್ನು ಕುರಿತು ವಿಶ್ಲೇಷಣೆಯನ್ನು ಮಾಡುವ ಸಂದರ್ಭದಲ್ಲಿ ವಿಶೇಷವಾಗಿ ಗಮನಿಸುಯುವುದು.

ಬೋಳುವಾರು ಮಹಮ್ಮದ್ ಕುಂಞ ಆಧುನಿಕ ಸಣ್ಣಕತೆಗಳ ಸಂದರ್ಭದಲ್ಲಿ ಯೋಚಿಸಬೇಕಾದ ಕತೆಗಾರ. ಕಥನ ಕ್ರಮದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಾ ವಿನೋದ ಲವಲವಿಕೆಯನ್ನು ಇಟ್ಟುಕೊಂಡು ಬದುಕಿನಲ್ಲಿ ಗಹನವಾದದ್ದನ್ನು ಹೇಳಲು ಹವಣಿಸುತ್ತಿರುವ ಕತೆಗಾರರು. ಬೋಳುವಾರರಿಗೆ ಈಗಾಗಲೇ ಆಧುನಿಕ ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂದರ್ಭದಲ್ಲಿ ವಿಶೇಷವಾದ ಸ್ಥಾನವೂ ಇದೆ.

'ಮುತ್ತುಚೇರಾ' ಬೋಳುವಾರರ ಉತ್ಕೃಷ್ಟವಾದ ರಚನೆಯ ಕತೆ. ಮುಸ್ಲಿಂ ಹೆಣ್ಣು ಮಕ್ಕಳನ್ನು ಅರಬರು ಕೊಂಡುಕೊಳ್ಳುವ ಪ್ರಸಂಗವನ್ನು ಈ ಕತೆಯ ಹಂದರ ರಚನೆಗೊಂಡಿದೆ. ಈ ಹೆಣ್ಣು ಮಕ್ಕಳ ಮಾರಾಟ ಧರ್ಮ ಸಮ್ಮತವಾಗಿರುವುದು ಮುಸ್ಲಿಂ ಸಮಾಜದ ದುರಂತ ವ್ಯಂಗ್ಯವೆನ್ನುವಂತೆ ಚಿತ್ರಿತವಾಗಿವೆ. ಜನ್ಮನೀಡಿದ ತಂದೆ ತಾಯಿಗಳೇ ತಮ್ಮ ಆರ್ಥಿಕ ಸಾಮಾಜಿಕ ಪರಿಸ್ಥಿತಿಯ ಪರಿಣಾಮವಾಗಿ ಮಗಳನ್ನು ಮಾರಲು ಹೊರಡುವುದು ಮಾನವೀಯವಾದ ಅಣಕವಾಗಿಯೂ ಕತೆಯಲ್ಲಿ ನಿರೂಪಿತವಾಗಿದೆ. ಬೋಳುವಾರರು ಮತ್ತು ಚ್ಚೇರಾಕತೆ ಒಂದು ಊರಿನ ದುರಂತವನ್ನು ಆ ಹೆಣ್ಣುಮಕ್ಕಳ ಬದುಕಿನ ದುರಂತವನ್ನು ಹೇಳುವಲ್ಲಿ ಯಶಸ್ವಿ ಕತೆಯಾಗಿದೆ. ಹೆಣ್ಣುಮಕ್ಕಳನ್ನು ಮಾರಾಟ ಮಾಡಲು ದಲ್ಲಾಳಿಗಳು ನಡೆಸುವ ತಂತ್ರ ಅಸಹಾಯಕತೆಯನ್ನು ಕತೆ ಒಟ್ಟಾಗಿ ಧ್ವನಿಸುತ್ತದೆ. ತನಗೆ ಆಗುತ್ತಿರುವ ಅನ್ಯಾಯದ ಬಗ್ಗೆ ಕಥಾನಾಯಕಿ ಕೊನೆಗೆ ಸ್ಫೋಟಗೊಳ್ಳುತ್ತಾಳೆ. ಆಕೆ ಅನಿಷ್ಟ ಪದ್ದತಿಗೆ ಧರ್ಮ ಒಪ್ಪಿರುವದನ್ನು ಮತ್ತು ಮತಾಂತರವನ್ನು ಏಕಕಾಲಕ್ಕೆ ವಿರೋಧಿಸಿ ಬಂಡಾಯವನ್ನು ಪ್ರಕಟಿಸುತ್ತಾಳೆ. ಇಲ್ಲಿ ಬಂಡಾಯ ಕತೆಯಲ್ಲಿ ಗುಪ್ತಗಾಮಿಯಾಗಿ ಬಳಕೆಯಾಗಿದೆ.

ಬೋಳುವಾರರು ಧರ್ಮದ ನಿಜದನಿಯನ್ನು ಪ್ರತಿಪಾದಿಸುವ ಅವರ 'ಅಖಿರತೆ' 'ಇದ್ದತ್' ಕತೆಗಳು ವಿಶಿಷ್ಟ ರಚನೆಯಿಂದ ಕೂಡಿವೆ. ಮುಸ್ಲಿಂ ಧರ್ಮದ ಇವುಗಳ ಸಂಬಂಧವನ್ನು ಧಾರ್ಮಿಕ ಹಿನ್ನಲೆಯಲ್ಲಿ ಕಪ್ಪುಕಲ್ಲಿನ ಸೈತಾನ್ ಕತೆ ನಿರೂಪಿಸುತ್ತದೆ. ಹಾಗೇ ಬೋಳುವಾರರ ಮಹತ್ವದ ಕತೆ "ಆಕಾಶಕ್ಕೆ ನೀಲಿಪರದೆ" ಇದರಲ್ಲಿ ಕಲಾತ್ಮಕತೆಯ ಹುಡುಕಾಟ ಮತ್ತು ಧರ್ಮದ ಅಂತರ್ಯವನ್ನು ಅರಿಯುವ ಪ್ರಯತ್ನ ಎರಡು ವ್ಯಕ್ತವಾಗಿದೆ. ವ್ಯವಸ್ಥೆಯ ಕ್ರೌರ್ಯದಿಂದ ಹೆಣ್ಣೊಬ್ಬಳಲ್ಲಿ ಉಂಟಾಗುವ ಗೋಳು ಹಾಗೂ ಅಸಹಾಯಕತೆಯನ್ನು ಈ ಕತೆ ಮೇಲುದನಿಯಲ್ಲಿ ಹಿಡಿದಿಟ್ಟಿದೆ. ಬೋಳುವಾರರ ಮಹತ್ವದ ಬದಲಾವಣೆಗೆ ಮುಸ್ಲಿಂ ಜಗತ್ತಿನ ಅನನ್ಯ ವ್ಯಕ್ತಿತ್ವವನ್ನು ಚಿತ್ರಸುವ ಕತೆಯಾಗಿದೆ.

ಯಾವುದೇ ಜನಾಂಗವನ್ನು ಸರಳೀಕರಿಸುವ ಲೇಖಕ ತನ್ನ ಜನಾಂಗಕ್ಕೂ ಒಟ್ಟಿಗೆ ಅನ್ಯಾಯ ಮಾಡುತ್ತಿರುತ್ತಾನೆ. ಇದರಿಂದ ಉಂಟಾಗುವ ಸಾಮಾಜಿಕ, ಸಾಂಸ್ಕೃತಿಕ ದುಷ್ಪರಿಣಾಮಗಳು ಅಷ್ಟಿಷ್ಟಲ್ಲ. ಕುರುಡು ಪ್ರೇಮವೂ ಕುರುಡು ದ್ವೇಷದಷ್ಟೆ ಖಂಡನೀಯ. ಈ ದೃಷ್ಟಿಯಿಂದ ನೋಡಿದಾಗ ಅಂಕ ಸಂಕಲನದಲ್ಲಿ ಬೋಳುವಾರರು ತಮ್ಮ ಹಿಂದಿನ ಸಂಕಲನಗಳಲ್ಲಿ ಅಲ್ಲಲ್ಲಿ ಕಾಣುತ್ತಿದ್ದ ಸಂಕೋಚ, ಅತಿ ಪ್ರಜ್ಞೆಗಳಿಂದ ಮುಕ್ತರಾಗಿ ಸಲೀಸಾಗಿ ಲವಲವಿಕೆಯಿಂದ ತಮ್ಮವ್ಯಕ್ತಿತ್ವಕ್ಕೆ ಒಪ್ಪುವ ಸಹಜ ದನಿಯಲ್ಲಿ ಮಾತನಾಡುತ್ತಿರುವದು ತುಂಬ ಮುಖ್ಯವಾಗುತ್ತದೆ. ಏಕೆಂದರೆ ಜಾತಿ, ವರ್ಗ, ವರ್ಣ, ಧರ್ಮಗಳಿಂದ ವಿಭಜಿತವಾದ ಸಮಾಜದಲ್ಲಿ ಸಂವಹನಕ್ರಿಯೆಗೆ ಅನಿವಾರ್ಯವೆಂಬಂತೆ ಅಸಹಜ ಎಳೆ ಸೇರಿಕೊಂಡಿದೆ. ಜಾತಿ ವಾದಿಗಳು ತಮ್ಮವರನ್ನು ಸದಾಕಾಲ ಟೀಕಿಸದೆ ಹಾಡಿಹೊಗಳಿ ಸುಪ್ರೀತರಾಗಿಸಲು ಪ್ರಯತ್ನಿಸುತ್ತಿರುತ್ತಾರೆ. ವ್ಯಕ್ತಿಗಳನ್ನು ಅವರ ಬಣ್ಣಚಹರೆಗಳಿಗಾಗಿ ಟೀಕಿಸುವ ವರ್ಗ, ಜಾತಿ ಎಲ್ಲೆಗಳನ್ನು ಮೀರಿ ಎಲ್ಲಾ ವ್ಯಕ್ತಿಗಳ ಸದ್ಗುಣಗಳನ್ನು ಸಹಜವಾಗಿ ಮೆಚ್ಚುವ ವ್ಯವಸ್ಥೆಗಾಗಿ ದುಡುಯುತ್ತಿರುವ ಲೇಖಕರಲ್ಲಿ ಬೋಳುವಾರರು ಮುಖ್ಯ ಲೇಖಕರಾಗಿದ್ದಾರೆ.

ಈ ಸಂಕಲನದ ಮುಖ್ಯ ಕತೆಯಾದ 'ಅಂಕ'ದಲ್ಲಿ ಬೋಳುವಾರರ ಕತೆಗಾರಿಕೆಯ ಮುಖ್ಯ ಲಕ್ಷಣಗಳೆಲ್ಲವೂಇದೆ. ಈ ಕತೆ ಮತಾಂತರ ಸಮಸ್ಯೆಯನ್ನು ಚಿತ್ರಿಸುತ್ತದೆ, ಕತೆಯ ಶೀರ್ಷಿಕೆಯು ಧ್ವನಿಪೂರ್ಣವಾಗಿದ್ದು ರೆಹಮಾನ್ ಎಂಬ ಮುಸ್ಲಿಂ ಯುವಕನೊಬ್ಬ ಇಲ್ಲಿ ಹಿಂದೂಧರ್ಮಕ್ಕೆ ಮತಾಂತರಗೊಂಡು ರಮೇಶನಾಗಿದ್ದಾನೆ, ಇದಕ್ಕೆ ಆತನ ಬಡತನ, ನಿರುದ್ಯೊಗ ಮತ್ತು ತನ್ನವರ ಅನಾಧಾರಣೆ ಒಂದು ಕಾರಣವಾದರೆ, ಹಿಂದೂ ಕೋಮುವಾದಿಗಳ ಚಿತಾವಣೆ ಮತ್ತು ಅನೇಕ ಬಗೆಯ ಆಮೀಷಗಳು ಕಾರಣವಾಗಿವೆ. ಈ ವಸ್ತು ಹಿಂದೂ ಕೋಮುವಾದಿ ಲೇಖಕನಿಗೂ ಮುಸ್ಲಿಂ ಕೋಮುವಾದಿ ಲೇಖಕನಿಗೂ ಆಹಾರವಾಗಿದೆ. ಕತೆಯ ಸ್ವರೂಪವೇನಾಗುತ್ತಿತ್ತೆಂಬುದನ್ನು ನಾವು ಸುಲಭವಾಗಿ ಊಹಿಸಬಹುದು. ಹಾಗೆ ನೋಡಿದರೆ ಮತಾಂತರ ಈ ಕತೆಯಲ್ಲಿ ಬೋಳುವಾರರಿಗೆ ಮುಖ್ಯವಾಗುದಿಲ್ಲ. ಈ ನೆಪದಲ್ಲಿ ಎರಡು ಜನಾಂಗಗಳು ಪರಸ್ಪರ ದ್ವೇಷಕಾರುವ ಪ್ರಸಂಗವನ್ನು ತಮ್ಮಅಸ್ತಿತ್ವ ಸ್ಥಾಪಿಸಿಕೊಳ್ಳಲು ಹೊಂಚುವ ಇದರಿಂದಾಗಿ ಆ ಯುವಕ ತಾಯಿಯ ಅಳಲಿಗೆ ಕುರುಡಾಗುವ ಪ್ರವೃತ್ತಿಯನ್ನು ಚಿತ್ರಿಸುವದು ಲೇಖಕನಿಗೆ ಮುಖ್ಯವಾಗುತ್ತದೆ. ಕೊನೆಗೂ ಗೆಲ್ಲುವದು ತಾಯಿ ಮಕ್ಕಳ ಮಾನವೀಯ ಸಂಬಂಧವೇ ಹೊರತು ಯಾವ ಕೋಮು ಶಕ್ತಿಯೂ ಅಲ್ಲ. ಹೀಗೆ ಮತಾಂತರ ಸಮಸ್ಯೆಯನ್ನು ಎಲ್ಲ ಭಾವುಕ ಧಾರ್ಮಿಕ ನೆಲೆಗಳಿಂದ ದೂರವಿಟ್ಟು ಸಾಮಾಜಿಕ, ಆರ್ಥಿಕ ನೆಲೆಯಲ್ಲಿ ಅರ್ಥಮಾಡಿಕೊಳ್ಳಬಯಸುವ ಲೇಖಕರು ಕೋಮುಜ್ವಾಲೆಗೆ ಕಾರಣವಾಗುವ ಎಲ್ಲ ಎಳೆಗಳನ್ನು ಬಿಡಿಸಿ ತೋರಿಸಿದ್ದಾರೆ. ಮತಾಂತರ ಸಮಸ್ಯೆಯನ್ನು ಭೂತಗನ್ನಡಿಯಲ್ಲಿ ನೋಡುವವರ ಆಳದಲ್ಲಿ

ಯಥಾಸ್ಥಿತಿವಾದಿಗಳೇ ಆಗಿರುತ್ತಾರೆಂಬ ಸತ್ಯ ಇಲ್ಲಿ ಎದ್ದುತೋರುತ್ತದೆ. ಎರಡು ಮತಾಂಧ ಗುಂಪುಗಳ ಪ್ರತಿಷ್ಠೆಯ ಕಣದಲ್ಲಿ ಕೇವಲ ಅಂಕದ ಕೋಳಿಗಳಾಗುವ ಮುಗ್ಧರ ಭವಣೆಯನ್ನು ಸೂಕ್ಷ್ಮವಾಗಿ ದಾಖಲು ಮಾಡುವ ಕತೆ ಉಮ್ಮಾಬಿಯ ಪಾತ್ರ ಚಿತ್ರಣದಲ್ಲಿ ಸಾಧಿಸುವ ಸಂಕೀರ್ಣತೆ ಗಮನಾರ್ಹವಾಗಿದೆ. ಉಳ್ಳವರ ಮನೋರಂಜನೆ ಧಾಷ್ಟಕ್ಕೆ, ಪ್ರತಿಷ್ಠೆಗೆ ಕೇವಲ ವಸ್ತುವಾಗಿದ್ದೇವೆಂಬ ಅರಿವಿನಲ್ಲಿ ಹುಟ್ಟುವ ಬಂಡಾಯವೂ ಇಲ್ಲಿ ಸೂಚಿತವಾಗಿದೆ. ಆ ಯುವಕ ಬದುಕಿದ್ದಾಗ ಮಾತ್ರವಲ್ಲ ಸತ್ತಮೇಲು ತಮ್ಮ ವರ್ಗಾಸಕ್ತಿಗಳನ್ನು ಪೋಷಿಸಬೇಕೆಂದು ಸನ್ನಾಹ ನಡೆಸುವ ಮತಾಂಧರ ಗುಂಪುಗಳ ಮೂರ್ಖತನ ಅವನು ಬದುಕಿದ್ದರೆ ಹೆಚ್ಚುಲಾಭವೋ, ಸತ್ತರೆ ಹೆಚ್ಚುಲಾಭವೋ ಎಂದು ಅವರು ನಡೆಸುವ ಜಿಜ್ಞಾಸೆಗಳು ದಿಗ್ಭ್ರಮೆ ಹುಟ್ಟಿಸುವಂತಿವೆ. ಇದೆಲ್ಲದರ ಮಧ್ಯದಲ್ಲಿ ತನ್ನ ಮಗನ ಒಳಿತನ್ನು ಧರ್ಮ ಜಿಜ್ಞಾಸೆಯ ಠಕ್ಕಿನಿಂದ ದೂರವಿಟ್ಟು ಕೇವಲ ಮಾನವೀಯ ಅನುಕಂಪದ ನೆಲೆಯಲ್ಲಿ ಮಾತ್ರ ಕಂಡುಕೊಳ್ಳುವ ಉಮ್ಮಾಬಿ ಓದುಗರಲ್ಲಿ ಹೊಸ ಭರವಸೆಯನ್ನು ಹುಟ್ಟಿಸುವ ದಿಟ್ಟ ಪಾತ್ರವಾಗಿ ಉಳಿದುಕೊಳ್ಳುತ್ತಾಳೆ. ಇಷ್ಟೆ ಆಗಿದ್ದರೆ ಈ ಕತೆಯ ಬಗ್ಗೆ ಇಷ್ಟೆಲ್ಲಾ ಚಿಂತಿಸಿದರೂ ಈ ಕತೆಯಲ್ಲಿ ಸಾಮಾಜಿಕ ಸಮಸ್ಯೆಯೊಂದರ ಚರ್ಚೆಯಾಗಿದೆ. ಈ ಸಾಮಾಜಿಕ ಕ್ರಿಯೆಯನ್ನು ವಿವಿಧ ಗುಂಪುಗಳು ಪರಿಭಾವಿಸುವ ತಮ್ಮ ಅಗತ್ಯಕ್ಕೆ ಬಳಸಿಕೊಳ್ಳುವ ರೀತಿಗಳೇ ಲೇಖಕರಿಗೆ ಮುಖ್ಯವಾಗಿ ಕಂಡಿವೆ. ಈ ಕ್ರಿಯೆಗಿಂತ ಹೆಚ್ಚಾಗಿ ಅದರಿಂದ ಹುಟ್ಟುವ ಕ್ರಿಯೆಗಳ ಬಗ್ಗೆಯೇ ಬೋಳುವಾರರು ನಮ್ಮ ಗಮನ ಸೆಳೆಯುತ್ತಾರೆ. ಮತಾಂತರವನ್ನಾಗಲಿ, ಮತಾಂಧತೆಯನ್ನಾಗಲೀ ಉಮ್ಮಾಬಿಯ ಅಳಲನ್ನಾಗಲೀ ಸಿದ್ಧ ಪ್ರಕ್ರಿಯೆಗಳನ್ನು ಹೊತ್ತು ಓದುವ ವರ್ಗಕ್ಕೆ ಕ್ಲೀಶೆಯಾಗದಂತೆ ಹೇಗೆ ಸಂವಹಿಸಬೇಕೆಂಬ ಕಾಳಜಿ ಇಲ್ಲಿ ದಟ್ಟವಾಗಿದೆ. ಇದರಿಂದಾಗಿ ಕಥನಕ್ಕೆ ಒಂದು ವಿಶಿಷ್ಟ ಬಗೆಯ ನಾಟಕೀಯತೆ ಪ್ರಾಪ್ತವಾದಂತೆ ವೈಯಕ್ತಿಕ ತೀವ್ರತೆಯೂ ಸೇರಿಕೊಂಡುಬಿಟ್ಟಿದೆ. ಈ ಕತೆ ಓದುಗನ ಮನದಲ್ಲಿ ಹೊಸ ಚಿಂತನೆಗೆ ಈಡುಮಾಡುತ್ತದೆ.

ಬೋಳುವಾರರ ''ಮುದುಕ ಹೇಳಿದ ಕತೆ'' ಕೂಡ ಅಂಕದಂತೆ ವಿಶಾಲ ವ್ಯಾಪ್ತಿಯುಳ್ಳ ಕತೆಯಾಗಿದೆ. ಕತೆಗಾರರು ಈ ಕತೆಯಲ್ಲಿ ಮುಸ್ಲಿಂ ಜನಾಂಗದ ವೀಕ್ಷಕರಾಗಿಯೇ ಉಳಿದೆಲ್ಲ ಹಿಂದೂ, ಮುಸ್ಲಿಂ ಸಂಬಂಧಗಳ ಬಗ್ಗೆಯೇ ಗಾಡ ಒಳನೋಟಗಳನ್ನಿಟ್ಟುಕೊಂಡು ಬರೆಯುತ್ತಿದ್ದಾರೆ. ಈ ಕತೆಯಲ್ಲಿ ವರ್ಣಿತವಾಗಿರುವ ಪಂಡಿತರು ಮತ್ತು ಹಸನಬ್ಬರ ಮನುಷ್ಯ ಸಂಬಂಧಗಳ ಸ್ವರೂಪವು ಹೃದಯ ಸ್ಪರ್ಶಿಯಾಗಿ ಚಿತ್ರಿತವಾಗಿದೆ. ಅವರಿಬ್ಬರ ಸ್ನೇಹ ಎಷ್ಟು ಗಾಢವಾಗಿದೆಯೆಂದರೆ ಅದು ಒಂದು ರೀತಿಯಲ್ಲಿ ಆ ಊರಿನಲ್ಲಿ ಹಿಂದೂ ಮುಸ್ಲಿಂ ಸಂಬಂಧಗಳನ್ನು ಮೇಲುಸ್ತರದಲ್ಲಿಯಾದರೂ ಸೌಹಾರ್ದವಾಗಿಬಿಟ್ಟಿದೆ. ಅದೊಂದು ಆದರ್ಶ ಅನುಕರಣೀಯ ಸಂಬಂಧವಾಗಿದೆ. ಆದರೆ ಈ ಸಂಬಂಧ ಕೂಡ ಹಿಂದೂ ಮುಸ್ಲಿಂ ಸಂಬಂಧವಾಗಿರುವುದರಿಂದ ಆ ಎರಡು ಜನಾಂಗಗಳ ಚಾರಿತ್ರಿಕ ಮತ್ತು ಸಮಕಾಲೀನ ಮಾನಸಿಕ ಸ್ಥಿತಿಗತಿಗಳ ಸುಪ್ತ ಪ್ರಭಾವಗಳಿಂದ ಸಂಪೂರ್ಣವಾಗಿ ಮುಕ್ತವಾಗಿಲ್ಲ. ಮತಾಂತರ ಅಪಾದನೆಗೆ ಪಂಡಿತರು ಸಿಕ್ಕಿಕೊಂಡಾಗ ಈ ಸ್ನೇಹ ನಿಜವಾದ ಅಗ್ನಿ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ.

ಪಂಡಿತರು ಹೇಳುತ್ತಾರೆ ''ಒಂದು ವೇಳೆ ಹಸನಬ್ಬನವರು, ಪಂಡಿತರು ಸುಳ್ಳುಹೇಳುತ್ತಿದ್ದಾರೆಯೆಂಬ ಒಂದೇ ಮಾತು ಹೇಳಿದರೆ ನಾನು ಎಲ್ಲಾ ಆರೋಪಗಳನ್ನು ಹೊತ್ತುಕೊಳ್ಳುತ್ತೇನೆ''[೨] ಹಸನಬ್ಬ ಪಂಡಿತರ ಪರಮಾಪ್ತ ''ಸ್ನೇಹಿತರಾಗಿದ್ದವರು. ಅಲ್ಲದೆ ಅವರು ಕೋಮುವಾದಿಯಾಗಿರಲಿಲ್ಲ. ಅವರ ಮಾತನ್ನು ಗೌರವಿಸುವ ಜನರಿದ್ದರು. ಪಂಡಿತರ ಮಾತಿನಿಂದ ಗಲಿಬಲಿಗೊಂಡ ಗುಂಪು ತನ್ನ ಗುಸು ಗುಸು ನಿಲ್ಲಿಸಿ ಹಸನಬ್ಬರ ಧ್ವನಿಗಾಗಿ ಕಿವಿಯಾನಿಸಿತು ಸಾಸಿವೆಕಾಳು ಬಿದ್ದರೂ ಕೇಳಬಲ್ಲ ಮೌನ ಆವರಿಸಿತು''[೩] ಇಂಥ ಪ್ರಸಂಗಗಳಲ್ಲಿ ಹಸನಬ್ಬಯಾವ ರೀತಿ

ನಡೆದುಕೊಂಡರು? ಇದನ್ನು ವರ್ಣಿಸುವಾಗ ಬೋಳುವಾರರು ಅತೀವ ಸಂಯಮವನ್ನು, ವಸ್ತುನಿಷ್ಠತೆಯನ್ನು ತೋರಿದ್ದಾರೆ. ಹಸನಬ್ಬನವರ ಎದೆ ಧಸಕ್ಕೆಂದಿತು. ತುಟಿ ಅದುರಿತು. ಮಾತಿಗಾಗಿ ತಡವರಿಸಿದವರಿಗೆ ತಲೆ ಸುತ್ತಿ ಬಂದಂತಾಯಿತು. ಅರೆ ನಿಮಿಷ ಕಲ್ಲಿನಂತೆ ನಿಂತ ಹಸನಬ್ಬನವರು ಹುಚ್ಚು ಹಿಡಿದವರಂತೆ ಮುಂಡಾಸಿನಿಂದ ಮುಖ ಮುಚ್ಚಿಕೊಂಡು ಕಟ್ಟೆಯಿಂದಿಳಿದು ರಸ್ತೆಯ ಕತ್ತಲಿಗೆ ನುಗ್ಗಿ ಮಾಯವಾಗಿ ಬಿಟ್ಟರು. ಗುಂಪು 'ಹೋ' ಎಂದು ಕೂಗಿತು. ಪಂಡಿತರಿಗೆ ಕರುಳೇ ಹೊರ ಬಿದ್ದು ಕತ್ತಲಲ್ಲಿ ಹರಿದು ಹೋದಂತಾಗಿ ಕಣ್ಣು ಕತ್ತಲಿಟ್ಟಿತು. ಕೂತನೆಲ ನಿಧಾನವಾಗಿ ಕುಸಿಯುವಂತೆ ಭಾಸವಾಗತೊಡಗಿತು''. (ಮುದುಕಹೇಳಿದಕತೆ)

ಈ ಮೌನದ ಅರ್ಥವೇನು? ಎಂಬ ತಾತ್ವಿಕ ಪ್ರಶ್ನೆಯ ಸ್ಪಷ್ಟತೆಗೆ ಕತೆಯ ಮತ್ತೊಂದು ಪುಟದಲ್ಲಿರುವ ವಾಕ್ಯವೂ ಸಮರ್ಥನೀಯ ವ್ಯಾಖ್ಯೆಯಾಗುತ್ತದೆ. ''ಪಂಡಿತರೇ ಅವರಿಬ್ಬರಿಗೆ ಆಶ್ರಯ ಕೊಟ್ಟಿದ್ದಾರೆ ಎಂಬುದು ಗೊತ್ತಾದಾಗ ಬಾಯಿ ಬಂದಾಗಿತ್ತು'' ಇಲ್ಲಿ ಪಂಡಿತರು ಮಾಡಿದ್ದು ತಪ್ಪಲ್ಲವೆಂದು ಹೇಳಿ ಸಾರ್ವಜನಿಕ ರೋಷಕ್ಕೆ ಸಿಕ್ಕಿಕೊಳ್ಳುವುದು ಹಸನಬ್ಬರಿಗೆ ಬೇಡವಾಗಿತ್ತೆ? ಅಥವಾ ತಮ್ಮ ಮೌನ ಪಂಡಿತರನ್ನು ಸಾರ್ವಜನಿಕ ರೋಷದಿಂದ ಉಳಿಸುವ ಉಪಾಯವಾಗಿತ್ತೇ? ತಮಗೆ ವೈಯಕ್ತಿಕವಾಗಿ ಇಷ್ಟವಾಗದ ಧರ್ಮ ಸಂಬಂಧಿಕಾರ್ಯವೊಂದನ್ನು ತಮ್ಮ ಪರಮಾಪ್ತ ಸ್ನೇಹಿತರಾದ ಪಂಡಿತರು ಮಾಡಿದಾಗ ಅದನ್ನು ಸಮರ್ಥಿಸಲು ಆಗದ ತಿರಸ್ಕರಿಸಲೂ ಆಗದ ದ್ವಂದ್ವವೇ? ಹಿಂದೂ ಮುಸ್ಲಿಂ ಸಂಬಂಧಗಳ ಸ್ವರೂಪದಷ್ಟೇ ಈ ಪ್ರಶ್ನೆಗಳೂ ನಿಗೂಢವಾಗಿ ಉಳಿದುಕೊಳ್ಳುತ್ತವೆಂದು ಕತೆಯ ಆಳದಲ್ಲಿರುವ ವಿಷಾದ ತಲ್ಲಣಗಳನ್ನು ಮನ ಮುಟ್ಟುವಂತೆ ಚಿತ್ರಿಸಿದ್ದಾರೆ.

ಈ ಸಂಕಲನದ ಮತ್ತೊಂದು ಕತೆ 'ಪ್ರಗತಿ ಪಥ ಅಥವಾ ದನದ ಬಾಲ'[೨] ಎಂಬ ಕತೆಯೂ ಹಿಂದೂ ಮುಸ್ಲಿಂ ಸಂಬಂಧವನ್ನು ಕುರಿತದ್ದೇ ಆಗಿದೆ. ಕಾಲದಿಂದ ಕಾಲಕ್ಕೆ ಉಲ್ಬಣವಾಗುತ್ತಿರುವ ಕೋಮುದ್ವೇಶದ ಸ್ವರೂಪವನ್ನು ವಿಷಾದದಿಂದ ದಾಖಲು ಮಾಡಲಾಗಿದೆ. ಹಿಂದೂ ಮುಸ್ಲಿಂ ಸಂಬಂಧ ಹದಗೆಡುತ್ತಿರುವ ನೆಲೆಯನ್ನು ಈ ಕತೆ ಶೋಧಿಸುತ್ತದೆ.

''ಕಪ್ಪುಕಲ್ಲಿನ ಸೈತಾನ'' ಕತೆ ಕೂಡ ಮುಸ್ಲಿಂ ಸಮಾಜದೊಳಗಿನ ಕತೆಯಾಗಿದೆ. ಬಡ ಮುಸ್ಲಿಂ ಕುಟುಂಬವೊಂದು ರಿಯಾಯಿತಿ ಧರದಲಿ ಹೆಚ್ಚು ಅಕ್ಕಿಯನ್ನು ಪಡೆಯಲು ಹೋಗಿ ಪೇಚಿಗೆ ಸಿಕ್ಕಿಕೊಂಡ ಸ್ವಾರಸ್ಯಕರ ಪ್ರಸಂಗವು ಇದಾಗಿದೆ. ಈ ಕತೆಯ ದಾಟಿ ವಿನೋದ ಪೂರ್ಣವಾಗಿದ್ದರೂ ಆ ಕುಟುಂಬ ಮನುಷ್ಯ ಸಂಬಂಧಗಳನ್ನು ಆಸೆ-ಆಕಾಂಕ್ಷೆಗಳನ್ನೂ ದಟ್ಟವಾಗಿ ಸೆರೆಹಿಡಿದಿದ್ದಾರೆ. ಇಂದಿನ ಸರಕಾರಿ ಸಂಸ್ಥೆಗಳಾಗಲೀ, ಧಾರ್ಮಿಕ ಸಂಸ್ಥೆಗಳಾಗಲೀ ಬಡವರ ಅಶೋತ್ತರಗಳಿಗೆ ಎಂದೂ ಸ್ಪಂದಿಸಲಾರವೆಂಬ ಕಟು ಸತ್ಯ ಈ ಕತೆಯಲ್ಲಿ ಸುಪ್ತವಾಗಿ ಚಿತ್ರಿತವಾಗಿದೆ. ವಿನೋದಪೂರ್ಣ ಲಘುದಾಟಿಯಲ್ಲಿ ಕತೆಯನ್ನು ಎಣೆದಿರುವ ಬೋಳುವಾರರು ನಮ್ಮನ್ನು ಸಮಸ್ಯೆಗಳ ಆಳಕ್ಕೆ ಕರೆದೊಯ್ಯುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದಾರೆ. ರೇಶನ್ ಕಾರ್ಡು ಕೊಡಲು ಬಂದವರೆಂದು ತಪ್ಪು ತಿಳಿದು ಮೂರು ಕುಟುಂಬವಿದೆಯೆಂದು ಸುಳ್ಳು ಹೇಳಿ, ಮೂರು ಚಂದಾ ಕೊಡುವಂಥಾ ಪೇಚಿಗೆ ಸಿಕ್ಕಿಕೊಂಡ ಬಡ ಮುಸ್ಲಿಂ ಕುಟುಂಬವೊಂದರ ದೈನಂದಿನ ಜೀವನ ಚಿತ್ರಣ ಅದರೆಲ್ಲಾ ಸೂಕ್ಷ್ಮ ವಿವರಗಳಲ್ಲಿ ಕತೆ ಕಲಾತ್ಮಕವಾಗಿ ಮೂಡಿ ಬಂದಿದೆ.

'ಹಲ್ಲೆಯ ನಂತರ' ಮತ್ತು 'ಬೇಟೆ' ಕತೆಗಳಲ್ಲಿಯ ಪಾತ್ರಗಳೂ ಕೂಡ ಮುಸ್ಲಿಂ ಸಮಾಜಕ್ಕೆ ಸೇರಿದವುಗಳು. 'ಹಲ್ಲೆಯ ನಂತರ' ಕತೆಯಲ್ಲಿ ಸೀರೆಯೊಂದರ ವಿಷಯದಲ್ಲಿ ಹೆಂಗಸರಿಬ್ಬರಲ್ಲಿ ಜಗಳವಾಗಿ ಕೊನೆಗೆ ಅವರಿಬ್ಬರಿಗೂ ಒಂದಾಗುವುದರಲ್ಲಿ ಮುಖ್ಯವಾಗುತ್ತದೆ. ಬಡ, ಗ್ರಾಮೀಣ ಹೆಣ್ಣು ಮಕ್ಕಳ ಮನಸ್ಸಿಗೆ ಕನ್ನಡಿ ಹಿಡಿಯುವ ಕತೆಯಿದು. 'ಬೇಟೆ' ಒಂದು ಕುತೂಹಲಕಾರಿ ರಚನೆಯ ಕತೆಯಾಗಿದೆ. ಈ ಕತೆಯಲ್ಲಿ ಬರುವ ಮೂಸಜ್ಜನ ನೈತಿಕ ಸಂಘರ್ಷವನ್ನು ಸೂಕ್ಷ್ಮವಾಗಿ ಕತೆ ದಾಖಲಿಸಿದೆ. ಮೂಸಜ್ಜನ ಕೈಜಮ್ಮ ಮತ್ತು ಮೂಸಜ್ಜ-ಬದ್ರುದೀನ್ ಸಂಬಂಧಗಳನ್ನು ಕತೆಗಾರ ಬೋಳುವಾರರು ಬಿಡಿಸಿರುವ ರೀತಿ ಆಕರ್ಷಕವಾಗಿದೆ. ಮಕ್ಕಳಿಲ್ಲದ ಮೂಸಜ್ಜ ಬದ್ರುದೀನನನ್ನು ಸಾಕತೊಡಗಿ ತಮ್ಮ ಶಿಸ್ತನ್ನು ಅವನಿಗೆ ಕಲಿಸಲು ಹೋಗಿ ಸೋತು ಅವನು ಪೂರಾ ದಾರಿ ತಪ್ಪಿದಾಗ ಮನೆಯಿಂದ ಹೊರಗೆ ಹಾಕುತ್ತಾರೆ. ಹಲವು ವರುಷಗಳ ನಂತರ ಬದ್ರುದೀನ್ ಹಾಗಾಗಲು ತಾವೇ ಕಾರಣವೇ? ಅವನಿಗೆ ತಮ್ಮಿಂದ ಅನ್ಯಾಯವಾಯಿತೆ? ತಾವು ಆತನನ್ನು ಸರಿಯಾಗಿ ನಡೆಸಿಕೊಳ್ಳಲಿಲ್ಲವೇ? ಅವನಿಗೆ ಒಳ್ಳೆಯದನ್ನು ಮಾಡುವ ಅವಕಾಶ ಬಂದರೂ ತಾವು ಕಳೆದುಕೊಂಡರೆ? ಮುಂತಾದ ಪ್ರಶ್ನೆಗಳು ಮೂಸಜ್ಜನನ್ನು ಬಾಧಿಸಿದರೆ, ಯಾವುದರಿಂದಲೂ ಬಾಧಿತನಾಗದ ಬದ್ರುದೀನ್ ಅವರಿಗೆ ತದ್ವಿರುದ್ಧ ಪಾತ್ರವಾಗಿದ್ದಾನೆ. ಈ ಕತೆಯಲ್ಲಿ ಬರುವ ಕೈಜಮ್ಮ ತುಂಬ ಮುಗ್ಧರು. ಈ ಮೂರು ವಿಭಿನ್ನ ಪಾತ್ರಗಳ ನಡುವೆ ಕಟ್ಟಿಕೊಂಡ ಕತೆ ಮನುಷ್ಯ ಸ್ವಭಾವದ ಹಲವು ಪದರುಗಳನ್ನು ಅನಾವರಣಗೊಳಿಸುವುದರ ಜೊತೆಗೆ ವಿಶಿಷ್ಟ ಬಗೆಯ ನಾಟಕೀಯತೆಯನ್ನು ಸಾಧಿಸಿಕೊಂಡಿದೆ.

ಬೋಳುವಾರರು ಮನುಷ್ಯ ಮನುಷ್ಯರ ನಡುವಿನ ಜಾತಿ, ಧರ್ಮದ ಮೌಢ್ಯತೆಯ ಗೋಡೆಗಳನ್ನು ''ಒಂದು ತುಂಡು ಗೋಡೆ ಕತೆ'' ನಿರೂಪಿಸುತ್ತದೆ. ಈ ಕತೆಯ ನಾಯಕಿ ರೊಟ್ಟಿ ಪಾತುಮ್ಮ ವಿಧವೆ. ಮುತ್ತುಪ್ಪಾಡಿಯ ಮಸೀದಿ ಗುಡ್ಡೆಯ ಕೆಳಗೆ ಗುಡಿಸಲು ಕಟ್ಟಿಕೊಂಡು ಬದುಕುತ್ತಿರುವ ಬಡ ಮುಸ್ಲಿಂ ಮಹಿಳೆ. ಈಕೆ ಅಕ್ಕಿ ರೊಟ್ಟಿಯನ್ನು ಮಾರಿ ಉಪಜೀವನ ಮಾಡುತ್ತಿರುವವಳು. ದೇವರಾಜು ಅರಸು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಮಂಗಳೂರು ನೆಹರೂ ಮೈದಾನದಲ್ಲಿ ನಡೆದಿದ್ದ ಭವ್ಯ ಸಮಾರಂಭದಲ್ಲಿ ಈಕೆಗೆ ಐದು ಸೆಂಟ್ಸ್ ಮನೆಯ ನಿವೇಶನದ ಹಕ್ಕು ಪತ್ರ ನೀಡಿದ್ದಾರೆ. ಆದರೆ ಆಕೆ ಮನೆ ಕಟ್ಟಿಕೊಳ್ಳಲು ಆಗುತ್ತಿಲ್ಲ. ಆರ್ಥಿಕವಾಗಿ ದುರ್ಬಲಗೊಂಡ ಮುಸ್ಲಿಂ ಮಹಿಳೆಯಾಗಿದ್ದಾಳೆ. ತಾನು ನಿತ್ಯ ಮಾಡುತ್ತಿದ್ದ ರೊಟ್ಟಿ ಕಾಯಕದಲ್ಲಿ ಅದರಿಂದ ಬಂದ ಉಳಿತಾಯ ಹಣವನ್ನು ಆ ಊರಿನ ಶ್ರೀನಿವಾಸ ಆಚಾರ್ಯರ ಅಂಗಡಿಯಲ್ಲಿ ತಾನು ದುಡಿದು ಸಂಗ್ರಹಿಸಿದ ಹಣವನ್ನು ನಿತ್ಯ ನೀಡಿ ಮನೆ ಕಟ್ಟಿಸುವ ಸಂದರ್ಭದಲ್ಲಿ ಮರಳಿ ಪಡೆಯುವುದಾಗಿ ಹೇಳಿರುತ್ತಾಳೆ. ರೊಟ್ಟಿಪಾತುಮ್ಮ ಮುಸ್ಲಿಂ ಮಹಿಳೆಯಾದರೂ ಹಿಂದುಗಳಾದ ಆಚಾರ್ಯರ ಕುಟುಂಬದ ಮೇಲೆ ಅಪಾರ ಗೌರವಯಿಟ್ಟುಕೊಂಡಿದ್ದಾಳೆ. ಶ್ರೀನಿವಾಸ ಆಚಾರ್ಯರರ ಮಕ್ಕಳಾದ ಕೇಶವ ಮತ್ತು ಚಂದ್ರಣ್ಣನಿಗೂ ಮುಸ್ಲಿಂ ಮಹಿಳೆಯಾದ ರೊಟ್ಟಿ ಪಾತುಮ್ಮಳ ಮೇಲೆ ಎಲ್ಲಿಲ್ಲದ ಗೌರವವಿದೆ. ಈ ಸಂದರ್ಭದಲ್ಲಿ ನಾಡಿನ ತುಂಬೆಲ್ಲಾ ಹಿಂದೂ ಮೂಲಭೂತವಾದಿಗಳು ಸೃಷ್ಟಿಸಿದ ಸಮಸ್ಯೆಗಳು ಹಲವಾರು ನಿರ್ಣಯಗಳಿಗೆ ಕಾರಣವಾಗುತ್ತವೆ. ಅಯೋಧ್ಯೆಯಲ್ಲಿ ಮಸೀದಿ ಕೆಡವಿದರ ರದ್ಧಾಂತ ದೇಶದಲ್ಲಿ ಹೊಸ ಅವಾಂತರಗಳನ್ನು ಸೃಷ್ಟಿಸುತ್ತದೆ. ಹಿಂದೂ ಮತೀಯವಾದಿಗಳು ರಾಮಮಂದಿರ ನಿರ್ಮಾಣದ ಹೊಸ ತರ್ಕಗಳಿಂದ ದೇಶದ ಭಾವಕ್ಯತೆಗೆ ಹೊಸ ಪೆಟ್ಟು ಕೊಡತೊಡಗುತ್ತಾರೆ. ಕರ ಸೇವೆಯ ನೆಪದಲ್ಲಿ ಹಿಂದುಗಳು ಅಯೋಧ್ಯೆಯ ಕಡೆ ಸಾಗುತ್ತಾರೆ. ಊರಿನಲ್ಲಿದ್ದ ರಾಮದಾಸ ಕಿಣಿಯವರ ನೇತೃತ್ವದಲ್ಲಿ ಚಂದ್ರಣ್ಣನು ಒತ್ತಾಯದ ಮೇರೆಗೆ ಅಯೋಧ್ಯೆಗೆ ಹೋಗುತ್ತಾನೆ. ತಂದೆ ಬೇಡವೆಂದರೂ ಜನರ ಒತ್ತಾಯಕ್ಕೆ ಮಣಿದು ಹಿಂದೂ ಮೂಲಭೂತವಾದಿಯಂತೆ

ನಡೆದುಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ದೇಶದ ತುಂಬಾ ಹಿಂದೂ ಮುಸ್ಲಿಂ ಕೋಮುಗಲಭೆ ಭುಗಿಲೇಳುತ್ತದೆ. ಇದ್ಯಾವುದರ ಬಗ್ಗೆ ತಲೆಕೆಡಿಸಿಕೊಳ್ಳಲಾರದ ರೊಟ್ಟಿ ಪಾತುಮ್ಮ ಎಲ್ಲರೊಂದಿಗೆ ಒಂದಾಗಿರುತ್ತಾಳೆ. ಚಂದ್ರಣ್ಣ ಕರ ಸೇವೆಗೆ ಹೋಗಿದ್ದು ನಿಜವಾದರೂ, ಕೋಮು ಗಲಭೆಯಿಂದಾಗಿ ಅಯೋಧ್ಯೆಗೆ ಮುಟ್ಟಲು ಸಾಧ್ಯವಾಗದೆ ಕರ ಸೇವೆಯ ಮುಖಂಡರು ನೀಡಿದ ಇಟ್ಟಿಗೆ ತುಂಡಿನೊಂದಿಗೆ ಮರಳಿ ಊರಿಗೆ ಬರುತ್ತಾನೆ. ಕರಸೇವೆಗೆ ಹೋಗಿ ಬಂದಿರುವುದಾಗಿ ಸುಳ್ಳುವದಂತಿ ಹಬ್ಬಿಸಿ ಹಿಂದೂ ಮೂಲಭೂತವಾದಿಯಂತೆ ನಡೆದುಕೊಳ್ಳುತ್ತಾನೆ.

ದೇಶದಲ್ಲಿ ಕೋಮುಗಲಭೆ ಹೆಚ್ಚುತ್ತಲೇ ಹೋಗುತ್ತದೆ. ಕರಸೇವೆಗೆ ಹೋದವರನ್ನು ಪೋಲಿಸರು ಹುಡುಕಿ ಬಂಧಿಸಲು ಮುಂದಾಗುತ್ತಾರೆ. ಚಂದ್ರಣ್ಣನಿಗೆ ತನ್ನಲ್ಲಿರುವ ಇಟ್ಟಿಗೆ ತುಂಡಿನಿಂದ ಮುಸ್ಲಿಮರ ದ್ವೇಷ ಕಟ್ಟಿಕೊಳ್ಳಬೇಕಾದಿತೆಂದು ಸರಕಾರಿ ಬಾವಿಗೆ ಇಟ್ಟಿಗೆ ತುಂಡು ಎಸೆದು ನಿರಾಳವಾಗಿ ಬಿಡುತ್ತಾನೆ. ರೊಟ್ಟಿ ಪಾತುಮ್ಮಳಿಗೆ ಅಯೋಧ್ಯೆಯಲ್ಲಿ ಬಾಬರಿ ಮಸೀದಿ ಕೆಡವಿದ ಸುದ್ದಿ ತಿಳಿಯುತ್ತದೆ. ತಾನು ಕಟ್ಟಲಿರುವ ಮನೆಯ ಗೋಡೆಗೆ ಮಸೀದಿ ಕೆಡವಿದ ಇಟ್ಟಿಗೆ ತುಂಡು ಸೇರಿಸುವ ಯೋಚನೆ ಮಾಡುತ್ತಾಳೆ. ಚಂದ್ರಣ್ಣನು ಕರಸೇವೆಗೆ ಹೋಗಿ ಬಂದಿರುವ ಸುದ್ದಿ ತಿಳಿದು, ಚಂದ್ರಣ್ಣನ ಅಣ್ಣನಿಂದ ಆ ಇಟ್ಟಿಗೆ ತುಂಡು ಪಡೆಯುವ ಪ್ರಯತ್ನ ಮಾಡುತ್ತಾಳೆ. ಆದರೆ ಇಟ್ಟಿಗೆ ತುಂಡು ಸರಕಾರಿ ಬಾವಿ ಸೇರಿದೆ.

ಈ ಕತೆಯಲ್ಲಿ ಮಂದಿರ ಮಸೀದಿಯ ಚರ್ಚೆ ಕಾಣಿಸಿಕೊಂಡಿದೆ. ರೊಟ್ಟಿಪಾತುಮ್ಮಳಿಗೆ ಮಸೀದಿ ಕೆಡವಿದ ಬಗ್ಗೆ ಸಿಟ್ಟಿಲ್ಲ, ಆಕೆ ಮುಸ್ಲಿಂ ಮೂಲಭೂತವಾದಿಯಾಗಿಯೂ ತನ್ನ ಇಸ್ಲಾಂ ಧರ್ಮದ ಬಗ್ಗೆ ಹಿಂದುಗಳ ಬಗ್ಗೆ ಅಪಾರ ಗೌರವವುಳ್ಳವಳಾಗಿದ್ದಾಳೆ. ಚಂದ್ರಣ್ಣನಲ್ಲಿ ಧರ್ಮ ಸಮನ್ವಯದ ಬಗ್ಗೆ ಯೋಚನೆಯಿದೆ. ಮಸೀದಿ ಕೆಡವಿದ ಇಟ್ಟಿಗೆ ತುಂಡು ಆತನನ್ನು ಪಾಪ ಪ್ರಜ್ಞೆಗೆ ತಳ್ಳಿದೆ. ಕೊನೆಗೆ ಅದನ್ನು ಬಾವಿಗೆ ಎಸೆದು ನಿರಾಳವಾಗುತ್ತಾನೆ. ಈ ಕತೆಯಲ್ಲಿ ಹಿಂದು ಮುಸ್ಲಿಂ ಭಾವಕ್ಯತೆಯ ಎಳೆಗಳು ಹೆಚ್ಚಾಗಿ ಕಾಣಿಸಿಕೊಂಡಿವೆ.

ಇಂದು ನಮ್ಮ ಹದಗೆಡುತ್ತಿರುವ ಸಮಾಜಕ್ಕೆ ಕೋಮು ಸಾಮರಸ್ಯದ ನೆಲೆ ಬೇಕಿದೆ. ಹಿಂದೂ ಮುಸ್ಲಿಂ ಸಮುದಾಯಗಳಲ್ಲಿ ನಾವೆಲ್ಲಾ ಒಂದೇ ಭಾವ ತರಬೇಕಿದೆ. ಇಂದು ಅನೇಕ ಕತೆಗಾರರು ಭಾವಕ್ಯತೆಯ ಮೂಲ ಮಂತ್ರವನ್ನು ಕತೆಗಳ ಮೂಲಕ ಸಾರುತ್ತಲೇ ಬಂದಿದ್ದಾರೆ. "ಆಕಾಶಕ್ಕೆ ನೀಲಿ ಪರದೆ" ಕತೆಯಲ್ಲಿ ಬರುವ ಬೇಬಿಯಕ್ಕ (ಮುಬೀನಾ ಮೊದಲ ಹೆಸರು) ಮುತ್ತುಪ್ಪಾಡಿಯ ಕುಂಞ ಪಾತುಮ್ಮಳ ಮಗಳು ಕಡುಬಡತನದಲ್ಲಿಯೇ ಚೆಲುವಿಯಾಗಿ ಬೆಳೆದವಳು. ತಾವು ಬದುಕುತ್ತಿದ್ದ ಮನೆಯ ಮುಂದಿನ ಅಂಗಡಿ ಮಾಲಿಕನಾದ ಹಿಂದೂ ಮುಕುಂದಣ್ಣನೊಂದಿಗೆ ಈ ಮುಸ್ಲಿಂ ಕುಟುಂಬ ಅನೂನ್ಯವಾದ ಸಂಬಂಧವನ್ನು ಇಟ್ಟುಕೊಂಡಿದೆ. ಮುಕುಂದಣ್ಣ, ಪಾತುಮ್ಮ ಬೇಬಿಯಕ್ಕರ ಕುಟುಂಬಕ್ಕೆ ಸಹಾಯ ಹಸ್ತ ನೀಡಿದ್ದಾನೆ. ಬೇಬಿಯಕ್ಕ ಆತನ ಸಹಾಯದಿಂದ ಶಿಕ್ಷಣವನ್ನು ಪಡೆದಿದ್ದಾಳೆ. ಬಿಳಿಯಾನೆಯ ಮರಿಯಂತಿದ್ದ ತಂದೆಯ ವಯಸ್ಸಿನ ಆತನೊಂದಿಗೆ ಮಮತೆಯ ಸಲಿಗೆಯಿಂದ ನಡೆದುಕೊಳ್ಳತೊಡಗಿದ್ದ ಮುಸ್ಲಿಂ ಸಮುದಾಯದವರಿಗೆ ಹೊಟ್ಟೆಕಿಚ್ಚು ತರಿಸುತ್ತದೆ. ಅದೇ ಊರಿನ ಗಣೇಶ ಬೀಡಿ ಕಂಟ್ರಾಕ್ಟರ್‌ನಾದ ಮೈದು ಬ್ಯಾರಿಯವರ ಮಗ ಸುಲೇಮನ್ ಬೇಬಿಯನ್ನು ಮದುವೆಯಾಗಲು ಯತ್ನಿಸಿ ಸೋಲುತ್ತಾನೆ. ಕೊನೆಗೆ ಸಾಮಾಜಿಕ ನಿಂದನೆಗೆ ಒಳಗಾದ ಆ ಕುಟುಂಬಕ್ಕೆ ಆಶ್ರಯದಾತನಾದ ಹಿಂದೂ ಮುಕುಂದಣ್ಣನೇ ಬೇಬಿಯಕ್ಕನನ್ನು ರಿಜಿಸ್ಟರ್ಡ್ ಮದುವೆಯಾಗಿ ಬಿಡುತ್ತಾನೆ. ಬುರುಕಾ ಹಾಕದ ಈ ಮುಸ್ಲಿಂ ಕುಟುಂಬದಲ್ಲಿ ಮದುವೆಯಾಗಲು ಯಾರೂ ಮುಂದೆ ಬಾರದಾಗ ಮುಕುಂದಣ್ಣ ಈ ನಿರ್ಧಾರ ತೆಗೆದುಕೊಳ್ಳುತ್ತಾನೆ. ಆದಕ್ಕೆ ಊರ

ಜನ ನಾನಾ ತರದ ಮಾತುಗಳನ್ನಾಡುತ್ತಾರೆ. ''ಜಾತಿಯಲ್ಲ ನೆಂಟರಲ್ಲ.. ಹಾಗಿರುವಾಗ ಆ ಹುಡುಗಿಯ ಹೆಸರಲ್ಲಿ ಇವನು ಮನೆ ಅಂಗಡಿ ಬರೆದುಕೊಡುತ್ತೇನೆಂದು ಹೇಳಬೇಕಾದರೆ, ಅದರೊಳಗೆ ಏನೋ ಮಸಲತ್ತು ಉಂಟು ಅಂತ ಲೆಕ್ಕ'' ವೆಂದು ಮುಸ್ಲಿಂ ಸಮುದಾಯ ಕಿಡಿ ಕಾರುತ್ತದೆ.

ಮುಕುಂದಣ್ಣನನ್ನು ಮದುವೆಯಾದ ಬೇಬಿಯಕ್ಕ ದಾಂಪತ್ಯದ ಅನುಭವಕ್ಕೆ ಒಳಗಾಗುವುದಿಲ್ಲ, ವಯಸ್ಸಾದ ಆತನೊಂದಿಗೆ ದಾಂಪತ್ಯದ ಸವಿಯುಣ್ಣಲು ನಿರಾಕರಿಸುತ್ತಾಳೆ. ರಾತ್ರಿ ಕಿಟಕಿಯ ಬಳಿ ಕುಳಿತು ನೀಲಿ ಆಕಾಶ ನೋಡುತ್ತಾ ನಿದ್ದೆಗೆಡುತ್ತಾಳೆ. ಕೊನೆಗೆ ಆತನ ಕಪಿ ಮುಷ್ಟಿಯಿಂದ ತಪ್ಪಿಸಿಕೊಂಡು ನರ್ಸಿಂಗ್ ಓದಿ ನರ್ಸ್ ಆಗುತ್ತಾಳೆ. ಆದರೂ ಆಕೆ ಬದುಕಿನ ಕೊನೆಗಾಲದವರೆಗೂ ಮುಕುಂದಣ್ಣನನ್ನು ತಂದೆಯಂತೆ ಜೋಪಾನ ಮಾಡುತ್ತಾಳೆ. ಆಸ್ಪತ್ರೆಯೊಂದರಲ್ಲಿ ಕತೆಗಾರರಿಗೆ ಪರಿಚಯವಾಗುವ ಈ ಬೇಬಿಯಕ್ಕ ತ್ಯಾಗಮೂರ್ತಿಯಂತೆ ಕಾಣುತ್ತಾಳೆ. ವಿಶಾಲವಾದ ನೀಲಿ ಆಕಾಶದಂತಹ ಬದುಕಿಗೆ ಕಡಿವಾಣ ಹಾಕಲು ಬರುವುದಿಲ್ಲ. ಮುಸ್ಲಿಂ ಸಮುದಾಯದ ತಿರಸ್ಕಾರಕ್ಕೆ ಒಳಗಾದ ಬೇಬಿಯಕ್ಕನ ಕುಟುಂಬ ಹಿಂದು ಮುಕುಂದಣ್ಣನ ಸಹಾಯ ಹಸ್ತದಿಂದ ಒಂದು ಭರವಸೆಯ ನೆಲೆ ಕಂಡಿದೆ. ಬೇಬಿಯಕ್ಕ ತನ್ನ ಯೌವನವನ್ನು ಸುಖದ ಕ್ಷಣಗಳನ್ನು ಮರೆತು ನರ್ಸ್ ಆಗಿ ರೋಗಿಗಳ ಶುಶ್ರೂಷೆಯಲ್ಲೆ ಹೊಸ ಬದುಕನ್ನು ಆಯ್ದುಕೊಂಡಿದ್ದಾಳೆ. ಬೋಳುವಾರರು ಈ ಕತೆಯ ಮೂಲಕ ಹಿಂದು ಮುಸ್ಲಿಂ ಭಾವೈಕ್ಯತೆಯ ನೆಲೆಗಳನ್ನು ತೋರಿಸಿದ್ದಾರೆ. ಬೇಬಿಯಕ್ಕ ಮುಕುಂದಣ್ಣನ ಬದುಕಿಗೆ ಕತೆಗಾರರು ಹೊಸ ಅರ್ಥ ಪ್ರಪಂಚವನ್ನು ನಿರ್ಮಿಸಿದ್ದಾರೆ. ಜಾತಿ ಸಂಪ್ರದಾಯಗಳ ಗೋಡೆಯನ್ನು ಒಡೆದು ಹೊಸ ಭಾವ ಪ್ರಪಂಚವನ್ನು ಈ ಕತೆಯಲ್ಲಿ ಚಿತ್ರಕ ಶೈಲಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಮುಸ್ಲಿಂ ಕುಟುಂಬದಲ್ಲಿರುವ ಬಡತನ ದುಃಖ ಅಸಹಾಯಕತೆಗಳಿಗೆ ಆ ಜನಾಂಗದಲ್ಲಿರುವವರೇ ಸ್ಪಂದಿಸದಿದ್ದಾಗ. ಹಿಂದೂ ಕುಟುಂಬ ಸ್ಪಂದಿಸಿ ನೆಲೆಯೊದಗಿಸುವ ಸನ್ನಿವೇಶವನ್ನು ಅರ್ಥಪೂರ್ಣವಾಗಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಬೋಳುವಾರರ ಕಥಾ ಪ್ರಪಂಚದ ಸಂದೇಶವೇ ಅನನ್ಯತೆಯಿಂದ ಕೂಡಿರುವಂತದ್ದಾಗಿದೆ.

'ಜನ್ನತ್' ಎಂದರೆ ಸ್ವರ್ಗ. ಈ ಕತೆಯಲ್ಲಿ ಮುಸ್ಲಿಂ ಸಮುದಾಯಕ್ಕೆ 'ಜನ್ನತ್ ಮಹಲ್' ನ ಸುಲೇಮನ್ ಹಾಜಿಯವರೇ ಮುಖಂಡರು. ''ಮುತ್ತುಪ್ಪಾಡಿಯ ಜುಮ್ಮಾ ಮಸೀದಿಯಲ್ಲಿ ಬಾಂಗ್ ಮೊಳಗಿದರೆ ಈ ಜನ್ನತ್ ಮಹಲಿಗೆ ಕೇಳಿಸುವುದಿಲ್ಲ ಅಷ್ಟೊಂದು ದೂರ. ನಡುವೆ ಗುಡ್ಡವೊಂದು ಅಡ್ಡ''[8] ಈ ವಾಕ್ಯದ ಹಿಂದೆ ಜನ್ನತ್ ಮಹಲ್‌ನ ಸುಲೇಮಾನ್ ಹಾಜಿಯವರೂ ಕೂಡ ತಮ್ಮ ವ್ಯಾಪಾರ ವ್ಯವಹಾರಗಳ ಮಧ್ಯೆ ಮುಸ್ಲಿಂ ಸಮುದಾಯದ ದುಃಖ ದುಮ್ಮಾನಗಳನ್ನು ಕೇಳುವ ಪುರುಸೊತ್ತೆ ಅವರಿಗಿಲ್ಲ. ಮುಸ್ಲಿಂ ಸಮುದಾಯ ತಮ್ಮ ಸಮಾಜದ ನೋವುಗಳನ್ನು ಈ ಜನ್ನತ್ ಮಹಲ್‌ಗೆ ಹೇಳಿಕೊಳ್ಳಲು ಹೋಗಿ ಕಾದು ನಿರಾಶರಾಗಿ ತಿರುಗಿ ಬಂದಿದ್ದಾರೆ. ಎಲ್ಲಾ ಜನಾಂಗದಲ್ಲಿ, ಬಡತನ, ಕಡು ದಾರಿದ್ರ್ಯ ಶೋಷಣೆ ಇಲ್ಲದೆ. ಸುಲೇಮಾನ್ ಹಾಜಿಯವರು ಈ ಜನಾಂಗದ ಮುಖಂಡರೂ ಓಟು ಬ್ಯಾಂಕರರೂ ಆಗಿದ್ದಾರೆ. ಸುಲೇಮಾನ್ ಹಾಜಿಯವರ ಮೇಲ್ವರ್ಗದ ಲಾಭದಾಯಕ ಮನಸ್ಸಿಗೆ ಕೆಳವರ್ಗದ ಮುಸ್ಲಿಂರರ ದುಃಖದ ಮನಸ್ಸು ಅರ್ಥವಾಗುವುದಿಲ್ಲ. ಈ ಮುಸ್ಲಿಂರ ದೈಹಿಕ ಮತ್ತು ಮಾನಸಿಕ ಸ್ಥಿತಿಯನ್ನು ಬೋಳುವಾರರು ಹೀಗೆ ಹೇಳುತ್ತಾರೆ. ''ಮುಸ್ಲಿಂರು ಇರುವುದೇ ಹಾಗೇ. ಕಪ್ಪುಕೋಲಿಗೆ ಬಿಳಿ ಪತಾಕೆ ಸುತ್ತಿದಂತೆ. ಜೋರಾಗಿ ಗಾಳಿ ಬೀಸಿದರೆ ಹಾರಿಯೇ ಹೋದರು. ಅಂತಹ ಕೋಲು ಶರೀರ ಬೋಳು ತಲೆಯನ್ನು ಸುತ್ತಿಕೊಂಡಿರುವ ಬಿಳಿಯ ಮುಂಡಾಸು ಅದರ ತುದಿಯೊಂದು ಬೆನ್ನ ಮೇಲೆ ಸದಾ ಹಾರುತ್ತಿರುತ್ತದೆ. ಗಲ್ಲದ ಮೇಲೆ ತುಂಬಾ ಬೆಳೆದು ಎದೆ ತನಕ ಇಳಿದು ಹೊಳೆಯುವ ಬೆಳ್ಳಿ ಗಡ್ಡ. ಉರುಟು ಚಕ್ರದಂತಿರುವ ಎರಡು

ಕಣ್ಣುಗಳ ನಡುವೆ ಉದ್ದವಾಗಿ ಇಳಿದ ಮೂಗು ಸದಾ ನಗುವ ಕೆಂಪು ತುಟಿಗಳು ಇವುಗಳಷ್ಟೇ ಇಮಾಂ ಮೂಸಾ ಮುಸ್ಲಿಂರರ ಗಾಂಭಿರ್ಯವನ್ನು ಕಾಯುತ್ತಿರುವುದು."[೬] ಮೇಲಿನ ಸಾಲುಗಳು ಮುಸ್ಲಿಂ ಸಮುದಾಯದ ಜನರ ಸ್ಥಿತಿಗತಿಯ ಸ್ಪಷ್ಟ ಚಿತ್ರಣವನ್ನು ನೀಡುತ್ತದೆ. ಈ ಕತೆಯಲ್ಲಿ ಮುಸ್ಲಿಯರು ಕಡು ಬಡತನದಲ್ಲಿ ನೊಂದು ಹೋಗಿದ್ದಾರೆ. ಎಷ್ಟೋ ಜನರ ಬದುಕು ಹುಡುಕಿಕೊಂಡು ದುಬಾಯಿಗೆ ಹೋಗಿ ಬಿಟ್ಟಿದ್ದಾರೆ. ಸುಲೇಮಾನ್ ಹಾಜಿಯವರ ನೆರವಿಲ್ಲದೆ ಹಳೆ ಮಸೀದಿಯನ್ನು ಕೆಡವಿ ಹೊಸ ಮಸೀದಿಯನ್ನು ಕಟ್ಟಿದರು. ಹೊಸದಾಗಿ ಕುರಾನ್ ಓದುವವರನ್ನು ನೇಮಿಸಿಕೊಂಡರು. ಜೊತೆಗೆ ಜಮಾತ್‌ನ ಅಧ್ಯಕ್ಷರಾದ ಹಸನ್ ಸಾಹೇಬರ ಅಳಿಯನಾದ ಆದ್ರಾಮನ ಒಣ ರಾಜಕಾರಣ ಇವರನ್ನು ನೋವಿಗೆ ತಳ್ಳುತ್ತದೆ. ಮುಸ್ಲಿಯಾರರ ಬದುಕಿನಲ್ಲಿ ಹೊಸ ನೋವುಗಳು ಕಾಣಿಸಿಕೊಳ್ಳುತ್ತವೆ. ಇದೆಲ್ಲಾ ಜನ್ನತ್ ಮಹಲ್‌ನ ಒಡೆಯ ಜನಾಂಗದ ಮುಖಂಡನಾದ ಸುಲೇಮಾನ್ ಹಾಜಿಯವರಿಗೆ ತಿಳಿಸಲು ಯತ್ನಿಸಿ.. ಯತ್ನಿಸಿ ಮುಸ್ಲಿಂರು ಸೋತು ಹೋಗುತ್ತಾರೆ.

ಬೋಳುವಾರರು ಈ ಕತೆಯ ಮೂಲಕ ಭಾರತೀಯ ಎಲ್ಲಾ ಸಮುದಾಯಗಳಲ್ಲಿರುವಂತೆ ಮುಸ್ಲಿಂರಲ್ಲೂ ಜಾತಿ ರಾಜಕಾರಣ ಒಳ ಜಗಳ, ಮೇಲು ಕೀಳಿನ ಅಂತರ ಬಡತನ ಕಡು ದಾರಿದ್ರ್ಯ ಎಲ್ಲವನ್ನು ಕತೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಮುಸ್ಲಿಂರ ಬದುಕು 'ಜನ್ನತ್' ಸ್ವರ್ಗವಾಗದೇ ನರಕದ ಕೂಪವಾಗಿರುವುದನ್ನು ಕತೆ ಹೇಳುತ್ತದೆ.

ಮುಸ್ಲಿಂ ಸಮುದಾಯದ ಅನನ್ಯ ಆಚರಣೆಗಳಲ್ಲಿ ಪುನರ್ ವಿವಾಹಕ್ಕೆ ಕಟುವಾದ ವಿರೋಧವಿದೆ. ಆದರೆ ಆಧುನಿಕತೆಯ ಸೆಳೆತದಲ್ಲಿ ಆ ಸಮುದಾಯದಲ್ಲಿ ಅನೇಕ ಯುವಕರು ಮರು ವಿವಾಹಕ್ಕೆ ಹೋರಾಡುವುದನ್ನು ಬೋಳುವಾರರ **'ಇಮಾರತ್'** ಕತೆ ಹೊಸ ಸಾಮಾಜಿಕ ಸ್ಥಿತ್ಯಂತರಗಳ ಪ್ರಶ್ನೆಗಳನ್ನು ಎತ್ತುತ್ತದೆ. ಮುತ್ತುಪ್ಪಾಡಿಯ ಬಡ ಗುಡಿಸಲೊಂದರ ಹುಡುಗ ಲಾರಿಹತ್ತಿ ಕೇರಳಕ್ಕೆ ಓಡಿ ಹೋಗಿದ್ದ ಅನಾಮದೇಯ ಹುಡುಗನೊಬ್ಬ ತಳಂಗೆರೆಯ ಸುಪ್ರಸಿದ್ಧ ಮತ ಪಂಡಿತನಾಗಿ ರೂಪಗೊಂಡದ್ದು. ಆತ ಮರಳಿ ಊರಿಗೆ ಬಂದಾಗ ಇಸ್ಮಾಲಿ ಹಾಜಿಯವರ ಸಹಾಯದಿಂದ ಊರ ಮಸೀದಿಯಲ್ಲಿ ಮತ ಪಂಡಿತನಾಗಿ ರೂಪಗೊಂಡದ್ದು. ದಿನಗಳೆದಂತೆ ಈ ಪಂಡಿತರ ಕಣ್ಣಿಗೆ ಬಿದ್ದ ಸಲ್ಮಾಳನ್ನು ನಿಕಾಹ್ ಮಾಡಿಕೊಡಿಸುವಂತೆ ಕೇಳಿದಾಗ ಹಾಜಿಯವರು ಹತ್ತೆ ದಿವಸದಲ್ಲಿ ಮದುವೆ ಮಾಡಿಸಿ ಬಿಡುತ್ತಾರೆ. ಆದರೆ ಹುಡುಗಿ ಸಲ್ಮಾಳ ಮೇಲೆ ಹಾಜಿಯವರ ಮಗ ಸುಲೇಮಾನ್ ಅಪಾರ ಪ್ರೀತಿಯಿಟ್ಟುಕೊಂಡಿರುತ್ತಾನೆ. ಈ ವಿಷಯ ತಿಳಿಸುವ ಮೊದಲೇ ಮದುವೆ ನಡೆದು ಹೋಗುತ್ತದೆ. ಸಲ್ಮಾಳನ್ನು ಮದುವೆಯಾದ ವಾರದ ಮೇಲೆ ಪಂಡಿತರು ಮಂಗಳೂರಿಗೆ ಹೋಗಿ ಬರಲು ಬಸ್ಸು ಹತ್ತುವಾಗ ಕಾಲು ಜಾರಿ ಬಿದ್ದು ಪಂಡಿತರ ಮೇಲೆ ಬಸ್ಸಿನ ಚಕ್ರಹರಿದು ಪ್ರಾಣ ಬಿಡುತ್ತಾರೆ. ಮದುವೆಯಾಗಿ ಹೊಸ ಅನುಭವ ಕಾಣದ ಸಲ್ಮಾ ವಿಧವೆಯಾಗುತ್ತಾಳೆ. "ಊರಿನ ಮುಸ್ಲಿಂ ಸಮುದಾಯ ಸಭೆ ಸೇರಿ ಇಮಾರತ್ ಕಟ್ಟಿಸಿ ಪಂಡಿತರ ಮರಣದ ತಿಥಿಯೆಂದು ಆ ಮನೆಯನ್ನು ಸಲ್ಮಾಳಿಗೆ ಒಪ್ಪಿಸುವುದೆಂದು ನಿರ್ಧಾರವಾದದ್ದು."[೭] ಸುಲೇಮಾನ್‌ನಿಗೆ ತಿಳಿದು ದುಃಖ ತರಿಸುತ್ತದೆ. ಸಲ್ಮಾಳನ್ನು ವಿಧವೆಯಾಗಿ ಇಮಾರತ್ ಪ್ರವೇಶಿಸಲು ಬಿಡದೆ ತಾಯಿಯ ಬಳಿ ತನ್ನ ಮನದ ಇಂಗಿತ ಹೇಳಿಕೊಳ್ಳುತ್ತಾನೆ. ತಾಯಿ ಮತ್ತು ಕತೆಯ ನಿರೂಪಕರು ಸೇರಿ ಹೊಸ ತಂತ್ರರೂಪಿಸಿ, ಹೊಸ ಬಾಳಿಗೆ ನೆರವಾಗುವಂತೆ ಸುಲೇಮಾನನ ತಂದೆಗೆ 'ಸಲ್ಮಾಳ ಹೊಟ್ಟೆಯಲ್ಲಿ ತಮ್ಮ ವಂಶದ ಕುಡಿ ಬೆಳೆಯುತ್ತಿರುವುದಾಗಿ' ಹೇಳಿ ಹಾಜಿಯವರ ಮನಸ್ಸು ಬದಲಾಯಿಸಿ, ಇಮಾರತ್ ಕಟ್ಟಡದಲ್ಲಿ ಕುರಾನ್ ಶಾಲೆ ಮಾಡುವ ಯೋಚನೆ ಮಾಡುತ್ತಾರೆ.[೮] ಸುಲೇಮಾನ್ ಸಲ್ಮಾರ ನಿಕಾಹ್ ನಡೆದುಹೋಗುತ್ತದೆ. ಈ ಕತೆಯ ಮೂಲಕ ಬೋಳುವಾರರು ಮುಸ್ಲಿಂ ಸಮುದಾಯದಲ್ಲಿದ್ದ

ಕಟು ಸಂಪ್ರದಾಯಗಳಿಗೆ ಹೊಸ ಬದಲಾವಣೆಯ ಬೆಳಕು ಚೆಲ್ಲಿದ್ದಾರೆ. ಜಡ ಸಂಪ್ರದಾಯದ ಕೆಸರಿಂದ ಮೇಲೆದ್ದು ಸುಂದರವಾದ ಬದುಕು ರೂಪಿತವಾಗಬೇಕೆಂದು ಕತೆಯಲ್ಲಿ ಹೊಸ ಸಾಮಾಜಿಕ ಸ್ಥಿತ್ಯಂತರದ ಆಶಾದಾಯಕ ಬೆಳವಣಿಗೆಯಾಗಿ ಕತೆ ನಮ್ಮ ಮನತಟ್ಟುತ್ತದೆ.

ಮುಸ್ಲಿಂ ಸಮುದಾಯದಲ್ಲೂ ಅವದೂತ ಪರಂಪರೆಯಿದೆ. ಈ ಅವದೂತರಿಗೆ ಈ ಮುಸ್ಲಿಯಾರರು ಅನಂತ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. 'ಇಬಾದತ್' ಕತೆಯಲ್ಲಿ ಬರುವ ಮಿಠಾಯಿ ಅವುಲಿಯಾ (ಅವದೂತ) ಮುತ್ತುಪ್ಪಾಡಿಗೆ ಬಂದಾಗ ಆ ಜನಾಂಗದಲ್ಲಿ ಹೊಸ ಆಲೋಚನೆಯ ಅಲೆಯನ್ನೇ ಸೃಷ್ಟಿಮಾಡುತ್ತಾರೆ. ಅವುಲಿಯಾ ಮುಸ್ಲಿಯಾರರ ಉದ್ಧಾರಕ್ಕಾಗಿಯೇ ಧರೆಗಿಳಿದು ಬಂದ ಅವತಾರ ಪುರುಷನೆಂದು ಭಾವಿಸುತ್ತಾರೆ. ಜಮ್ಮಾಮಸೀದಿಯ ಜಮಾತೆ ಅಧ್ಯಕ್ಷರಾದ ಅಬ್ದುಲ್ ರೆಹಮಾನ ಸಾಹೇಬರೆ ಮುಸ್ಲಿಯಾರರಲ್ಲಿ ತುಂಬ ಪ್ರಸಿದ್ಧಿ ಇವರು ಉಳ್ಳಾಲದ ಮಸೀದಿಯಿಂದ ಕಾರಿನಲ್ಲಿ ಅವುಲಿಯಾ ಅವರನ್ನು ಕಾರಿನಲ್ಲಿ ಕರೆತಂದು ಜನರ ಕೌತುಕಕ್ಕೆ ಪಾತ್ರವಾಗುತ್ತಾರೆ. ಅವುಲಿಯಾ  ಅವರ ನಮಾಜು, ಅವರಶ್ರದ್ಧೆ ಜನರೊಂದಿಗೆ ಅವರು ವರ್ತಿಸುತ್ತಿದ್ದ ರೀತಿಯೆಲ್ಲವೂ ವಿಸ್ಮಯಕ್ಕೆ ಒಳಗಾಗುವಂತಿತ್ತು. ಉಳ್ಳಾಲದ ಮಸೀದಿಯಿಂದ ಕಳುಹಿಸಿಕೊಡುವಾಗ ಬಹಳ ಕರಾಮತ್ತು ಇರುವ ಅವುಲಿಯಾ ಅಂತ ಕಾಣುತ್ತದೆ. ಹಾಜಾರ್ರೇ ಇಲ್ಲಿಗೆ ಬಂದು ಒಂದು ತಿಂಗಳು ದಾಟಿದರೂ ಯಾರ ಮನೆಗೂ ಹೋಗಲು ಒಪ್ಪದವರಲ್ಲ ನೀವು ಅದೇನು ಜಾದು ಮಾಡಿದ್ದೀರೂ ನನಗೆ ಗೊತ್ತಾಗುವುದಿಲ್ಲ ಇರುವಷ್ಟು ಕಾಲ ಇಟ್ಟುಕೊಳ್ಳಿ'" ಆದರೆ ಹಾಜಿ ಅಬ್ದುಲ್ ರೆಹಮಾನರ ಮನೆಯಲ್ಲಿ ಒಂದು ದಿನ ಮಾತ್ರ ನಿಲ್ಲಲಾಗುವುದಿಲ್ಲ. ಮನೆಯಿಂದ ಮಸೀದಿಗೆ ಹೋಗಿ ನಿಂತು ಜನರಲ್ಲಿ ವಿಸ್ಮಯ ಉಂಟುಮಾಡುತ್ತಾರೆ. ಮುಸ್ಲಿಂರು ಇವರೊಂದಿಗೆ ನಡೆದು ಕೊಳ್ಳುವ ರೀತಿ, ಮಸೀದಿಯ ಪಕ್ಕದಲ್ಲಿದ್ದ ಕಸಾಯಿಗಲ್ಲಿಯ ಬಾವಾಕನ ಮಗ ಖಾದರ್‌ನೆಂದರೆ ಅತಿ ಅಪಾಯಕಾರಿ ಮನುಷ್ಯನೆಂದು ಅಂತಹ ಖಾದರ್‌ನನ್ನು ಏಕಾಏಕಿ ಅವುಲಿಯಾ ಬದಲಾಯಿಸಿ ಬಿಡುತ್ತಾರೆ. ಖಾದರ್ ಮುಸ್ಲಿಂ ಸಮುದಾಯ ಉದ್ಧಾರ ಬೆಳವಣಿಗೆಗಾಗಿ ನಿಲ್ಲುತ್ತಾನೆ. ಇದರಿಂದ ಮುಸ್ಲಿಂರಿಗೆ ಕೌತುಕವಾಗುತ್ತದೆ  ಹಾಜಿಯವರಿಗೂ ಖಾದರ್ ಬದಲಾಗಿ ಕ್ಷೆಮೆ ಕೇಳಿದಾಗ ಅವರ ಕಣ್ಣಲ್ಲಿ ನೀರು ತುಂಬಿ ಬರುತ್ತದೆ. 'ಇಬಾದತ್' ಯೆಂದರೆ ಉಪಾಸನೆ ಮುಸ್ಲಿಂ ಜನಾಂಗ ನಿತ್ಯವೂ ಆರಾಧಿಸುತ್ತಿದ್ದ ಸಂಪ್ರದಾಯದ ಕಟ್ಟುಪಾಡುಗಳು ಜೀವನ ಮೌಲ್ಯಗಳ ಜೊತೆಗೆ ಅವರಲ್ಲಿಯ ಒಳಜಗಳಗಳೂ ಆರ್ಥಿಕ ಅಸಮಾನತೆಗಳು ಇವುಗಳೆಲ್ಲವುಗಳ ಮಧ್ಯೆ ತಾವು ಮಸೀದಿಯ ಕೆಲಸ ಕಾರ್ಯಗಳ ಬಗ್ಗೆ ಇಟ್ಟುಕೊಂಡಿರುವ ನಂಬಿಕೆಗಳನ್ನು ಬೋಳುವಾರರು ಮನಕರಗುವಂತೆ ಚಿತ್ರಿಸಿದ್ದಾರೆ. ಅವುಲಿಯಾ ಮುಸ್ಲಿಂ ಜನಾಂಗದಲ್ಲಿ ಉಂಟುಮಾಡುವ ಬದಲಾವಣೆಯ ಕಂಪನಗಳೂ ಕತೆಯ ಬೆಳವಣಿಗೆಗೆ ಪೂರಕವಾಗಿವೆ.

ಹೀಗೆ ಬೋಳುವಾರರು ಮುಸ್ಲಿಂ ಧರ್ಮದೊಳಗಿನ ಮೂಲಭೂತವಾದ ಮತ್ತು ಎರಡು ಕೋಮುಗಳ ಮಧ್ಯದ ಹಿಂಸೆ, ಕೃತ್ಯಗಳನ್ನು ಬಹಿರಂಗಗೊಳಿಸುವುದರೊಂದಿಗೆ, ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸುವುದರ ಸಂದರ್ಭದಲ್ಲಿ ಆ ಪಾತ್ರಗಳ ಹೃದಯದಾಳಕ್ಕೆ  ಇಳಿದು ಅವರ ನೋವು ಸಂಕಟಗಳನ್ನು ಅನಾವರಣಗೊಳಿಸುತ್ತಾರೆ. ಬೋಳುವಾರರಿಗೆ ಮುಖ್ಯವಾದ ಆಸಕ್ತಿಯಿರುವುದು ಮಾನವೀಯ ಸಂದರ್ಭದಲ್ಲಿ. ಈ ಸಂಬಂಧಗಳನ್ನು ಅವರು ತೆರೆದು ತೋರುವ ರೀತಿ ಅನನ್ಯವಾದುದು. ಮುತ್ತುಪ್ಪಾಡಿಯಂತಹ ಒಂದು ಊರನ್ನ ಕೇಂದ್ರವಾಗಿಟ್ಟುಕೊಂಡು ತೀರ ಸಹಜವಾದ ಘಟನೆಗಳ ಮೂಲಕ ಅವು ತಮ್ಮೆಲ್ಲರ ಜಟಿಲತೆಯೊಂದಿಗೆ ಪ್ರತ್ಯಕ್ಷವಾಗುತ್ತವೆ. ಕತೆಗಾರ ಬೋಳುವಾರರು ಅವರ

ಪಾತ್ರ ಚಿತ್ರಣ ಮಾಡುವ ರೀತಿ ತುಂಬಾ ಸಂಯಮದಿಂದ ಮುಸ್ಲಿಂ ಅನನ್ಯತೆಯ ಜಗತ್ತಿನ ಒಳ ಹೊರಗನ್ನು ಅನಾವರಣಗೊಳಿಸುತ್ತಾರೆ.

ಬೋಳುವಾರರ ನಂತರ ಮುಸ್ಲಿಂ ಸಮುದಾಯದ ದುಗುಡ ದುಮ್ಮಾನಗಳನ್ನು ಆಳವಾಗಿ ಶೋಧಿಸಿ ಬರೆಯುವ ಮತ್ತೊಬ್ಬ ಮಹತ್ವದ ಕತೆಗಾರರೆಂದರೆ **ಫಕೀರ್ ಮಹಮ್ಮದ್ ಕಟ್ಪಾಡಿ**. ನಿಜವಾದ ಮುಸ್ಲಿಂ ಸಂಸ್ಕೃತಿಯ ವಿವರಗಳನ್ನು ದಟ್ಟವಾಗಿ ದಾಖಲಿಸಿದ ಕತೆಗಾರರಿವರು. ಯಾವ ಅಬ್ಬರ ಘೋಷಣೆಯಿಲ್ಲದೆ ಮೌನವಾಗಿ ಮನದ ಬಾಗಿಲು ತಟ್ಟುವ ಕತೆಗಳನ್ನು ರಚಿಸಿದ್ದಾರೆ. ಬಂಡಾಯ ಸಾಹಿತ್ಯಸಂದರ್ಭದಲ್ಲಿ ಮಹತ್ವದ ಲೇಖಕರಾಗಿದ್ದರು. ಇವರು ಹಿಂದೂ ಮುಸ್ಲಿಂ ಎರಡು ಕೋಮಿನವರ ಮಧ್ಯದ ಕೊಂಡಿಯಾಗಿ ಹೊಸ ಹೊಸ ಪ್ರಯೋಗಗಳನ್ನು ಕಥನ ಸಾಹಿತ್ಯದಲ್ಲಿ ಮಾಡಿದ್ದಾರೆ. ಯಾವ ಉದ್ವೇಗವಿಲ್ಲದೆ ಕತೆಗಳನ್ನು ರಚಿಸಿರುವ ಕಟ್ಪಾಡಿಯವರು ಬಂಡಾಯದ ಸಂತ ಫಕೀರರು. ಹೊಸ ಹೊಸ ಪ್ರಯೋಗಗಳನ್ನು ಮಾಡಿದವರು, ಸಹಜ ನಿರೂಪಣೆಯ ವಾಸ್ತವದ ನೆಲೆಯಲ್ಲಿ ಒಡಮೂಡುವ ಪಾತ್ರಗಳಲ್ಲಿ ಇವರ ಕಥೆಗಳು ಮೈದಾಳುತ್ತವೆ. ಇವರ ಕತೆಗಳಲ್ಲಿಯ ಪಾತ್ರಗಳೂ ಕೂಡ ಸಹಜತೆಯಿಂದ ಮುಖಾಮುಖಿಯಾಗಿ ನಿಲ್ಲುತ್ತವೆ.

ಪಕೀರ್ ಮಹಮ್ಮದ್ ಕಟ್ಪಾಡಿಯವರ 'ನೊಂಬು' ಮಹತ್ವದ ಕತೆ. 'ನೊಂಬು' ಎಂದರೆ ಉಪವಾಸ, ಮುಸ್ಲಿಂ ಸಮಾಜದೊಳಗಿನ ಕಂದಾಚಾರ, ನಂಬಿಕೆ ಆಚರಣೆಗಳನ್ನು ಈ ಕತೆಯ ಮೂಲಕ ಹೇಳಿದ್ದಾರೆ. ಈ ಕತೆಯಲ್ಲಿ ಬರುವ ಪುಟ್ಟ ಮುಗ್ಧಬಾಲಕ 'ಅದ್ದು'ನ ಮುಗ್ಧ ಮನಸ್ಸಿನ ಮುಂದೆ ನಿಲ್ಲುವ ಅನೇಕ ಪ್ರಶ್ನೆಗಳು ಧರ್ಮಾಚರಣೆಯೊಳಗಿನ ಮಧ್ಯೆ ಭೂಟಾಟಿಕೆಯ ಉಪವಾಸ, ವ್ರತ ಆಚರಣೆಯ ಹಿಂದಿರುವ ಡಾಂಭಿಕ ನಡವಳಿಕೆ ''ಅದ್ದು'' ಕಣ್ಣೆದುರೇ ಒಂದೊಂದಾಗಿ ಬೆತ್ತಲಾಗುವ ರೀತಿ ಅವನು ಬೆರಗುಗಣ್ಣಿನಿಂದ ವೀಕ್ಷಿಸುತ್ತಾ ಪುಟ್ಟಮನಸ್ಸು ಪಿಳಿಪಿಳಿ ಕಣ್ಣುಬಿಡುತ್ತದೆ. ಈ ಕತೆಯಲ್ಲಿ ಒಂದು ಬಡ ಕುಟುಂಬ ಮತ್ತು ಶ್ರೀಮಂತ ಕುಟುಂಬಗಳು 'ನೊಂಬು' ಆಚರಿಸುವ ವಿಧಿವಿಧಾನಗಳನ್ನು ಕತೆ ಹೇಳುತ್ತದೆ. ಈ ಕುಟುಂಬಗಳು ಆರ್ಥಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ಹೇಗೆ ಭಿನ್ನವಾಗಿರುತ್ತವೆಂಬುದನ್ನು ಅದ್ದುನ ಮುಗ್ಧ ಮನಸ್ಸಿನ ಕಣ್ಣುಗಳ ಮೂಲಕ ಕಾಣುವ ಪರಿಯು ಬಹಳ ಆತ್ಮೀಯವಾಗಿದೆ.

ಅದ್ದುನ ತಾಯಿ ಬೀಡಿ ಕಟ್ಟುವ ಬಡ ಹೆಂಗಸು ದೇವರು ಕೊನೆಗಾದರೂ ತಮಗೆ ಸುಖ ನೀಡುವನೆಂಬ ಶ್ರದ್ಧೆಯಿಂದ ದುಡಿಯುವ ಹೆಂಗಸು. ಅದ್ದುನ ಗೆಳೆಯ ಕಾಸೀಮ ಶ್ರೀಮಂತ ಮನೆಯ ಹುಡುಗ. ಅವನ ಮನೆಯಲ್ಲಿ ದೇವರ ಭಯ ಆಚಾರಗಳಲ್ಲಿ ನಿಷ್ಠೆ, ಶ್ರದ್ಧೆಗಳಿಲ್ಲ. ಜಮೀಳ ಗಂಡ ತನ್ನ ಉಪವಾಸವನ್ನು ತನ್ನಿಷ್ಟದಂತೆ ಪರಿವರ್ತಿಸಿಕೊಳ್ಳುತ್ತಾನೆ. ಭೂಲೋಕದಲ್ಲಿ ಹರಾಮ್ (ನಿಶಿದ್ಧ) ವಾದದ್ದು ಸ್ವರ್ಗದಲ್ಲಿ 'ಹಲಾಲ್' (ಸಮ್ಮತ್) ಅಲ್ಲವೇ? ಕಾಸೀಮನ ಮನೆಯೂ ಒಂದು ಸ್ವರ್ಗವಿದ್ದಂತೆ. ಅಲ್ಲಿ ಎಲ್ಲವೂ ನಡೆಯುತ್ತದೆ. ಸ್ವರ್ಗದಲ್ಲಿ ಹರಾಮ್ ಎಂಬುದೇ ಇಲ್ಲ. ಒಳ್ಳೆಯ ಮನೆ, ಉಡುಗೆ ಒಳ್ಳೆಯ ಊಟವಿಲ್ಲದ ತನ್ನ ಮನೆಯಾದರೆ ಕಾಸೀಮನ ಮನೆಯಲ್ಲಿ? ಒಳ್ಳೆಯ ಊಟ, ಉಡುಗೆ ಸವಲತ್ತುಗಳಿವೆ. ತನ್ನ ಮನೆಯಲ್ಲಿ ಆಚರಣೆ ಶ್ರದ್ಧೆಗಳಿವೆ. ಆದರೆ ಕಾಸೀಮನ ಮನೆಯಲ್ಲಿ ಉಪವಾಸದ ಶ್ರದ್ಧೆಗಳಿಲ್ಲ. ಅದಕ್ಕೆ ಅದ್ದು ಪ್ರಶ್ನಿಸುತ್ತಾನೆ.. ''ಈ ಸ್ವರ್ಗ ಅನ್ನೋದು ಸತ್ತ ನಂತರ ಸಿಗೋದು ಅಲ್ವಾ ಕಾಸೀಮಾ.. ? ಬದುಕಿರುವಾಗ ನಮಗೆ ಸಿಕ್ಕಿದ್ರೆ ಎಂತಾ ಗಮ್ಮತ್ತಾಗಿತ್ತು ಅಲ್ವಾ? ಎಂದು ಕೇಳುತ್ತಾನೆ. ಅದ್ದುನ ತಾಯಿ ಹೇಗಾಯಿತು ಮಗಾ ನೊಂಬು?'' ಎಂದು ಕೇಳಿದಾಗ ''ಅರೆ ನೊಂಬು ಅಂದ್ರೆ ಇದೇ ಏನಮ್ಮಾ

ಹೀಗೆ ನಾವು ತುಂಬಾ ಸಲ ಇದ್ದೇವಲ್ಲಾ?'' ಎಂಬ ಮುಗ್ಧ ಮಾತುಗಳು ಮನಸ್ಸನ್ನು ತಟ್ಟದೇ ಇರಲಾರವು. ಈ ಮಾತುಗಳಲ್ಲಿ ಇಡೀ ಕತೆಯ ಜೀವಾಳವಿದೆ. ''ಬಡವರಿಗೆ ಎಲ್ಲಾ ದಿನಗಳೂ ಉಪವಾಸವೇ. ಅದಕ್ಕೆ ಧಾರ್ಮಿಕವಾಗಿ ಆಚರಿಸುವ ರಂಜಾನಿನ ನೊಂಬೇ ಆಗಬೇಕಿಲ್ಲ'' ಎಂಬುದನ್ನು ಕತೆಗಾರರು ಮುಗ್ಧ ಮಗು ಅದ್ದುನ ಮೂಲಕ ಮಾತನಾಡಿಸುತ್ತಾ ಅತ್ಯಂತ ಧ್ವನಿ ಪೂರ್ಣವಾಗಿ ಹೇಳುತ್ತಾರೆ.

'ಕಟ್ಪಾಡಿಯವರ ಅಪ್ಪ' ಕತೆಯಲ್ಲಿ ಮುಗ್ಧ ಉಮರನ ಬೆರಗುಗಣ್ಣುಗಳಿವೆ. ಉಮರನ ಮುಗ್ಧ ಕಣ್ಣುಗಳಿಂದ ಕತೆಗಾರರು ವಾಸ್ತವನನ್ನು ವೀಕ್ಷಿಸುವ ಅದರಲ್ಲಿಯ ವಿಪರ್ಯಾಸವನ್ನು, ದ್ವಂದ್ವಗಳನ್ನು ಯಾರ ಪರವೂ ವಹಿಸದೇ ಇದ್ದದ್ದು ಇದ್ದಂತೆಯೇ ಓದುಗರಿಗೆ ಪರಿಚಯಿಸುವ ಕಲಾತ್ಮಕತೆ ಕತೆಗಾರರಲ್ಲಿದೆ. ಕುರಾನ್ ಓದಿಸುವ ಮದ್ರಾಸ್‌ದ ಮೈಲಾರುವರು ಹೊಡೆದಿದ್ದರಿಂದ ಬಾತಿರುವ ಬೆರಳು ತೋರಿಸಬೇಕೆಂದು ಕೊಂಡಿರುವ ಬಾಲಕ ಉಮರ್. ಕುರಾನ್ ಓದುವಾಗ ಕಣ್ಣೀರು ಹಾಕುತ್ತಾ ಓದಿ ನಾವು ಯಾರಿಗಾದರೂ ಶಾಪ ಹಾಕಿದರೆ ಅದು ಅವರಿಗೆ ತಟ್ಟುತ್ತದೆಯೆಂಬ ವಿಷಯ ಬರುತ್ತದೆ. ಅದನ್ನು ನೆನಪಿಸಿಕೊಂಡು ಉಮರ್ ನಿರ್ದಯವಾಗಿ ತನ್ನನ್ನು ಹೊಡೆದಿರುವ ಮೈಲಾರಿಗೆ ನಾನೇಕೆ ಶಾಪ ಹಾಕಬಾರದೆಂದು ಕೊಳ್ಳುತ್ತಾನೆ. ಅಷ್ಟರಲ್ಲೆ ತನ್ನ ತಾಯಿಯ ಬೆನ್ನ ಮೇಲೆ ಹೊಡೆದ ಹಳೆಯ ಗಾಯದ ತಲೆಯನ್ನು ನೋಡುತ್ತಾ ಎರಡು ಸಲ ಹಜ್ ಯಾತ್ರೆ ಮಾಡಿ ಬಂದ ತಂದೆ ಯಾರು? ಎಲ್ಲಿದ್ದಾರೆ? ಎಂಬ ಪ್ರಶ್ನೆ ಅವನ ನೆನಪಿಗೆ ಬರುತ್ತದೆ. ಏಕೆಂದರೆ ಅವಳ ಬೆನ್ನ ಮೇಲಿರುವ ಹಳೇ ಗಾಯದ ಗುರುತುಗಳು ಎಲ್ಲ ವಿವರಗಳನ್ನೂ ನೀಡಿದ್ದವು, ತಾಯಿಯ ಬೆನ್ನ ಗಾಯದ ಕಲೆಗಳಲ್ಲಿ ಅಪ್ಪನನ್ನು ಕಾಣುವ ಉಮರನ ಮೌನ ಅನೇಕ ಆಯಾಮಗಳಲ್ಲಿ ತೆರೆದುಕೊಳ್ಳುತ್ತದೆ. ಮೂಕವಾಗಿ ಅಮ್ಮನ ಬೆನ್ನ ಗಾಯದ ಹಳೆಯ ಕಲೆಗಳ ಮೂಲಕ ಉಮರ್‌ನ ಎಲ್ಲ ಪ್ರಶ್ನೆಗಳಿಗೂ ಮೌನವಾಗಿ ಉತ್ತರಿಸಿದ ರೀತಿ ಜಾಣ್ಮೆ, ಮನ ತಟ್ಟುತ್ತದೆ. ಕತೆ ಹೇಳುವ ಕಲೆಗಾರಿಕೆ ಇವರಿಗೆ ಸಿದ್ಧಿಸಿದೆ. ಸಮಸ್ಯೆಯ ಆಳವಾದ ಅರಿವು. ಅಧ್ಯಯನ ಸಮಸ್ಯೆಯ ಮೂಲಕ್ಕಿಳಿದು ಸಾಂಸ್ಕೃತಿಕವಾಗಿ ಅದನ್ನು ದಾಖಲಿಸುವ ತಾಳ್ಮೆ ಸಂಯಮ, ಸಹೃದಯತೆಗಳು ಇವರಲ್ಲಿ ಮಡುಗಟ್ಟಿ ನಿಂತಿವೆ. ಇಸ್ಲಾಂ ಧರ್ಮದ ಕೌಟುಂಬಿಕ ನೆಲೆಗಳನ್ನು ಅವರು ತುಂಬಾ ಆಪ್ತವಾಗಿ ನೋಡುತ್ತಾರೆ. ಮುಸ್ಲಿಮೇತರರು ಸಹ ಮುಸ್ಲಿಂ ಸಮಾಜವನ್ನು ಪ್ರೀತಿಸುವಂತೆ ಮಾಡುತ್ತಾರೆ. ಇಲ್ಲಿ ಮುಸ್ಲಿಮೇತರರು ಸಹ ಮುಸ್ಲಿಂ ಸಮಾಜಕ್ಕೆ ಆಪ್ತವಾಗುತ್ತಾ ಅನನ್ಯ ಬಾಂಧವ್ಯ ಬೆಸೆಯುವಂತೆ ಮಾಡುವ ಕತೆಗಾರಿಕೆ ಕಟ್ಪಾಡಿಯವರಿಗೆ ಸಿದ್ಧಿಸಿದೆ.

ಕಟ್ಪಾಡಿಯವರ 'ನೊಂಬು', 'ಅಪ್ಪ' ಕತೆಗಳಂತೆ 'ದಜ್ಜಾಲ,' 'ಬುರ್ಖಾ' ಕತೆಗಳೂ ಕೂಡ ಅತ್ಯಂತ ಶ್ರೇಷ್ಠವಾದ ಕತೆಗಳಾಗಿವೆ. ಫಕೀರರ ಕತೆಗಳು ಇಸ್ಲಾಂ ಧರ್ಮದ ಅನೇಕ ಮೂಲಭೂತ ಸಾಂಸ್ಕೃತಿಕ ಘಟಕಗಳನ್ನು ಅತೀ ಸೂಕ್ಷ್ಮವಾದ ರೀತಿಯಲ್ಲಿ ಬಿಚ್ಚಿಬಿಡುತ್ತಾರೆ. ಇವರ ಕತೆಗಳು ಮಾತಿಗೆ ಮೀರಿದ ಹೃದಯ ಸಂವೇದನೆಗಳಾಗಿವೆ. ಓದುಗರ ಉತ್ಕೃಷ್ಟ ಅನುಭವವಾಗುತ್ತವೆ. ಇಸ್ಲಾಂನ ಅನೇಕ ಗುಮಾನಿಗಳನ್ನು ನಿವಾರಿಸುವ ಶಕ್ತಿ ಇವರ ಕತೆಗಳಿಗಿವೆ. ಸೌಹಾರ್ದ ಸಂಸ್ಕೃತಿಯ ಒಳಗಿನಿಂದ ಬೆಳೆದು ಬಂದು ಈ ಬಂಡಾಯದ ಸಂತ ಕಟ್ಟ ಬಯಸಿದ ಸಮಾಜಕ್ಕೆ ಜಾತಿ ಗೋಡೆಗಳು ಅಡ್ಡಬರುವುದಿಲ್ಲ. ಇವರು ತಮ್ಮ ಕತೆಗಳ ಮೂಲಕ ಮುಸ್ಲಿಂ ಸಮಾಜದ ಕೌಟುಂಬಿಕ ನೆಲೆಗಳನ್ನು ತುಂಬಾ ಆಪ್ತವಾಗಿ ಮಾತನಾಡಿಸುತ್ತಾರೆ.

ಅನ್ಯ ಸಂಸ್ಕೃತಿಯೊಂದಿಗೆ ಇಸ್ಲಾಂ ಸಂಸ್ಕೃತಿ ಬದುಕಬೇಕಾಗಿದೆ. ಅನೇಕ ಸಂಸ್ಕೃತಿಗಳೊಂದಿಗೆ ರಾಜಿ ಸಂಧಾನ ಮಾಡಿಕೊಳ್ಳುತ್ತ ಅನೇಕ ಕತೆಯಲ್ಲಿ ಏಕತೆಯಲ್ಲಿ ಕಾಣುತ್ತ ಬಹು ಸಂಸ್ಕೃತಿಗಳ ಒಳಗಿನಿಂದಲೇ ಇಸ್ಲಾಂ

ಬದುಕುಗಳನ್ನು ರೂಪಿಸಿಕೊಳ್ಳಬೇಕೆಂದು ಅರಿತಿರುವ ಫಕೀರ್ ಮಹಮ್ಮದ್ ಕಟ್ಪಾಡಿಯವರು ಪರಸ್ಪರ ಅರಿವಿನ ಸೌಹಾರ್ದ ಕಟ್ಟುವ ಮನಸ್ಸುಗಳು ಇಲ್ಲಿ ಮುಖ್ಯವಾಗುತ್ತವೆ. ಇಂತಹ ಸೌಹಾರ್ದ ಸಂಸ್ಕೃತಿಯ ಮೂಲದಿಂದ ಕಟ್ಟ ಬಯಸಿದ ಸಮಾಜ ಕಟ್ಪಾಡಿಯವರದಾಗಿದೆ. ಮುಸ್ಲಿಂ ಕೌಟುಂಬಿಕ ನೆಲೆಗಳನ್ನು ಆಪ್ತವಾಗಿ ಮಾತನಾಡಿಸುತ್ತ ಅನನ್ಯ ಬಾಂಧವ್ಯ ಬೆಸೆಯುವಂತೆ ಮಾಡುವ ಕತೆಗಾರಿಕೆ ಕಟ್ಪಾಡಿಯವರಿಗೆ ಪ್ರಾಪ್ತವಾಗಿದೆ.

'ಬುರ್ಖಾ' ಕತೆಯಲ್ಲಿ ಸೌಹಾರ್ದ ಸಂಸ್ಕೃತಿಯ ಎಳೆಗಳು ದಟ್ಟವಾಗಿ ಕಾಣಿಸಿಕೊಂಡಿವೆ. ಈ ಕತೆಯಲ್ಲಿ ಬರುವ ಜೈನಾಬ್ಬಿ ತನ್ನ ಗತಿಸಿದ ಪತಿಯ ನೆನಪಿಗಾಗಿ ಅವರು ಕೊಡಿಸಿದ ಬುರ್ಖಾವೊಂದನ್ನು ಇಟ್ಟುಕೊಂಡಿರುತ್ತಾಳೆ. ಊರಲ್ಲಿ ನಡೆದ ಕೋಮುಗಲಬೆವೊಂದರಲ್ಲಿ ಸಿಕ್ಕಿ ಹಾಕಿಕೊಂಡ ಹಿಂದೂ ದಂಪತಿಗಳಿಗೆ ಇದೇ ಬುರ್ಖಾವನ್ನು ತೊಡಿಸಿ ಅಲ್ಲಿಂದ ಪಾರು ಮಾಡಿ ಅವರ ಜೀವ ರಕ್ಷಿಸುತ್ತಾಳೆ. ಅದರಂತೆಯೇ ಇದೇ ಜೈನಬಿಯ ಮೊಮ್ಮಗಳನ್ನು ಹಿಂದೂ ಬಡಾವಣೆಯಲ್ಲಿರುವ ಕಾಲೇಜಿನಿಂದ ಕರೆ ತರುವ ಮೂಲಕ ಹಿಂದೂ ಆಟೋ ಚಾಲಕ ರಕ್ಷಿಸುತ್ತಾನೆ. ಹೀಗೆ ಎರಡು ಸಂಸ್ಕೃತಿಗಳ ಮಧ್ಯ ಅಂತರ್ವಾಹಿನಿಯಾಗಿ ಹರಿದು ಬರುವ ಸೌಹಾರ್ದ ಸಂಸ್ಕೃತಿಗೆ ಯಾವ ಕೋಮುವಾದದ ಕೋಮುವಾದಿಗಳ ಭಯವಿಲ್ಲ. ಜನಪದರ ಬದುಕನ್ನು ರಾಡಿಗೊಳಿಸುವ ಇವು ಎಷ್ಟೇ ಪ್ರಯತ್ನ ಪಟ್ಟರೂ ಅದರ ಮೂಲದಲ್ಲಿ ಜೈನಾಬ್ಬಿಯಂತಹ ಶುದ್ಧ ಅಂತಃಕರಣಗಳು ಇಂದಿಗೂ ನಮ್ಮ ಮಧ್ಯೆ ಬದುಕಿವೆ. ಕೂಡಿ ಬದುಕಿದ ಸೌಹಾರ್ದ ಸಂಸ್ಕೃತಿಗೆ ಸಾವಿರಾರು ವರುಷಗಳ ಇತಿಹಾಸವಿದೆ. ಅದೇ ಇತ್ತೀಚಿನ ಕೋಮುವಾದಿ ಕೂಸು ಬಹಳ ದಿನ ಬದುಕಿರಲು ಸಾಧ್ಯವಿಲ್ಲವೆಂಬ ಸಂದೇಶವೂ ಕಟ್ಪಾಡಿಯವರ ಈ ಕತೆಯಲ್ಲಿದೆ.

'ತುಷ್ಟೀಕರಣ' ಕತೆಯಲ್ಲಿ ನೀರಿಗೂ ಜಾತಿ ಅಂಟಿಸುವ ಲಲಿತಮ್ಮ ಕೊನೆಗೂ ಜಮೀರಾಳ ಬಾವಿಯಿಂದ ನೀರು ತರುತ್ತಾಳೆ. ಆಗವಳು ಹೇಳುತ್ತಾಳೆ. ನೀರು ಇದಕ್ಕೆಂತಾ ಜಾತಿ ಎಂದು. ಅವಳೇ ನೀರಿಗೆ ಜಾತಿ, ಮಡಿ ಮೈಲಿಗೆ ಎನ್ನುತ್ತಿದ್ದವಳು. ಬದಲಾದ ಪರಿಸ್ಥಿತಿಗೆ ಹೊಂದಿಕೊಂಡು ನೀರಿಗೂ ಜಾತಿಗೂ ಇರುವ ಮಡಿವಂತಿಕೆಯನ್ನು ಮುರಿದು ಹಾಕುತ್ತಾಳೆ.

ಒಟ್ಟಾರೆ ಫಕೀರ್ ಮಹಮ್ಮದ್ ಕಟ್ಪಾಡಿಯವರ ಕಥೆಗಳಲ್ಲಿ ವಾಸ್ತವವನ್ನು ಬೆರಗುಗಣ್ಣಿನಿಂದ ನಿರೀಕ್ಷಿಸುವ ಮುಗ್ಧ ಮಕ್ಕಳಿವೆ. ಈ ಮಕ್ಕಳು ಎಂದೂ ಮರೆಯಲಾಗದ ಅಚ್ಚಳಿಯದ ಛಾಪು ಓದುಗರ ಮನದಲ್ಲಿ ಮೂಡಿಸುತ್ತವೆ. 'ಅಪ್ಪ' ಕತೆಯ ಉಮ್ಮರ್ 'ದಜ್ಜಾಲ' ಕತೆಯ ಹನೀಫ್, 'ಕರುಳು' ಕತೆಯ ಮಸೂದ ನಂತಹ ಅನೇಕ ಮಕ್ಕಳು ಇವರ ಕತೆಗಳ ಹೃದಯ ಕೇಂದ್ರಿತ ಭಾವನೆಗಳನ್ನು ತಟ್ಟುತ್ತವೆ. ಕರ್ನಾಟಕದ ಇಸ್ಲಾಂ ಬದುಕುಗಳ ಒಳ ಚಿತ್ರಗಳನ್ನು ನೀಡುತ್ತದೆ. ಇದುವರೆಗೂ ಕನ್ನಡ ಸಾಹಿತ್ಯದಲ್ಲಿ ದಾಖಲಾಗದೇ ಉಳಿದ ಸಮಕಾಲೀನ ಸೂಕ್ಷ್ಮ ಒಳನೋಟಗಳನ್ನು ಇವರ ಕತೆಗಳು ನೀಡುತ್ತವೆ. ಇಸ್ಲಾಂನ ಸಾಚಾ ಸಂವೇದನೆಗಳನ್ನು ಶುದ್ಧ ಅಂತಃಕರಣದ ಮಾನವೀಯತೆಯಿಂದ ಮಿಡಿಯುತ್ತವೆ.

ಕೋಮುವಾದಿ ಧೋರಣೆಗಳಿಂದ ಆತಂಕಗೊಂಡ ತಳಮಳದ ಸನ್ನಿವೇಶದಲ್ಲಿ ಕಾಡಿನ ಬೆಂಕಿ ನಂದಿಸಲು ಸುರಿದ ಮಳೆ ಹನಿಗಳಂತೆ ಕಟ್ಪಾಡಿಯವರ ಕತೆಗಳು ಓದುಗನನ್ನು ತಣಿಸುತ್ತವೆ. ಇಂತಹ ಸಾಂಸ್ಕೃತಿಕ ಬಿಕ್ಕಟ್ಟಿನಲ್ಲಿ ನಿಂತಿರುವ ಬರಹಗಾರನ ತಲ್ಲಣಗಳು ಇವರ 'ಕೋಮು' ಕತೆಯಲ್ಲಿ ಅಭಿವ್ಯಕ್ತಿಗೊಂಡಿವೆ. ಭಾರತೀಯ ಸಮಾಜ ಮನೋಧರ್ಮದ ಚಾತುರ್ವರ್ಣ್ಯದ ಸಮಾಜವಷ್ಟೇ ಅಲ್ಲ. ಅದನ್ನೂ ಮೀರಿ ಹಲವಾರ ಸಮಾಜಗಳು,

ಬುಡಕಟ್ಟುಗಳೂ ಬದುಕಿದ ಅನೇಕ ಜನಾಂಗಗಳಿವೆ. ಇಸ್ಲಾಂ ಸಂಕಷ್ಟಕ್ಕೆ ಸಿಲುಕಿದ್ದಿದೆ. ಇತರೆ ಜನಾಂಗಗಳು ಇದನ್ನು ಗೌರವಿಸಿದ್ದೂ ಇದೆ. ಸಂಶಯದಿಂದ ಕಂಡ ಭಾರತೀಯ ಸಂದರ್ಭಗಳೂ ಇವೆ.

'ಒಸರು' ಕತೆಯಲ್ಲಿ ಅತ್ಯಂತ ಮುಗ್ಧವಾಗಿ ಎದುರಾಗುವ ಜಮೀಲಾ ಧರ್ಮದೊಳಗಿನ ಪೊಳ್ಳುತನವನ್ನು ಬಹಳ ಮುಗ್ಧವಾಗಿ ಕಲಾತ್ಮಕವಾಗಿ ಎದುರಿಸುತ್ತಾಳೆ. ನಿಷ್ಕಪಟ ಶುದ್ಧ ಮಾನವೀಯತೆಗಳು ಕಥೆಯ ತುಂಬಾ ಹರಿದಾಡುವ ಎಳೆಗಳು. 'ಅಕ್ಕನ ಮದುವೆ ಆಡು' ಕತೆಯಲ್ಲಿ ಅತ್ತೆ ಸೊಸೆಯರ ಜಗಳದ ಮೂಲಕ ಇಸ್ಲಾಂ ಕೌಟುಂಬಿಕ ಒಳಜಗಳಗಳನ್ನು ಚಿತ್ರಿಸುವ ಈ ಕತೆ ಕುತೂಹಲ ಹುಟ್ಟಿಸುತ್ತಾ ಹೋಗುತ್ತದೆ. ಮುಸ್ಲಿಂ ಜನಾಂಗದ ಬದುಕಿನ ಹಲವಾರು ಸಮಸ್ಯೆಗಳ ಬೇರುಗಳು ಈ ದೇಶದ ಸಾಂಸ್ಕೃತಿಕ ವ್ಯವಸ್ಥೆಯಲ್ಲಿರುವುದು ಇವರ ಅನೇಕ ಕತೆಗಳಲ್ಲಿ ಧ್ವನಿತವಾಗಿದೆ.

ಮುಸ್ಲಿಂ ಸಮಾಜದ ಸಾಂಸ್ಕೃತಿಕ ಬದುಕಿನ ಒಳಹರಿವುಗಳು ಸಂಧಾನಗಳೂ, ಸಂಘರ್ಷಗಳೂ ನಿರೀಕ್ಷಿಸುವ ಮುಗ್ಧ ಮನಗಳು ಹೊಸ ಬದುಕುಗಳನ್ನು ರೂಪಿಸಿಕೊಳ್ಳುತ್ತಾರೆ. ಹೊಸ ವಿಚಾರಗಳನ್ನು ಅಳವಡಿಸಿಕೊಳ್ಳುತ್ತಾರೆ. 'ಕಟ್ಪಾಡಿಯವ ಹತ್ಯೆ' ಕತೆಯಲ್ಲಿ ಹಿಂದೂ ಮುಸ್ಲಿಂ ಸಮುದಾಯಗಳು ವರ್ತಿಸುವ ರೀತಿ ತಲ್ಲಣಗೊಳಿಸುವಂತದ್ದು, ಆಸ್ತಿಯ ವಿಚಾರದಲ್ಲಿ ಪೋಲಿಸ್ ಸ್ಟೇಷನ್, ಕೋರ್ಟು ಸುತ್ತುತ್ತಾ ಪರಿಸರದ ವಿನಾಶಕ್ಕೆ ಕಾರಣವಾಗುವ ಇಬ್ಬರು ವ್ಯಕ್ತಿಗಳ ದುರಂತ 'ವ್ಯಾಜ್ಯ' ಕತೆ ಸ್ವಾರಸ್ಯವಾಗಿ ಚಿತ್ರಿಸುತ್ತದೆ. ಕಡಲ ತೀರದ ಮುಸ್ಲಿಂ ಬದುಕು ಬವಣೆಯನ್ನು ಈ ಕತೆ ಸಮರ್ಥವಾಗಿ ನಿರೂಪಿಸುತ್ತದೆ. ಮನೆಯ ಬಾಗಿಲು ಕಿಟಕಿಗಳನ್ನು ತೆರೆದಿಟ್ಟು ಹೊಸ ಬೆಳಕು, ಗಾಳಿಯನ್ನು ಸ್ವಾಗತಿಸುವುದು ಅನಿವಾರ್ಯವಾದಂತೆ ಬದಲಾವಣೆಯಾಗುತ್ತದೆ. ಮುಸ್ಲಿಂ ಪರಂಪರೆಯ ಅತ್ಯಂತ ಶಕ್ತಿಯುತ ಸೃಜನಶೀಲ ಆಕರಗಳ ಮೂಲಕ ನೋವು ಸಂಕಟಗಳನ್ನು ಅಮೂಲ್ಯ ಅನುಭವವಾಗಿಸಿಕೊಳ್ಳುವ ಮೂಲಕ ಇಸ್ಲಾಂ ಪರಂಪರೆಗೆ ಆಧುನಿಕತೆಗಿಂತ ಸಾಚಾ ಅನುಭವಗಳನ್ನು ಅರ್ಥಪೂರ್ಣವಾಗಿ ಫಕೀರ್ ಮಹಮ್ಮದ್ ಕಟ್ಪಾಡಿಯವರು ಕತೆಗಳ ಮೂಲ ಕಟ್ಟಿಕೊಟ್ಟಿದ್ದಾರೆ.

ಇತ್ತೀಚಿಗೆ ಬರೆಯುತ್ತಿರುವ 'ಅಬ್ದುಲ್ ರಶೀದ್' ಆಧುನಿಕ ಕನ್ನಡ ಕಥಾ ಸಾಹಿತ್ಯ ಸಂದರ್ಭದಲ್ಲಿ ಮಹತ್ವದ ಕತೆಗಾರರು. ಇವರ ಕತೆಗಳು ಕೇವಲ ಮುಸ್ಲಿಂ ಸಂವೇದನೆಯ ಕತೆಗಳೆಂದು ಸೀಮಿತಗೊಳಿಸಲು ಬರುವುದಿಲ್ಲ. ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಇವರ ಕತೆಗಳು ಸಾಹಿತ್ಯ ದಿಕ್ಕನ್ನು ಹೆಚ್ಚು ಆರೋಗ್ಯಪೂರ್ಣವಾದ ನೆಲೆಯ ಕಡೆಗೆ ಸೆಳೆಯಲು ಯತ್ನಿಸುತ್ತವೆ. ಇವರ 'ಹಾಲು ಕುಡಿದ ಹುಡುಗಾ', 'ಕಪ್ಪು ಕಾಡಿನ ಹಾಡು', 'ಪ್ರಾಣಪಕ್ಷಿ', 'ಮೂಸಾ' ಮುಂತಾದವು ಇವರ ಮಹತ್ವದ ಕತೆಗಳು.

''ಅಬ್ದುಲ್ ರಶೀದ್‌ರ ಬರವಣಿಗೆ ಭಾವಗೀತೆಯ ಲಯದ ಬರವಣಿಗೆ, ಮುಸ್ಲಿಂ ಜನಾಂಗದ ಒಳತೋಟಿಗಳನ್ನು, ಅವರ ಬದುಕಿನ ದುಃಖ ದುಮ್ಮಾನಗಳನ್ನು ಇವರ ಕತೆಗಳು ಕಟ್ಟಿಕೊಡುತ್ತವೆ. ಒಂದು ಜನಾಂಗದ ಮಿತಿಯನ್ನು ಮೀರಿ ಬದುಕನ್ನು ಗ್ರಹಿಸುವ ತೀವ್ರತೆ ಇವರ ಕತೆಗಳಲ್ಲಿ ಪ್ರಧಾನವಾಗಿ ಕಂಡು ಬರುತ್ತದೆ. 'ಹಾಲು ಕುಡಿದ ಹುಡುಗಾ' ಕತೆಯಲ್ಲಿ ತಾಮ್ರುತನದ ತಾಜಾತನವಿದೆ ಎನ್ನುವ ಕರೀಗೌಡ ಬೀಚನಹಳ್ಳಿಯವರ ಮಾತು ಸತ್ಯಾಂಶದಿಂದ ಕೂಡಿದೆ.

'ಅಬ್ದುಲ್ ರಶೀದ್'ರ ಹಾಲು ಕುಡಿವ ಹುಡುಗಾ ಕತೆಗಳಲ್ಲಿ ಅವರು ಮುಸ್ಲಿಂ ಜನಾಂಗದ ದೃಷ್ಟಿಯನ್ನು ಹೆಚ್ಚು ಆರೋಗ್ಯಪೂರ್ಣವಾದ ವಿಷಯಗಳೆಡೆಗೆ ತಿರುಗಿಸುತ್ತಾರೆ. ಈ ಸಂಕಲನದಲ್ಲಿ ಮುಸ್ಲಿಂ ಸಂವೇದನೆ ಆ ಸಮುದಾಯದ ದಟ್ಟ ಅನುಭವದ ಆಕರವಾಗಿ ಪಡಿಯಚ್ಚು ಮೂಡಿಸುತ್ತದೆ. ಈ ಸಂಕಲನದಲ್ಲಿ ಸಂವೇದನೆ ಮತ್ತು

ಅನುಭವಗಳು ಪ್ರತ್ಯೇಕಿಸಲಾಗದಂತೆ ದಟ್ಟವಾದ ಮುಸ್ಲಿಂ ಅನನ್ಯ ಬದುಕಿನ ಚಿತ್ರಣವನ್ನು ದಾಖಲಿಸುವುದರ ಮುಖಾಂತರ ಸಮಕಾಲೀನ ಮುಸ್ಲಿಂ ಜನಾಂಗವನ್ನು ರಶೀದ್‌ರು ಆರೋಗ್ಯಪೂರ್ಣ ನೆಲೆಯ ಕಡೆಗೆ ಕೊಂಡೊಯ್ಯುತ್ತಾರೆ.

'ಅಬ್ದುಲ್‌ರಶೀದ್'ರವರ ಅತ್ಯಂತ ಶ್ರೇಷ್ಠ ಕತೆಯಾದ ''ಬಿದಿರು ಕೋಲಿನ ಪೀಪಿ'' ಈ ಕತೆಯಲ್ಲಿ ಪ್ರತಿಮೆಗಳನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಪ್ರಬುದ್ಧವಾದ ಗ್ರಹಿಕೆ ವ್ಯವಸ್ಥೆಯ ಕ್ರೌರ್ಯವನ್ನು ತಿರಸ್ಕರಿಸಲು ಗೂಳಿಯ ಸಂಕೇತದ ಸಶಕ್ತ ಬಳಕೆಯಾಗಿದೆ. ಮತೀಯ ಆಚರಣೆಗಳ ಮೂಲಕ ಮಮ್ಮದೆಯ ಬದುಕಿನಲ್ಲಿ ಒದಗಿ ಬರುವ ಆತಂಕಗಳನ್ನು ಮುಖಾಮುಖಿಯಾಗಿಸುತ್ತಾರೆ. ಮಮ್ಮದೆಯ ಸುನ್ನತ್ ಸಾಂಕೇತಿಕವಾಗಿ ಗೂಳಿಯ ಕ್ರೌರ್ಯದ ಮಜಲನ್ನು ಮುರಿದು ಹಾಕುವ ಆಶಯಕ್ಕೆ ಸುನ್ನತ್ ಸಾಂಕೇತಿಕವೇ? ಅದನ್ನು ಪ್ರತ್ಯೇಕಿಸಲಾರದ ಹಾಗೆ ಒಂದಕ್ಕೊಂದು ತಳುಕು ಹಾಕಿಕೊಂಡಿವೆ. ಈ ಕತೆಯ ಅಂತರಂಗದಲ್ಲಿ ಧ್ವನಿಶಕ್ತಿಯೊಂದು ಉದ್ದಕ್ಕೂ ಹರಿದು ಬರುತ್ತದೆ. ಗೂಳಿಯನ್ನು ಹದ್ದು ಬಸ್ತಿನಲ್ಲಿಡಬೇಕೆಂಬ ಮುದಾರನ ಪ್ರಯತ್ನ ಫಲಿಸುವುದಿಲ್ಲ. ಮುದಾರ ಕೂಡ ಯಾವಾಗ ಗೂಳಿಯ ಹಿಡಿತ. ಸಾಧ್ಯವಾಗುವುದಿಲ್ಲವೋ ಆಗಲೇ ತನ್ನ ಶಕ್ತಿ ಜಾಣ್ಮೆಗಳಿಗೆ ಅವಮಾನವಾದಾಗ ಮುದಾರ ಗೂಳಿಯ ವಿಷಯ ಬಿಟ್ಟುಬಿಡುತ್ತಾನೆ. ಮಮ್ಮದೆಯ ಮುಗ್ಧತೆಯೊಳಗೂ ಸುನ್ನತ್ ರೀತಿಯ ಮತೀಯ ಆಚರಣೆಗಳು ಅರ್ಥ ಕಳೆದುಕೊಳ್ಳುವುದು ಅನಿವಾರ್ಯವಾಗುತ್ತದೆ. ಮಾನವನ ಅಂತಃಕರಣವನ್ನು ತಟ್ಟದ ಅವನ ವ್ಯಕ್ತಿತ್ವವನ್ನು ರೂಪಿಸಲಾರದ ಯಾವ ವಿಷಯವೂ ದೊಡ್ಡದ್ದಲ್ಲವೆಂಬ ಕತೆಯ ಸಾರ ಮಾನವೀಯತೆಯನ್ನು ಎತ್ತಿ ಹಿಡಿಯುತ್ತದೆ.[೨೪]

''ಮುಸಾ ಮ್ಯೂಲಿಯಾರರ ಮುದ್ದಿನ ಮಗಳು ಮತ್ತು ಹೆಲಿಕಾಪ್ಟರ್ ಎಂಬ ವಿಷ ಜಂತು'' ಕತೆಯ ಅಮೀನಾ ಮುಗ್ಧತೆಯಲ್ಲೇ ರೂಪುಗೊಳ್ಳುವ ಅವಳ ಜೀವಪರ ಧೋರಣೆಗಳಿಗೆ ಹೆಲಿಕ್ಯಾಪ್ಟರ್‌ನ ಬೆರಗು ಅಭಿವ್ಯಕ್ತವಾಗುವ ರೀತಿ ಆಧುನಿಕತೆಗಳ ದ್ವಂದ್ವಗಳ ಬದುಕು ಹೊಸದನ್ನು ನೀಡಲು ನಿರಾಕರಿಸಿದಾಗ ಆಧುನಿಕತೆ ಅನಿವಾರ್ಯವಲ್ಲವೆಂಬ ನಿಲುವು ತಳೆಯುತ್ತಾರೆ. ಆಧುನಿಕತೆ ಒಡ್ಡುವ ಸವಾಲುಗಳನ್ನು ನಿಷ್ಕ್ರೀಯಗೊಳಿಸುವ ಬದುಕನ್ನು ರೂಪಿಸಿಕೊಳ್ಳುವಲ್ಲಿ ಮುಗ್ಧ ಅಮೀನಾ ಅಭಿರುಚಿ ತೋರುತ್ತಾಳೆ. ಅರ್ಥಹೀನ ಪರಂಪರೆಯ ಅಮದ್ ಕುಟ್ಟಿಯನ್ನು ತಿರಸ್ಕರಿಸಿ ಹೆಲಿಕಾಪ್ಟರ್ ಚಾಲಕನನ್ನೇ ಮದುವೆಯಾಗುವುದಾಗಿ ಹೇಳುತ್ತಾಳೆ. ಈ ಅಪಘಾತಕ್ಕೆ ತಂದೆಯ ಸಂಪ್ರದಾಯಿಕ ಮನಸ್ಸು ಸಿದ್ಧವಿಲ್ಲದೆ ಹೋದಾಗ ಅಮದ್‌ಕುಟ್ಟಿಯ ಪ್ರೀತಿಯನ್ನು ಅರ್ಥಮಾಡಿಕೊಂಡ ತಂದೆ ಅವನನ್ನೇ ಭಾವೀ ಅಳಿಯನನ್ನಾಗಿ ಭಾವಿಸುತ್ತಾರೆ. ಆದರೆ ಅಮೀನಾಳ ಆಧುನಿಕತೆಯ ಭ್ರಮೆಯ ಹೆಲಿಕಾಪ್ಟರ್ ತಂದು ಹರಡಿದ ವಿಷದಿಂದ ಅವಳ ಪೂಚೆಕುಟ್ಟಿಯು ಸತ್ತುಬಿದ್ದ ದುರಂತದಲ್ಲಿ ಮುಕ್ತಾಯವಾಗುತ್ತದೆ. ಕತೆಯುದ್ದಕ್ಕೂ ಹರಿದು ಬರುವ ವಿಶಿಷ್ಟಧ್ವನಿ ಕಥಾ ಹಂದರದಿಂದ ಎಲ್ಲಿಯೂ ಅಲ್ಲಾಡದಂತೆ ಕಟ್ಟಿಹಾಕುತ್ತದೆ. ಆಧುನಿಕತೆಯ ದುರಂತದೊಂದಿಗೆ ಕತೆ ಮುಗಿಯುತ್ತದೆ.

'ರಶೀದರ-ಕಪ್ಪು ಹುಡುಗನ ಹಾಡು' ಕತೆಯಲ್ಲಿ ಹಮೀದೆಯ ಉಮ್ಮ ಸಾರಾ ತಾತಾ ಹೌದೇ ಅಲ್ಲವೇ ಎಂದು ಹುಡುಕುತ್ತಿರುತ್ತದೆ. ಒಂದು ವೇಳೆ ಸಾರಾ ತಾತಾ ತನ್ನ ಉಮ್ಮ ಅಲ್ಲದಿದ್ದರೆ ಅವಳು ತನ್ನನ್ನೇಕೆ ಅಷ್ಟೊಂದು ಪ್ರೀತಿಸುತ್ತಾಳೆ? ಎಂಬ ಪ್ರಶ್ನೆ ಹಮೀದೆಯ ಮುಗ್ಧ ಮನದಲ್ಲಿ ಮೂಡುತ್ತದೆ. ಈ ಸಾರಾ ತಾತಾಳ ಬಗ್ಗೆ ಗ್ರಹಿಸಲು ತೊಡಗಿದ ಹಮೀದನು ತನ್ನ ಆಟ ಪಾಟಗಳನ್ನೇ ಮರೆಯುತ್ತಾನೆ. ಸಾರಾ ತಾತಾಳು ಕೊಟ್ಟ ಲುಂಗಿಯನ್ನು ಸುಟ್ಟುಹಾಕುತ್ತಾನೆ. ಕರುವನ್ನು ಬಿಟ್ಟು ಆಕಳು ಕಾಡಿನಲ್ಲಿ ತಪ್ಪಿಸಿಕೊಂಡ ವಿಷಯ ತಿಳಿದು ಹೌಹಾರುತ್ತಾನೆ. ತನ್ನನ್ನು

ಕರು ಆಕಳು ಸಾರಾ ತಾತಾಳಾಗಿ ರೂಪಿಸಿಕೊಂಡ ಹಮೀದ ಭಯಗೊಳ್ಳುತ್ತಾನೆ. ಹಸು ಮಾನವನ ಉಪಯೋಗಿಯಾಗಿದ್ದರಿಂದ ಎಲ್ಲರೂ ಅದನ್ನು ಹುಡುಕಲು ಕಾಡಿಗೆ ಹೊರಟ ಹಮೀದೆಯ ಮಾನವೀಯ ಸಂಕಟ ಯಾರೂ ಅರಿಯರು. ಅವನ ಸಂಕಟ ಅರ್ಥವಾಗುವುದಾದರೆ ಅದು ಸಾರಾ ತಾತಾಗೊಬ್ಬಳಿಗೆ ಮಾತ್ರ. ಈ ಕತೆಯಲ್ಲಿ ರಶೀದರು ಮುಸ್ಲಿಂ ಜಗತ್ತಿನ ಜೀವನಾನುಭವಗಳ ಮೂಲಕ, ಹಮೀದೆ ಮುಗ್ಧ ಮನಸ್ಸಿನ ಚಿತ್ರಣದ ಜೊತೆಗೆ ಸಾರಾ ತಾತಾನ ಭಾವ ಸಂಬಂಧಗಳನ್ನು ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ.

'ಅಬ್ದುಲ್ ರಶೀದರ-ಕಾಡು ಕೋಳಿಯ' ಜಾಡು ಕತೆಯಲ್ಲಿ ಮುಸ್ಲಿಂ ಕುಟುಂಬದ ಆರ್ಥಿಕ ಸ್ಥಿತಿ ಮುಗ್ಧ ಮಕ್ಕಳ ಮಾನಸಿಕ ಪ್ರಪಂಚದ ಮೇಲೆ ಉಂಟುಮಾಡುವ ಪರಿಣಾಮವನ್ನು ಕತೆ ಅಭಿವ್ಯಕ್ತಿಸುತ್ತದೆ. ತನ್ನ ತಂದೆಯ ಕಾಯಿಲೆ ಕುಟುಂಬದ ಆರ್ಥಿಕತೆಯ ಮೇಲೆ ಗಾಢ ಪರಿಣಾಮ ಬೀರುವುದು ಮೂಸೆಯ ಪುಟ್ಟ ಮನಕ್ಕೆ ನೋವಿನ ಅನುಭವವಾಗಿದೆ. ಮೂಸೆಗೆ ಕಾಡುಕೋಳಿಯ ಪುಕ್ಕ ಕೆಲ ಸಮಯ ನೋವನ್ನು ಮರೆಸಿ ಅವನ ಮನಸ್ಸನ್ನು ಮುದಗೊಳಿಸುತ್ತದೆ. ಆದರೆ ಈ ಸಂತೋಷವೂ ಬಹುಕಾಲ ಉಳಿಯುವುದಿಲ್ಲ. ಏಕೆಂದರೆ ಇಬ್ರಾಯಿ ಮೂಸೆಯಲ್ಲಿರುವ ಪುಕ್ಕವನ್ನು ಕಿತ್ತುಕೊಳ್ಳುತ್ತಾನೆ. ಇಂತಹದರಲ್ಲಿ ಭಾಷಾ ಕೋಲು ಹಿಡಿದು ಕುರಾನ್ ಓದುವುದನ್ನು ಕಲಿಯುವುದು ಪ್ರತಿಷ್ಠೆಯ ವಿಷಯವಾಗಿ ಪರಿಭಾವಿಸುವುದು ಮತ್ತು ಅದನ್ನು ಕಲಿಯಲು ಕುಂಞ ಮದರಾಸಿಗೆ ಹೋಗುತ್ತಾನೆ. ಆಧುನಿಕತೆಯ ಸಂಕೇತಗಳಾದ ಬಸ್ಸು, ವಾಹನ ಮತ್ತು ಟ್ರಾಕ್ಟರ್‌ಗಳು ಮೂಸೆಯ ಮನಸ್ಸಿನ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ. ಕೋಳಿ-ಹಾವು ರಾಣಿಯನ್ನು ಅಟ್ಟಿಸಿಕೊಂಡು ಹೋಗಿ ಕೊಲ್ಲುವ ಕ್ರಿಯೆಯ ಹಿಂಸೆ, ಕ್ರೌರ್ಯದ ಪ್ರತೀಕವಾಗುತ್ತದೆ. ಬದುಕಿನಲ್ಲಿ ಬರುವ ಕಷ್ಟ ಸುಖಗಳು ಮೂಸೆಯನ್ನು ಅಕಾಲ ಪ್ರಬುದ್ಧನಂತೆ ಮಾಡುತ್ತವೆ. ಇದಕ್ಕೆ ಅವನ ಬಾಲ್ಯದ ದಿನಗಳಲ್ಲಿ ಅಸಹಜ ಪ್ರಬುದ್ಧನಾಗುವುದು. ಆರ್ಥಿಕತೆಗಳು ಕುಟುಂಬದ ಮೇಲೆ ಬೀರುವ ಕೆಟ್ಟ ಪರಿಣಾಮಗಳು ಮೂಸೆಯಂತವರ ಮನಗಳು ಹೇಗೆ ಕಲುಷಿತವಾಗಿ ದುರಂತಕ್ಕೆ ಕಾರಣವಾಗುತ್ತವೆಯೆಂದು ರಶೀದರು ಈ ಕತೆಯಲ್ಲಿ ಸೂಚ್ಯವಾಗಿ ಹೇಳಿದ್ದಾರೆ. ಜೀವನಾನುಭವದ ಘಟ್ಟಿಯಾಗಿ ಹೊರಹೊಮ್ಮುತ್ತಿರುವ ರಶೀದರ ಕತೆಗಳಲ್ಲಿ ಅಪಾರ ಕಾಳಜಿಗಳು, ಜೀವಪರ ಧೋರಣೆಗಳು, ಸೃಜನಶೀಲ ಶಕ್ತಿಗಳು ಮಡುಗಟ್ಟಿಕೊಳ್ಳುವ ಕತೆಗಳು, ಪ್ರಪಂಚದ ಕ್ರೌರ್ಯ ಮತ್ತು ಮುಗ್ಧತೆಗಳು ಮುಖಾಮುಖಿಯಾಗಿ ಅನಾವರಣಗೊಳ್ಳುತ್ತವೆ.[೬೬]

''ಸಮಯಕ್ಕೆ ಸರಿಯಾಗಿ ಕಡಲು ಸೇರುವ ಬದಿಯಲ್ಲಿ ಹಳೆ ಮಸೀದಿಯಲ್ಲಿ ಪಂಡಿತ್ ಹಾಜಿ ಅಲ್ಲಾಹುವಿನ ಎದುರು ಪ್ರಾರ್ಥಿಸಲು ಕೈಯೆತ್ತುತ್ತಿರುವಂತೆ ಆತನ ಗೂಡಂಗಡಿಯೊಳಗೆ ಆನಾ ಪ್ರಾಣ ಪಕ್ಷಿಗಳು ನೇತಾಡಿಕೊಂಡು ಬಿಸಿಲಲ್ಲಿ ನೋಡುವವರಿಗೆ ನಡು ಮಧ್ಯಾಹ್ನ ಈ ಮರದ ಗೂಡಂಗಡಿ ಅಲುಗಾಡುತ್ತಿರುವಂತೆ ತೋರುವುದು.''[೭೦] ಮೇಲಿನ ಸಾಲುಗಳಲ್ಲಿ ಪಂಡಿತ್ ಹಾಜಿಯ ಬದುಕಿನ ವಿವರಗಳನ್ನು ಕಟ್ಟಿಕೊಡುವ ರಶೀದರ 'ಪ್ರಾಣಪಕ್ಷಿ' ಕತೆ, ಮುಸ್ಲಿಂ ಜನಾಂಗದ ಕಡುಬಡತನ, ದಾರಿದ್ರ್ಯ ಮುಸ್ಲಿಂ ಹೆಣ್ಣು ಮಕ್ಕಳು ಬಡತನದ ಬೇಗೆಯಲ್ಲಿ ವೇಶ್ಯಾ ವೃತ್ತಿಗೆ ಬದುಕು ಮಾರಿಕೊಂಡದ್ದನ್ನು ಹೇಳುತ್ತದೆ.

''ಪಂಡಿತ್ ಹಾಜಿ ನಗರದ ಅಂಚಿನಲ್ಲಿ ಹಸ್ತ ಸಾಮುದ್ರಿಕ ಶಾಸ್ತ್ರ ಹೇಳುತ್ತಲೇ ನಗರದ ದೀನ ದರಿದ್ರರ ಬದುಕು ಸಂಕಟಗಳಿಂದ ಮುಕ್ತವಾಗಲೆಂದು ಸಂಜೆ ನದಿ ದಂಡೆಯಲ್ಲಿ ನಿಂತಿದ್ದ ಮಸೀದಿಗೆ ಬಂದು ನಮಾಜು ಮಾಡುತ್ತಾರೆ. ನಂತರ ''ಸತ್ಯ ವಿಶ್ವಾಸಿಗಳೇ ನಿಲ್ಲಿ ನಿಮ್ಮಲ್ಲಿ ನನ್ನದೊಂದು ಮಾತಿದೆ ಅಲ್ಲಾಹುವಿನ ಪರಮ

ಆಡಿಯಾಳಿನ ಮಾತು ಕೇಳಿಸದೆ ನೆಡೆದು ಹೋಗದಿರಿ ಸತ್ಯ ವಿಶ್ವಾಸಿಗಳೇ''೧೫ ಎಂದು ಮತ ಪ್ರಸಂಗ ಶುರುಮಾಡಿ ಜನ ಭವಿಷ್ಯ ನುಡಿಯ ತೊಡಗಿದಂತೆ ಜನ ಹೆದರಿ ಪಾಪ ಕಳೆದುಕೊಳ್ಳಲು ಆತ ಹಾಸಿದ ರುಮಾಲಿಗೆ ಕಿಸೆಯಿಂದ ನಾಣ್ಯ, ರೂಪಾಯಿಗಳನ್ನು ಹಾಕಿ ತಲೆ ತಗ್ಗಿಸಿ ಮಸೀದಿಯ ಮೆಟ್ಟಿಲು ಇಳಿದು ಹೋಗಿಬಿಡುತ್ತಾರೆ. ನಂತರ ಪಂಡಿತ್ ಹಾಜಿ ರುಮಾಲನ್ನು ಗಂಟು ಮಾಡಿ ಸೋಂಟಕ್ಕೆ ಸುತ್ತಿಕೊಂಡು ಮನೆಯತ್ತ ಬರುತ್ತಾರೆ. ತಾನು ದುಡಿದ ಹಣದಲ್ಲಿ ಬಡಜನರಿಗೆ ಸಹಾಯಹಸ್ತ ನೀಡುವ ಹಾಜಿ, ತನ್ನ ಕುಟುಂಬವೂ ಬಡತನದಲ್ಲಿ ತೆವಳುತ್ತಿರುವ ಚಿತ್ರ ಕಣ್ಣಮುಂದೆ ತರುತ್ತಾರೆ. ''ಉರಿಯುತ್ತಿರುವ ಚಿಮಣಿ ದೀಪದ ಬೆಳಕಿನಲ್ಲಿ ಬೇಬಿ ಉಮ್ಮಾನ ತೊಡೆಗೆ ಒರಗಿ ಮಡಿಲಲ್ಲಿರುವ ಬಿದಿರಿನ ಮಟ್ಟಿಯಿಂದ ಬೀಡಿ ಎಲೆಯನ್ನು ಕತ್ತರಿಸಿ ತಂಬಾಕು ತುಂಬಿ ಬೀಡಿ ಕಟ್ಟುತ್ತಿರುವ ಮಗಳು ರಮ್ಲಾ ನಿದ್ದೆಹೋಗಿದ್ದಳು.''೧೬ ಮೇಲಿನ ಸಾಲುಗಳಲ್ಲಿ ಬಡಮುಸ್ಲಿಂ ಕುಟುಂಬ ಬೀಡಿಕಟ್ಟಿ ಬದುಕು ಕಟ್ಟಿಕೊಳ್ಳುವ ನೈಜ ಚಿತ್ರಣವನ್ನು ಇಡೀ ಕುಟುಂಬದ ನೋವಿನ ವಿವರಗಳನ್ನು ದಾಖಲಿಸುತ್ತಾರೆ.ಒಂದು ಕಡೆ ಕಡಲು ಮತ್ತೊಂದುಕಡೆ ಬೆಟ್ಟ, ಎರಡು ಕಡೆ ನದಿಗಳು ತಡೆಇದ್ದರಿಂದ ನಗರ ಬೆಳೆಯಲು ಅಡ್ಡಿಯಾಗಿತ್ತು. ನಗರದ ಗೂಡಂಗಡಿಗಳನ್ನು ವೇಶ್ಯಾಸ್ತ್ರೀಯರನ್ನು, ಬಿಕ್ಷುಕರನ್ನು ತೆರವು ಮಾಡಲು ಜಿಲ್ಲಾಧಿಕಾರಿ ಡಾ. ಅಮಿತಾ ಬಸು ಯೋಜನೆ ಕೈಗೊಂಡಾಗ. ಈ ಪಂಡಿತ್ ಹಾಜಿಯೆಂಬ ಮುಸ್ಲಿಂ ಮುದುಕ ರಂಗೂನಿನ ಕತೆಗಳನ್ನು ಹೇಳಿಕೊಂಡು ಕಲಕತ್ತದಲ್ಲಿ ತಾನು ಬಾಲ್ಯ ಕಳೆದ ರಸ್ತೆಗಳ ಹೆಸರನ್ನು, ಮನೆಗಳ ಗುರುತನ್ನು ಹೇಳಿ ತಾನು ನೇತಾಜಿಯವರಿಗೆ ಚಾ ಮಾಡಿ ಕೊಟ್ಟವನೆಂದು, ತಾನು ಮಂತ್ರವಾದಿಯೆಂದೂ, ತನ್ನ ಗೂಡಂಗಡಿಯನ್ನು ಬೀಳಿಸಬಾರದೆಂದೂ, ಬೆನ್ನುಬಾಗಿಸಿ ಸಲಾಂ ಹೇಳಿ ಪರಿಪರಿಯಾಗಿ ಬೇಡಿಕೊಂಡು ನಕ್ಕು ಸಲಾಂ ಮಾಡಿ ಹೊಗುವ ಚಿತ್ರ ಕಣ್ಣಿಗೆ ಕಟ್ಟುತ್ತದೆ. ತನ್ನ ಗೂಡಂಗಡಿ ನೆಲಸಮವಾದರೆ ಬದುಕು ದಿಕ್ಕು ತಪ್ಪುತ್ತದೆಯೆಂದು ಪಂಡಿತ್ ಹಾಜಿ ತಲ್ಲಣಗೊಳ್ಳುತ್ತಾನೆ. ''ಆ ಸಂದರ್ಭದಲ್ಲಿ ನಗರದ ವಸತಿ ಗೃಹವೊಂದರಲ್ಲಿ ಮುಸ್ಲಿಂ ಹುಡುಗಿ ಕೊಲೆಯಾಗಿ ಹೊಗುತ್ತಾಳೆ. ಆಕೆಯ ಹೊಕ್ಕುಳ ಬಳ್ಳಿಯ ಮೇಲೆ ಕಣ್ಣಕಾಡಿಗೆಯಿಂದ 'ಮುಸ್ಲಿಂ ಹುಡುಗಿ ಎಡ್ಸ್ ರೋಗಿ' ಎಂದು ಬರೆಯಲಾಗಿದೆ. ಕೋಣೆಯ ಬಾಗಿಲ ಹೊರಗೆ ನೀಲಿಯ ಬುರುಕಾವೊಂದು ಕೊಳೆ ಕೊಳೆಯಾಗಿ ಬಿದ್ದಿದೆ. ಬುರುಕಾದ ಒಳಜೇಬಿನಲ್ಲಿ ನೂರರ ಹತ್ತಾರು ನೋಟ್ಟುಗಳು ಪತ್ತೆಯಾಗಿವೆ.''೧೭ ಮೇಲಿನ ಕತೆಯ ಸಾಲುಗಳಿಂದ ಬಡ ಮುಸ್ಲಿಂ ಕುಟುಂಬದ ಮಹಿಳೆಯರು ವೇಶ್ಯಾವೃತ್ತಿಗೆ ಇಳಿದಿರುವುದನ್ನು ಅವರ ಬದುಕಿನ ದಾರುಣ ವಿವರಗಳನ್ನು ರಶೀದರು ನೋವಿನಿಂದ ಬರೆಯುತ್ತಾರೆ. ನಗರಗಳು ಬೆಳೆದಂತೆ ಬಡ ಮುಸ್ಲಿಂ ಕುಟುಂಬ ದಾರಿತಪ್ಪಿ ಹೊಟ್ಟೆ ಹೊರೆದುಕೊಳ್ಳಲು ಮೈಮಾರಿಕೊಳ್ಳುವ ಪ್ರವೃತ್ತಿಗೆ ಇಳಿದಿರುವದನ್ನು ಈ ಕತೆ ವಿವರಿಸುತ್ತದೆ. ಅಬ್ದುಲ್ ರಶೀದರು ತಮ್ಮ ಕತೆಗಳಮೂಲಕ ಮುಸ್ಲಿಂ ಸಮುದಾಯದಲ್ಲಿಯ ಬಡತನ, ಆಚರಣೆಯ ವಿಧಿ ವಿಧಾನಗಳು. ಮುಸ್ಲಿಂ ಸಮಾಜದ ಸಂಕೀರ್ಣತೆ, ದ್ವಂದ್ವ ವಿಡಂಬನೆಗಳನ್ನು ಶೋಧಿಸಿ ಅತ್ಯಂತ ಆತ್ಮೀಯಗೊಳಿಸಿದರು. ಇವರ ಕತೆಗಳು ಎರಡು ಜನಾಂಗದ ಮಧ್ಯೆ ಸೌಹಾರ್ದ ಸೇತುವೆಯಾಗಿ ಕಾಣಿಸಿಕೊಳ್ಳುತ್ತವೆ.

ವಿವಿದ ಸಮುದಾಯಗಳಲ್ಲಿ ಕಾಣಿಸಿಕೊಳ್ಳುವ ಕೋಮುದಳ್ಳುರಿಗೆ ನಾನಾಮುಖಗಳು. ಇಂತಹ ಸಂದರ್ಭಗಳಲ್ಲಿ ಆಯಾ ಜನಾಂಗದಲ್ಲಿ ವಿಚಾರವಂತ ಜನ ನಡೆದುಕೊಳ್ಳುವ ರೀತಿ ಕೂಡ ಸಮುದಾಯಗಳ ಆರೋಗ್ಯವಂತ ಪರಿಸರಕ್ಕೆ ನಾಂದಿಯಾಗುತ್ತದೆ. ಈ ಸನ್ನಿವೇಶವನ್ನು ಅಬ್ಬಾಸ ಮೇಲಿನಮನಿಯವರ ''ಮಸೀದಿ ಉರುಳಿದ ಸಮಯ'' ಕತೆ ಹೊಸ ಸಂದೇಶವನ್ನು ಸಾರುತ್ತದೆ. ಡಿಸೆಂಬರ್ ಆರನೇ ದಿನದ ಸಂಜೆ ಬಾಬರಿ ಮಸೀದಿ ಉರುಳಿದ ಸುದ್ದಿಯೊಂದಿಗೆ

ಕತೆ ಆರಂಭವಾಗುತ್ತದೆ. ಈ ಸುದ್ದಿ ಊರಿನ ಮುಸ್ಲಿಮರಲ್ಲಿ ಆತಂಕ ಮತ್ತು ಕಳವಳವನ್ನು ಉಂಟುಮಾಡುತ್ತದೆ. ಜೊತೆಗೆ ಇಡೀ ಊರಿನ ಮುಸ್ಲಿಂ ಸಮುದಾಯ ಹಿಂದೂಗಳು ತಮ್ಮನ್ನು ಊರು ಬಿಟ್ಟು ಓಡಿಸುತ್ತಾರೆಂದು ಭಯದಿಂದ ಸುದ್ದಿ ಹಬ್ಬಿಸುತ್ತಾರೆ. ಊರಿನ 'ಜಮಾತ್'ನ ಮುಖಂಡರಾದ 'ರೆಹಮಾನ್ ಸಾಹೆಬ'ರು ನೆರೆದ ಜನ ಸಮೂಹಕ್ಕೆ ಾಳ್ಮೆ ಕೆಡದಂತೆ ನೋಡಿಕೊಳ್ಳಲು ತಿಳಿಸುತ್ತಾರೆ. ಊರಿನ ಕನ್ನಡ ಶಾಲೆಯ ಮಾಸ್ತರರಾಗಿದ್ದ ರೆಹಮಾನ್ ಸಾಹೇಬರು ಹಿಂದೂ-ಮುಸ್ಲಿಂ-ಭಾವಕ್ಯತೆಯ ಮಂತ್ರವನ್ನು ಸದಾ ಬೋಧಿಸುತ್ತಿದ್ದರು. ಊರಿನಲ್ಲಿ ನಡೆದ 'ಇಟ್ಟಂಗಿ ಮೆರವಣಿಗೆ' 'ರಾಮಜ್ಯೋತಿ ರಥಯಾತ್ರೆ' ಎಲ್ಲವೂ ಆತಂಕವಿಲ್ಲದೆ ನಡೆಯುವ ಪರಿಸರವನ್ನು ರೆಹಮಾನ್ ಸಾಹೇಬರು ಸೃಷ್ಠಿ ಮಾಡಿದ್ದರು. ಒಮ್ಮೊಮ್ಮೆ ಹಿಂದೂ ಮುಸ್ಲಿಂ ಹಬ್ಬಗಳಾದ ಮೊಹರಂ, ಗಣೇಶ ಚತುರ್ಥಿ ಹಬ್ಬಗಳನ್ನು ಹಿಂದೂ ಮುಸ್ಲಿಂ ಭಾವೈಕ್ಯತೆಯ ಪ್ರತೀಕವೆಂದು ಹೆಮ್ಮೆಯಿಂದ ಬಣ್ಣಿಸಿದ್ದರು.

'ಮಸೀದಿ ಉರುಳಿದ ಸಮಯ' ಈ ಕತೆಯಲ್ಲಿ ಮಂದಿರ ಮಸೀದಿಯ ಪ್ರಶ್ನೆ ಕಾಣಿಸಿಕೊಂಡಿದೆ. ಬಾಬರಿ ಮಸೀದಿ ಕೆಡವಿದ ನಂತರ ದೇಶದ ನಾನಾ ಭಾಗಗಳಲ್ಲಿ ಕೋಮುದಳ್ಳುರಿ ಕಾಣಿಸಿಕೊಳ್ಳತೊಡಗಿದಂತೆ. ರೆಹಮಾನ್ ಸಾಹೇಬರಿದ್ದ ಊರಿನಲ್ಲಿ ದುರ್ಗಾದ ಗುಮ್ಮಜ್‌ಗಳನ್ನು ಒಡೆದುಹಾಕುತ್ತಾರೆ ಇಡೀ ಮುಸ್ಲಿಂ ಸಮುದಾಯ ಆ ಸಂದರ್ಭದಲ್ಲಿ ರೊಚ್ಚಿಗೆದ್ದಾಗ ಸಾಹೇಬರು ಇಡೀ ಸಮುದಾಯಕ್ಕೆ ನೀತಿಯನ್ನು ಬೋಧಿಸುತ್ತಾರೆ. ಇದೇ ಸಂದರ್ಭದಲ್ಲಿ ಊರಿನ ಪುರಸಭಾ ಅಧ್ಯಕ್ಷರಾದ ಚಂದ್ರೇಗೌಡರು ನಾಲ್ಕಾರು ಜನರೊಂದಿಗೆ ಊರಿನ ಪ್ರಮುಖರಾದ ರೆಹಮಾನ್ ಸಾಹೇಬರ ಮನೆಗೆ ಬಂದು ಕೋಮುಗಲಭೆಯನ್ನು ತಡೆಗಟ್ಟಲು ವಿನಂತಿಸಿಕೊಳ್ಳುತ್ತಾರೆ. ಮತ್ತು ಒಡೆದು ಹೋದ ದರ್ಗಾದ ಗುಮ್ಮಾಜಗಳನ್ನು ಮರಳಿ ಕಟ್ಟಿಕೊಡುವುದಾಗಿ ಹೇಳುತ್ತಾರೆ. ಆಗ ಸಾಹೇಬರು. ''ಎಲ್ಲಾ ಧರ್ಮಗಳ ಮೂಲ ಸೆಲೆ ಮಾನವೀಯತೆಯನ್ನು ಸಾರುವುದೆಂದು''[೨೫] ತಿಳಿಹೇಳಿ ಗೌಡರ ಮನಸ್ಸಿನ ಉದ್ವೇಗವನ್ನು ತಡೆಗಟ್ಟುತ್ತಾರೆ. ಊರಿನ ಪ್ರಶಾಂತತೆಯನ್ನು ಕಾಪಾಡುತ್ತಾರೆ.

ಈ ಕತೆಯ ಕೊನೆಯಲ್ಲಿ ಬರುವ ಚಿಲ್ಲರೆ ಪತ್ರಕರ್ತನೊಬ್ಬ ಮುಸ್ಲಿಂ ವೇಶ್ಯೆಯೊಬ್ಬರ ಮನೆಗೆ ವಿಪರೀತವಾಗಿ ಕುಡಿದು ಬಂದು ಹೃದಯಾಘಾತದಿಂದ ಸತ್ತ ಸುದ್ದಿ ಹಿಂದೂಗಳಲ್ಲಿ ಕೋಮುಗಲಭೆಗೆ ಕಾರಣವಾಗುತ್ತದೆ. ಮುಸ್ಲಿಮರೇ ವೇಶ್ಯೆಯ ಮೂಲಕ ಆತನನ್ನು ಕೊಲ್ಲಿಸಿದ್ದಾರೆಂಬ ಪುಕಾರು ಹುಟ್ಟಿಸುತ್ತಾರೆ. ಮೂಲತಃ ಆ ಪತ್ರಕರ್ತನೇ ಊರಿನಲ್ಲಿ ನಡೆಯುವ ಕೋಮುಗಲಭೆಗಳಿಗೆ ಕಾರಣ ಕರ್ತನಾಗಿರುತ್ತಾನೆ. ಆತನಿಗೆ ಹೃದಯಾಘಾತವೇ ತಕ್ಕ ಶಿಕ್ಷೆಯಾದಂತಾಗುತ್ತದೆ. ರೊಚ್ಚಿಗೆದ್ದ ಮುಸ್ಲಿಮರಿಗೆ ಬುದ್ಧಿ ಹೇಳುವ ಸಾಹೇಬರು ವೇಶ್ಯಗೆ ಕುಲವಿಲ್ಲವೆಂದು ಆಕೆಯಿಂದ ಎಲ್ಲಾ ಜನಾಂಗಗಳು ಸುಖಭೋಗಿಸುತ್ತಾರೆಂದು ಜನರಿಗೆ ತಿಳಿಹೇಳುತ್ತಾರೆ. ನಂತರ ವಾತಾವರಣ ತಿಳಿಯಾಗುತ್ತದೆ. ೧೯೯೨ರ ಕಾಲಘಟ್ಟದಲ್ಲಿ ಬರೆದ ಈ ಕತೆ ಮಂದಿರ ಮಸೀದಿಯ ಸಮಸ್ಯೆಯನ್ನು ಪ್ರಮುಖವಾಗಿಟ್ಟುಕೊಂಡು ಸಮುದಾಯಗಳಲ್ಲಿ ಸಂಭವಿಸಬಹುದಾದ ಕೋಮು ದಳ್ಳುರಿಯ ಮೂಲ ಶೋಧಿಸಿ, ಭಾವಕ್ಯತೆಯ ಮಂತ್ರವನ್ನು ಕತೆಯಲ್ಲಿ ಸಂದೇಶವಾಗಿ ಸಾರಿದ್ದಾರೆ. ಇಂದಿನ ಸಾಮಾಜಿಕ ಸಂದರ್ಭಗಳಲ್ಲಿ ಕೋಮು ಸೌಹಾರ್ದತೆಯ ಅಗತ್ಯಗಳು ಅನಿವಾರ್ಯವೆಂದು ಸಾರುವುದರ ಮುಖಾಂತರ ಮುಸ್ಲಿಂ ಸಂಸ್ಕೃತಿಯ ಅನನ್ಯ ಬದುಕಿನ ವಿವರಗಳನ್ನು ಕತೆಯಲ್ಲಿ ಸೆರೆಹಿಡಿದಿದ್ದಾರೆ.

ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಪ್ರಶ್ನೆಯನ್ನು ಕುರಿತು ನಿರ್ವಚನಕ್ಕೆ ತೊಡಗಿದಾಗ ಅನೇಕ ಸಂವೇದನೆಗಳಂತೆ ಮುಸ್ಲಿ ಸಂವೇದನೆಯನ್ನು ತಮ್ಮ ಕತೆಗಳ ಮೂಲಕ ಕಟ್ಟಿಕೊಡುವುದರ ಮೂಲಕ ಆ ಸಮುದಾಯದ

ನಂಬಿಕೆ ಆಚಾರ ವಿಚಾರಗಳನ್ನು, ಮುಸ್ಲಿಂ ಸಂಸ್ಕತಿಯ ಒಳಗಿನ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕತೆಗಳ ಮೂಲಕ ಅನಾವರಣಗೊಳಿಸಿದ್ದಾರೆ. ಬೋಳುವಾರು, ಕಟ್ಪಾಡಿ, ಸಾರಾ, ಭಾನು ಮುಷ್ತಾಕ್, ಅಬ್ದುಲ್ ರಶೀದ್, ಅಬ್ಬಾಸ್ ಮೇಲಿನ ಮನಿಯವರ ಕೆಲವು ಕತೆಗಳಲ್ಲಿ ಕಂಡುಬರುವ ಮುಸ್ಲಿಂ ಜನಾಂಗದ ಅನನ್ಯ ಸಂಸ್ಕೃತಿ ವಿಶ್ಲೇಷಣೆಯನ್ನು ಇಲ್ಲಿ ವಿವರಣೆಗೆ ಒಳಪಡಿಸಲಾಗಿದೆ. ಅಧ್ಯಯನ ವ್ಯಾಪ್ತಿಯ ದೃಷ್ಟಿಯಿಂದ ಮೇಲಿನ ಲೇಖಕರ ಕೆಲವು ಕತೆಗಳನ್ನು ಮಾತ್ರ ಈ ಅಧ್ಯಯನಕ್ಕೆ ಬಳಸಿಕೊಂಡಿರುತ್ತೇನೆ. ಅಲ್ಪ ಸಂಖ್ಯಾತರಾದ ಮುಸ್ಲಿಂ ಸಮುದಾಯದ ಸಂವೇದನೆ ಕೂಡ ಇಂದು ಆಧುನಿಕ ಕಥಾ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ಧಾರೆಯಾಗಿ ಕಾಣಿಸಿಕೊಳ್ಳುತ್ತಿರುವುದನ್ನು ಈ ಅಧ್ಯಯನದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಟಿಪ್ಪಣಿಗಳು**

೦೧. ಕೆ.ಷರೀಫಾ - ಬಂಡಾಯ ಮುಸ್ಲಿಂ ಸಂವೇದನೆ (ಪುಟ - ೮)

೦೨. ಬೋಳುವಾರು ಮಹಮ್ಮದ್ ಕುಂಞ - ಮುದುಕ ಹೇಳಿದ ಕತೆ.
ಅಂಕ - ಬೋಳುವಾರು ಮಹಮ್ಮದ್ ಕುಂಞ (ಪುಟ - ೫೩)

೦೩. ಬೋಳುವಾರು ಮಹಮ್ಮದ್ ಕುಂಞ - ಮುದುಕ ಹೇಳಿದಂತೆ.
ಅದೇ - (ಪುಟ - ೫೩)

೦೪. ಬೋಳುವಾರು ಮಹಮ್ಮದ್ ಕುಂಞ - ಆಕಾಶಕ್ಕೆ ನೀಲಿ ಪರದೆ
ಆಕಾಶಕ್ಕೆ ನೀಲಿ ಪರದೆ - ಬೋಳುವಾರು ಮಹಮ್ಮದ್ ಕುಂಞ (ಪುಟ - ೧೩೧)

೦೫. ಬೋಳುವಾರು ಮಹಮ್ಮದ್ ಕುಂಞ - ಜನ್ನತ್.
ಆಕಾಶಕ್ಕೆ ನೀಲಿ ಪರದೆ - ಬೋಳುವಾರು ಮಹಮ್ಮದ್ ಕುಂಞ (ಪುಟ - ೨೫)

೦೬. ಬೋಳುವಾರು ಮಹಮ್ಮದ್ ಕುಂಞ - ಜನ್ನತ್
ಅದೇ (ಪುಟ - ೨೬)

೦೭. ಬೋಳುವಾರು ಮಹಮ್ಮದ್ ಕುಂಞ - ಇಮಾರತ್
ಆಕಾಶಕ್ಕೆ ನೀಲಿ ಪರದೆ - ಬೋಳುವಾರು ಮಹಮ್ಮದ್ ಕುಂಞ (ಪುಟ - ೮೩)

೦೮. ಬೋಳುವಾರು ಮಹಮ್ಮದ್ ಕುಂಞ - ಇಮಾರತ್
ಅದೇ (ಪುಟ - ೯೧)

೦೯. ಬೋಳುವಾರು ಮಹಮ್ಮದ್ ಕುಂಞ - ಇಬಾದತ್
ಆಕಾಶಕ್ಕೆ ನೀಲಿ ಪರದೆ - ಬೋಳುವಾರು ಮಹಮ್ಮದ್ ಕುಂಞ (ಪುಟ - ೯೬)

೧೦. ಅಬ್ದುಲ್ ರಶೀದ್ - ಪ್ರಾಪಕ್ಷಿ
ಪ್ರಾಣಪಕ್ಷಿ - ಅಬ್ದುಲ್ ರಶೀದ್ (ಪುಟ - ೧೩)

೧೧. ಅಬ್ದುಲ್ ರಶೀದ್ - ಪ್ರಾಪಕ್ಷಿ
ಅದೇ (ಪುಟ - ೧೪,೧೫ )

೧೨. ಅಬ್ದುಲ್ ರಶೀದ್ - ಪ್ರಾಪಕ್ಷಿ

ಪ್ರಾಣಪಕ್ಷಿ - ಅಬ್ದುಲ್ ರಶೀದ್ (ಪುಟ - ೧೯)

೧೩. ಅಬ್ದುಲ್ ರಶೀದ್ - ಪ್ರಾಪಕ್ಷಿ

ಪ್ರಾಣಪಕ್ಷಿ - ಅಬ್ದುಲ್ ರಶೀದ್ (ಪುಟ - ೨೦)

೧೪. ಅಬ್ಬಾಸ್ ಮೇಲಿನಮನಿ - ಮಸೀದಿ ಉರುಳಿದ ಸಮಯ

ಸಮಗ್ರ ಕತೆಗಳು - ಅಬ್ಬಾಸ ಮೇಲಿನಮನಿ (ಪುಟ - ೭೫)

* * * * *

# ಅಧ್ಯಾಯ : ಆರು

# ಸ್ತ್ರೀವಾದಿ ನೆಲೆಗಳು

## ೬.೧. ಸ್ತ್ರೀವಾದಿ ಸಂವೇದನೆ

ಇಪ್ಪತ್ತನೇ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಪ್ರಶ್ನೆಯ ಹುಡುಕಾಟದಲ್ಲಿ ತೊಡಗಿದರೆ ಅನೇಕ ಸಂವೇದನೆಗಳು ಕನ್ನಡ ಸಾಹಿತ್ಯದಲ್ಲಿ ಪ್ರವೇಶ ಪಡೆದಿದ್ದು ಗಮನಕ್ಕೆ ಬರುತ್ತದೆ. ೧೯೭೫ರಲ್ಲಿ ಮಹಿಳಾ ವರ್ಷವೆಂದೂ ಅನಂತರದ ಹತ್ತು ವರ್ಷಗಳ ಕಾಲಾವಧಿಯನ್ನು ಮಹಿಳಾ ದಶಕವೆಂತಲೂ ಆಚರಿಸಿದ್ದು ಚಾರಿತ್ರಿಕ ಸಂಗತಿಯಷ್ಟು. ಈ ಸಾಂಸ್ಕೃತಿಕ ಪ್ರಶ್ನೆಯು ಕನ್ನಡ ಸಾಹಿತ್ಯದ ಮುಖ್ಯ ಸಂವೇದನೆಯಾಗಿ ಕಾಣಿಸಿಕೊಂಡಿದ್ದು; ಇದು ವಿಶೇಷ ಪರಿಶೀಲನಾರ್ಹ ವಿಷಯವಾಗಿದೆ. ಅದರಲ್ಲೂ ಸ್ತ್ರೀವಾದಿ ನೆಲೆಯ ವಿವಿಧ ಆಯಾಮಗಳನ್ನು ಸ್ತ್ರೀ ಸಂವೇದನೆಯುಳ್ಳ ಕತೆಗಾರ್ತಿಯರು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಮಹಿಳಾ ಬದುಕಿನ ಚಿಂತನೆಗಳನ್ನು ದಾಖಲಿಸುತ್ತಲೇ ಸಾಗಿಬಂದಿದ್ದಾರೆ. ೨೦ನೇ ಶತಮಾನದ ಅಂಚಿನಲ್ಲಿ ಮಹಿಳಾ ಸಬಲೀಕರಣಕ್ಕೆ ಸಂಬಂಧಿಸಿದಂತೆ ಅನೇಕ ಚಿಂತನೆಗಳು, ಹೋರಾಟಗಳೂ ನಡೆದವು. ಮಹಿಳಾ ಬರಹಗಾರ್ತಿಯರು ಮಹಿಳೆಯ ಸ್ಥಾನಮಾನಗಳನ್ನು ಕುರಿತು ಬರೆಯತೊಡಗಿದರು. ಈ ಸಂದರ್ಭದಲ್ಲಿ ವಿದ್ಯಾವಂತ ಮಹಿಳೆ ತಮ್ಮ ಜಗತ್ತಿನ ಅನನ್ಯತೆಯನ್ನು ಕುರಿತು ಮಾತನಾಡತೊಡಗಿದಳು. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅದರಲ್ಲೂ ನವೋದಯ ಕಾಲಘಟ್ಟದಿಂದಲೂ ಮಹಿಳಾಪರ ಚಿಂತನೆ ಗಟ್ಟಿಗೊಳ್ಳುತ್ತಾ ಬದುಕಿನ ವಿವರಗಳನ್ನು ಕಟ್ಟಿಕೊಡುತ್ತಲೇ ಬಂದಿರುವುದು ಚಾರಿತ್ರಿಕ ಸಮೀಕ್ಷೆಯಿಂದ ತಿಳಿದುಬರುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ತನ್ನ ಇರುವಿಕೆಯನ್ನು ಗುರುತಿಸುತ್ತಲೇ ಅನೇಕ ಹೋರಾಟಗಳಿಗೆ ಪಾಲ್ಗೊಳ್ಳತೊಡಗಿದಳು. ಇತ್ತೀಚಿನ ದಿನಗಳಲ್ಲಿ ಸ್ತ್ರೀಯರು ಎಲ್ಲಾ ಕ್ಷೇತ್ರಗಳಲ್ಲಿ ಇರುವಂತೆ ತೋರುತ್ತಿದ್ದಾರೆ. ಕೆಲವು ಅಭಿವೃದ್ಧಿ ತಜ್ಞರಂತೂ ಮೂರನೆ ಜಗತ್ತಿನ ಬಡತನಕ್ಕೆ ಲಿಂಗಪಕ್ಷಪಾತವೇ ಕಾರಣವೆಂದು ಹೇಳುತ್ತಿದ್ದಾರೆ. ಇಪ್ಪತ್ತನೆಯ ಶತಮಾನವು ಮಹಿಳಾ ಸಬಲೀಕರಣಕ್ಕಾಗಿ ಬಹುಮಹತ್ವದ ಕಾಲ ಘಟ್ಟವಾಗಿದೆ. ಮಹಿಳಾ ಜಾಗೃತಿಗಾಗಿ ಈ ಶತಮಾನದಲ್ಲಿ ಜಗತ್ತಿನಾದ್ಯಂತ ಸ್ತ್ರೀವಾದಿ ಚಳುವಳಿಗಳು ಪ್ರಾರಂಭವಾದವು. ಮಹಿಳಾ ಸಬಲೀಕರಣ ವಿಷಯವನ್ನು ಕುರಿತು ಅನೇಕ ಚರ್ಚೆಗಳು ಪ್ರಾರಂಭವಾಗಿದ್ದು; ಸ್ತ್ರೀವಾದಿ ನೆಲೆಯ ಅಸ್ತಿತ್ವವನ್ನು

ಕುರಿತ ಆಶಾದಾಯಕ ಬೆಳವಣಿಗೆಯೂ ಆಗಿದೆ. ಹಾಗೇ ನೋಡಿದರೆ ಮಹಿಳೆಯೆಂದೂ ದುರ್ಬಲಳಲ್ಲ. ಆಕೆ ಯಾವಾಗಲೂ ಸಬಲಳು ಮತ್ತು ಸಾಮರ್ಥ್ಯವುಳ್ಳವಳೂ ಆಗಿದ್ದಾಳೆ. ಪುರುಷರ ಸ್ಥಾನಮಾನಗಳಿಗೆ ಅನುಗುಣವಾಗಿ ಮಹಿಳೆಯರನ್ನು ಬಲಪಡಿಸುವುದು ಹಾಗೇ ಪುರುಷ ಪ್ರಧಾನ ವ್ಯವಸ್ಥೆಯ ಮಾದರಿಯಲ್ಲಿ ಸಿಕ್ಕಿಹಾಕಿಕೊಂಡಿರುವ ಮಹಿಳೆಯ ಬದುಕನ್ನು ಬದಲಿಸುವ ಚಿಂತನೆಗಳೂ ಆರಂಭವಾಗಿವೆ.

ಈ ನಿಟ್ಟಿನಲ್ಲಿ ಸ್ತ್ರೀ ತನ್ನ ಮತ್ತು ತನ್ನ ಸಮುದಾಯದ ಮೇಲೆ ಆಗುತ್ತಿದ್ದ ಅನ್ಯಾಯಗಳ ವಿರುದ್ಧ ಅನೇಕ ಹೋರಾಟಗಳನ್ನು ರೂಪಿಸಿಕೊಂಡು ಹೊರಟಿದ್ದಾಳೆ ಈ ಹೋರಾಟದಲ್ಲಿ ಮಹಿಳೆಯ ಅಸ್ತಿತ್ವದ ಪ್ರಶ್ನೆಯನ್ನಿಟ್ಟುಕೊಂಡು ಸಂಘರ್ಷಕ್ಕಿಳಿದು ತನ್ನ ಅನನ್ಯತೆಯನ್ನು ತೋರ್ಪಡಿಸಿಕೊಳ್ಳುತ್ತಿದ್ದಾಳೆ. ಉದಾಹರಣೆಗೆ ಹೇಳುವುದಾದರೆ ''೧೯೯೧-೯೨ ರಲ್ಲಿ ಸಿ.ಪಿ.ಐ. (ಎಂ.ಎಲ್)ನ ಪೀಪಲ್ಸವಾರ್ ಗ್ರೂಪ್ ನವರು ನಡೆಸಿದ ಚಳುವಳಿಗಳಲ್ಲಿ ಅನೇಕ ವಿಚಾರವಾದಿ ಸ್ತ್ರೀಯರು ಭಾಗವಹಿಸಿದ್ದರು. ಕೌಟುಂಬಿಕ ಹಿಂಸೆ, ವರದಕ್ಷಿಣೆ, ದೇಶಿ ಶರಾಬಿನ ವಿರುದ್ಧ ಮಹಿಳೆಯರು ನಡೆಸುತ್ತಿದ್ದ ಚಳುವಳಿಗಳು ಹೆಚ್ಚು ಜನ ಮಹಿಳೆಯರನ್ನು ಆಕರ್ಷಣೆಗೊಳಪಡಿಸಿ ಸಾಮಾಜಿಕ ಚಳುವಳಿಗಳಲ್ಲಿ ಭಾಗವಹಿಸಲು ಕಾರಣವಾಯಿತು. ಹಾಗೇ 'ಮಂಡಲ್' ವಿರುದ್ಧದ ಪ್ರತಿಭಟನೆಗಳಲ್ಲಿ ಮೇಲ್ಜಾತಿಯ ಸ್ತ್ರೀಯರು ಕೂಡ ಸೇರಿಕೊಂಡು ಬೀದಿಗಿಳಿದು ಹೋರಾಟ ಮಾಡಿದರು. ರಾಮಜನ್ಮ ಭೂಮಿ ಚಳುವಳಿಯ ಪ್ರಖ್ಯಾತ ನಾಯಕರಲ್ಲಿ ಸಾಕಷ್ಟು ಜನ ಸ್ತ್ರೀಯರಿದ್ದಾರೆ.''[೧] ಈ ಎಲ್ಲಾ ಬದಲಾವಣೆಗಳನ್ನು ಗಮನಿಸಿದಾಗ ಮಹಿಳೆ ಎಲ್ಲೆಡೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವುದು ಕಂಡುಬರುತ್ತದೆ. ಸ್ತ್ರೀವಾದಿ ನೆಲೆಯ ಅನಂತಮುಖಗಳನ್ನು ಮಹಿಳಾ ಕತೆಗಾರ್ತಿಯರು ಅನಾವರಣಗೊಳಿಸುತ್ತಲೇ ಮಹಿಳೆಯ ಇರುವಿಕೆಯನ್ನು ಸೃಜನಶೀಲ ಕೃತಿಗಳ ಮೂಲಕ ದಾಖಲಿಸುತ್ತಲೇ ಬಂದಿದ್ದಾರೆ.

**೬.೨. ಮಹಿಳಾ ಕಥಾಜಗತ್ತು**

ಆಧುನಿಕ ಕನ್ನಡ ಕಥನ ಸಂದರ್ಭದಲ್ಲಿ ಮುಖ್ಯ ಕಥೆಗಾರ್ತಿಯಾದ ಗೀತಾ ನಾಗಭೂಷಣರ 'ಅವ್ವ' ಕತೆಯ ನಾಯಕಿ ಗಂಗಾ ಒಬ್ಬ ಹಳ್ಳಿಯ ಹೆಂಗಸು. ಈಕೆ ದಿಟ್ಟ, ಛಲಗಾರ್ತಿ ಕೂಡ. ಈಕೆಯ ಗಂಡ ಊರ ಕುಲಕರ್ಣಿ ಕುಡಿಸಿದ ಹೆಂಡದ ಅಮಲಿನಲ್ಲಿ ಆತ ಹೇಳಿದ ವ್ಯಕ್ತಿಯನ್ನು ಹತ್ಯೆಮಾಡಿ ಜೈಲು ಸೇರಿದವನು. ಗಂಡ ಜೈಲು ಸೇರಿದ ಮೇಲೆ ಆತನ ಮಗುವಿಗೆ ಜನ್ಮನೀಡಿದ 'ಗಂಗಾ' ಪಡಬಾರದ ಕಷ್ಟಪಟ್ಟು ಮಗುವನ್ನು ಸಾಕಿದವಳು. ಕೆಲವೇ ದಿನಗಳಲ್ಲಿ ನಿನಗೆ ಜಾಮೀನು ನೀಡಿ ಬಿಡಿಸಿಕೊಂಡು ಬರುತ್ತೇನೆಂದು ಕುಲಕರ್ಣಿ ಹೇಳುತ್ತಾ 'ನೀ ಜೇಲಿನಿಂದ ಬರೋತನಕ ನಿನ್ ಮನಿಖರ್ಚಾ ಎಲ್ಲಾನಾ ನಡಸ್ತಿನೋ ಮೈಲಾರಿ ನಿನ್ ಹೆಣ್ತಿ ಅಂದ್ರ ನನ್ ಮಗಳಿದ್ದಂಗ ನೀನು ಏನೂ ಚಿಂತಿ ಮಾಡಬೇಡ ಹೋಗಿ ಬಾ.'[೨] ಎಂದು ವಚನ ನೀಡಿದ ಕುಲಕರ್ಣಿ ವಚನ ಭ್ರಷ್ಟನಾಗಿ ಗಂಗಾಳನ್ನು ತಂಗಿಯಂತೆ ಕಾಣದೇ ಆಕೆಯ ಶೀಲ ಭಂಗಕ್ಕೆ ಹಾತೊರೆದು ಆಕೆಯಿಂದ ಛೀಮಾರಿ ಹಾಕಿಸಿಕೊಳ್ಳುತ್ತಾನೆ. ಪುಟ್ಟ ಮಗುವನ್ನು ಸಾಕುತ್ತಾ ಗಂಗಾ ನೋವನ್ನೆ ಉಡಿಯಲ್ಲಿ ಕಟ್ಟಿಕೊಂಡು ಛಲಗಾರಳಾಗಿ ಬದುಕಿನಲ್ಲಿ ಹೆಜ್ಜೆ ಹಾಕುತ್ತಾಳೆ. ಬಾಬಾಲಿಹಳ್ಳಿಯ ಗಂಗಾಳ ತಾಯಿ ಮಾಳವ್ವಳೂ ಕೂಲಿನಾಲಿಮಾಡಿ ಗಂಗಾಳನ್ನು ಸಾಕಿ ಉತ್ತಮ ಸಂಸ್ಕಾರವನ್ನು ಕಲಿಸಿ ಮೈಲಾರಿಗೆ ಮದುವೆ ಮಾಡಿಕೊಟ್ಟಿರುತ್ತಾಳೆ. ತಾಯಿಯ ಹಾರೈಕೆ ಮತ್ತು ಕನಸಿನಂತೆ ಗಂಗಾ ಗಂಡ ಜೈಲು ಸೇರಿದಾಗ ಜನರ ಕಣ್ಣು ಕುಕ್ಕುವಂತೆ ಬಾಳಿ ತೋರಿಸುತ್ತಾಳೆ. ಆಕೆಯ ಪುಟ್ಟ ಮಗುವಿಗೆ ಕಾಮಲೆ ಖಾಯಿಲೆ ಕಾಣಿಸಿಕೊಂಡಾಗ ಹಳ್ಳಿಯಿಂದ ಕಲಬುರ್ಗಿಯ ದವಾಖಾನೆಗೆ ತೋರಿಸಲು ಬರುತ್ತಾಳೆ. ಸರಕಾರಿ ಆಸ್ಪತ್ರೆಯಲ್ಲಿ

ಬಡ ಹೆಂಗಸಿನ ಆರ್ತನಾದ ಹಣ ದೋಚುವ ವೈದ್ಯರಿಗೆ ಕೇಳಿಸುವುದಿಲ್ಲ. ಅವರು ಬರೆದುಕೊಟ್ಟ ಔಷಧಿ ಚೀಟಿಯನ್ನು ಕೈಯಲ್ಲಿಟ್ಟುಕೊಂಡು ಹಣವಿಲ್ಲದೆ ರೋಧಿಸುತ್ತಾಳೆ. 'ಯಪಾ.. ಡಾಗದರ ಸಾಬ್ರೆ.. ಇದು ಸರಕಾರಿ ದವಾಖಾನೆ ಅದಾ ಅಲ್ರೀ ಬಡೂರಿಗೆಲ್ಲಾ ಪುಗಸಟ್ಟೆ ಅಗಸುದ್ಯಾ ಕುಡ್ತಾರಂತಲ್ರೀ ನನ್ ಬಲ್ಲಿ ರೊಕ್ಕಾ ರೂಪೈ ಎನೂ ಇಲ್ರಿಯಪ್ಪಾ'' ಎಂದು ಗೋಗರಿಯುತ್ತಾಳೆ. ಸರ್ಕಾರಿ ಆಸ್ಪತ್ರೆಗಳಲ್ಲಿ ಕರುಣೆ ಅಂತಃಕರಣಗಳು ಮಾರಾಟವಾಗಿವೆ. ಔಷಧಿ ಅಂಗಡಿಯಲ್ಲಿ ಔಷಧಿಕೊಡಿ ಮಗು ಬದುಕಿದ ಮೇಲೆ ಕೂಲಿ ನಾಲಿ ಮಾಡಿ ಹಣ ತಂದು ಕೊಡುತ್ತೇನೆಂದು ಬೇಡಿಕೊಳ್ಳುತ್ತಾಳೆ. ಅವರಿಗೆ ಕನಿಕರ ಬರುವುದಿಲ್ಲ. ಕೊನೆಗೆ ಹಣವಂತನಿಗೆ ಶೀಲ ಮಾರಿಕೊಂಡು ಔಷದಿ ತಂದಾಗ ಮಗು ಸಾಯುವ ಹಂತದಲ್ಲಿರುತ್ತದೆ. ಕೊನೆಗೆ ವೈದ್ಯರ ನಿರ್ಲಕ್ಷ್ಯತನದಿಂದ ಗಂಗಾಳ ಮಗು ಸಾಯುತ್ತದೆ. ಗಂಗಾ ಮಗುವನ್ನು ತನ್ನ ಜೀವದ ಕುಡಿಯನ್ನು ಬದುಕಿಸಲು ಶೀಲ ಕಳೆದುಕೊಂಡರೂ ಮಗು ಬದುಕದೇ ಹೋದಾಗ ಹುಚ್ಚಿಯಂತಾಗುತ್ತಾಳೆ. ಗಂಡ ಜೈಲಿನಿಂದ ಬಂದು ಆಕೆ ಪಟ್ಟಪಾಡನ್ನು ಕೇಳಿ ನೊಂದುಕೊಳ್ಳುತ್ತಾನೆ. ಆಕೆಗೆ ಮತ್ತೊಂದು ಮಗುವನ್ನು ಪಡೆಯಬಹುದೆಂಬ ಛಲವನ್ನು ತುಂಬುತ್ತಾನೆ. ಒಂದು ಹೆಣ್ಣು ಅಬಲೆಯೂ ಹೌದು ಸಬಲೆಯೂ ಹೌದೆಂದು ಗಂಗಾ ತೋರಿಸಿಕೊಡುತ್ತಾಳೆ. ಗೀತಾ ನಾಗಭೂಷಣರು ಸಮರ್ಥವಾದ ಶೈಲಿಯಲ್ಲಿ ಗಂಗಾಳ ಬದುಕಿನ ವಿವರಗಳನ್ನು ಕಟ್ಟಿಕೊಡುತ್ತಲೇ ಸ್ತ್ರೀ ಶಕ್ತಿಯ ಅನನ್ಯತೆಯ ನೆಲೆಯನ್ನು ಕತೆಯ ಮೂಲಕ ಅನಾವರಣಗೊಳಿಸಿದ್ದಾರೆ. ಹೈದ್ರಾಬಾದ್ ಕರ್ನಾಟಕದ ಜನಭಾಷೆ, ನೆಲದ ಜೀವನಾನುಭವದೊಂದಿಗೆ ಇಲ್ಲಿ ಅರ್ಥಗರ್ಭಿತವಾದ ಅಭಿವ್ಯಕ್ತಿ ರೂಪು ಪಡೆದಿದೆ. ಲೀಲಾಜಾಲವಾದ ಬರವಣಿಗೆಯೊಂದಿಗೆ ಕತೆ ಹೃದಯ ಕಲಕುತ್ತದೆ. ಸ್ತ್ರೀವಾದಿನೆಲೆಯ ಅನಂತ ಮುಖ ಇಲ್ಲಿ ದಾಖಲೀಕರಣಗೊಂಡಿವೆ.

ಲಂಬಾಣಿ ಜನಾಂಗದ ಸಾಂಸ್ಕೃತಿಕ ಬದುಕನ್ನು ಕುರಿತು ಅನೇಕ ಕತೆಗಳು ರಚನೆಗೊಂಡಿವೆ. ಈ ಲಂಬಾಣಿ ಸಂಸ್ಕೃತಿಯ ಜೀವನ ವೈವಿಧ್ಯವನ್ನು ಬಿ.ಟಿ.ಲಲಿತನಾಯಕರು ಅನೇಕ ಕತೆಗಳಲ್ಲಿ ಅನಾವರಣಗೊಳಿಸಿದ್ದಾರೆ. ಈ ಕತೆಗಾರ್ತಿಯ ಪರಿಣಾಮಕಾರಿಯಾದ ಕತೆ 'ಲೂಟಿ'ಯಲ್ಲಿ ಇದನ್ನು ನೋಡಬಹುದಾಗಿದೆ. ಈ ಕತೆಯ ನಾಯಕಿ ರಾಮಿ ಒಬ್ಬ ಲಂಬಾಣಿ ಬಡ ಮಹಿಳೆ. ಈಕೆಯ ಗಂಡ ಖೀರು ಗೌಡರ ಹೊಲದಲ್ಲಿ ಜೀತಮಾಡಿ ಬದುಕು ಕಟ್ಟಿಕೊಂಡವನು. ಒಮ್ಮೆ ಈತ ಗೌಡರ ಹೊಲಕ್ಕೆ ಗೊಬ್ಬರ ಬಂಡಿ ಹೊಡೆಯುವಾಗ ಬಂಡಿಗೆ ಲಾರಿ ಡಿಕ್ಕಿ ಹೊಡೆದುದ್ದರಿಂದ ಖೀರು ಅಪಘಾತಕ್ಕೆ ಈಡಾಗಿ ನಡುವಿನ ಮೂಳೆಗಳನ್ನು ಕಳೆದುಕೊಳ್ಳುತ್ತಾನೆ. ಗಂಡನ ಸ್ಥಿತಿಗೆ ನೊಂದ 'ರಾಮಿ' ಗೌಡನ ಬಳಿ ತನ್ನ ಗಂಡನ್ನು ದವಾಖಾನೆಗೆ ತೋರಿಸಿ ಗುಣಮುಖ ಮಾಡಿಸಲು ವಿನಂತಿಸಿದರೂ ಗೌಡ ಹಣ ಸಹಾಯ ಮಾಡದೆ ನಿರ್ಲಕ್ಷ್ಯದ ಮಾತುಗಳನ್ನಾಡಿಬಿಡುತ್ತಾನೆ. ಬಡತನ ಭಾಧಿಸತೊಡಗುತ್ತದೆ. ಗಂಡ ಗೌಡನ ಮನೆಯಲ್ಲಿ ಕೆಲಸ ಕಳೆದುಕೊಂಡು ಗುಡಿಸಲ ಮೂಲೆ ಹಿಡಿಯುತ್ತಾನೆ. ಆ ಸಂದರ್ಭದಲ್ಲಿ ರಾಮಿ ಎದೆಗುಂದದೆ ನಾಲ್ಕು ಮಕ್ಕಳನ್ನು ಗಂಡನನ್ನೂ ಸಾಕುವ ಭಾರಹೊತ್ತುಕೊಳ್ಳುತ್ತಾಳೆ. ಕಟ್ಟಿಗೆ ಮಾರಿ ಬಂದ ಹಣದಿಂದ ಸಂಸಾರದ ನೊಗ ಎಳೆಯ ತೊಡಗುತ್ತಾಳೆ. ಬಂದ ಕಷ್ಟಗಳಿಗೆ ಕಣ್ಣೀರಾಕದೆ ಎದೆಗಾರಿಕೆಯಿಂದ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಒಮ್ಮೆ ಕಟ್ಟಿಗೆ ಕಡಿದು ತರಲು ಕೊಡಲಿಹಿಡಿದುಕೊಂಡು ಕಾಡಿಗೆ ಒಂಟಿಯಾಗಿ ಹೋಗುತ್ತಾಳೆ. ಕಾಡಿನಲ್ಲಿ ಕಟ್ಟಿಗೆ ಕಡಿದು ಹೊರೆಯನ್ನು ಕಟ್ಟಿಕೊಂಡು ಊರ ದಾರಿಹಿಡಿದಿರುವಾಗ ಆಕೆ ಇಬ್ಬರು ದಾಂಡಿಗರ ಕೈಗೆ ಸಿಕ್ಕಿಬೀಳುತ್ತಾಳೆ. ತಾವು ಕಾಡು ಕಾಯುವವರೆಂದು ಕಾನೂನು ಮಾತುಗಳನ್ನಾಡಿ ಆಕೆಯಿಂದ ಕೊಡಲಿ ಕಟ್ಟಿಗೆ ಕಸಿದುಕೊಂಡು ಆಕೆಯ ಮಾನವನ್ನು ಲೂಟಿ ಮಾಡಿಬಿಡುತ್ತಾರೆ. ಅಸಹಾಯಕಳಾದ ರಾಮಿ ಮಾನಭಂಗಕ್ಕೆ ಒಳಗಾಗಿ ನೋವಿನಲ್ಲೂ ಆಕ್ರೋಶಕ್ಕೆ

ಒಳಗಾಗಿ ''ನೀವು ಯಾವ ಗವಿಯಾಗ ಹೋಗಿ ಅವಿತು ಕೊಂಡ್ರೂ ನಾ ಬಿಡಂಗಿಲ್ರೋ. ನನ್ನ ಕೊಡ್ಲಿ ಕಸಗೊಂಡು ಅದರಿಂದ ನಿಮ್ಮನ್ನ ಸಣ್ಣಾಗೆ ಕಡಿದು ಚೂರ್ ಚೂರ್ ಮಾಡಿದ ಮ್ಯಾಲೇ ನಾ ಮನಿಗೆ ಹೋಗ್ತಿನ್ರೋ.''[೬] ಎಂದು ರೋಷದಿಂದ ಕೂಗುತ್ತಾ ಅವರನ್ನು ಬೆನ್ನತ್ತಿ ಓಡುತ್ತಾಳೆ.

'ಲೂಟಿ' ಕತೆಯ ರಾಮಿ ಛಲಗಾರ್ತಿಹೆಣ್ಣು, ಬದುಕಿನಲ್ಲಿ ಬಂದ ದುಃಖಕ್ಕೆ ಸವಾಲಾಗಿ ನಿಂತವಳು. ಗಂಡಿನಂತೆ ತಾನೇ ಬದುಕನ್ನು ನಡೆಸಿಕೊಂಡು ಎಲ್ಲರನ್ನು ಸಾಕಿ ಸಲಹುವ ಭಾರವನ್ನು ಹೊತ್ತುಕೊಂಡವಳು. ಆದರೆ ಆಕೆಯ ಮೇಲೆ ನಡೆಯುವ ಅತ್ಯಾಚಾರದಿಂದ ರೊಚ್ಚಿಗೆದ್ದವಳು, ತನ್ನನ್ನು ಮಾನಭಂಗಮಾಡಿದ ದುಷ್ಟರ ವಿರುದ್ಧ ಸಮರ ಸಾರಿದವಳು, ಸ್ತ್ರೀಯರ ಮೇಲೆ ಲೈಂಗಿಕ ಕಿರುಕುಳ ದಿನೆದಿನೇ ಜಾಸ್ತಿಯಾಗುತ್ತಲೇ ಸಾಗುತ್ತಿದೆ. ಮಹಿಳೆ ಸ್ವಂತಂತ್ರವಾಗಿ ಬದುಕಿ ತೋರಿಸುವುದು ಕೂಡ ಅನೇಕ ತೊಡಕುಗಳಿಗೆ ಕಾರಣವಾಗುತ್ತದೆ. ಕಷ್ಟದ ಸನ್ನಿವೇಶಗಳು ಆಕೆಯ ಸುತ್ತಾ ಸೃಷ್ಠಿಯಾಗುತ್ತಿವೆ.

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆ ಕೂಡ ತನ್ನ ಸುಖದ ಪಾಲನ್ನು ಹುಡುಕಿಕೊಳ್ಳುವುದರಲ್ಲಿ ತಪ್ಪಿಲ್ಲ. ಲಲಿತನಾಯಕರ 'ತಾಯಿ ಸಾಕಿಬಾಯಿ' ಗಂಡನಿಗೆ ಎರಡನೆ ಹೆಂಡತಿಯಾಗಿ ಬದುಕನ್ನು ನೋವಿನಲ್ಲೂ ದಿಟ್ಟತನದಿಂದ ಕಟ್ಟಿಕೊಂಡವಳು. ಒಂದು ಮಗುವಿಗೆ ಜನ್ಮನೀಡಿದ ಎಷ್ಟೋ ವರುಷಗಳ ನಂತರ ಗಂಡನನ್ನು ಕಳೆದುಕೊಂಡವಳು. ಗಂಡ ತೀರಿದ ಮೇಲೆ ತಾಯಿ ಸಾಕಿಬಾಯಿಯ ಬದುಕು ದಡಸೇರದ ನೌಕೆಯಂತಾಗುತ್ತದೆ. ಮೊದಲ ಹೆಂಡತಿ ಮಗ ಮತ್ತು ತನ್ನ ಮಗನನ್ನು ದುಡಿದು ಸಾಕಿ ವಿದ್ಯಾವಂತರನ್ನಾಗಿ ಮಾಡುತ್ತಾಳೆ. ಮೊದಲ ಹೆಂಡತಿಯ ಮಗ ಅಂತರ್ಜಾತಿ ವಿವಾಹ ಮಾಡಿಕೊಳ್ಳುತ್ತಾನೆ. ಸಾಕಿಬಾಯಿಗೆ ನೋವಾಗುತ್ತದೆ. ಶಹರದಲ್ಲಿದ್ದ ಮಗನನ್ನು ಮಾತನಾಡಿಸಲು ಹೋಗುತ್ತಾಳೆ. ಸೊಸೆ ಸೀತಾ ಅತ್ತೆ ಸಾಕಿಬಾಯಿಯ ಬದುಕಿಗೆ ಆಸರೆಯಾಗಿ ನಿಲ್ಲುವ ಮಾತನಾಡುತ್ತಾಳೆ. ಬದುಕಲ್ಲಿ ನೋವಿನ ಬುತ್ತಿಯನ್ನೇ ಉಣ್ಣುತ್ತಲೇ ಬಂದ ಸಾಕಿಬಾಯಿ ಮುನಿಯನನ್ನು ಪ್ರೀತಿಸಿ ಆತನಲ್ಲಿ ದುಃಖದ ಕತೆ ಹೇಳಿಕೊಳ್ಳುತ್ತಾಳೆ. ತಾಯಿಯ ಈ ಸಂಬಂಧದಿಂದ ಸಿಡಿದೆದ್ದ ಮಕ್ಕಳು ತಮ್ಮ ಕುಟುಂಬಕ್ಕೆ ತಾಯಿಯಿಂದ ಅವಮಾನವಾಯಿತೆಂದು 'ಆಕೆಯನ್ನು ಮುನಿಯ'ನನ್ನೂ ಹತ್ಯೆ ಮಾಡಲು ಸಂಚುಮಾಡುತ್ತಾರೆ. ಸೊಸೆ ಸೀತಾ ಅತ್ತೆಗೆ ಊರುಬಿಟ್ಟು ಮುನಿಯನೊಂದಿಗೆ ದೂರ ಹೋಗಲು ಸಹಾಯ ಮಾಡುತ್ತಾಳೆ. ಆದರೆ ಆಕೆಯ ಸಹಾಯ ಕೈಗೂಡುವುದಿಲ್ಲ; ಅಣ್ಣ ತಮ್ಮರು ಕೂಡಿ ಊರುಬಿಟ್ಟು ಹೊಗುತ್ತಿದ್ದ ಸಾಕಿಬಾಯಿ ಮುನಿಯನನ್ನು ಹಿಡಿದು ಚಿತ್ರಹಿಂಸೆಯಲ್ಲಿ ಸಾಯಿಸಿ ಮರಕ್ಕೆ ನೇಣು ಹಾಕಿಬಿಡುತ್ತಾರೆ. ಅದು ಆತ್ಮಹತ್ಯೆಯೆಂದು ಸುದ್ದಿಮಾಡುತ್ತಾರೆ. ಬಾಲ್ಯದಲ್ಲಿ ಬಂದೊದಗಿದ ವೈಧವ್ಯಕ್ಕೆ ಸಾಕಿಬಾಯಿ ಮುನಿಯನೊಂದಿಗೆ ಬದುಕುವ ದಾರಿ ಕಂಡುಕೊಂಡಿದ್ದು ಜನ್ಮ ನೀಡಿದ ಮಕ್ಕಳಿಗೆ ಬೇಡವಾಗುತ್ತದೆ. ತಾಯಿಯನ್ನು ಸಾಯಿಸುವ ಹಂತಕ್ಕೆ ಬಂದು ತಲುಪುವುದು ಅಮಾನವೀಯತೆಯ ಪರಾಕಾಷ್ಠೆಯೆನಿಸುತ್ತದೆ. ಸೊಸೆ 'ಸೀತಾ' ಅತ್ತೆಯ ಬದುಕಿಗೆ ಕನಸಿಗೆ ಸ್ಪಂದಿಸುವ ಗುಣ ಸ್ತ್ರೀಶಕ್ತಿಯ ಅನಂತ ಸಾಧ್ಯತೆಗಳ ನಿಲುವಾಗಿ ಕಾಣುತ್ತದೆ. ಇಪ್ಪತ್ತನೆ ಶತಮಾನದ ಕಾಲಘಟ್ಟದಲ್ಲಿ ಮಹಿಳಾ ಸಬಲೀಕರಣದ ಸೊಲ್ಲು ಎಲ್ಲೆಡೆ ಕೇಳಿ ಬರುತ್ತಿರುವಾಗ ಸಾಕಿಬಾಯಿ ತೆಗೆದುಕೊಳ್ಳುವ ನಿರ್ಧಾರವೂ ಹೊಸ ಆಲೋಚನಾಕ್ರಮವಾಗಿದೆ.

ಇಂದು 'ಸ್ತ್ರೀ' ತನ್ನ ಅಸ್ತಿತ್ವದ ಹುಡುಕಾಟದಲ್ಲಿದ್ದಾಳೆ. ಹೊಸ ಬದುಕಿನ ಹಂಬಲಕ್ಕಾಗಿ ಹಾತೊರೆಯುತ್ತಿದ್ದಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆ ಕೂಡ ತನ್ನ ಅನಂತ ಸಾಧನೆಗಳ ಮುಖಾಂತರ ಹೊಸ ಬದುಕಿನ ಮಗ್ಗುಲಿಗೆ ನಡೆದಿದ್ದಾಳೆ. ಈ ನಡೆ ಮಹಿಳಾ ಸ್ವಾತಂತ್ರ್ಯದ ಹೊಸ ಆಲೋಚನಾಕ್ರಮವೂ ಆಗಿದೆ. ಗೀತಾ ನಾಗಭೂಷಣರ

'ಬೆಳಕಿನಡೆಗೆ' ಕತೆಯಲ್ಲಿ ಬರುವ 'ಭವಾನಿ' ಕೀಳು ಜಾತಿಯಲ್ಲಿ ಹುಟ್ಟಿದವಳು. ಈಕೆ ಲಿಂಗದಳ್ಳಿ ಸಾವ್ಕಾರ ಚಂಬಸಪ್ಪನ ಮನೆಯಲ್ಲಿ ಬೆಳೆದವರು ಜೊತೆಗೆ ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡ ಅನಾಥೆ. ತಂದೆ ಕತಾಲಪ್ಪ ಸವ್ಕಾರನ ಮನೆಯ ಜೀತ ಮಾಡುತ್ತಲೇ ಮಗಳು 'ಭವಾನಿ'ಯನ್ನು ಸಾಕಿದವನು. ತಂದೆಯಂತೆ ಭವಾನಿ ಬದುಕನ್ನು ಛಲದಿಂದ ಎದುರಿಸುವ ಧೃಡಸಂಕಲ್ಪ ಹೊಂದಿದವಳು. ಈಕೆಗೆ ಒಬ್ಬ ಒಳ್ಳೆಯ ಗಂಡನನ್ನು ನೋಡಿ ಮದುವೆಮಾಡಬೇಕೆಂಬ ಕನಸು ಕಟ್ಟಿಕೊಂಡ ಕತಾಲಪ್ಪನಿಗೆ ಸವ್ಕಾರನ ಮಗ ಈರಣ್ಣನಿಂದ ಆಪತ್ತು ಸಂಕಟ ಬಂದೊದಗುತ್ತದೆ. ಈರಣ್ಣ ತೋಟದ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಭವಾನಿಯನ್ನು ಮರುಳು ಮಾತುಗಳಿಂದ ಮೋಹಿಸಿ ಮಾನಭಂಗ ಮಾಡಿಬಿಡುತ್ತಾನೆ. ಆಕೆಗೆ ಬದುಕು ಕೊಡುತ್ತೇನೆಂದು ಭರವಸೆ ನೀಡಿ ತೋಟದ ಮನೆಯಲ್ಲಿ ಆಕೆಯನ್ನು ಇಟ್ಟುಕೊಳ್ಳುತ್ತಾನೆ, ಕಟ್ಟಿಕೊಳ್ಳುವುದಿಲ್ಲ. ಆತನಿಂದ ಭವಾನಿ ಗೌರಿಯೆಂಬ ಹೆಣ್ಣು ಮಗುವಿಗೆ ಜನ್ಮನೀಡುತ್ತಾಳೆ. ಭವಾನಿ ಈರಣ್ಣನಿಗೆ ತನ್ನತನವನೆಲ್ಲಾ ಅರ್ಪಿಸಿದ್ದಾಳೆ, ತನ್ನಮಗಳ ಬದುಕು ತನ್ನಂತಾಗಬಾರದೆಂದು ಆಕೆಗೆ ಒಂದು ಒಳ್ಳೆಯ ಗಂಡು ಹುಡುಕಿ ಮದುವೆ ಮಾಡಬೇಕೆಂದು ಈರಣ್ಣನಿಗೆ ನಿತ್ಯ ಗೋಗರೆಯತೊಡಗುತ್ತಾಳೆ. ಆದರೆ ಈರಣ್ಣ ಸವ್ಕಾರ ಆಕೆಗೆ "ನೀನ್ ಹೊಟ್ಟೆಲಿಂದ ಹುಟ್ಟಿದ ಮಗಳಿಗಿ ನಮ್ ಕುಲದಾಗ ಮದವಿ ಆಗಂಗಿಲ್ಲ, ಹಂಗೇ ನಿಮ್ ಕುಲದವ್ರುಯಾರು ತಯಾರಿಲ್ಲ ಗೊತ್ತೇನು ಅಂದು ಬಿಟ್ಟು ಆತ ನನ್ನ ತಂಗಿ ಮಗ ಶಾಂತವಾರ ಗೌರಿನ ಇಟ್ಟುಕೊಳ್ಳುತ್ತಾನೆ. ಆಕೆಗೆ ವಡವಿ ವಸ್ತ್ರ ಕೊಟ್ಟು ಆತನ ಮನೆಗೆ ಕಳುಹಿಸಿ ಬಿಡೋನು."[೪] ಅಂದಾಗ ಭವಾನಿ ಪ್ರತಿಭಟಿಸುತ್ತಾಳೆ. ನನ್ನಂಥೆ ನನ್ನ ಮಗಳ ಬದುಕು ಆಗಬಾರದೆಂದು ಹೊಸ ನಿರ್ಧಾರ ತೆಗೆದು ಕೊಳ್ಳುತ್ತಾಳೆ. ಜಮೀನ್ದಾರರ ಕಪಿಮುಷ್ಟಿಯಲ್ಲಿ ಕೆಳಜಾತಿಯ ಹೆಣ್ಣುಗಳು ಅವರ ದುರಾಸೆಗೆ ಬಲಿಯಾಗುತ್ತಲೇ ಹೋಗುವದನ್ನು ಚರಿತ್ರೆ ಹೇಳುತ್ತಲೇ ಬಂದಿದೆ. ಈ ವ್ಯವಸ್ಥೆಗೆ ಭವಾನಿ ತಿರುಗಿ ಬೀಳುತ್ತಾಳೆ. ಮಗಳು ಗೌರಿಗೆ ಶಿಕ್ಷಣ ಕೊಡಿಸಿ ಆಕೆಯನ್ನು ಸ್ವತಂತ್ರ ಜೀವನಕ್ಕೆ ನೆಲೆ ಕಾಣಿಸಬೇಕೆಂದು ಸಾಹುಕಾರನ ಮನೆ ತೊರೆಯುತ್ತಾಳೆ. ಭವಾನಿ ಈರಣ್ಣನಿಗೆ ಛೀಮಾರಿ ಹಾಕುವುದರ ಮೂಲಕ ಸ್ತ್ರೀ ಶಕ್ತಿಯ ಪ್ರತಿಭಟನೆಯನ್ನು ತೋರಿಸುತ್ತಾಳೆ. ಭವಾನಿ ಬಾಲ್ಯದಿಂದಲೂ ಛಲಗಾರ್ತಿಯಾಗಿ ಬೆಳೆದಳು. ಸ್ತ್ರೀಸ್ವಾವಲಂಬನೆಯ ಬದುಕನ್ನು ನಂಬಿಕೊಂಡವಳು ಗ್ರಾಮೀಣ ಭಾಗದ ಶ್ರಮವರ್ಗದ ಪ್ರತಿನಿಧಿಯಾದ ಭವಾನಿ ಶೋಷಣಾ ಪದ್ಧತಿಯ ವಿರುದ್ಧ ದಂಗೆಯೆದ್ದವಳು. ಬಡತನ, ಜಾತೀಯತೆ ಮುಂತಾದ ಪದ್ದತಿಗಳ ಆಳದಲ್ಲಿ ಬೇರುಬಿಟ್ಟಿರುವ ಸಣ್ಣತನಗಳನ್ನು ಈ ಕತೆಯಲ್ಲಿ ಬರುವ ಸ್ತ್ರೀ ಪಾತ್ರಗಳಾದ ಭವಾನಿ, ಸುಂದ್ರಿ, ಗೌರಿಯರ ಮೂಲಕ ಸ್ತ್ರೀ ಸಂವೇದನೆಯ ಅನಂತ ಮುಖಗಳನ್ನು ಅನಾವರಣಗೊಳಿಸಲಾಗಿದೆ.

ಆರ್ಥಿಕ ಸ್ವಾವಲಂಬನೆಗೆ ಮಹಿಳೆಯ ಬದುಕು ಇಂದು ಒಳಗಾಗುತ್ತಿದೆ. ಜಾಗತೀಕರಣ ಸಂದರ್ಭದಲ್ಲಿ ಸ್ತ್ರೀಚೈತನ್ಯದ ನೆಲೆ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತಿದೆ. ಮಹಿಳೆ ಪುರುಷಪ್ರಧಾನ ಸಮಾಜದಲ್ಲಿ ತಾನೇನು ಕಡಿಮೆಯಿಲ್ಲ; ಪುರುಷನಂತೆ ದುಡಿದು ಬದುಕನ್ನು ರೂಪಿಸಿಕೊಳ್ಳಬಲ್ಲೆನೆಂಬ ಛಲ ಆಕೆಯಲ್ಲಿ ಹುಟ್ಟಿದೆ. ಗೀತ ನಾಗಭೂಷಣರ 'ಚಿತ್ರಿ ಮತ್ತು ರಿಕ್ಷಾ' ಉತ್ತಮ ಕತೆ. ಕಲಬುರ್ಗಿಯ ದಟ್ಟ ಬರಗಾಲ ನಾಡಿನಲ್ಲಿ ಹೊಟ್ಟೆ ಹೊರೆದು ಕೊಳ್ಳಲು ಚಿತ್ರಿಯೆಂಬ ಹೆಣ್ಣು ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡು ಮಲತಾಯಿಯ ನಿರಂತರವಾದ ಶೋಷಣೆಗೆ ಒಳಗಾದವಳು. ಮಲತಾಯಿಯ ಕಟ್ಟಾಜ್ಞೆಯಂತೆ ಕಳ್ಳತನ ಮಾಡಿ ಹಣತಂದು ಮನೆಗೆ ಕೊಡುವಾಗ ಒಮ್ಮೆ ಪೇಟೆಬೀದಿಯಲ್ಲಿ ಸಿಕ್ಕಿಬಿದ್ದು ಅವಮಾನಕ್ಕೆ ತುತ್ತಾದವಳು. ಆ ಸಂದರ್ಭದಲ್ಲಿ ಪಕೀರಪ್ಪನೆಂಬ ಅಂತ:ಕರಣದ ವ್ಯಕ್ತಿ ಚಿತ್ರಿಯನ್ನು ರಕ್ಷಿಸುವನು. ಆಕೆಯ ಬದುಕಿನ ಧಾರುಣ ಕತೆಯನ್ನು ಕೇಳಿ. ನೊಂದು ಆಕೆಯನ್ನು ಸಾಕುಮಗಳಂತೆ

ನೋಡಿಕೊಳ್ಳುತ್ತಾನೆ. ವಯಸ್ಸಾದ ಪಕೀರಪ್ಪನಿಗೆ ಸದಾ ರಿಕ್ಷಾತುಳಿದು ಬದುಕಿನ ಬಂಡಿ ಸಾಗು ಹಾಕುತ್ತಿದ್ದವನಿಗೆ ದಮ್ಮು, ಆಯಾಸದ ಖಾಯಿಲೆ ಅಂಟಿಕೊಳ್ಳುತ್ತದೆ. ಆಗ ಚಿತ್ರೀಯೇ ರಿಕ್ಷಾತುಳಿದು. ''ಅಲ್ಲೋ..ಯಪ್ಪೋ- ನೀ ಆರಾಮ ಮಾಡು ನಾ ರಿಕ್ಷಾ ಹೊಡಿತಿನಂತೆ.. ನನಗ ಗಂಡು ಮಗನಂಗ ಬೆಳ್ಸೀದ್ರಿ ನಾ..ಗಂಡುಮಗನ್ಹಾಂಗ ದುಡುದು ನಿನಗ ಉಳಿಸ್ಗೋತಿನಂತೂ.. ನಾನು''[೯] ಎಂಬ ಅವಳ ಧೈರ್ಯದ ಮಾತುಗಳು ಪುರುಷಪ್ರಧಾನ ಸಮಾಜದಲ್ಲಿ ತಾನೂ ಪರುಷನಂತೆ ದುಡಿದು ಬದುಕಿ ತೋರಿಸುತ್ತೇನೆಂಬ ಛಲ ಆಕೆಯಲ್ಲಿ ಹೊಸ ಭರವಸೆಯ ಚೈತನ್ಯ ಮೂಡಿಸಿದೆ. ಆಕೆಯ ಮಾತಿಗೆ ಪಕ್ಕೀರಪ್ಪ ಸಂತೋಷಗೊಳ್ಳುತ್ತಾನೆ. ಖಾಯಿಲೆ ವಿಪರೀತವಾಗಿ ಆತ ಸತ್ತ ನಂತರ ಚಿತ್ರಿ ಕಲಬುರ್ಗಿಯ ಶಹರದಲ್ಲಿ ರಿಕ್ಷಾ ತುಳಿದೇ ಬದುಕು ಕಟ್ಟಿಕೊಳ್ಳುವ ಛಲಕ್ಕೆ ನಿಲ್ಲುತ್ತಾಳೆ. ಅವಳ ಪರಿಶ್ರಮದ ಬದುಕಿನಲ್ಲಿ ರಿಕ್ಷಾ ಹೊಡೆಯುತ್ತಿದ್ದ ಸೋಮು ಚಿತ್ರಿಯನ್ನು ಬಾಳಸಂಗಾತಿಯಾಗಿ ಸ್ವೀಕರಿಸಬೇಕೆಂದು ನಿರ್ಧರಿಸುತ್ತಾನೆ. ಆತನೊಂದಿಗೆ ಬದುಕು ಬದಲಿಸಬಹುದೆಂಬ ಆಲೋಚನೆಯಲ್ಲಿದ್ದಾಗ ಇದ್ದಕಿದ್ದಂತೆ ಸೋಮು ಲಾರಿ ಅಪಘಾತದಲ್ಲಿ ತೀರಿಕೊಂಡುಬಿಡುತ್ತಾನೆ. ಚಿತ್ರಿಯ ಕನಸು ನುಚ್ಚುನೂರಾಗುತ್ತದೆ. ಕೊನೆಗೆ ಅವಳ ಪಾಲಿಗೆ ರಿಕ್ಷಾ ದುಡಿಮೆಯೇ ಸಂಗಾತಿಯಾಗುತ್ತದೆ. ಶ್ರಮದ ಬದುಕಿನಲ್ಲಿ ಹೊಸ ಸ್ವರೂಪದ ಜೀವನಕ್ಕೆ ಆಕೆ ಹೊಂದಿಕೊಳ್ಳುತ್ತಾಳೆ. ಆರ್ಥಿಕ ಸ್ವಾವಲಂಬಿತನದಲ್ಲಿ ಮಹಿಳೆ ಕೂಡ ಛಲದಿಂದ, ಶ್ರಮದಿಂದ ಬದುಕು ಬದಲಿಸಿಕೊಳ್ಳಬಹುದೆಂಬ ತತ್ತ್ವ ಕತೆಯ ಆಶಯವಾಗಿದೆ.

ಸ್ತ್ರೀ ಸ್ವಾತಂತ್ರ್ಯದ ಪ್ರತಿನಿಧಿಯಾಗಿ ಮಹಿಳೆ ಕೂಡ ಯಾರ ಹಂಗಿಲ್ಲದೆ ಒಂಟಿಯಾಗಿ ಬದುಕಿ ತೋರಿಸಬಹುದೆಂಬ ನಿಲುವು ಶಿಕ್ಷಣ, ಉದ್ಯೋಗದಿಂದ ಸಾಧಿಸಿ ತೋರಿಸುತ್ತಾಳೆಂಬ ಸಂದೇಶವನ್ನು 'ಬಿ.ಟಿ. ಜಾಹ್ನವಿಯವರ 'ಕಳೆದುಕೊಂಡವಳು''[೯] ಕತೆ ಸಾಬೀತುಪಡಿಸುತ್ತದೆ. ಕೀರ್ತಿ ವಿದ್ಯಾವಂತೆ ಮೇಲಾಗಿ ನೌಕರಿ ದೊರೆತು ಶಿಕ್ಷಕಿಯಾಗಿದ್ದಾಳೆ. ಈಕೆ ಗಂಡನಾದ ಮಹೇಶನೊಂದಿಗೆ ಅನ್ಯೋನ್ಯ ದಾಂಪಂತ್ಯ ನಡೆಸಿದ್ದಾಳೆ. ಚಿತ್ರದುರ್ಗದಿಂದ ಆಕೆಯ ನೌಕರಿಗೆ ವರ್ಗವಾದ ಮೇಲೆ ಗದುಗಿಗೆ ಬರುತ್ತಾಳೆ. ಗಂಡ ವಾರಕ್ಕೊಮ್ಮೆ ತನ್ನನ್ನು ನೋಡಿಕೊಂಡು ಹೋಗಲು ಬರುವುದಾಗಿ ಭರವಸೆ ನೀಡಿದ್ದರಿಂದ ಆಕೆ ಗದುಗಿಗೆ ಬಂದು ಸೇವೆಗೆ ಸೇರಿಕೊಳ್ಳುತ್ತಾಳೆ. ದಿನಗಳು ಕಳೆದಂತೆ ಕೀರ್ತಿಯ ತಂದೆ ತಾಯಿಗಳು ಮನೆಯಲ್ಲಿದ್ದ ಉದ್ಯೋಗವಿಲ್ಲದ ಕಿರಿಯ ಮಗಳಾದ ಸ್ವರ್ಣಳನ್ನು ಅಳಿಯ ಮಹೇಶನೊಂದಿಗೆ ತಿರುಗಾಡಲು ಬಿಡುತ್ತಾರೆ. ಹೇಗಾದರೂ ಹಿರಿಯ ಮಗಳಿಗೆ ನೌಕರಿಯಿದೆ. ಅವಳು ಸ್ವತಂತ್ರವಾದ ಜೀವನ ನಡೆಸುತ್ತಾಳೆ. ಸ್ವರ್ಣಳನ್ನು ಮಹೇಶನಿಗೆ ಒಪ್ಪಿಸಿ ಬಿಟ್ಟರೆ ಮದುವೆಯ ಬಾರ ತಪ್ಪುತ್ತದೆಯೆಂದು ನಿರ್ಧರಿಸಿ ಬಿಡುತ್ತಾರೆ. ಮಹೇಶ ಸ್ವರ್ಣರ ಪ್ರೀತಿ ಚಿಗಿತು ಹೊಸ ಹುಟ್ಟಿಗೆ ಕಾರಣವಾಗುತ್ತದೆ. ಸ್ವರ್ಣಳ ಹೊಟ್ಟೆಯಲ್ಲಿ ಮಹೇಶನ ಕುಡಿ ಬೆಳೆಯತೊಡಗಿದಂತೆ ಸುದ್ದಿಯಾಗುತ್ತದೆ. ಇದೆಲ್ಲಾ ಗೆಳತಿ ರಾಜಿಯಿಂದ ತಿಳಿದ ಕೀರ್ತಿ ದುರ್ಗಕ್ಕೆ ಬರುತ್ತಾಳೆ. ಜನ್ಮನೀಡಿದ ತಂದೆ ತಾಯಿಗಳ ಹುನ್ನಾರ ಆಕೆಯಲ್ಲಿ ರೋಷ ಉಕ್ಕಿಸುತ್ತದೆ; ಜಗಳ ರಂಪಾಟ ಮಾಡಿ ಆಕೆ ತಂದೆ ತಾಯಿಯನ್ನೆ ತಿರಸ್ಕರಿಸಿ ಬಿಡುತ್ತಾಳೆ. ಒಂಟಿಯಾಗಿ ಬದುಕಿ ತೋರಿಸುತ್ತೇನೆಂದು ಹಟವಾದಿಯಾಗುತ್ತಾಳೆ. ಇದೆ ಸಂದರ್ಭದಲ್ಲಿ ಗಂಡ ಮಹೇಶ ಅಪಘಾತವೊಂದರಲ್ಲಿ ಸಾವನ್ನಪ್ಪುತ್ತಾನೆ. ಕೀರ್ತಿ ಆತನನ್ನು ನೋಡಲು ತಿರಸ್ಕರಿಸಿ ಬಿಡುತ್ತಾಳೆ. ಮಹೇಶ ತೀರಿದ ಮೇಲೆ ಕೀರ್ತಿ ವಿಧವೆ ಪಟ್ಟವೇರಲು ನಿರಾಕರಿಸುತ್ತಾಳೆ. ತಂಗಿ ಸ್ವರ್ಣ ವಿಧವೆಯಾಗುತ್ತಾಳೆ. ಸ್ವರ್ಣಳಿಗೆ ಅಕ್ಕ ಕೀರ್ತಿಯ ದಾಂಪತ್ಯದಲ್ಲಿ ಪ್ರವೇಶ ಮಾಡಿದ್ದು ತಪ್ಪೆಂದು ಅರಿವಿಗೆ ಬರುತ್ತದೆ.

ಕೀರ್ತಿ ತನ್ನ ಗಂಡನನ್ನು ಕಳೆದುಕೊಂಡರೂ ತಾನು ಮಾತ್ರ ಆತನಿಗೆ ದ್ರೋಹಮಾಡಿಲ್ಲವೆಂಬ ಛಲ ಹುಟ್ಟಿಕೊಂಡಿದೆ. ಸ್ವತಂತ್ರವಾದ ಜೀವನವನ್ನು ಕೊನೆಯವರೆಗೆ ಕಳೆಯಲು ನಿರ್ಧರಿಸುತ್ತಾಳೆ.

ಈ ಕತೆಯಲ್ಲಿ ಜನ್ಮನೀಡಿದ ತಂದೆ ತಾಯಿಗಳು ಮಗಳಿಗೆ ಮತ್ತೊಬ್ಬ ಮಗಳನ್ನು ವರದಕ್ಷಿಣೆಯ ಆಶೆಗೆ ಸವತಿಯಾಗಿ ನಿಲ್ಲಿಸುವ ಸಣ್ಣತನ ತೋರಿಸುತ್ತಾರೆ. ಉದ್ಯೋಗದಿಂದ, ಆರ್ಥಿಕ ಸ್ವಾವಲಂಬಿಯಾದ ಕೀರ್ತಿ ತನ್ನ ನೆಲೆಯನ್ನು, ಗುರಿಯನ್ನು ಹೊಸ ನಿರ್ಧಾರದೊಂದಿಗೆ ಬದಲಾಯಿಸಿಕೊಳ್ಳುತ್ತಾಳೆ. 'ನಾರಿ ಮುನಿದರೆ ಮಾರಿ' ಯೆನ್ನುವಂತೆ ಕೀರ್ತಿ ಗಂಡನನ್ನು ಕಳೆದುಕೊಂಡರೂ, ಏನನ್ನೂ ಕಳೆದುಕೊಂಡಿಲ್ಲವೆನ್ನುವಂತೆ ನಿರಾಳ ಒಂಟಿ ಬದುಕನ್ನು ಆಯ್ದುಕೊಂಡಿದ್ದಾಳೆ.

ಆಧುನಿಕ ಕನ್ನಡ ಮಹಿಳಾ ಸಾಹಿತ್ಯಕ್ಕೆ ಮುಸ್ಲಿಂ ಸಂವೇದನೆಯೂ ಕೂಡ ಬಹುಮುಖ್ಯವಾದ ಪಾತ್ರವಹಿಸಿರುವುದು ಕಂಡುಬರುತ್ತದೆ. ಸಾರಾ ಅಬೂಬಕರ್ ಮುಸ್ಲಿಂ ಜಗತ್ತಿನ ಜೀವನಾನುಭವಗಳನ್ನು ಅನನ್ಯವಾಗಿ ಚಿತ್ರಿಸಿದ್ದಾರೆ. ಮುಸ್ಲಿಂ ಸಮುದಾಯದಲ್ಲಿರುವ 'ತಲಾಖ್' ನಡವಳಿಕೆಯ ಬಗ್ಗೆ ಪ್ರಶ್ನಿಸುವ ಕತೆ 'ನಿಯಮ ನಿಯಮಗಳ ನಡುವೆ'. ಈ ಕತೆಯಲ್ಲಿ 'ಜೋಹರಾ' ಬಡ ಕುಟುಂಬವೊಂದರ 'ಅಮೀನಾ'ಯೆಂಬ ತಾಯಿಯ ಮಗಳು. ಕಿತ್ತು ತಿನ್ನುವ ಬಡತನದಲ್ಲಿ ಶ್ರೀಮಂತರ ಮನೆಯ ಮನೆಗೆಲಸಮಾಡಿ ಅಳಿದುಳಿದ ಹಣದಿಂದ ಅಮಿನಾ ಮಗಳಿಗೆ ಓಲೆ ಆಲಿಕತ್ತುಗಳನ್ನು ಮಾಡಿಸಿ 'ಖಾದರ್'ನೆಂಬ ಯುವಕನಿಗೆ ಮದುವೆ ಮಾಡಿಕೊಡುತ್ತಾಳೆ. ಕೆಲದಿನಗಳು 'ಜೋಹರಾ-ಖಾದರ್'ರ ದಾಂಪತ್ಯ ಅನ್ಯೂನ್ಯವಾಗಿರುತ್ತದೆ. ಚಿಕ್ಕಪುಟ್ಟ ವ್ಯಾಪಾರವನ್ನು ಮಾಡಿಕೊಂಡಿದ್ದ ಖಾದರ್ ಇಬ್ಬರು ಮಕ್ಕಳ ತಂದೆಯೂ ಆಗುತ್ತಾನೆ. ಬದುಕಿನಲ್ಲಿ ಬಡತನ ಭಾದಿಸತೊಡಗಿದಾಗ ಖಾದರ್ ಹೆಂಡತಿಯ ಒಡವೆಗಳನ್ನು ಕೇಳುತ್ತಾನೆ. ತಾನು ದುಡಿದು ಸಂಪಾದಿಸಿದ, ತಾಯಿಯ ಅಪ್ಪಣೆಯಿಲ್ಲದೆ ಒಡವೆಗಳನ್ನು ಕೊಡಲಾಗುವುದಿಲ್ಲವೆಂದು ಗಂಡನಿಗೆ ಹೇಳಿದಾಗ ಗಂಡ ವ್ಯಗ್ರಗೊಳ್ಳುತ್ತಾನೆ. ಆಕೆಯನ್ನು ತಂದು ತಾಯಿಯ ಮನೆಗೆ ಬಿಡುತ್ತಾನೆ. ತಾಯಿ ಅಮೀನಾ ಮಗಳ ನಡತೆಯನ್ನು ಖಂಡಿಸುತ್ತಾಳೆ. ದಿನಗಳು ಉರುಳಿದಂತೆ ಗಂಡ ಬಾರದೇ ಹೋದಾಗ ತಾಯಿ ಕಳವಳ ಪಡುತ್ತಾಳೆ. ಕೆಲದಿನಗಳು ಉರುಳಿದಂತೆ ಖಾದರ್ ತಾಯಿಯ ಮಾತಿನ ಅಣತಿಯಂತೆ ತನ್ನ ಮಾತು ಕೇಳದ ಜೋಹರಾಳಿಗೆ ತಲಾಖ್ ನೀಡುವ ಸಂದೇಶವನ್ನು ಕಳುಹಿಸಿಕೊಡುತ್ತಾನೆ. ಈ ಸುದ್ದಿಯಿಂದ ಜೋಹರಾ ತತ್ತರಿಸಿ ಹೋಗುತ್ತಾಳೆ. ''ಆ ಸೈತಾನ ಹೀಗೂ ಮಾಡಿಬಿಟ್ಟನೆ?'' ಎನ್ನುತ್ತ ಜೋಹರಾಳ ತಾಯಿ ಅಮೀನ ಅಳತೊಡಗಿದಳು. ಶಾಫಿ ಬೆಪ್ಪಾಗಿ ನಿಂತನು. ಜೋಹರಾ ಅಡಿಗೆ ಮನೆಗೆ ತೆರಳಿ ಒಲೆಯ ಮುಂದೆ ಕುಳಿತಳು. ಎದೆಯನ್ನು ಕಲ್ಲು ಮಾಡಿಕೊಳ್ಳುವ ಸನ್ನಾಹದಲ್ಲಿದ್ದಳು ಆಕೆ.''[೬] ಹೀಗೆ ಕಥೆ ಮುಂದುವರಿಯುತ್ತದೆ.

ಗಂಡ ನೀಡಿದ 'ತಲಾಖ್' ಜೋಹರಾಳ ಬದುಕನ್ನು ದುಃಖದ ಕೂಪಕ್ಕೆ ತಳ್ಳುತ್ತದೆ. ತಾಯಿಯ ಮನೆಯಲ್ಲಿ ಪಡಬಾರದ ಕಷ್ಟಗಳನ್ನು ಪಟ್ಟು ಬದುಕು ಯಾತನಾಮಯವಾದಾಗ ಮಧ್ಯಸ್ಥರ ಮೂಲಕ 'ಒಜ್ಜತ್' (ಮರುವಿವಾಹ) ಮೂಲಕ ಜೋಹರಾಳಿಗೆ ಅದು ಹಸಿ ಬಾಣಂತಿಗೆ ಋತುಸ್ನಾನ ಮಾಡಿಸಿ ಮರುಮದುವೆ ಪ್ರಸ್ತಾಪ ಬಂದಾಗ ಜೋಹರಾಳು ಪ್ರತಿಭಟಿಸುತ್ತಾಳೆ. ತಪ್ಪು ಮಾಡದ ತಾನು ಅಪರಾಧಿಯಲ್ಲವೆಂದು ತಕರಾರು ತೆಗೆಯುತ್ತಾಳೆ.![೬] ''ತಪ್ಪು ಯಾರೇ ಮಾಡಲಿ ಶಿಕ್ಷೆ ಅನುಭವಿಸಬೇಕಾದವರು ಹೆಂಗಸರು'' ತಾಯಿ ಬಗೆಬಗೆಯಾಗಿ ತಿಳಿಹೇಳಿ-ಹಸಿ ಬಾಣತಿಗೆ ನಾಟೀ ಔಷಧಿ ಕುಡಿಸಿದ್ದರಿಂದ ಆರೋಗ್ಯದಲ್ಲಿ ಏರುಪೇರಾಗಿ ಸಾಯುವ ಸ್ಥಿತಿಗೆ ಬಂದು ಜೀವ ಕಳೆದುಕೊಳ್ಳುತ್ತಾಳೆ. ತಪ್ಪು ಮಾಡದ ಜೋಹರಾಳು ಮುಸ್ಲಿಂ ಸಂಸ್ಕೃತಿಯ ಕಟು ಸಂಪ್ರದಾಯ 'ತಲಾಖ್'ನಿಂದಾಗಿ

ಜೀವದ ಹಂಗುಬಿಟ್ಟು ಪ್ರತಿಭಟನೆಗೆ ನಿಲ್ಲುವ ಜೋಹರ ಜೀವವನ್ನೇ ಕಳೆದುಕೊಳ್ಳುತ್ತಾಳೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಒಬ್ಬ ಮಹಿಳೆಯ ಬದುಕು ನುಚ್ಚು ನೂರಾಗುವುದನ್ನು ಕತೆ ವಿಶ್ಲೇಷಿಸುತ್ತದೆ. ಇಂತಹ ತಲಾಖ್‌ಗಳು ಮಹಿಳೆಯರ ಬದುಕಿನಲ್ಲಿ ಉಂಟುಮಾಡುವ ಪರಿಣಾಮವನ್ನು ಕತೆ ವಿವರಿಸುತ್ತದೆ.

ಮುಸ್ಲಿಂ ಕತೆಗಾರ್ತಿಯರಲ್ಲಿಯೂ ಮಹಿಳಾ ಸಂವೇದನೆಯ ಅನಂತಮುಖಗಳು ಅನಾವರಣಗೊಳ್ಳುತ್ತಿವೆ. ಸಾರಾ ಅವರ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು', 'ಧರ್ಮ ಬಲೆ ಬೀಸಿದಾಗ', 'ಚಪ್ಪಲಿಗಳು', 'ಮಸೀದಿ ಕಟ್ಟುವವರು' ಮುಂತಾದ ಕತೆಗಳಲ್ಲಿ ಮುಸ್ಲಿಂ ಸಮುದಾಯದ ಸಮಸ್ಯೆಗಳನ್ನು ತಮ್ಮ ನೇರ ಹಾಗೂ ಸರಳ ನಿರೂಪಣೆಯ ಮೂಲಕ ಚಿತ್ರಿಸಿದ್ದಾರೆ.

ಮುಸ್ಲಿಂ ಸಮುದಾಯವೊಂದರಲ್ಲಿ ಹೆಣ್ಣಿಗೆ ವಿದ್ಯೆ ನಿಷಿದ್ದವೆನ್ನುವ ಸಾಮಾಜಿಕ ವ್ಯವಸ್ಥೆಯಲ್ಲಿ ಮುಸ್ಲಿಂ ಬಾಲೆಯೊಬ್ಬಳು ದಿಟ್ಟತನದಿಂದ ವಿದ್ಯೆಕಲಿಯಲು ಹೊರಡುವುದನ್ನು ಸಾರಾ ಅವರ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಕತೆಯಲ್ಲಿ ಕಾಣಬಹುದು. ಪುರುಷ ಕೇಂದ್ರಿತ ಮುಸ್ಲಿಂ ಕುಟುಂಬದಲ್ಲಿ ಅಸಹಾಯಕಳಾದಂತಹ ಹೆಣ್ಣು ಪ್ರತಿಭಟಿಸಿ ನಿಲ್ಲುತ್ತಾಳೆ.

ಮಸೀದಿಯು ಪ್ರತಿಪಾದಿಸುವ ಪ್ರತಿಗಾಮಿ ಆಶಯಗಳನ್ನು ಸಾರಾ ಅವರು ತಮ್ಮ 'ಧರ್ಮ ಬಲೆ ಬೀಸಿದಾಗ' ಮತ್ತು 'ಮಸೀದಿಕಟ್ಟುವವರು' ಕತೆಗಳಲ್ಲಿ ತಿರಸ್ಕರಿಸಿ ಕರ್ತೃತ್ವ ಶಕ್ತಿಯನ್ನು ಪ್ರಕಟಿಸಿರುವುದು ಕಾಣಬಹುದು. ಮುಸ್ಲಿಂ ಸಮುದಾಯದಲ್ಲಿ ತಂದೆ ಗಂಡಂದಿರರಿಗೆ ಮತ್ತು ಧರ್ಮ ಗುರುಗಳಿಗೆ ಅತ್ಯಂತ ಹೆಚ್ಚಿನ ಅಧಿಕಾರವಿದೆಯೆಂದು ಅನೇಕ ಕತೆಗಳು ಸಾಕ್ಷಿಯಾಗಿವೆ.

ಚಪ್ಪಲಿಗಳು 'ಕಥೆಯಲ್ಲಿ ಹಸನ್ ಬ್ಯಾರಿ ಅಳಿಯ ಶಭೀರನಿಗೆ ಉಪದೇಶಿಸುವ ಮಾತು ಹೀಗಿದೆ. ''ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು, ಬೇಕಾದಾಗ ಉಪಯೋಗಿಸಿ ಬೇಡವಾದಾಗ ಮೂಲೆಯಲ್ಲಿ ಬಿಟ್ಟುಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ? ಚಪ್ಪಲಿಯನ್ನು ಎಲ್ಲಿಡಬೇಕೊ ಅಲ್ಲೆ ಇಡಬೇಕು''[೭] ಸ್ತ್ರೀಯನ್ನು ಪುರುಷ ನೋಡುವ ದೃಷ್ಟಿಕೋನವಿದು. ಇಂತಹ ದೈನಂದಿನ ವಿಷಯದ ಸಂದರ್ಭದಲ್ಲಿ ಜೀವನದ ಪ್ರಮುಖ ನಿರ್ಧಾರ ಕ್ಷಣಗಳಲ್ಲಿ ಸ್ತ್ರೀಯನ್ನು ಕಡೆಗಣಿಸಿ ನೋಡುವ ಪುರುಷ ಕೇಂದ್ರಿತ ನಿಲುವುಗಳು ಸಾರಾರ ಅನೇಕ ಕತೆಗಳಲ್ಲಿ ಸಿಗುತ್ತವೆ. ಈ ಕತೆಯಲ್ಲಿ ಅಸಹಾಯಕ ಹೆಣ್ಣುಮಗಳೊಬ್ಬಳು ಸ್ತ್ರೀಶಕ್ತಿಯನ್ನು ಪ್ರಕಟಿಸುವುದರ ಜೊತೆಗೆ ಸಾಂಪ್ರದಾಯಿಕ ಮೌಲ್ಯಗಳು ಹೇಗೆ ಸ್ಥಿತ್ಯಂತರಕ್ಕೆ ಒಳಗಾಗುತ್ತವೆಯೆಂಬ ಆಶಯವೂ ಕತೆಯಲ್ಲಿ ಕಾಣಿಸಿಕೊಂಡಿದೆ.

ನಮ್ಮ ನಡುವಿನ ಚಿಂತನಶೀಲ ಕತೆಗಾರ್ತಿ 'ಬಾನು ಮುಸ್ತಾಕ್' ಅವರು ಮುಸ್ಲಿಂ ಜನಾಂಗದ ಮಹಿಳಾ ಬದುಕಿನ ವಿವರಗಳನ್ನು ಆ ಸಮಾಜದ ಸ್ಥಿತ್ಯಂತರಗಳನ್ನು ಆತಂಕಗಳನ್ನು ತಮ್ಮ ಕತೆಗಳ ಮೂಲಕ ಹೇಳಿದ್ದಾರೆ. ಇವರ 'ಸರಿದ ಕಾರ್ಮೋಡ', 'ಬೆಂಕಿಮಳೆ' ತುಂಬಾ ಸಂಕೀರ್ಣವಾದ ಕತೆಗಳು. ಮುಸ್ಲಿಂ ಕುಟುಂಬವೊಂದರಲ್ಲಿ ನಡೆಯುವ ಲೈಂಗಿಕ ಆಸೆ ಹಾಗೂ ಸ್ತ್ರೀ ಶೋಷಣೆ 'ಸರಿದ ಕಾರ್ಮೋಡ' ಕತೆಯಲ್ಲಿ ಕಾಣಿಸಿಕೊಂಡಿದೆ. ಇವರ ಕತೆಯಲ್ಲಿ ಹೆಣ್ಣು ಪ್ರೇಮ-ಪ್ರಣಯ ವಸ್ತುವಂತೆ ಕಂಡು ಬಂದರೂ ಆ ಸ್ತ್ರೀ ಪಾತ್ರಗಳ ಆಂತರ್ಯದಲ್ಲಿ ಹೆಣ್ಣಿನ ಅನನ್ಯ ವ್ಯಕ್ತಿತ್ವ ಹೋರಾಟದ ಫಲಶ್ರುತಿಯು ವಿಜಯದ ಬಂಡಾಯದ ಧ್ವನಿ ಆಗಿದೆ.

**'ಬೆಂಕಿಮಳೆ'** ಕತೆಯ ಬರವಣಿಗೆ ಸಂಯಮದ ಅಭಿವ್ಯಕ್ತಿಯ ದ್ಯೋತಕವಾಗಿದೆ. ಇವರ ಕತೆಗಳ ಕೇಂದ್ರ ಪಾತ್ರಗಳು ಸ್ತ್ರೀ ಮುಸ್ಲಿಂ ಸಮುದಾಯದ ಮಹಿಳೆಯ ಮನಃಸ್ಥಿತಿಯ ಒಳನೋಟಗಳನ್ನು ನೀಡುವಲ್ಲಿ ಈ ಕತೆ ಯಶಸ್ವಿಯಾಗಿದೆ. ಈ ಕತೆಯಲ್ಲಿ ಮದುವೆಯಾದ ಮುಸ್ಲಿಂ ಹೆಣ್ಣು ಮಗಳು ಗಂಡನ ಒತ್ತಾಯದಿಂದ ಅಣ್ಣನ ಬಳಿಗೆ ಆಸ್ತಿಪಾಲು ಕೇಳಲು ಬರುತ್ತಾಳೆ. ಆಕೆಯ ಅಣ್ಣನಿಗೆ ಈ ವಿಷಯ ತಿಳಿದು ಆಶ್ಚರ್ಯವಾಗುತ್ತದೆ. ಆಗ ಆತನ ಮನಸ್ಸಿನಲ್ಲಿ ಉಂಟಾಗುವ ಸೂಕ್ಷ್ಮ ಬದಲಾವಣೆಯ ಭಾವಗಳನ್ನು ಈ ಕತೆ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಭಾನು ಮುಷ್ತಾಕ್‌ರ ಕೃತಿಗಳಲ್ಲಿ ಮುಸ್ಲಿಂ ಜಗತ್ತಿನಲ್ಲಿರುವ ಸ್ತ್ರೀ ಶೋಷಣೆ ಲೈಂಗಿಕ ಆಸೆ ಆಮಿಷಗಳು, ಹೆಣ್ಣು ಮಕ್ಕಳ ಆಸ್ತಿಯ ಹಕ್ಕಿನ ಪ್ರಶ್ನೆ ಮುಂತಾದ ಸಂಸ್ಕೃತಿ ಪ್ರಶ್ನೆಗಳನ್ನಿಟ್ಟುಕೊಂಡು ತಮ್ಮ ಸಮುದಾಯದ ವೈರುಧ್ಯದ ಚಿತ್ರಣಗಳನ್ನು ದಾಖಲಿಸಿದ್ದಾರೆ.

ಭಾನು ಮುಷ್ತಾಕರ 'ಜೀವಸಲೆ' ಕತೆಯ ನಾಯಕಿ ಅಭಿದಳಿಗೆ ಗಂಡು ಮಕ್ಕಳು, ಬಡತನದಲ್ಲೂ ಗಂಡನ ದಬ್ಬಾಳಿಕೆಯ ಪ್ರೀತಿಯಲ್ಲೇ ಬದುಕನ್ನು ಗೆಲ್ಲಲು ಪ್ರಯತ್ನಿಸುವವಳು. ಒಬ್ಬ ಗಂಡಿನ ಅಧೀನದಲ್ಲಿ ದಿನ ತುಂಬಿದ ಬಸುರಿಯ ಮೇಲೆ ಗಂಡ ನಡೆಸುವ ಕೆಟ್ಟ ಚಾಳಿಯನ್ನು ಪ್ರೀತಿಯ ಒಂದು ಪರಿಯಂತಲೇ ಎಂದು ನೋಡುವ ಕುಟುಂಬದ ಒಳಗೆ ಇದ್ದವಳು. ಈ ಅಭಿದಳ ಗಂಡ ತೀರಿಹೋದ ಮೇಲೆ ಸುತ್ತಲಿನ ಎಲ್ಲಾ ಗಂಡಸರಿಗೆ ಭೋಗದ ವಸ್ತುವಾಗುವ ಅಪಾಯಕ್ಕೆ ಸಿಕ್ಕಿ ಬೀಳುತ್ತಾಳೆ. ಗಂಡನ ಸಾವಿನಿಂದ ಇಡೀ ಕುಟುಂಬವನ್ನು ಸಾಕಿ ಸಲಹುವ ಜವಾಬ್ದಾರಿ ಹೊತ್ತುಕೊಳ್ಳುತ್ತಾಳೆ. ಅವಳ ಅಸಹಾಯಕ ಬದುಕನ್ನು ನಿರ್ಲಜ್ಜವಾಗಿ ಬಳಸಿಕೊಳ್ಳುವ ವ್ಯವಸ್ಥೆಯ ಕ್ರೌರ್ಯವನ್ನು ಲೇಖಕಿ ಸಮರ್ಥವಾಗಿ ಚಿತ್ರಿಸಿದ್ದಾರೆ. ಯಾವ ನೈತಿಕ ನೆಲೆಯಲ್ಲಿ ಸ್ತ್ರೀಯರ ಬದುಕು ಇರಬೇಕೆಂದು ಯಾವ ಸಮಾಜ ನಿರ್ಧರಿಸುತ್ತದೆಯೋ ಅದೇ ನೈತಿಕ ನೆಲೆಗಳಲ್ಲಿ ಅವಳ ಬದುಕನ್ನು ನುಚ್ಚು ನೂರು ಮಾಡಿಬಿಡುವುದರ ಮೂಲಕವೇ ಅವಳನ್ನು ತನ್ನ ಸಂಪೂರ್ಣ ಹಿಡಿತಕ್ಕೆ ತಂದುಕೊಳ್ಳುವ ವ್ಯವಸ್ಥೆಯ ಕ್ರೌರ್ಯವನ್ನು ಕತೆಗಾರ್ತಿ ಸಮರ್ಥವಾಗಿ ಅನಾವರಣಗೊಳಿಸಿದ್ದಾರೆ.[೮]

ಮತ್ತೊಂದು ಕತೆ 'ಎದೆಯ ಹಣತೆ' ನಾಯಕಿ ವಿದ್ಯಾವಂತೆಯಾಗಿದ್ದಾಳೆ. ತನಗಾಗುತ್ತಿರುವ ಅನ್ಯಾಯವನ್ನು ಎದುರಿಸಬೇಕೆನ್ನುವ ವ್ಯಕ್ತಿತ್ವದ ಅರಿವಿನ ಪ್ರಜ್ಞೆಯುಳ್ಳ ಹೆಣ್ಣು. ಆದರೆ ಆಕೆಯ ಪ್ರತಿಭಟನೆಯನ್ನು ಮೊದಲ ಹಂತದಲ್ಲಿಯೇ ಸಂಬಂಧಗಳ ಭಾವನಾತ್ಮಕ ಹಿನ್ನೆಲೆಯಲ್ಲಿ ಶಕ್ತವಾಗಿ ಹತ್ತಿಕ್ಕಲಾಗುತ್ತದೆ. ಗಂಡನನ್ನು ಕುರಿತ ಇವಳ ಆರೋಪಗಳನ್ನು ಯಾವ ಸಂಕೋಚವೂ ಇಲ್ಲದೆ ಒಪ್ಪಿಕೊಂಡು, ಅದು ಗಂಡಿನ ವ್ಯಕ್ತಿತ್ವದ ಮೂಲಧಾತು ಎಂಬ ಸರ್ಟಿಫಿಕೇಟನ್ನು ಕೊಟ್ಟು ಅವಳನ್ನು ವಾಪಸ್ಸು ಗಂಡನ ಮನೆಗೆ ಬಿಟ್ಟುಬರುತ್ತಾರೆ. ಪಿಯುಸಿಯ ತನಕ ಓದಿದ ಓದು, ತನಗಾಗುತ್ತಿರುವುದು ಅನ್ಯಾಯ ಎನ್ನುವ ಸ್ಪಷ್ಟ ತಿಳುವಳಿಕೆ. ಇದು ಅವಳ ಬದುಕಿನ ದುರಂತ ಸಾಂದ್ರತೆಯನ್ನು ಮತ್ತಷ್ಟು ಹೆಚ್ಚಿಸುತ್ತದೆ.

ಭಾನು ಮುಸ್ತಾಕರ 'ಪಾರಿವಾಳದ ರೆಕ್ಕೆಯ ಹಾಡು' ಕತೆ ಹೊಸ ಘಟ್ಟವೊಂದರ ಸ್ಪಷ್ಟ ಸಂಕೇತವಾಗಿದೆ. ಹೆಣ್ಣಿನ ನೋವಿನ ಹಲವು ಮುಖಗಳನ್ನು ನೋಯುವ ಹಲ್ಲಿಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ ಚಿತ್ರಿಸುತ್ತಿದ್ದ ಲೇಖಕಿ ಬದುಕಿನ ಇತರೆ ಮುಖಗಳ ಕಡೆಗೂ ಹೊರಳಿದ್ದಾರೆ. ವ್ಯವಸ್ಥೆಯ ಬದಲಾವಣೆಗೆ ಅಗತ್ಯವಾದ ಸ್ವ ವಿಮರ್ಶೆಯನ್ನು ಆಧುನಿಕ ಬದುಕಿನ, ಬದಲಾವಣೆಯ ಭ್ರಮಾತ್ಮಕ ಬದುಕನ್ನು ಈ ಕತೆ ಅನಾವರಣಗೊಳಿಸುತ್ತದೆ. ಆತ್ಮವಂಚನೆಯ ಸೂಕ್ಷ್ಮಾತಿಸೂಕ್ಷ್ಮ ವಿವರಗಳ ಜೊತೆಗೆ ಅದರ ತುತ್ತತುದಿಯಲ್ಲಿ ನಾವು ತೊಟ್ಟಮುಖವಾಡ

ತನ್ನಂತೆಯೇ ಕಳಚಿ ಆತ್ಮಾವಲೋಕನದ ಸ್ಥಿತಿ ಸಾಧ್ಯವಾಗುವುದನ್ನು ಕತೆ ವ್ಯಂಗ್ಯದ ಪರಾಕಾಷ್ಠೆಯಲ್ಲಿ ಮೂಡಿಸುತ್ತದೆ. ಬದಲಾವಣೆಯನ್ನು ಕುರಿತ ಆತಂಕ ಮತ್ತು ಅನುಮಾನಗಳೆರಡನ್ನೂ ಕತೆ ಸಕಾರಣವಾಗಿ ಪ್ರತಿಪಾದಿಸುತ್ತದೆ.

ಭಾನು ಮುಷ್ತಾಕರ ಒಟ್ಟಾರೆ ಕತೆಗಳಲ್ಲಿ ಮೂರು ನೆಲೆಗಳಿರುವುದು ಕಾಣುತ್ತದೆ. ವ್ಯವಸ್ಥೆಯೊಂದಿಗಿನ ಮುಖಾಮುಖಿ, ಬಡತನ, ಮತ್ತು ಹೆಣ್ಣಿನ ಕೊನೆಯಿರದ ನೋವಿನ ಬದುಕು, ಇವು ಈ ಕತೆಗಾರ್ತಿಯ ಕತೆಗಳ ಪ್ರಧಾನ ವಸ್ತು ವಿಶೇಷಗಳು. 'ನನ್ನ ಕೃತಿಗಳಲ್ಲಿ ಹೆಣ್ಣೆ ವಿರಾಜಮಾನಳಾಗಿದ್ದಾಳೆ' ಎಂಬ ಕತೆಗಾರ್ತಿಯ ಮಾತನ್ನು ಇಲ್ಲಿ ಸ್ಮರಿಸಬಹುದು.

''ಆಧುನಿಕ' ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯದ ಮುಖ್ಯಲಕ್ಷಣವೆಂದರೆ ತಾರ್ಕಿಕತೆ ಮತ್ತು ಪಾರದರ್ಶಕತೆ ಸಾಹಿತ್ಯದ ಆಕೃತಿಯಲ್ಲಿ ನಿರ್ಣಾಯಕ ಅಂಶಗಳು ಆಗಿವೆಯೆಂದರೆ ಅತಿಶಯೋಕ್ತಿ ಅಲ್ಲ. ಈ ತಾರ್ಕಿಕತೆ ಪಾರದರ್ಶಕತೆ ನವ್ಯೋತ್ತರ ಸಾಹಿತ್ಯ ಪ್ರಧಾನಧಾರೆಯಾದ ಬಂಡಾಯ ಸಾಹಿತ್ಯ ಗುಣಗಳೂ ಹೌದು.''೯ ಎನ್ನುವ ಡಾ. ಡಿ. ಆರ್. ನಾಗರಾಜರು ಸ್ತ್ರೀವಾದಿ ಸಾಹಿತ್ಯದ ವಿಸ್ತೃತತೆ ಸ್ತ್ರೀವಾದಿ ಪರಂಪರೆಗೆ ಬರುತ್ತದೆನ್ನುವ ಮಾತು ನಿಜ. ಚಾರಿತ್ರಿಕವಾಗಿಯೂ ಸ್ತ್ರೀ ಶಕ್ತಿ ಪರಂಪರೆಗೆ ಅಸಂಖ್ಯರೂ ಬಂದು ಸೇರುತ್ತಾರೆ. ಸ್ತ್ರೀಯತ್ವಎನ್ನುವದು ಜೈವಿಕ ಸತ್ಯ, ಅನುಭವಿಕ ಸತ್ಯ, ಅಸ್ತಿತ್ವೀಯ ಸತ್ಯವೂ ಹೌದು. ಆಧುನಿಕ ಸ್ತ್ರೀವಾದದ ಒಂದು ಪ್ರಭಾವಶಾಲೀ ಪಂಥ ಸ್ತ್ರೀತ್ವವನ್ನು ವ್ಯಾಖ್ಯಾನಿಸಿರುವುದು ಕೂಡ ಹೀಗೆಯೇ ಎನ್ನುತ್ತಾರೆ.

ಈ ಸ್ತ್ರೀವಾದಿ ಸಾಹಿತ್ಯದ ತಾರ್ಕಿಕತೆ ಮತ್ತು ಪಾರದರ್ಶಕತೆಯನ್ನು ವೀಣಾ ಶಾಂತೇಶ್ವರರ ಕತೆಗಳಲ್ಲಿ ಕಾಣಬಹುದು. ನವ್ಯ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ಸ್ತ್ರೀವಾದಿ ದನಿಯೆಂದು ವಿಮರ್ಶಕರ ಗಮನ ಸೆಳೆದ ಈ ಕತೆಗಾರ್ತಿಯ 'ಮುಳ್ಳುಗಳು' ಕತೆಯಲ್ಲಿ ಶಿಕ್ಷಣ ಪಡೆದು ಉದ್ಯೋಗಸ್ಥೆಯಾದ ಶಾಂತಿ ಹಾಸ್ಟೆಲ್ ವಾಸಮಾಡುತ್ತಿರುವ ಅವಿವಾಹಿತೆ. ಈಕೆಗೆ ಎಲ್ಲಾ ಕಡೆ ಮುಳ್ಳುಜನಗಳ ಅನುಭವವಾಗುತ್ತದೆ. ತನ್ನ ಪಾಠಕೇಳಿದ ವಿದ್ಯಾರ್ಥಿಗಳು ದಾರಿಹೋಕರು, ಹಾಸ್ಟೆಲಿನ ಕಸಗುಡಿಸುವ ಮಾದ ಕೊನೆಗೆ, ಹಾಸ್ಟೆಲಿನ ಮುಂದೆ ಸದಾ ಬಾಲ ಅಲ್ಲಾಡಿಸುತ್ತ ಬಿದ್ದಿರುವ ಗಂಡು ನಾಯಿ ಎಲ್ಲರ ಕಣ್ಣುಗಳು ಚುಚ್ಚು ಮುಳ್ಳುಗಳಿರುವಂತೆ ಅನಿಸಿ ಶಾಂತಿ ಹಿಂಸೆಪಡುತ್ತಾಳೆ. ತಾನೊಬ್ಬ ಹೆಣ್ಣಾಗಿ ಬದುಕು ಕಟ್ಟಿಕೊಳ್ಳುತ್ತಿರುವ ಜೀವನಾನುಭವಗಳನ್ನು ತಾರ್ಕಿಕವಾಗಿ ಪಾರದರ್ಶಕವಾಗಿ ನಿವೇದಿಸಿಕೊಳ್ಳುತ್ತಾಳೆ. ಮುಳ್ಳು ಮನಸ್ಸಿನ ವ್ಯಕ್ತಿಗಳ ಮಧ್ಯೆ ಶಾಂತಿ ಸೊರಗಿ ಹೋಗುತ್ತಾಳೆ. ಕೊನೆಗೆ ಆಕೆ ಯಾವ ತೀರ್ಮಾನಕ್ಕೆ ಬರುತ್ತಾಳೆಂದರೆ. ''ಈ ಮುಳ್ಳಿನಂಥ ದೃಷ್ಟಿಯೊಂದೇ ಸತ್ಯ. ಉಳಿದೆಲ್ಲ ಭ್ರಮೆ, ರಸ್ತೆಯಲ್ಲಿ ಕಾಲೇಜಿನಲ್ಲಿ, ಬಸ್ಸಿನಲ್ಲಿ, ಟ್ರೇನಿನಲ್ಲಿ, ಮಾರ್ಕೆಟ್ಟಿನಲ್ಲಿ ಈ ಇಡೀ ಜಗತ್ತಿನ ತುಂಬ ಸತ್ಯವಾದುದೆಂದರೆ ಅದೊಂದೇ.''೧೦

ಶಾಂತಿ ಕಣ್ಣುಗಳಲ್ಲಿ ಮುಳ್ಳುಗಳಿಲ್ಲದಿರುವ ಗಂಡಸಿಗಾಗಿ ನಿರಂತರವಾದ ಹುಡುಕಾಟಕ್ಕೆ ತೊಡಗುತ್ತಾಳೆ. ಆಕೆಗೆ ಹತ್ತಿರವಾದ ದೇಸಾಯಿಯ ಕಣ್ಣಲ್ಲಿ ಮುಳ್ಳುಗಳಿರುವೋ ಇಲ್ಲವೋ ಎಂಬ ಅವಳ ಅನುಮಾನದಲ್ಲಿ ಕತೆ ಮುಗಿಯುತ್ತದೆ. ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಸೂಕ್ಷ್ಮಮನಸ್ಸಿನ ಸ್ತ್ರೀಯೊಬ್ಬಳು ಅನುಭವಿಸುವ ಸ್ತ್ರೀ ವಿಶಿಷ್ಟ ಅನುಭವ ಇದು. ಜಗತ್ತೆ ತನ್ನನ್ನು ಅನುಮಾನಿಸುತ್ತಿದೆ. ಇಡೀ ಜಗತ್ತಿನ ವಿರುದ್ಧ ಬಂಡೇಳಬೇಕು, ಒಬ್ಬೊಬ್ಬರನ್ನಾಗಿ ಎಲ್ಲರನ್ನೂ ಜೀವಂತ ಸುಡಬೇಕು. ಕೊನೆಗೆ ತಾನೂ ಅದೇ ಬೆಂಕಿಯಲ್ಲಿ ಬಿದ್ದು ಹೊಗಬೇಕೆಂಬ ರೊಚ್ಚಿನ ಮಾತುಗಳನ್ನಾಡುವ ಶಾಂತಿ, ಹೊಸ ಸಾಮಾಜಿಕ ವ್ಯವಸ್ಥೆಯ ಪರಿವರ್ತನೆಗೆ ಹಂಬಲಿಸುವ ಕನಸೂ ಆಕೆಯಲ್ಲಿದೆ.

ವೀಣಾ ಶಾಂತೇಶ್ವರರ **'ಹೊರಟು ಹೊದವನು'** ಕತೆಯ ನಾಯಕಿಗೆ ''ಜಗತ್ತು ತನಗೆ ಅನ್ಯಾಯಮಾಡಿದೆ ತನ್ನ ಕನಸು, ಬೆಳಕುಗಳನ್ನು ಕಸಿದುಕೊಂಡಿದೆ.''[೧೧] ಎಂಬಕೋಪ. ಅದಕ್ಕೆ ಎಲ್ಲರಮೇಲೆ ಆಕೆಗೆ ಸೇಡು ತೀರಿಸಿಕೊಳ್ಳಬೇಕೆಂಬ ದಾಹವಿದೆ. ಈ ನಾಯಕಿಗೆ ಬೆನ್ನೆಲುಬಿಲ್ಲದ 'ಯಾವಾಗಲು ತನ್ನನ್ನು ಒಲೈಸಲು ಪ್ರಯತ್ನಿಸುವ ಗಂಡನನ್ನು ಎತ್ತಿ ಬೆಂಕಿಯುಗುಳುವ ಬಂಬಿನಲ್ಲಿ ಹಾಕಬೇಕು' ಅನಿಸುತ್ತದೆ. ಹೀಗೆ ಒಬ್ಬ ಮಹಿಳೆಯ ಕನಸಿನ ಬದುಕನ್ನು ಕಸಿದುಕೊಂಡ ಪುರುಷ ಜಗತ್ತಿನ ಮೌಲ್ಯಗಳನ್ನು ಉಲ್ಲಂಘಿಸುವ ಮಟ್ಟಕ್ಕೆ ಬರುತ್ತಾಳೆ. ಹೀಗೆ ಬೆಂಕಿಹಚ್ಚುವ ಎಲ್ಲವನ್ನು ಧ್ವಂಸಮಾಡುವ ಬಯಕೆ ಆಕೆಯಲ್ಲಿ ಬಂದಿರುವದಕ್ಕೆ ಕಾರಣ ಆಕೆಯ ಬದುಕು ಕಮರಿಹೋಗಿದೆ. ಅದಕ್ಕಾಗಿ ವೀಣಾರ ಕತೆಯ ನಾಯಕಿ ವ್ಯವಸ್ಥೆಯ ವಿರುದ್ದ ಹೊಸ ಸವಾಲುಗಳನ್ನು ಹಾಕುತ್ತಾಳೆ. ನಿಯಮ ನಿಬಂಧಗಳ ಗೋಡೆ ಒಡೆದು ಹೊಸ ಬದುಕಿಗಾಗಿ ಹಂಬಲಿಸುವ ಕನಸು ಈ ಕತೆಯ ನಾಯಕಿಯಲ್ಲಿದೆ.

ವೀಣಾಶಾಂತೇಶ್ವರರ ಈ ಕಥಾ ಸಾಹಿತ್ಯದ ಹಿಂದೆ ರೂಢಿಗತ ಮೌಲ್ಯಗಳು ಕಟ್ಟಿಕೊಡುವ ಅರಿವನ್ನು ಪ್ರಶ್ನಿಸಿ ಧಿಕ್ಕರಿಸಿ ತನ್ನ ಅನುಭವದ ಹಿನ್ನಲೆಯಲ್ಲಿ ಹೊಸ ಅರಿವನ್ನು ಮೂಡಿಸುವ ಸ್ತ್ರೀವಾದಿ ನೆಲೆಯ ಹೊಸ ಹುಡುಕಾಟವನ್ನು ಅನೇಕ ಪಾತ್ರಗಳು ಶೋಧಿಸುತ್ತವೆ. ಈ ರೀತಿಯ ಉಲ್ಲಂಘನಾ ಪ್ರವಾಹ ಸ್ಥಾಪಿತ ಮೌಲ್ಯಗಳ ಬಗೆಗೆ ಬೆಂಕಿಯಂತೆ ಉರಿಯುವ ಸಿಟ್ಟು, ಮೊದಲಾದವು ಕತೆಗಾರ್ತಿಯ ಸ್ತ್ರೀ ಸ್ವಾತಂತ್ರ್ಯ ಹೊಸ ದಿಕ್ಕುಗಳ ವಿಚಾರ ಸರಣಿಯನ್ನಾಗಿ ಕಟ್ಟಿಕೊಡುತ್ತವೆ. ಗಂಡಿಗೊಂದು ಹೆಣ್ಣಿಗೊಂದು ಮೌಲ್ಯಗಳನ್ನು ಮಾಡಿ ತಪ್ಪಾದಗಲೆಲ್ಲಾ ಅವಳನ್ನು ದೂಷಿಸುತ್ತಿರುವ ಆತ್ಮವಂಚಕ ಸಮಾಜದ ಒಳಮುಖಗಳ ಮೇಲೆ ಇರುವ ಕಥನ ಪ್ರಜ್ಞಾ ಬೆಳಕು ಚೆಲ್ಲುತ್ತದೆ.

ಸ್ತ್ರೀವಾದಿ ನೆಲೆಯ ಹುಡುಕಾಟವು ಅನೇಕ ದಿಕ್ಕುಗಳಲ್ಲಿ ಇಂದು ಸಾಗುತ್ತಿದೆ. ಅನೇಕ ಬರಹಗಾರ್ತಿಯರು ತಮ್ಮ ಬರವಣಿಗೆಯನ್ನು ಪುರುಷ ಪ್ರಧಾನ ವ್ಯವಸ್ಥೆ ಹಾಕುವ ಒತ್ತಡವನ್ನು ವಿರೋಧಿಸುವ ನೆಲೆಯಾಗಿ ಅಭಿವ್ಯಕ್ತಿ ಗೊಳಿಸುತ್ತಿದ್ದಾರೆ. ಈ ದಾರಿಯಲ್ಲಿ ಎಚ್.ನಾಗವೇಣಿಯವರ **'ಧಣಿಗಳ ಬೆಳ್ಳಿಲೋಟ'** ಉತ್ತಮಕತೆಯಾಗಿದೆ. ಈ ಕತೆಯಲ್ಲಿ ಬರುವ ಚಿನ್ನಮ್ಮ ಮೂಲತಃ ಶ್ರಮಜೀವಿ. ದುಡಿದು ಬದುಕಬೇಕೆನ್ನುವ ಅದಮ್ಯ ಚೈತನ್ಯವನ್ನಿಟ್ಟುಕೊಂಡವಳು. ಹೊಳೆಯ ದಂಡೆಯಲ್ಲಿ ಪಾತ್ರೆ ತಿಕ್ಕುತ್ತಾ ಹೊಳೆಯ ಗುಣವಾಚನಕ್ಕೆ ತೊಡಗಿದ ಆಕೆಯ ಕುಟುಂಬಕ್ಕೆ ಹೊಳೆಯೇ ಆಸರೆಯಾಗಿದೆ. ಆ 'ಶಾಂಭವಿಹೊಳೆ'ಯಲ್ಲಿ ಗಂಡ ಕುದುಪ ಹೊಳೆಗೆ ಗಾಳ ಹಾಕಿ ಮೀನುಗಳನ್ನು ಹಿಡಿದು ಬದುಕಿಗೆ ಅನ್ನ ಸಂಪಾದಿಸಿಕೊಳ್ಳುವವನು. ನೆರೆಯಲ್ಲಿ ತೇಲಿಬರುವ ಸೌಧೆ ಕಟ್ಟಿಗೆ ಕೋಳಿ, ಕುರಿ ಏಣಿದೋಣಿ ರೀಪು ಪಕ್ಕಸುಗಳು ಅವರ ಬದುಕಿಗೆ ನೆಲೆಯಾಗಿದೆ. ಶಾಂಭವಿ ಹೊಳೆಯ ದಂಡೆಗಿದ್ದ ಧಣಿ ವೆಂಕಪ್ಪಯ್ಯನವರ ಮನೆಯಲ್ಲಿ ಕೆಲಸಕ್ಕಿದ್ದ ಈ ಕುಟುಂಬವು ಹೊಳೆಯ ಸೆಳೆತ ಅರ್ಭಟಗಳ ನಡುವೆ ತಣ್ಣಗೆ ಬದುಕು ತಳ್ಳುವವರು. ಧಣಿಗಳ ಮನೆಯಲ್ಲಿಯ ಪಾತ್ರೆಗಳನ್ನು ಗುಡ್ಡೆಹಾಕಿಕೊಂಡು ಪಾತ್ರೆ ಬೆಳಗುತ್ತಿದ್ದಾಗ ಚಿನ್ನಮ್ಮನ ಮಗ ಗುಡ್ನ ಧಣಿಗಳ ಮನೆಯ ಬೆಳ್ಳಿಲೋಟವನ್ನು ತೊಳೆಯುವಾಗ ಆತನ ಕೈಜಾರಿ ಬೆಳ್ಳಿಲೋಟ ಹೊಳೆಯ ಪಾಲಾಗಿ ಬಿಡುತ್ತದೆ. ತಂದೆ ಮಗ ಎಷ್ಟು ಹುಡುಕಿದರೂ ಲೋಟ ಕೈಗೆ ಸಿಗುವುದಿಲ್ಲ. ಧಣಿಗಳ ಉಗ್ರ ಕೋಪಕ್ಕೆ ತುತ್ತಾದ ಚಿನ್ನಮ್ಮ ಮಗ ಬೆಳ್ಳಿ ಲೋಟ ಕಳೆದುದುಕ್ಕಾಗಿ ಆಕೆ ವರ್ಷಾನುಗಟ್ಟಲೆ ಪಡಿಯಿಲ್ಲದೆ ಜೀತಗಾರಳಾಗಿ ದುಡಿದು ತೀರಿಸುತ್ತೇನೆಂದು ಜೀತದ ಬದುಕಿಗೆ ಹೊಂದಿಕೊಳ್ಳುತ್ತಾಳೆ. ತನ್ನ ಮಗನನ್ನು ಬಂಧ ಮುಕ್ತಗೊಳಿಸುತ್ತಾಳೆ. ಇವಳ ದುಡಿಮೆ ಪ್ರತಿಫಲವಿಲ್ಲದೆ ವರ್ಷಪೂರ್ತಿ ನಡೆಯುತ್ತದೆ. ಅಂತಃಕರಣವಿಲ್ಲದೆ ವೆಂಕಪ್ಪಯ್ಯ ಆಕೆಯ ಶ್ರಮದ ಬದುಕಿಗೆ ಪ್ರತಿಫಲ ನೀಡುವುದೇ ಇಲ್ಲ. 'ಬೆಳ್ಳಿಲೋಟ'ದ ನೆಪದಲ್ಲಿ ಅವರನ್ನು ಜೀತದ ಬಲೆಯಲ್ಲಿ ಹಾಕಿಕೊಳ್ಳುತ್ತಾನೆ.

ಮೆಲ್ಲನೆ ಹೊಳೆಯ ನೀರಿನ ನೆರೆ ಕಡಿಮೆಯಾದಂತೆ ನೀರಿನ ಕೆಸರಿನಲ್ಲಿ ಬೆಳ್ಳಿಲೋಟ ಕಣ್ಣಿಗೆ ಕಾಣಿಸುತ್ತದೆ. ಅದನ್ನು ಮನಸಾರೆ ವೀಕ್ಷಿಸಿದ ಚಿನ್ನಮ್ಮ ತನ್ನನ್ನು ಜೀತದಲ್ಲಿಟ್ಟ ಬೆಳ್ಳಿಲೋಟವನ್ನು ನೋಡುತ್ತಿದ್ದಂತೆ ಆಕೆಗೆ ಸಿಟ್ಟು ಒತ್ತರಿಸಿ ಬರುತ್ತದೆ. ''ಇದೇ ಲೋಟವಲ್ಲವೇ ತನ್ನ ಬೆವರಿನ ಬೆಲೆ ಕಳೆದಿದ್ದು. ಕಳ್ಳತನದ ಕಿರೀಟವನ್ನು ತನ್ನ ಮುರುಕಲು ಚಾವಣಿಗೆ ಜೋಡಿಸಿದ್ದು. ಈ ಬೆಳ್ಳಿಲೋಟದಿಂದಾಗಿ ತನ್ನ ಕುಟುಂಬ ಇದುವರೆಗೆ ಉಂಡ ನೋವು. ಅವಮಾನ, ಪಟ್ಟಪಾಡು, ಪರಿತಾಪಗಳೆಲ್ಲಾ ಚಿನ್ನಮ್ಮನ ಚಿತ್ತದಿಂದ ದಿಗ್ಗಿಣ ತೆಗೆದು ಮೇಲೆದ್ದು ಬಂದು ಆಕೆಯ ಯೋಚನಾಶಕ್ತಿ, ವಿವೇಚನಾ ಶಕ್ತಿಯನ್ನೇ ಕ್ಷಣಕಾಲ ಕಸಿದುಕೊಂಡವು. ಒಡಲ ಪಿತ್ತ ಒಂದರೆಕ್ಷಣ ಕೆರಳಿದಂತಾಯಿತು. ಚಿನ್ನಮ್ಮ ಪೂರ್ವಾಭಿಮುಖವಾಗಿ ನಡೆದಳು. ದೂರದಲ್ಲಿದ್ದ ಹೊಳೆಯ ಆಳದ ಮಡುವತ್ತ ಬೆಳ್ಳಿಲೋಟವನ್ನು ಎಸದೇ ಬಿಟ್ಟಳು. ಆಕೆ ಹೊಳೆಯ ನೀರಲ್ಲೊಮ್ಮೆ ಸಂಪೂರ್ಣ ಮುಳುಗಿ ಮತ್ತೆ ಮೇಲೆದ್ದಳು. ನೆರಳಲ್ಲಿದ್ದ ಧಣಿಯವರು ತಾನು ಹೊದ್ದುಕೊಂಡಿದ್ದ ವಲ್ಲಿಯಿಂದ ಮುಖಕ್ಕೆ ಗಾಳಿ ಬೀಸಿಕೊಂಡರು.''[೧೨] ತನ್ನ ದುಡಿತದ ಫಲಕ್ಕೆ ಬೆಳ್ಳಿಲೋಟದಿಂದ ಯಾವುದೇ ಪ್ರತಿಫಲಸಿಗದೆಂದೂ ಧಣಿಗಳು ಮಾಡಿದ ಆರೋಪ ಅಳಿಸಿ ಹಾಕಲಾರದೆಂದು ಬಗೆದು ಶ್ರಮದ ಜೊತೆಗೆ ಬೆಳ್ಳಿಲೋಟವೂ ಅವರಿಗೆ ದಕ್ಕಬಾರದೆಂದು ಹೊಳೆಗೆ ಎಸೆದು ನಿರಾಳವಾಗಿ ಬಿಡುತ್ತಾಳೆ. ಚಿನ್ನಮ್ಮನ ಕುಟುಂಬವು ಶೋಷಣೆಗೆ ಒಳಗಾದ ಪರಿಯನ್ನು ಕಟ್ಟಿಕೊಡುವುದರ ಜೊತೆಗೆ ಆಕೆಯ ಬದುಕಿನ ಬಿಡುಗಡೆಯ ಹೊಸ ನೆಲೆಯನ್ನು ಕತೆ ವಿಶ್ಲೇಷಿಸುತ್ತದೆ.

ಸ್ತ್ರೀವಾದಿ ನೆಲೆಯ ಅನುಭವನಿಷ್ಠ ಕತೆಗಳನ್ನು ಬರೆದಿರುವವರಲ್ಲಿ 'ವೈದೇಹಿ' ಪ್ರಮುಖವಾದ ಕತೆಗಾರ್ತಿ ಅನೇಕ ಕತೆಗಳನ್ನು ಬರೆದಿರುವ ವೈದೇಹಿ ಅವರು ತಮ್ಮ ಕತೆಗಳ ಮೂಲಕ ಚಿತ್ರಿಸಿರುವ ಸ್ತ್ರೀಯರನ್ನು ಕೂಡ ಸ್ತ್ರೀವಾದಿ ನೆಲೆಯ ಹೊಸ ಹುಡುಕಾಟದ ವಿಶ್ಲೇಷಣೆಗೆ ಒಳಪಡಿಸುತ್ತದೆ. ಇವರ ಕತೆಗಳಲ್ಲಿ ಪಿತೃ ವ್ಯವಸ್ಥೆಗೆ ಪ್ರತಿರೋದ ಒಡ್ಡುವ ಕ್ರಮ ತುಂಬ ಕುತೂಹಲಕಾರಿಯಾಗಿರುವಂಥದ್ದು. ಈ ವ್ಯವಸ್ಥೆಯಲ್ಲಿ ಹೆಂಗಸಿನ ಮೇಲೆ ಹೇರುವ ಒತ್ತಡ ಮತ್ತು ಕ್ರೌರ್ಯದ ಸ್ಥೂಲ ಮತ್ತು ಸೂಕ್ಷ್ಮ ಅವತಾರಗಳನ್ನು ವೈದೇಹಿ ಅತ್ಯಂತ ಧ್ವನಿಪೂರ್ಣವಾಗಿ ವರ್ಣಿಸಿದ್ದಾರೆ. ಈ ಪಿತೃ ಪ್ರಧಾನ ವ್ಯವಸ್ಥೆಯ ಅಧಿಕಾರ ಸ್ಥಾನದಲ್ಲಿರುವ ಗಂಡಸರು ಮತ್ತು ಹೆಂಗಸರು ಈ ಕ್ರೌರ್ಯದ ಮುಂದುವರಿಕೆಗೆ ಕಾರಣರಾಗಿದ್ದಾರೆ. ಆದರೆ ಈ ಕ್ರೌರ್ಯದ ಬಲಿಪಶುಗಳು ಮಾತ್ರ ಸ್ತ್ರೀಯರೇ ಹೆಚ್ಚಿರುವಂತದ್ದಾಗಿದೆ.

ಪುರುಷ ಸಮಾಜಕ್ಕೆ ಅನುಕೂಲವಾದ ವ್ಯವಸ್ಥೆಯ ಅಧೀನ ಸ್ತ್ರೀ ಸಮುದಾಯದ ಮೇಲೆ ಎಸಗುವ ಕ್ರೌರ್ಯವನ್ನು ವೈದೇಹಿ ತಲ್ಲಣಗೊಳ್ಳುವಂತೆ ಚಿತ್ರಿಸುತ್ತಾರೆ. ''ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು'' ಈ ಕತೆಯಲ್ಲಿ ಪುಟ್ಟಮ್ಮತ್ತೆಯ ಅಬ್ಬೆಯು ಗಂಡನ ಆಜ್ಞೆಗೆ ಸ್ಪಂದಿಸದೇ ಹೋದಾಗ ಆಕೆಯನ್ನು ಅವಮಾನಗೊಳಿಸಿ, ಘಾಸಿಗೊಳಿಸಿ ಮೂರು ಮಾವಿನ ಮಿಡಿಯಪ್ಪಿದ್ದ ಅಬ್ಬೆಯನ್ನು ಗಂಡ ಬಾವಿಗೆ ಎತ್ತಿಹಾಕಿ ಬಿಡುತ್ತಾನೆ. ''ಅಬ್ಬೆ ಒಂದೇ ಮುಳುಗಿಗೆ ಕಣ್ಣು ಮುಚ್ಚಿತ್ತು.''[೧೩] ಅಸಹಾಯಕತೆ ಪರಾಧೀನತೆಗಳೊಂದಿಗೆ ಬಡತನವೂ ಸೇರಿಬಿಟ್ಟರೆ ಹೆಣ್ಣಿನ ಕಷ್ಟ ಇದ್ದದ್ದೂ ಹೆಚ್ಚಾಗುತ್ತದೆ. ಹದಿ ಹರೆಯದಲ್ಲಿ ಪುಟ್ಟಮ್ಮ ತನ್ನ ಮೈಮೇಲೆ ಬೀಳುವ ಗಂಡಸರಿಂದ ತಪ್ಪಿಸಿಕೊಳ್ಳಲು ಹೋರಾಟ ನಡೆಸಿದರೆ ಅವಳು ವಿಧವೆಯಾದಾಗ ಸಮಸ್ಯೆಗಳು ಇನ್ನೂ ಹೆಚ್ಚಾಗುತ್ತವೆ. ಆಕೆ ಬದುಕಿನುದ್ದಕ್ಕೂ ಅವಮಾನ ಮೂದಲಿಕೆ ಕೊಳಕು ಮಾತು ಮತ್ತು ಮೈತುಂಬ ದುಡಿಮೆಯ ಗಾಣಕ್ಕೆ ಸಿಕ್ಕಿ ನಲುಗಿಹೋಗುತ್ತಾಳೆ. ಬಡತನದ ಬವಣೆಯಿಂದಾಗಿ ಆಕೆಯ ಮೊಮ್ಮಗಳು ಅಬ್ಬೆಯೂ ಕೂಡ ನಾನಾ ಸಂಕಷ್ಟಗಳಿಗೆ ಗುರಿಯಾಗುತ್ತಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಬಡತನವನ್ನೇ ಮುಖ್ಯ ದೌರ್ಬಲ್ಯವೆಂದು ಭಾವಿಸಿಕೊಂಡು ಆಕೆಯ ಬದುಕನ್ನು

ಛಿದ್ರಗೊಳಿಸುವ ಪರಿ ಅಮಾನವೀಯವಾಗಿರುವಂತದ್ದು, ಈ ರೀತಿಯ ಸ್ತ್ರೀವಾದಿ ನೆಲೆಯ ಬದುಕನ್ನು ವೈದೇಹಿ ಅನಾವರಣಗೊಳಿಸುವಂತ ಪರಿಯೂ ಕೂಡ ವಿಶಿಷ್ಟ ಆಲೋಚನೆಗೆ ತೊಡಗಿಸುತ್ತದೆ.

ಈ ಕ್ರೌರ್ಯದ ಮುಖ ಪರಮಾವದಿ ಮುಟ್ಟಿದ ಬಗೆಯನ್ನು 'ಅಕ್ಕು' ಕತೆ ದಾಖಲಿಸುತ್ತದೆ. ಅಕ್ಕು ಬಾಯಿಗೆ ಬಂದಂತೆ ಮಾತನಾಡುತ್ತಾಳೆ ಎಂಬ ಕಾರಣಕ್ಕೆ ಮನೆಯ ಹಿರಿಕನಾದ ವಾಸು ಚಿಕ್ಕಪ್ಪ ಆಕೆಯನ್ನು ದನಕ್ಕೆ ಬಡಿದಂತೆ ಬಡಿದು ಬಿಡುತ್ತಾನೆ. ಅದೇ ಸಂದರ್ಭದಲ್ಲಿ ಸುತ್ತಲಿದ್ದ ಜನರೂ ಕೂಡ ''ಹಾಕ್ ನಾಕ್, ಇನ್ನೂ ಹಾಕು, ಸತ್ರೆ ಸತ್ತ್‌ತ್ ಮರ್ಕುವಮ್ಮ ಯಾರಿಲ್ಲ.''[೧೭] ಎನ್ನುತ್ತಾರೆಯೇ ಹೊರತು ಯಾರೂ ಬಿಡಿಸಿಕೊಳ್ಳಲು ಮುಂದೆ ಬರುವುದಿಲ್ಲ. ಹೊಡೆತ ನಿಲ್ಲುವುದಿಲ್ಲ. ಇದಕ್ಕೆ ಕಾರಣವಾಗಿರುವ ಕ್ರೌರ್ಯ ಬಡತನದಿಂದ ಮತ್ತು ಗಂಡನಿಲ್ಲದಿರುವುದರಿಂದ ಬಂದಿರುವಂತದ್ದು. ಇಲ್ಲಿ ಅಕ್ಕು ಕೂಡ ತನ್ನನ್ನು ಶೋಷಣೆಗೆ ಅವಮಾನಕ್ಕೆ ಒಳಪಡಿಸಿದ ಪುರುಷ ಸಮಾಜಕ್ಕೆ ಪ್ರತಿಭಟನೆ ಸಾರುತ್ತಾಳೆ. ಅರೆಹುಚ್ಚಿಯಂತಿದ್ದ ಆಕೆ ಮರ್ಯಾದಸ್ಥರಂತೆ ಸೋಗು ಹಾಕಿದ ಜನರ ಕೊಳಕನ್ನು ಎತ್ತಿತೋರಿಸುತ್ತಾಳೆ. ತನ್ನನ್ನು ಆಡಿಕೊಂಡ ತಮ್ಮಣ್ಣಯ್ಯನಿಗೆ ಅಕ್ಕು ಇದಿರೇಟುಕೊಡುತ್ತಾಳೆ ''ಏನ್‌ತಮ್ಮಣ್ಣಯ್ಯ ಬಾಲ ಮಡ್ಜ್‌ಕೊಂಡ್ ಆಚೆಗೆ ಹೋಗು. ನಿನ್‌ಕೆಲ್ಸ ಕಾಣ್. ನನ್ ಸುದ್ಧಿಗೆ ಬತ್ಯಾ? ನಿನ್ ಹೆಂಡ್ತಿ ಮೊನ್ನೆ ಯಾರೊಟ್ಟಿಗೆ ಚಾಚ್ಕಂಡ್ ಮನ್ಕಂಡಿದ್ಲೋ ಅಂತೆಳಿ ಹೇಳುದಾ ಈಗ'' ಜಡಗೊಂಡ ರೂಢಿಗತ ಬದುಕಿನ ವಿರುದ್ಧ ಸ್ತ್ರೀ ಪ್ರಜ್ಞೆ ಶೀತಲ ಸಮರ ಹೂಡುತ್ತದೆ. ಅಕ್ಕು ತಾನು ಬದುಕುತ್ತಿರುವ ಸಮಾಜದ ವಿರುದ್ಧ ತನ್ನ ಅಸ್ತಿತ್ವದ ಹುಡುಕಾಟಕ್ಕಾಗಿ ತನ್ನ ಮೇಲೆ ನಡೆಯುವ ಕ್ರೌರ್ಯವನ್ನು ತಣ್ಣನೆಯ ಮಾತುಗಳಲ್ಲಿ ಕತ್ತರಿಸಿ ಹಾಕಿಬಿಡುತ್ತಾಳೆ. ಸ್ತ್ರೀ ಪ್ರಜ್ಞೆ ಎಚ್ಚೆತ್ತು ನಿಂತರೆ ಬದುಕು ಏರುಪೇರಾಗುವ ಲಕ್ಷಣ ಕತೆಯಲ್ಲಿ ಕಾಣಿಸಿಕೊಂಡಿದೆ.

'ಅಮ್ಮಚ್ಚಿಯೆಂಬ ನೆನಪು' ಕತೆಯಲ್ಲಿ ವೈದೇಹಿ ಒಬ್ಬ ತಂದೆಯಿಲ್ಲದ ತಬ್ಬಲಿಯಾದ ಎಳೆಯ ಹುಡುಗಿ ಅಮ್ಮಚ್ಚಿಯನ್ನು ಕುರಿತಾದದ್ದು. ಈ ಹುಡುಗಿ ಬಂಡಾಯದ ಅರಿವನ್ನು ಒಳಗಿಟ್ಟುಕೊಂಡಿರುವವಳು. ಗಟ್ಟಿಯಾದ ಪ್ರತಿಭಟನೆಯ ವ್ಯಕ್ತಿತ್ವವನ್ನು ಹೊಂದಿರುವವಳು. ದಾಯಾದಿಯಾದ ವೆಂಕಪ್ಪಯ್ಯನೊಂದಿಗೆ ಹೋರಾಡುತ್ತಲೇ ಛಲದ ಹೆಣ್ಣಾಗಿ ಅಸ್ತಿತ್ವಕ್ಕಾಗಿ ಹೋರಾಡಿದವಳು. ಈಕೆಯ ಬದುಕಿನ ಮೇಲೆ ಸದಾ ನಿಗಾಯಿಟ್ಟುಕೊಂಡಿದ್ದ ವೆಂಕಪ್ಪಯ್ಯ ಆಕೆಯ ಮೇಲೆ ಸರ್ಪಗಾವಲು ಕಾಯ್ದು ಅನೇಕ ತಕರಾರುಗಳನ್ನು ತಂದೊಡ್ಡುತ್ತಾನೆ. ಈ ವೆಂಕಪ್ಪಯ್ಯನಿಂದ ಆತ್ಯಾಚಾರಕ್ಕೂ ದಮನಕ್ಕೂ ಒಳಗಾದ ಅಮ್ಮಚ್ಚಿ ಈತನನ್ನೇ ಒತ್ತಾಯದಿಂದ ಮದುವೆಯಾಗುತ್ತಾಳೆ. ಈ ಸನ್ನಿವೇಶವನ್ನು ವೈದೇಹಿ ಹೇಳುವ ರೀತಿ ಹೀಗಿದೆ. ಅಮ್ಮಚ್ಚಿಗೂ ವೆಂಕಪ್ಪಯ್ಯನಿಗೂ ಮದುವೆಯಾಯಿತು. ಅಮ್ಮಚ್ಚಿ ತಿರುಪತಿಗೆ ಹೊರಟು ಹೋದಳು. ಜೀವ ಇದ್ರೆ ಮತ್ತೆ ಕಾಣ್‌ತೆ ನಿನ್ನ ಬೇಜಾರುಮಾಡಿಣ್ಣಳೆ.''[೧೮] ಅಮ್ಮಚ್ಚಿಗಿಂತ ಕಿರಿಯಳಾದ ಮತ್ತು ಆಕೆಯ ಅಂತಃಶಕ್ತಿಯನ್ನು ಮೆಚ್ಚುವ ಆಕೆಯ ಗೆಳತಿ ಇಲ್ಲಿ ಅಮ್ಮಚ್ಚಿಯ ಕತೆಯನ್ನು ವಸ್ತುನಿಷ್ಟವಾಗಿ ಹೇಳತೊಡಗಿದ್ದಾಳೆ. ಈ ಕತೆಯಲ್ಲಿ ಪ್ರೌಢವಾದೊಂದು ಕಾಲ್ಪನಿಕತೆಯಿದೆ. ಗಟ್ಟಿಯಾದ ಹಾಸ್ಯ ಪ್ರಜ್ಞೆಯು ಕತೆಯ ಉದ್ದಕ್ಕೂ ಸೇರ್ಪಡೆಯಾಗಿದೆ. ಸ್ತ್ರೀವಾದಿ ನೆಲೆಯ ಧೋರಣೆ ಕತೆಯ ರಚನೆಯಲ್ಲಿ ಕೇಂದ್ರ ಪಾತ್ರದ ನಿರೂಪಣೆಯಲ್ಲಿ ಅಂತರ್ಗತವಾಗಿದೆ. ಸ್ತ್ರೀವಾದಿ ನೆಲೆಯ ಧೋರಣೆಯ ಬುದ್ಧಿಪೂರ್ವಕವಾಗಿ ಸೇರಿಸಲಾಗಿಲ್ಲ. ಸ್ತ್ರೀ ಚೈತನ್ಯದ ಹಿಂದೆ ಅನೇಕ ನಿರ್ಧಾರಗಳು ಹೇಗೆ ಪ್ರಕಟವಾಗುತ್ತವೆಯೆಂಬ ನಿಲುವಿಗೆ ಈ ಕತೆ ಸಾಕ್ಷಿಯಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ತೆಂಕಲಾಯಿನ ಕಡೆಯ ಕೋಟ ಬ್ರಾಹ್ಮಣರು ರೂಢಿಸಿಕೊಂಡಿರುವ ಪ್ರಾದೇಶಿಕ ಕನ್ನಡವನ್ನು ಇಲ್ಲಿ ಬಳಸಿದ್ದಾರೆ.

'ಸುಮ್ಮನಿರಲಾರದ್ದು' ಕತೆಯಲ್ಲಿ ಕೂಡ ವೈದೇಹಿಯವರು ಇಬ್ಬರು ಸ್ತ್ರೀಯರ ಅನನ್ಯ ವ್ಯಕ್ತಿತ್ವಗಳನ್ನು ದಾಖಲಿಸಿದ್ದಾರೆ. ಕತೆಯ ಆರಂಭ ಯಾವುದೋ ಘಟನೆಯ ಬೀಕರತೆಯನ್ನು ಹೇಳುತ್ತದೆ ''ಈಗಲೂ ನಡುರಾತ್ರಿ ಒಮ್ಮೊಮ್ಮೆ ಅದು ನೆನಪಾಯಿತೆಂದರೆ ನರ್ಮದಾ ಬೆಚ್ಚಿ ಬೀಳುತ್ತಾಳೆ. ಸಟಕ್ಕನೆ ಎದ್ದು ಕುಳಿತು ಅಸ್ವಸ್ಥಳಾಗುತ್ತಾಳೆ. ಯಾರೊಡನಾದರೂ ಅದನ್ನು ಹೇಳಿಕೊಳ್ಳಬೇಕು ತಾನು ಕೂಡ ಯಾರೊಡನ''[೧೬] ಎಂದು ತನಗೆ ತಾನೇ ಹೇಳಿಕೊಳ್ಳುವ ನರ್ಮದಾ ಮಧುರ ದಾಂಪತ್ಯದ ಸವಿಯನ್ನುಂಡವಳು. ಈಕೆಯ ಗಂಡ ಮಕ್ಕಳ ಬಳಿಗೆ ಹೋಗಲು ರೈಲು ಹತ್ತಿಸಿ ಮುಟ್ಟಿದ ತಕ್ಷಣ ಟೆಲಿಗ್ರಾಂ ಮಾಡಲು ತಿಳಿಸುತ್ತಿದ್ದಂತೆ ರೈಲು ಹೊರಡತೊಡಗುತ್ತದೆ. ಧುತ್ತನೆ ನರ್ಮದಾ ಕುಳಿತ ಕಂಪಾರ್ಟ್‌ಮೆಂಟಿಗೆ ಬಂದು ಎದುರಿಗೆ ಕುಳಿತ ಹೆಂಗಸನ್ನು ನೋಡಿದಾಗ ಆಕೆಯಲ್ಲಿಯಾವುದೋ ಭಯ, ಮನೆ ಮಾಡಿಕೊಂಡಿರುವುದು ನರ್ಮದಾಳಿಗೆ ಗೋಚರಿಸುತ್ತದೆ. ಆ ಹೆಂಗಸಿನ ಜೊತೆ ಮಾತನಾಡತೊಡಗುತ್ತಾಳೆ. ಆಕೆ ತನ್ನ ದುರಂತದ ಬದುಕಿನ ಕಂತೆಯನ್ನು ನರ್ಮದಾಳ ಮುಂದೆ ಬಿಚ್ಚಿಕೊಳ್ಳುತ್ತಾಳೆ.

ಆ ಹೆಂಗಸು ಕತೆ ಹೇಳತೊಡಗುತ್ತಾಳೆ. ತಾಯಿ ಖಾಯಿಲೆಯಿಂದ ನೊಂದು ಹೋಗಿರುವುದು ಆಕೆಯನ್ನು ಆಸ್ಪತ್ರೆಯಿಂದ ಬಿಡಿಸಿತಂದು ಗಂಡನ ಮನೆಯಲ್ಲಿಟ್ಟುಕೊಳ್ಳುವುದು ಸಾಧ್ಯವಾಗದಿರುವುದು. ಗಂಡನ ಉಪಟಳ ಹಂಗಿನ ಅನ್ನದಲ್ಲಿ ತಾಯಿಯನ್ನಿಡಬಾರದೆಂದು ತಾನು ತೆಗೆದುಕೊಂಡ ನಿರ್ಧಾರದಲ್ಲಿ ಮಕ್ಕಳ ಚಿಂತೆ ಅವಳನ್ನು ಕಾಡಿದ್ದು ನಂತರ ತಾಯಿಯನ್ನು ಬೇರೆಯಿಟ್ಟರೆ ಮಕ್ಕಳ ಮೇಲೆ ಪರಿಣಾಮ ಬೀರಿ ಆ ಮಕ್ಕಳೂ ತನ್ನನ್ನು ಮುಪ್ಪಿನ ಕಾಲದಲ್ಲಿ ಹಾಗೆಯೇ ನೋಡಿಕೊಳ್ಳುತ್ತಾರೆಂಬ ಭಯ ಕಾಡಿದ್ದು, ಕೊನೆಯಲ್ಲಿ ತಮ್ಮ ಮನೆಯ ಬಡತನ, ಗಂಡನ ಉಪಟಳ ತಾಯಿಯ ವಾಸಿಯಾಗದ ಕಾಯಿಲೆ, ಅಸಹಾಯಕತೆ ಹೆಚ್ಚಾಗುತ್ತಾ ಕೊನೆಗೆ ಆ ಹೆಂಗಸು ಜನ್ಮನೀಡಿದ ತಾಯಿಯನ್ನೇ ಕೊಲೆ ಮಾಡಿ ರೈಲಿನಲ್ಲಿ ನರ್ಮದಾಳ ಮುಂದೆ ಕುಳಿತುಕೊಂಡಿದ್ದಾಳೆ. ಮೇಲಿನ ಎಲ್ಲಾ ಕತೆಯನ್ನು ಕೇಳುವ ನರ್ಮದಾ ತಲ್ಲಣಗೊಳ್ಳುತ್ತಾಳೆ. ಯಾವುದೋ ದೂರದ ಊರಿನಲ್ಲಿ ಇಳಿಯಬೇಕೆಂದುಕೊಂಡ ಆಕೆ ದಾರಿಯಲ್ಲೇ ಇಳಿದು ಕಣ್ಮರೆಯಾಗಿಬಿಡುತ್ತಾಳೆ. ನಸುಗತ್ತಲಿರುವಾಗಲೇ ಅಜ್ಞಾತವಾದ ಸ್ಥಳದಲ್ಲಿ ಇಳಿದು ದಡದಡನೆ ಇಳಿದು ಹೋದ ಆ ಹೆಂಗಸಿನ ಬಗ್ಗೆ ತಲ್ಲಣಗೊಂಡು ಯೋಚಿಸುತ್ತಾಳೆ.

ಈ ಕತೆಯಲ್ಲಿ ವೈದೇಹಿಯವರು ಇಬ್ಬರು ಸ್ತ್ರೀಯರ ಬದುಕಿನ ವಿರೋದ ನೆಲೆಗಳನ್ನು ಕತೆಯಾಗಿಸಿದ್ದಾರೆ. ನರ್ಮದಾ ಗಂಡು ಮಕ್ಕಳು ಸಂಸಾರದ ಬಗ್ಗೆ ಸುಂದರ ಕನಸು ಕಂಡವಳು. ಆದರೆ ಪಯಣದಲ್ಲಿ ಜೊತೆಯಾದ ಹೆಂಗಸು ನಾನಾ ಸಂಕಟಗಳಿಗೆ ನೋವುಗಳಿಗೆ ಒಳಗಾಗಿ ಕೊನೆಗೆ ತಾಯಿಯನ್ನೇ ಕೊಲೆಮಾಡಿ ನೆಲೆ ಕಳೆದುಕೊಂಡು ಹೊಸ ದಿಕ್ಕಿಗೆ ಬದುಕು ಹುಡುಕಿಕೊಂಡು ಹೊರಟವಳು. ಸ್ತ್ರೀಯರ ಬದುಕು ನಾನಾ ನೆಲೆಗಳಲ್ಲಿ ಸ್ಥಿತ್ಯಂತರಗೊಳ್ಳುತ್ತಿರುವುದು ಹೊಸ ಶತಮಾನದ ಅಂಚಿನಲ್ಲಿ ಮಹಿಳಾ ಸಬಲೀಕರಣ ಸ್ತ್ರೀ ಶಕ್ತಿಯೋಜನೆಗಳೂ ಇಂದು ನಿಷ್ಕ್ರೀಯಗೊಳ್ಳುವ ಕ್ಷಣಗಳನ್ನು ಇಲ್ಲಿ ಸೆರೆಯಿಡಿದಿದ್ದಾರೆ. ಸ್ತ್ರೀ ಸಮುದಾಯದ ದಮನಿತ ಬದುಕು ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾಗುತ್ತಿರುವುದನ್ನು ವೈದೇಹಿ ಒತ್ತಿ ಹೇಳಿದ್ದಾರೆ.

''ಸೌಗಂಧಿಯ ಸ್ವಗತಗಳು'' ಕತೆ ಸ್ತ್ರೀವಾದಿ ನೆಲೆಯಲ್ಲಿ ಕತೆಯ ನಾಯಕಿ ಸೌಗಂಧಿ ಶಿಕ್ಷಣ ಪಡೆದ, ಹೊಸ ಜಗತ್ತಿನ ಆಳ ತಿಳಿದ ಉದ್ಯೋಗಸ್ಥ ಮಹಿಳೆ. ಸ್ತ್ರೀಯಾದ ಈಕೆಯ ವ್ಯಕ್ತಿ ಸ್ವಾತಂತ್ರ್ಯಕ್ಕೆ ಬೆಲೆಕೊಡದ ಅವಳ ತಂದೆ ತಾಯಿ ಮತ್ತು ಸುತ್ತಮುತ್ತಲಿನವರು ಸೌಗಂಧಿಯ ಬದುಕನ್ನು ನರಕವಾಗಿಸಿದ್ದಾರೆ. ಅವಳ ಮುಂದೆ ವಾಸ್ತವ್ಯ ಹೂಡಲಿರುವ ಬಾಡಿಗೆ ಮನೆಯ ಒಡತಿಗೆ ಗಂಡನಿಲ್ಲವೆಂಬ ಅಂಶ ತಮ್ಮ ಮಗಳ ಸುರಕ್ಷತೆಗೆ ಸಹಾಯ

ಮಾಡುತ್ತದೆಯೆಂಬ ನಿಲುವು ಆಕೆಯ ಸೌಗಂಧಿಯ ತಂದೆಯದು. ಸೌಗಂಧಿ ಯೋಚಿಸುತ್ತಾಳೆ ''ಅವಳಿಗೆ ಗಂಡನಿಲ್ಲದಿರುವುದು ಒಬ್ಬಂಟಿ ಮಗಳು ಅವರ ಮನೆಯಲ್ಲಿ ಇರಬೇಕಾದ ಸಂದರ್ಭದಲ್ಲಿ ಒಂದು ಒಳ್ಳೆಯ ಅಂಶವೆಂತಲೇ ಸೌಂಗಧಿ ಕಕ್ಕಾಬಿಕ್ಕಿಯಾಗಿ ತಂದೆಯನ್ನು ನೋಡಿದಳು. ಕ್ರೌರ್ಯದ ಸ್ವರೂಪ ಕೋರೆದಾಡೆ ಉರುಟುಗಣ್ಣು ಅಂತೆಲ್ಲ ಊಹಿಸಿಕೊಂಡಿದ್ದಳು ಸೌಗಂಧಿ. ಅದರೆ, ತಂದೆ ನೋಡಲು ಎಷ್ಟು ಸಾಧುವಿದ್ದರು.''[೧೭] ತನ್ನ ತಂದೆ ತಾಯಿ ಮನೆಯೊಡತಿ ಎಲ್ಲರೂ ತಮ್ಮ ಅತಿ ಜಾಗರೂಕತೆ ಕಠಿಣ ನೈತಿಕ ನಿಯಮಗಳಿಂದ ತನ್ನ ಸ್ವಾತಂತ್ರ್ಯವನ್ನು ಕದಿಯುತ್ತಿದ್ದಾರೆ. ಇದು ಸೌಗಂಧಿಗೆ ಬ್ರಿಟೀಷರ ನೆನಪು ತರುತ್ತದೆ. ಇದು ಒಂದು ರೀತಿಯ ವಸಾಹತೀಕರಣವೂ ಆಗಿದೆಯೆಂಬ ನಿಲುವೆನ್ನುವಂತೆ ವೈದೇಹಿ ವಿಶ್ಲೇಷಣೆ ಮಾಡಿದ್ದಾರೆ.

ಸೌಗಂಧಿಗೆ ರೂಢಿ ಬದುಕು ಮತ್ತು ಒಳ್ಳೆ ಹುಡುಗಿಯಂತೆ ಪೋಸು ಕೊಡಬೇಕಾದ ಬಲವಂತ ಬದುಕು ಬೇಡವಾಗಿದೆ. ಬದುಕು ಹೇಗಾದರೂ ಬದಲಾಗಬಾರದೇಎಂದು ಹಪಹಪಿಸುವಷ್ಟಾಗಿದೆ ಎಂದುಕೊಳ್ಳುತ್ತಾಳೆ. ಅವಳ ಯೋಜನೆಗಳು ಯಾವ ತುದಿಯನ್ನು ಮುಟ್ಟುತ್ತವೆ ಅಂದರೆ, ತಾನೊಬ್ಬಳೇ ಒಂಟಿಯಾಗಿ ಮನೆಯಲ್ಲಿರುವಾಗ ಸ್ವಾತಂತ್ರ್ಯ ಸುಖಕ್ಕಾಗಿ ಹಂಬಲಿಸುತ್ತಾ ''ಯಾರಾದರೂ ತನ್ನನ್ನು ಬಲಾತ್ಕರಿಸಲಿ, ಹುಲಿಯಂತೆ ಬಂದೆರಗಲಿ, ಅತ್ತಿತ್ತ ಅಲ್ಲಾಡದಂತೆ ಕಟ್ಟಿಹಾಕಿ'' ಎಂದೆಲ್ಲಾ ವಿಚಾರ ಮಾಡುತ್ತಾಳೆ. ಇಲ್ಲಿ ನೀತಿ ಅನೀತಿಯ ಪ್ರಶ್ನೆಗಿಂತ ಜೀವಂತವಾಗಿ ಬದುಕುವುದೇ ಮುಖ್ಯವಾಗುತ್ತದೆ. ಈ ಕತೆಯಲ್ಲಿ ಬರುವ ಈ ಸ್ತ್ರೀಪಾತ್ರಗಳು ಕುಲಟೆಯರಲ್ಲ. ಆದರೆ ದೈನಂದಿನ ಲಯ, ಬಂಧಿತ ಅಸ್ತಿತ್ವಗಳಿಂದ ರೋಸಿಹೋಗಿ ಹೀಗೆ ಹೊಸ ರೀತಿಯ ಯೋಜನೆ ಮಾಡಲು ತೊಡಗುತ್ತಾರೆ. ಜೀವಂತವಾಗಿ ಬದುಕುವುದೇ ನೀತಿಯೆಂಬ ಸತ್ಯ ಕತೆಯಲ್ಲಿ ಹೊಸ ಅರ್ಥಧ್ವನಿಯಾಗಿ ಮೂಡಿದೆ. ಸ್ತ್ರೀ ಸಂವೇದನೆಯ ಉಜ್ವಲ ಉದಾಹರಣೆಯಾಗಿ ಈ ಕತೆ ಮೂಡಿಬಂದಿದೆ.

'ಚಿಪ್ಪು' ಕತೆಯಲ್ಲಿ ವೈದೇಹಿಯವರು ಪುರುಷ ಪ್ರಧಾನ ಸಮಾಜ ರೂಢಿಗೆ ತಂದಿರುವ ಕೆಲವು ಮೌಲ್ಯಗಳ ವಿರುದ್ಧ ಪ್ರಶ್ನೆಗಳನ್ನು ಎತ್ತುತ್ತಾರೆ. ಈ ಕತೆಯಲ್ಲಿ ಬರುವ ಯಶೋಧೆ ತನ್ನೊಳಗಿನ ಮಾತುಗಳನ್ನು ಹೇಳುವ ಸ್ಥೈರ್ಯವನ್ನೇ ಕಳೆದುಕೊಂಡಿದ್ದಾಳೆ. ಆಕೆಯ ಬದುಕು ಅಡಕತ್ತರಿಗೆ ಸಿಕ್ಕಿ ಹಾಕಿಕೊಂಡಂತೆ ನರಳುತ್ತಾಳೆ. ಹಳೆಯ ಪಾಠಗಳು ಮತ್ತು ಹೊಸ ಆಲೋಚನೆಗಳ ಮಧ್ಯೆ ಸಿಕ್ಕಿಹಾಕಿಕೊಂಡು, ಕೊನೆಗೂ ಹಳೆಯ ವಾಸನೆಗಳ ಅಮಲಿಗೆ ಸಿಕ್ಕಿ ಅತ್ಯಂತ ಗೊಂದಲ ಅನುಭವಿಸಿದ್ದಾಳೆ. ಈ ಹಿಂಸೆಯ ಅನುಭವದಿಂದ ಅವಳ ಕಣ್ಣಲ್ಲಿ ನೀರು ಹರಿಯುತ್ತದೆ. ವ್ಯವಸ್ಥೆಯು ಸ್ತ್ರೀ ಪ್ರಜ್ಞೆಯನ್ನು ಹೀಗೆ ವಶಕ್ಕೆ ತೆಗೆದುಕೊಳ್ಳುವುದು ಮೂರ್ತ ಕ್ರೌರ್ಯಕ್ಕಿಂತಲೂ ಹಿಂಸಾತ್ಮಕವಾದ ಸಂಗತಿ. ಇದನ್ನು ವೈದೇಹಿ ಅತ್ಯಂತ ಮಾರ್ಮಿಕವಾಗಿ ತೋರಿಸಿಕೊಟ್ಟಿದ್ದಾರೆ. ಸ್ತ್ರೀವಾದದ ಯಾವ ವಾಚ್ಯ ಹೇಳಿಕೆಗಳ ಸಹಾಯವೂ ಇಲ್ಲದೆ ತೀವ್ರವಾದ ಸ್ತ್ರೀ ಸಂವೇದನೆಯಿಂದಲೇ ವೈದೇಹಿ ನಮ್ಮ ಪ್ರಜ್ಞೆಯನ್ನು ವಿಸ್ತರಿಸುತ್ತಾರೆ. ಈ ಕತೆಯ ನಾಯಕಿಯೂ ಅಷ್ಟೇ ಮದುವೆಯ ಉರುಳಿಗೆ ಸಿಕ್ಕಿ ಹಾಕಿಕೊಳ್ಳಬೇಕಾದಾಗ ಅಸ್ತಿತ್ವವನ್ನೆ ಬೆಂಕಿ ಮಾಡಿಕೊಂಡು ಆಲೋಚಿಸುತ್ತಾಳೆ. ''ಈ ಮದುವೆ, ಆರತಕ್ಷತೆ, ಇಸ್ಸಿ ಆ ಶಬ್ದವೇ ಅಸಹ್ಯವೆನಿಸುತ್ತದೆ. ಇಷ್ಟಕ್ಕೂ ಮದುವೆ ನಿಜಕ್ಕೂ ತನಗೆ ಬೇಕೆ''[೧೪] ಈ ಸಂಪ್ರದಾಯ ಮದುವೆಗಳ ಆಚೆ ಸ್ತ್ರೀ ಚೈತನ್ಯ ಬದುಕು ಸ್ವಾತಂತ್ರ್ಯ ಸ್ವಾವಲಂಬಿಯಾಗಿ ಅರಳಬೇಕೆಂದು ಬಯಸುತ್ತಾಳೆ. ಸ್ತ್ರೀವಾದಿ ನೆಲೆಯ ಹೊಸ ಆಲೋಚನಾಕ್ರಮವನ್ನು ವೈದೇಹಿ ಕತೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಕತೆಯ ನಾಯಕಿಯಾದ ಯಶೋಧೆ ತನ್ನ ಮನೆಯವರಿಂದ ಒಳ್ಳೆಯ ಹುಡುಗಿಯೆಂದು ಹೊಗಳಲ್ಪಟ್ಟಾಗ ಈ ಯಶೋಧೆ ಆಲೋಚಿಸುತ್ತಾಳೆ. ''ಈ ಹೊಗಳಿಕೆ ಬೇಡ, ಅದು ತನ್ನದಲ್ಲ. ಯಾಕೆ ಹೀಗೆ

ಹೊಗಳಿ ನನ್ನ ನಾಲಗೆಯ ಬಲವನ್ನು ಕಳೆಯಿಸುತ್ತೀ ಎನ್ನಲು ಪ್ರಯತ್ನಿಸಿದವಳು ಆದರೆ ಉಸಿರಿರುವುದಿಲ್ಲ'' ದ್ವಂದ್ವಗಳ ಮದ್ಯೆ ಸಿಕ್ಕಿ ಯಶೋಧೆ ಆಲೋಚಿಸುತ್ತಾಳೆ. ''ಅಜ್ಜಿ, ಅಮ್ಮ, ಅಪ್ಪ ನೆರೆಹೊರೆಯವರು ತಾನು ಹುಟ್ಟುವ ಮುಂಚೆಯೇ ಸೃಷ್ಟಿಸಿ ಇಟ್ಟ ಆ ಹಳೆಯ ನಾರುವ ಬೋಳು ಬೇಲಿಯ ಒಳಗೆ ತನ್ನ ನಾಲಿಗೆ ಬಂಧಿತವಾಗಬೇಕೇ? ಈ ಕತೆಯಲ್ಲಿ ಬರುವ ರಂಗಜ್ಜಿ ಯಶೋಧಗೆ ಇಡೀ ಸನಾತನ ಪರಂಪರೆಯ ಪ್ರತೀಕವಾಗಿ ಕಾಣಿಸುತ್ತಾಳೆ. ಅಜ್ಜಿ ಸತ್ತಾದರೂ ಹೋಗಬಾರದೆಂದು ಚಡಪಡಿಸುತ್ತಾಳೆ. ತನ್ನತನ ಸರಿಹೋಗುವುದನ್ನು ನಿಸ್ಸಾಹಾಯಕರಾಗಿ ನೋಡುತ್ತಾ ನಿಲ್ಲುವ ಸ್ತ್ರೀ ಪಾತ್ರಗಳನ್ನು ತುಂಬ ಹೃದಯಸ್ಪರ್ಶಿಯಾಗಿ ವೈದೇಹಿ ಕಥನವಾಗಿಸಿದ್ದಾರೆ.

ಸ್ತ್ರೀ ಅನುಭವನಿಷ್ಠ ಕಥನವನ್ನು ಮನೋಜ್ಞವಾಗಿ ಚಿತ್ರಿಸಿರುವ ವೈದೇಹಿಯವರು ಭಾಷೆಯ ಬಳಕೆ ಅನ್ನುವುದು ನಿರೂಪಣೆಯ ಕ್ರಿಯೆಯಾಗಿರದೆ ಅದು ತನ್ನೊಳಗೆ ಶೋಧಿಸುವ ನಿಕಷ, ಅಗ್ನಿದಿವ್ಯವಾಗಿದೆ. ಅಭಿವ್ಯಕ್ತಿ ಇಲ್ಲಿ ಜೀವನ್ಮರಣದ ಪ್ರಶ್ನೆಯೇನೋ ಎಂಬಷ್ಟು ತೀವ್ರವಾಗಿರುತ್ತದೆ. ಸ್ವಗತ ಪ್ರಕಾಶನಗಳನ್ನು ಅವರು ದುಡಿಸಿಕೊಳ್ಳುವ ರೀತಿ, ಕುಂದಾಪುರ ಕಡೆಯ ಬ್ರಾಹ್ಮಣರು ಆಡುವ ಪ್ರಾದೇಶಿಕ ಆಡು ಮಾತುಗಳಿಂದ ಉಂಟಾಗಿರುವ ಸತ್ವ, ಭಾಷೆಯ ಧ್ವನಿ ಶಕ್ತಿಯನ್ನು ಅವರು ದುಡಿಸಿಕೊಂಡಿರುವ ರೀತಿ ಇವು ಸಣ್ಣ ಕತೆಯ ಮಾಧ್ಯಮದ ಮೇಲೆ ಅವರಿಗಿರುವ ಹಿಡಿತವನ್ನು ಸಾಬೀತುಪಡಿಸುತ್ತದೆ. ವೈದೇಹಿಯವರು ಬಳಸುವ ಉಪಮೆಗಳು ಪದಾರ್ಥಗಳಿಗೆ ಜೀವ ಗುಣವನ್ನು ಮನಸ್ಸಿಗೆ ಪದಾರ್ಥ ಗುಣವನ್ನು ಆವಾಹಿಸುವ ಸಾಮರ್ಥ್ಯ ಪಡೆದಿದೆ. ಭಾಷೆ ಅನ್ನುವುದು ನಿಸ್ಸಂದೇಹವಾಗಿ ವೈದೇಹಿಯವರ ಕಥನ ಶಕ್ತಿಯ ಮೂಲದ್ರವ್ಯವಾಗಿದೆ.

ಆಧುನಿಕ ಕನ್ನಡ ಕಥಾ ಸಾಹಿತ್ಯದ ಸಂದರ್ಭದಲ್ಲಿ ಮಹತ್ವದ ಕತೆಗಾರ್ತಿಯಾಗಿರುವ ನೇಮಿಚಂದ್ರರ ಸ್ತ್ರೀವಾದಿ ನೆಲೆಯ ಆಶೋತ್ತರಗಳ ಧ್ಯಾನವಾಗಿ ಅವರ ಕತೆಗಳು ನಮ್ಮನ್ನು ಚಿಂತನೆಗೆ ಒಳಪಡಿಸುತ್ತವೆ. ಪುರುಷ ಮತ್ತು ಸ್ತ್ರೀಯರ ನಡುವಿನ ಗೋಡೆಗಳು ಕರಗಿ ಅವರಿಬ್ಬರ ನಡುವೆ ಪ್ರಬುದ್ಧವಾದಂತಹ ಸಮಾನ ಮನಸ್ಸುಗಳ ನಿಲುವು ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ '**ಮತ್ತೆ ಬರೆದ ಕವನಗಳು**' ಕತೆಯಲ್ಲಿ ನಿರೂಪಕಿಯಾಗಿ ಸ್ತ್ರೀನೆಲೆಯ ಸ್ವಾತಂತ್ರ್ಯದ ಮುಖವನ್ನು ಅನಾವರಣಗೊಳಿಸಿದ್ದಾರೆ. ಕತೆಯ ಶೈಲಿ ದಿನಚರಿಯ ಮಾದರಿಯಲ್ಲಿ ಬೆಳೆಯುತ್ತಾ ಸಾಗುತ್ತದೆ. ಕತೆಗಾರ್ತಿ ಸಂಪ್ರದಾಯದ ಕುಟುಂಬದಲ್ಲಿ ಬೆಳೆದು ಬಂದ ಬಗೆ ತಂದೆಯ ಶಾಸನಬದ್ಧ ಮನಸ್ಸು, ಜೊತೆಗೆ ಈ ಎಲ್ಲಾ ಬದ್ಧತೆಗಳನ್ನು ಮೀರಿ ಆಧುನಿಕ ಶಿಕ್ಷಣ ಪಡೆದ ನಿರೂಪಕಿ ದೊಡ್ಡ ಕಂಪನಿ ಸೇರಿ ಸಂಶೋಧನೆ ಮಾಡಿ ಪರಿಣತೆಯಾಗಿ, ಶ್ರೀನಗರದಲ್ಲಿ ನಡೆಯುವ ಸಮ್ಮೇಳನಕ್ಕೆ ಪ್ರಬಂಧ ಮಂಡಿಸಲು ಬರುತ್ತಾಳೆ. ಜಮ್ಮು-ಕಾಶ್ಮೀರದ ಜೀವನ ಶೈಲಿಯ ವಿವರಗಳ ಜೊತೆಗೆ ಆಕೆಯ ಹಳೆಯ ಗೆಳೆಯ 'ಅಜಯ್'ನ ಪರಿಚಯವೂ ಆಗುತ್ತದೆ. ಹಿಂದೆ ಆತನೊಂದಿಗೆ ಕಳೆದ ಕ್ಷಣಗಳು, ಶ್ರೀನಗರಕ್ಕೆ ಬಂದ ಕ್ಷಣಗಳು ಜೊತೆಗೆ ಹಿಂದೆ 'ಕಿರಣ'ನೊಂದಿಗೆ ಮದುವೆಯಾದ ಅನುಭವಗಳನ್ನು ದಾಖಲಿಸುತ್ತಾಳೆ. ನಿರೂಪಕಿಗೆ ಸ್ತ್ರೀವಾದ, ಸ್ತ್ರೀತ್ವಗಳ ಪದಗಳು ಕೂಡ ಗೊಂದಲವೆನಿಸುತ್ತವೆ. ಆಕೆಯ ಸ್ತ್ರೀವಾದಿ ನಿಲುವಿನಲ್ಲಿ ಕಿರಣ್‌ಗಿಂತಲೂ ಅಜಯ್ ಭಿನ್ನವಾಗಿ ಕಾಣುತ್ತಾನೆ. ಶ್ರೀನಗರದ ಒಂದೇ ಕೋಣೆಯಲ್ಲಿ ಅಜಯ್‌ನೊಂದಿಗೆ ಕಳೆದರೂ ಆತ ಆಕೆಯನ್ನು ಗೌರವದಿಂದ ಕಾಣುತ್ತಾನೆ. ಆಕೆ ಬರೆಯುತ್ತಿದ್ದ ಕವಿತೆಗಳ ಬಗ್ಗೆ ಹೊಗಳುತ್ತಾನೆ. ಮತ್ತೆ ಕವಿತೆಗಳನ್ನು ಬರೆಯಲು ಒತ್ತಾಯಿಸುತ್ತಾನೆ.

ಕಿರಣ್‌ನೊಂದಿಗೆ ಸಂಬಂಧ ಕಡಿದುಕೊಂಡ ಕತೆಗಾರ್ತಿಗೆ ಬದುಕು ಹೊಸ ಹುಡುಕಾಟದ ನೆಲೆಯಾಗಿ ಕಾಣುತ್ತದೆ. ''ಸ್ತ್ರೀತ್ವ ನನಗಿನ್ನೂ ಸ್ಪಷ್ಟವಾಗದ ಗೊಂದಲದ ಪದ ಆದರೆ ಒಳಗೆಲ್ಲೋ ಅಪ್ಪನ ಅಂಕುಶದಡಿಯಲ್ಲಿ ಅದುಮಿಟ್ಟ

ನನ್ನ ಹೆಣ್ಣುತನ ಮುಲುಕುತ್ತಿತ್ತು. ಅಮ್ಮನ ಅರಿಸಿನ ತುಂಬಿದ ಕೆನ್ನೆಗುಳಿಯಲ್ಲಿ ಕಾಣೆಯಾದ ಹೆಣ್ತನದ ಅವಶೇಷಗಳಿತ್ತು. ವರ್ಷ ವರ್ಷ ಬಾಣಂತನದ ನಡುವೆಯೂ ಹಣ್ಣಾಗದ ಅಕ್ಕಂದಿರ ಬದುಕಿನ ನೀಲಿ ನಕಾಶೆ ಹರಡಿತ್ತು."[೧೯] ಸ್ತ್ರೀ ಬದುಕಿನ ಸ್ಥಿತ್ಯಂತರಗಳನ್ನು ವಿವರಿಸುತ್ತಲೇ ಹೊಸ ನೆಲೆಯ ಹುಡುಕಾಟವನ್ನು ವಿವರಿಸುತ್ತಾರೆ. ತಾವು ಸ್ವಾತಂತ್ರ್ಯ ಹಕ್ಕಿಯಾಗಿ ಬೆಳೆದದ್ದು, ಮನಸ್ಸು ನವಿಲಂತೆ ಕುಣಿದು ಬದುಕಿನ ಅನನ್ಯ ಸಾಧ್ಯತೆಗಳ ಕಡೆ ಚಾಚಿಕೊಂಡಿದ್ದನ್ನು ಹೇಳುತ್ತಾರೆ.

ಇಬ್ಬರೂ ಶ್ರೀನಗರದಿಂದಾಚೆ ಬರುತ್ತಾರೆ ಅಲ್ಲಿ ಹರಿಯುತ್ತಿದ್ದ ಝೀಲಮ್ ನದಿಯ ಸುಂದರ ಪರಿಸರ ನಿರೂಪಕಿಯ ಮನಸ್ಸು ಅರಳಿಸುತ್ತದೆ. ಆಕೆಯ ಜೊತೆಗಾರ ಅಜಯ್‌ನ ಪ್ರಬುದ್ಧ ಮನಸ್ಸು ಆಕೆಯೊಂದಿಗೆ ನಡೆದುಕೊಳ್ಳುವ ರೀತಿ ಗಂಡು ಹೆಣ್ಣಿನ ನಡುವಿನ ಮಧ್ಯೆ ನಿಂತಿರುವ ಗೋಡೆ ಒಡೆದು ಸಮಾನಸ್ತರದ ಬದುಕು ಇಲ್ಲಿ ಅರಳಿದೆ. ಶ್ರೀನಗರದಿಂದ ಬರುವಾಗ ಅಜಯ್ ಮತ್ತೆ ಬರೆಯುತ್ತಿರಿಯೆಂಬ ಮಾತು ಆಕೆ ನಿಲ್ಲಿಸಿದ ಕವಿತೆಗಳಿಗೆ ಹೊಸ ಸ್ಫೂರ್ತಿಯ ವಿಶ್ಲೇಷಣೆಯ ಆರಂಭವೂ ಆಗಿದೆ.

ಈ ಕತೆಯ ಮೂಲಕ ನೇಮಿಚಂದ್ರರು ಇಂದಿನ ಆಧುನಿಕ ಶಿಕ್ಷಣದ ಸಂದರ್ಭದಲ್ಲಿ ಸ್ತ್ರೀಯರು ಸಮಾಜದ ಮುಖ್ಯವಾಹಿನಿಯಲ್ಲಿ ಪಾಲ್ಗೊಳ್ಳುವುದರ ಜೊತೆಗೆ ಸ್ತ್ರೀವಾದಿ ಚಿಂತನೆಯ ಆಚೆಗೆ ಮಹಿಳಾ ಬದುಕು ಚಾಚಿಕೊಂಡಿರುವುದನ್ನು ತಿಳಿಸಲಾಗಿದೆ. ಸಂಸ್ಕೃತಿ ವಿಶ್ಲೇಷಣೆಯ ಸಂದರ್ಭದಲ್ಲಿ ಸ್ತ್ರೀವಾದಿ ನೆಲೆಯ ಬದುಕು ಬಹುಮುಖಿ ಚಿಂತನೆಗೆ ಒಳಗಾಗಿರುವುದನ್ನು ಕತೆ ಸಾಬೀತುಪಡಿಸುತ್ತದೆ.

"ಬದುಕು ನಿನ್ನಲ್ಲೆಂಥಾ ಮುನಿಸು" ಕತೆಯಲ್ಲಿ ನೇಮಿಚಂದ್ರರು 'ಶಶಿ' ಯೆಂಬ ಮಹಿಳೆಯ ಬದುಕಿನ ನೋವು ನಲಿವುಗಳ ಬಗ್ಗೆ ಬರೆಯುತ್ತಾರೆ. ಶಶಿಗೆ ಎದೆಯಲ್ಲಿ ಕ್ಯಾನ್ಸರ್ ಗುಟ್ಟಾಗಿ ಬೆಳೆದು ಹಿಂಸಿಸಲು ತೊಡಗುತ್ತದೆ. ಗಂಡ ರಮೇಶನಿಗೆ ಬ್ಯಾಂಕೊಂದರಲ್ಲಿ ಪುಟ್ಟ ನೌಕರಿ ಇಬ್ಬರ ಮಧುರ ಧಾಂಪತ್ಯದ ಫಲವಾಗಿ ಹುಟ್ಟಿದ ಮಗ ಮಧು ರಮೇಶನಿಗೆ ಬರುತ್ತಿದ್ದ ಚಿಕ್ಕ ಸಂಬಳದಲ್ಲಿ ಶಶಿ ಸಂಸಾರವನ್ನು ತೂಗಿಸುತ್ತಿದ್ದಳು. ಇದ್ದಕ್ಕಿದ್ದಂತೆ ಆಕೆಗೆ ಅಂಟಿದ ಕ್ಯಾನ್ಸರ್‌ಗೆ ಚಿಕಿತ್ಸೆ ನಡೆದು ಹೋದಾಗ ಆಕೆಗೆ ಬದುಕಿನ ಬಗ್ಗೆ ಭರವಸೆ ಕುಂದತೊಡಗುತ್ತದೆ. ಚಿಕಿತ್ಸೆಗಾಗಿ ಬರುವ ಸಂಬಳ ಕಡಿಮೆಯಾಗಿ ಸಾಲಸೂಲ ಮಾಡಿಕೊಂಡು ಬೇರೊಂದು ಕಂಪನಿಯಲ್ಲಿ ರಾತ್ರಿ ಹೆಚ್ಚುವರಿ ಕೆಲಸ ಮಾಡುತ್ತಾ ಮಗ ಮಡದಿಯನ್ನು ಸಾಕತೊಡಗುತ್ತಾನೆ. ಶಶಿ ಬದುಕಿನ ಬಗ್ಗೆ ನಿರಾಶೆಯಾಗಿ ಸಾವು ಕಾಡತೊಡಗಿದಂತೆ ಗಂಡ ತನ್ನಿಂದ ದೂರವಾಗುತ್ತಿದ್ದಾನೆಂಬ ನೋವು ಕಾಡಿ ಆತನೊಂದಿಗೆ ಜಗಳ ಕಾಯುತ್ತಾಳೆ. ರಮೇಶ ತನ್ನ ಅವಿರತ ಶ್ರಮದ ಬಗ್ಗೆ ನೊಂದು ನುಡಿಯುತ್ತಾನೆ. "ಈ ಕ್ಯಾನ್ಸರ್‌ನಿಂದ ನಾ ಸಾಯುತ್ತೇನೋ ಇಲ್ಲವೋ, ಈ ಚಿಂತೆ ಹತಾಶೆ ನನ್ನನ್ನು ಮುಗಿಸಬಲ್ಲವು. ಇನ್ನೂ ಮೈಲಿ ದೂರವಿರುವ ಸಾವನ್ನು ಬಾಗಿಲ ಬಳಿಗೆ, ಅಗುಳಿ ತೆಗೆದು ಹೊಸಿಲ ಒಳಗೆ ಎಳೆತರುತ್ತಿರುವೆನೆ? ತನ್ನಲ್ಲೇ ಯೋಚಿಸಿದಳು. ಬಹಳ ಹೊತ್ತಿನ ನಂತರ ಊಟಮಾಡು ಬಾ ಎಂದು ಮೇಲೆದ್ದಳು. ಅವನ ಕಣ್ಣಲ್ಲಿನ್ನೂ ತೇವವಿತ್ತು. ಏಳುವರ್ಷದ ದಾಂಪತ್ಯದಲ್ಲೂ ಮುಚ್ಚಿಟ್ಟ ಹಸಿತನವಿತ್ತು."[೨೦] ಗಂಡನ ಶ್ರಮದ ದುಡಿಮೆಗೆ ನನ್ನಿಂದ ಸಾಂತ್ವನವಿಲ್ಲ, ನೆಮ್ಮದಿಯಿಲ್ಲ. ನಾನು ಎಂದೋ ಬರುವ ಸಾವಿಗಾಗಿ ಹೆದರಬಾರದೆಂದು ಬದುಕಿನಲ್ಲಿ ಹೊಸ ನಿರ್ಧಾರವನ್ನು ತೆಗೆದುಕೊಂಡು ಜೀವವಿರುವವರೆಗೆ ಜೀವ ಚೈತನ್ಯದಿಂದ ಬದುಕಬೇಕೆಂದು ಹಾಸಿಗೆಯಿಂದೆದ್ದು ಗಂಡಸಿನ ಹೆಗಲಿಗೆ ಹೆಗಲುಕೊಟ್ಟ ಬದುಕುವ ಛಾತಿ ಪ್ರಕಟಿಸುತ್ತಾಳೆ. ಗೆಳತಿ ರೇಖಾಳ ಮನೆಗೆ ಹೋಗಿ ಮಾಹಿತಿ ಸಂಗ್ರಹಿಸಿ ಕ್ಯಾನ್ಸರ್ ಬಗ್ಗೆ ತನ್ನ ಸ್ವಂತ ನೋವಿನ

ಅನುಭವದೊಂದಿಗೆ ಲೇಖನ ಬರೆದು ಪತ್ರಿಕೆ ಕಳುಹಿಸುತ್ತಾಳೆ. ಆ ಲೇಖನ ಪ್ರಕಟವಾಗಿ ಸೂಕ್ತ ಸಂಭಾವನೆ ಬಂದಾಗ ಗಂಡನ ಹೆಚ್ಚುವರಿ ದುಡಿಮೆಗೆ ಬೇಡವೆನ್ನುತ್ತಾಳೆ. 'ಶಶಿ'ಯ ಈ ಎಲ್ಲಾ ಬದಲಾವಣೆಗೆ ಚೈತನ್ಯಕ್ಕೆ ರಮೇಶ ಸಂತಸಗೊಳ್ಳುತ್ತಾನೆ. ಆಕೆಯನ್ನು ಬಿಗಿದಪ್ಪಿ ಮಧುರ ದಾಂಪತ್ಯದ ಸುಖ ಬಯಸುತ್ತಾನೆ.

ಈ ಕತೆಯಲ್ಲಿ ನೇಮಿಚಂದ್ರರು ಸ್ತ್ರೀ ಚೈತ್ಯದ ಅನನ್ಯತೆಯ ಬಗ್ಗೆ ಅಗಾಧತೆ ತೋರಿಸುತ್ತಾ ಶಶಿಯೆಂಬ ಮಹಿಳೆ ಬದುಕಿನಲ್ಲಿ ಎಲ್ಲಾ ನೋವಿನ ಮಧ್ಯ ಜೀವ ಚೈತನ್ಯದಿಂದ ಬದುಕುವ ಛಲದ ಹೆಣ್ಣಾಗುತ್ತಾಳೆಂದು. ಆಕೆ ಉಡಿಯಲ್ಲಿ ಸಾವನ್ನು ಕಟ್ಟಿಕೊಂಡರೂ ಸಾವಿನಾಚೆಗೆ ಬದುಕಿದೆಯೆಂದು ಬದುಕಿನ ಬಗ್ಗೆ ಮುನಿಸು ಸಲ್ಲದೆಂದು ಶಶಿ ಬಾಳಿ ತೋರಿಸುತ್ತಾಳೆ. ಪುರುಷನಂತೆ ಮಹಿಳೆ ಕೂಡ ದುಡಿದು ಬದುಕು ಕಟ್ಟಿಕೊಳ್ಳಬಲ್ಲವಳೆಂದು ನೇಮಿಚಂದ್ರರು 'ಶಶಿ'ಯ ಪಾತ್ರದ ಮೂಲಕ ಅಭಿವ್ಯಕ್ತಿಸಿದ್ದಾರೆ.

ಪುರುಷನಿಗಿಂತ ಮಹಿಳೆ ಕಡಿಮೆಯಲ್ಲ ಇಂದು ಎಲ್ಲಾ ಸೇವಾವಲಯಗಳಲ್ಲಿ ಆಕೆ ತನ್ನ ಪ್ರತಿಭೆಯನ್ನು ತೋರಿಸುತ್ತಿದ್ದಾಳೆ. ಮಹಿಳಾ ಸಬಲೀಕರಣದ ಈ ಹೊತ್ತಿನಲ್ಲಿ ಎಲ್ಲೆಡೆ ಸ್ತ್ರೀ ಚೈತನ್ಯದ ಧ್ವನಿ ಪ್ರತಿಧ್ವನಿಸುತ್ತಿದೆ. ನೇಮಿಚಂದ್ರರ '**ಏನೊಂದು ಆಗದವರು**' ಕತೆಯ ನಾಯಕಿ 'ಶಶಿ'ಕೂಡ ಬಿ.ಇ.ಶಿಕ್ಷಣ ಮುಗಿಸಿ ದೊಡ್ಡ ಕಂಪನಿಯೊಂದರಲ್ಲಿ ದೊಡ್ಡ ಹುದ್ದೆಯಲ್ಲಿರುವವಳು. ಬದುಕಿನಲ್ಲಿ ಏನಾದರೂ ಸಾಧಿಸಿ ತೋರಿಸಬೇಕೆಂಬ ಛಲ ಹೊಂದಿರುವ ಹೆಣ್ಣು ತಾನು ಕಾಲೇಜು ದಿನಗಳಲ್ಲಿ ಪ್ರೀತಿಸಿದ ಸುಸಂಸ್ಕೃತ ವ್ಯಕ್ತಿಯಾದ ರವಿಗೆ ಶಶಿಯನ್ನು ಕೊಟ್ಟು ಮದುವೆ ಮಾಡಬೇಕೆಂದು ಶಶಿಯ ತಂದೆ ತಾಯಿಗಳು ನಿರ್ಧರಿಸಿದ್ದಾರೆ. ರವಿ ಸಾಮಾನ್ಯ ಕಾರ್ಮಿಕನಾಗಿ ಕೆಲಸಮಾಡುತ್ತಿದ್ದ ಕಾರ್ಖಾನೆಗೆ ಶಶಿ ಅಧಿಕಾರಿಯಾಗಿ ಬಂದಾಗ, ಆತನ ಸ್ಥಾನ ಗೊತ್ತಾಗುತ್ತದೆ. ಆತನನ್ನು ಹೇಗಾದರೂ ಸಂಜೆ ಕಾಲೇಜಿನಲ್ಲಿ ಬಿ. ಇ. ಮಾಡಲು ಒತ್ತಾಯಿಸುತ್ತಾಳೆ. ಆದರೆ ರವಿಗೆ ಅದೆಲ್ಲಾ ಬೇಕಿಲ್ಲ. ಹಾಸಿಗೆಯಿದ್ದಷ್ಟು ಕಾಲು ಚಾಚುವ ಸ್ವಭಾವ. ಆತ ಮೊದಲು ಕಂಪ್ಯೂಟರ್ ಮೇಲೆ ಕೈಯಾಡಿಸುತ್ತಿದ್ದಾಗ ಅದೊಂದು ದೊಡ್ಡ ಸಾಧನೆ ಮಾಡಿದ ವ್ಯಕ್ತಿಯೆಂದು ಭಾವಿಸಿಕೊಂಡಿರುತ್ತಾಳೆ. ಆದರೆ ತಾನು ಕೆಲಸಕ್ಕೆ ಸೇರಿದ ಮೇಲೆ ಗೊತ್ತಾಗುತ್ತದೆ ಆತ ಸಾಮಾನ್ಯ ಟೈಪಿಸ್ಟ್‌ನಂತೆ ಕಂಪ್ಯೂಟರ್ ಬಳಸಿದ್ದಾನೆಂದು. ಶಶಿಯ ಸಾಧನೆ ಗುರಿಯ ಮುಂದೆ ರವಿ ಏನೂ ಸಾಧಿಸಿದ ವ್ಯಕ್ತಿಯಾಗಿ ಕಾಣುತ್ತಾನೆ. ಕೊನೆಗೆ ಶಶಿಗೆ ಕಾರ್ಖಾನೆಯ ಆಡಳಿತ ಮಂಡಳಿ ಉನ್ನತ ವ್ಯಾಸಂಗಕ್ಕೆ ಜರ್ಮನಿಗೆ ಕಳುಹಿಸಲು ತೀರ್ಮಾನಿಸುತ್ತದೆ. ಬದುಕಿನಲ್ಲಿ ಏನಾದರೂ ಸಾಧನೆ ಮಾಡಬೇಕೆಂದು 'ಶಶಿ' ಸಂತಸಗೊಳ್ಳುತ್ತಾಳೆ. ರವಿ ಇದೆಲ್ಲಾ ಏಕೆ ಬೇಕು ಸರಳವಾಗಿ ಮದುವೆಯಾಗಿ ಇದ್ದದ್ದರಲ್ಲೇ ಸುಖವಾಗಿ ಬದುಕೋಣವೆಂದು ಹೇಳುತ್ತಾನೆ. ಆತನ ಮಾತುಗಳಿಗೆ ಪ್ರತಿಯಾಡಿದ ಆಕೆ ಆತನನ್ನು ಏನೂ ಸಾಧಿಸಲಾಗದ ಆತನನ್ನು ಕೈಹಿಡಿಯಲು ನಿರಾಕರಿಸಿ ಬಿಡುತ್ತಾಳೆ. ಕೊನೆಗೆ ಹೇಳುತ್ತಾಳೆ "ರವಿ ನೀ ನಿಂತಲ್ಲೆ ನಿಂತೆ, ಮಡುವಾದೆ, ಕೆಸರಾದೆ, ನಾನು ಹರಿದು ಹೋದೆ ರಭಸವಾಗಿ ಬೋರ್ಗರೆದು, ತೆರೆಯಾಗಿ, ತೊರೆಯಾಗಿ, ಝರಿಯಾಗಿ ಕ್ಷಣನಿಲ್ಲದ ಬದುಕಿನ ಗತಿಯಾಗಿ ನಾನು ಹೇಗೆ ಬಿಡಿಸಿ ಹೇಳಲಿ, ಇದಕ್ಕೂ ಸ್ಪಷ್ಟವಾಗಿ?.."[೨೦]

ಏನೊಂದು ಸಾಧಿಸದ ರವಿಯನ್ನು ಆಕೆ ಮದುವೆಯಾಗಲು ನಿರಾಕರಿಸುತ್ತಾಳೆ. ತಾನು ವಿದೇಶಕ್ಕೆ ಹೋಗಿ ಸಾಧನೆ ಮಾಡಿ ಭಾನೆತ್ತರ ಬೆಳೆಯಬೇಕೆಂಬ ಹಂಬಲ ಪ್ರಕಟಿಸುತ್ತಾಳೆ. ಈ ಶಶಿ ಸ್ತ್ರೀ ಚೈತನ್ಯದ ಚಿಲುಮೆಯಾಗಿ ನಿಲ್ಲುತ್ತಾಳೆ. ಅನಂತ ಸಾಧ್ಯತೆಗಳ ಸಾಧನೆಯ ಪ್ರತಿನಿಧಿಯಾಗಿ ಕಾಣುತ್ತಾಳೆ.

'ಕೆಂಪು ಕಲಕಿದ ನೀರು' ಕತೆಯಲ್ಲಿ ಬರುವ 'ಶೀಲ'ಯೆಂಬ ಸ್ತ್ರೀಪಾತ್ರ ಅನೇಕ ತೊಡಕುಗಳ ನಡುವೆ ಬದುಕು ಬದಲಿಸಬೇಕೆಂಬ ನಿರ್ಧಾರದಿಂದ ಉದ್ಯೋಗಕ್ಕೆ ಸೇರಿದವಳು. ಈಕೆ 'ಕುರುಕ್ಷೇತ್ರ'ದ ರೀಜಿನಲ್ ಇಂಜಿನೀಯರಿಂಗ್ ಕಾಲೇಜಿಗೆ ಉಪನ್ಯಾಸಕಿಯಾಗಿ ಬೆಂಗಳೂರಿನಿಂದ ಬಂದ ಈ 'ಶೀಲ' ಆ ನೆಲದ ಪರಿಸರದ ಹೊಸ ಬದುಕು, ಸ್ವಾವಲಂಬಿಯಾದ ಜೀವನ ನೆಲೆಗೊಳ್ಳುತ್ತದೆಯೆಂಬ ಭಾವನೆಯನ್ನು ಕಟ್ಟಿಕೊಂಡು ಬಂದವಳು. ಬಾಲ್ಯದ ಗೆಳೆಯ ಆಶುಗೆ ಕುರುಕ್ಷೇತ್ರದ ಊರಿನಲ್ಲಿ ನಡೆದು ಹೋದ ಕತೆಯನ್ನೆಲ್ಲಾ ತುಷಾರ್‌ನೊಂದಿಗೆ ಕಳೆದ ದಿನಗಳು ಕಾಲೇಜಿನ ಕ್ಯಾಂಪ್‌ಸ್ಸಿನ ತುಂಬಾ ನೂರಾರು ಕನಸುಗಳನ್ನೊತ್ತುಕೊಂಡು ಸಾಗಿದುದು ಪಕ್ಕದಲ್ಲಿ ಬಿರ್ಲಾಮಂದಿರ, ಕೆಳಭಾಗದಲ್ಲಿ ಸರೋವರದ ಸುತ್ತಮುತ್ತ ಶೀಲ, ತುಷಾರ್‌ನೊಂದಿಗೆ ಕಳೆದ ಕ್ಷಣಗಳು. ಒಬ್ಬ ಒಳ್ಳೆಯ ಸ್ನೇಹಿತನಾಗಿ ಶೀಲ ಆತನೊಂದಿಗೆ ವರ್ತಿಸಿದ ರೀತಿ, ಒಬ್ಬ ಮಹಿಳೆ ಶೈಕ್ಷಣಿಕ ವಿಚಾರ ಧಾರೆಯೊಂದಿಗೆ ಜೀವನವನ್ನು ವೈಚಾರಿಕ ಪ್ರಜ್ಞೆಯೊಂದಿಗೆ ಕಟ್ಟಿಕೊಂಡ ರೀತಿ ಅನನ್ಯವಾಗಿರುವಂತದ್ದು. ಒಂದು ಸಂಜೆ ಜಾರುವ ಮಬ್ಬಿನಲ್ಲಿ, ರಾತ್ರಿ ದಟ್ಟವಾಗ ತೊಡಗಿದ್ದ ನೀರವ ಮೌನದಲ್ಲಿ ಸರೋವರದ ಕಲ್ಲು ಬೆಂಚಿನ ಮೆಲೆ ಕೂತು ಹರಟ್ಟುತ್ತಿರಬೇಕಾದರೆ ಮೂವರು ದಾಂಡಿಗರು ಬಾಯಿಗೆ ಬಟ್ಟೆ ತುರುಕಿ ಕಂಬಕ್ಕೆ ಕಟ್ಟಿ ತನ್ನ ಮೇಲೆ ಅತ್ಯಾಚಾರವೆಸಗಿಬಿಡುತ್ತಾರೆ. ಆಕೆಯ ಮೈ ಮೇಲೆ ಮಾಸಲಾರದ ಗಾಯಗಳಾಗಿ ಬಿಡುತ್ತವೆ. ಶೀಲಳ ಈ ಕತೆ ಕೇಳಿದ ಆಶು ದಿಗ್ಭ್ರಮೆಗೊಳ್ಳುತ್ತಾನೆ.

ಮೂಲತಃ 'ಶೀಲ' ಒಳ್ಳೆಯ ಹೆಣ್ಣು, ಹಾಗೇ ತುಷಾರ್‌ನೂ ಕೂಡ ಆಕೆಗೆ ಒಳ್ಳೆಯ ಸ್ನೇಹಿತ. 'ಶೀಲ' ಅತ್ಯಾಚಾರಕ್ಕೆ ಒಳಗಾದರೂ ಆಕೆಯನ್ನೆ ಒಲಿದು ಮದುವೆಯಾಗುತ್ತೇನೆಂದು ಮುಂದೆ ಬರುತ್ತಾನೆ. ಆದರೆ 'ಶೀಲ' ಎಲ್ಲವನ್ನೂ ತಿರಸ್ಕರಿಸಿಬಿಡುತ್ತಾಳೆ. ಆದರೆ ಅನುಗಾಲದ ಗೆಳೆಯನಾದ ಅಶುವನ್ನು ಮಾತ್ರ ಆಕೆಗೆ ಮರೆಯಲಾಗುವುದಿಲ್ಲ. ಆಕೆಗೆ ಗಾಢವಾದ ಒಂಟಿತನವೇ ಹಿತವೆನಿಸುವಾಗ ಮತ್ತೆ 'ಅಶು' ಆಕೆಯ ಬದುಕಿನಲ್ಲಿ ಪ್ರವೇಶಿಸಿದ. ಅವಳ ಸರೋವರದಂತ ಮನಸು ಬದಲಾಗುತ್ತದೆ. ಆತನನ್ನು ಆಶ್ರಯಿಸುತ್ತದೆ. ಕತೆಗಾರ್ತಿ ನೇಮಿಚಂದ್ರರು 'ಕೆಂಪು ಕಲಕಿದ ನೀರು' ಕತೆಯಲ್ಲಿ 'ಶೀಲ' ಎಂಬ ಸ್ತ್ರೀ ಬದುಕಿನಲ್ಲಿ ನಡೆದು ಹೋಗುವ ಘಟನಾವಳಿಗಳು ಆಕೆಯ ಬದುಕಿನಲ್ಲಿ ಅನೇಕ ತಿರುವುಗಳನ್ನು ಪಡೆದುಕೊಳ್ಳುತ್ತವೆ, ಇಪ್ಪತ್ತನೆ ಶತಮಾನದ ಒಂದು ಹೆಣ್ಣು ಶಿಕ್ಷಣವೆನ್ನುವ ವೈಚಾರಿಕ ಪ್ರಜ್ಞೆಯ ತಳಹದಿಯ ಮೇಲೆ ಬದುಕನ್ನು ಸ್ವತಃ ಕಟ್ಟಿಕೊಳ್ಳುವ ಸಂದರ್ಭವನ್ನು ವಿವರಿಸುತ್ತಾ ಮಹಿಳೆ ಕೂಡ ತನ್ನ ನೆಲೆಯ ಹುಡುಕಾಟದಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಭಾಗವಹಿಸಿ ಸ್ಪರ್ಧಾತ್ಮಕವಾದಂತೆ ಬದುಕು ಕಟ್ಟಿಕೊಳ್ಳಬಹುದೆಂಬ ತಾತ್ವಿಕ ಆಶಯವನ್ನು ಕತೆ ಸಾರುತ್ತದೆ.

ಸ್ತ್ರೀವಾದಿ ನೆಲೆಯ ಅನಂತ ಮುಖಗಳ ಸಾಧನೆಯನ್ನು ಅನೇಕ ಮಹಿಳಾ ಬರಹಗಾರ್ತಿಯರು ತಮ್ಮ ಕಥಾ ಸಾಹಿತ್ಯದ ಮೂಲಕ ಅನಾವರಣಗೊಳಿಸಿದ್ದಾರೆ. ಐವತ್ತು ಮತ್ತು ಅರವತ್ತರ ದಶಕಗಳ ವಾಣಿಜ್ಯ ಯುಗದಲ್ಲಿ ಲೇಖಕಿಯರು ವಿಪುಲವಾಗಿದ್ದರು. ಆದರೆ ಈ ಸಾಹಿತ್ಯದ ಹೆಚ್ಚಿನ ಭಾಗ ಜನಪ್ರಿಯತೆ ಮತ್ತಿತರ ಸವಲತ್ತುಗಳಿಗೆ ಆದ್ಯತೆ ಕೊಟ್ಟಂತೆ ಕೆಲವು ಸಂದರ್ಭಗಳು ಕಂಡು ಬಂದರೂ ಆ ಸಂದರ್ಭದಲ್ಲಿ ರಂಜಕವಾಗಿ ಬರೆಯುವವರ ಸಂಖ್ಯೆಯೂ ಅಧಿಕವಾಗಿತ್ತು. ಜೊತೆಗೆ ಗಂಭೀರವಾಗಿ ಮಹಿಳಾ ಬದುಕಿನ ವಿವರಗಳನ್ನು ಸಮಗ್ರವಾಗಿ ಹಿಡಿದಿಡುವ ಕತೆಗಾರ್ತಿಯರೂ ಈ ಸಂದರ್ಭದಲ್ಲಿ ಕಾಣಿಸಿಕೊಂಡರು. ಎಪ್ಪತ್ತರ ದಶಕದ ಉತ್ತರಾರ್ಧದಲ್ಲಿ ಸಾಹಿತ್ಯಭ್ಯಾಸದ ಹಿನ್ನೆಲೆಯೂ ಇದ್ದ ಹೊಸ ಅರಿವಿನ ಕತೆಗಾರ್ತಿಯರೂ ಹೊಸ ವೈಚಾರಿಕ ಚಿಂತನೆಯೊಂದಿಗೆ ಬರೆಯತೊಡಗಿದರು. ಈ ಸಂದರ್ಭದಲ್ಲಿ ಹೊಸ ಬಗೆಯ ಅರಿವಿನಿಂದ ಕೂಡಿದ ಕತೆಗಳನ್ನು ರಚಿಸಿದರು. ಅನೇಕ ಕತೆಗಾರ್ತಿಯರು ಸ್ತ್ರೀ

ಸಮಾಜದ ಮೇಲಾದ ಅನ್ಯಾಯವನ್ನು ಪ್ರತಿಭಟಿಸುವ, ಆ ಪ್ರತಿಭಟನೆಯನ್ನು ಸಾಮಾಜಿಕ ಕಾಳಜಿಯಿಂದ ಸಾಹಿತ್ಯದ ಮುಖಾಂತರ ಅಭಿವ್ಯಕ್ತಿಗೊಳಿಸಿದರು.

ಮಹಿಳೆಯರ ವೃತ್ತಿಪರ ಮನೋಭಾವ, ಆರ್ಥಿಕ ಸ್ವಾತಂತ್ರ್ಯ ಶಿಕ್ಷಣದ ಅಗತ್ಯತೆಗಳನ್ನು ಕುರಿತು ಅನೇಕ ಕತೆಗಳು ರಚಿಸಿದರು. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಸ್ತ್ರೀವಾದಿ ನೆಲೆಯ ವಿವಿಧ ಮುಖಗಳನ್ನು ಕತೆಗಾರ್ತಿಯವರು ಪ್ರಾದೇಶಿಕ, ಉಪ ಭಾಷೆಗಳ ಮುಖಾಂತರ ವಸ್ತು ವೈವಿಧ್ಯತೆಯೊಂದಿಗೆ ಅನಾವರಣಗೊಳಿಸಿದರು. ಕತೆಗಾರ್ತಿಯರು ಸಾಂಸ್ಕೃತಿಕ, ಕೌಟುಂಬಿಕ, ಆರ್ಥಿಕ, ಸಾಮಾಜಿಕ ವಲಯಗಳ ಕೆಲವು ಮೂಲಭೂತ ವಿಚಾರ ನಂಬಿಕೆಗಳ ಮೇಲೆ ಕತೆಗಳನ್ನು ರಚಿಸಿ, ಹೊಸ ವಿಚಾರ ಮತ್ತು ಎಚ್ಚರಗಳನ್ನು ಮೂಡಿಸಿದರು. ಈ ಎಲ್ಲಾ ತಿರುವುಗಳ ಮುಖಾಂತರ ಹೊಸ ತಾತ್ವಿಕ ನೆಲೆಗಳು ಸ್ತ್ರೀವಾದಿ ನೆಲೆಯ ಸಾಹಿತ್ಯದಲ್ಲಿ ಸೇರ್ಪಡೆಯಾದವು.

**ಟಿಪ್ಪಣಿಗಳು**

೦೧. ಎಲ್.ಜಿ. ಮೀರಾ-ಲೇಖನ: ಸಮಕಾಲೀನ ಲಿಂಗೀಯ ತತ್ವವು ಎದುರಿಸುತ್ತಿರುವ ಸಮಸ್ಯೆಗಳು. ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ-ಡಾ.ರಾಜಾರಾಮ ಹೆಗಡೆ (ಸಂ) ಪು.೫೦, ೫೧

೦೨. ಗೀತಾ ನಾಗಭೂಷಣ-ಅವ್ವ
ಅವ್ವ ಮತ್ತು ಇತರೆ ಕಥೆಗಳು-ಗೀತಾ ನಾಗಭೂಷಣ, ಪು.೩೨, ೩೭

೦೩. ಬಿ.ಟಿ.ಲಲಿತಾನಾಯಕ್-ಲೂಟಿ
ಹಬ್ಬ ಮತ್ತು ಬಲಿ-ಬಿ.ಟಿ.ಲಲಿತಾನಾಯಕ್, ಪು.೯

೦೪. ಗೀತಾ ನಾಗಭೂಷಣ-ಬೆಳಕಿನೆಡೆಗೆ
ಅವ್ವ ಮತ್ತು ಇತರೆ ಕಥೆಗಳು-ಗೀತಾನಾಗಭೂಷಣ, ಪು.೧೨೩

೦೫. ಗೀತಾ ನಾಗಭೂಷಣ-ಚಿತ್ತಿ ಮತ್ತು ರಿಷಾ
ಅವ್ವ ಮತ್ತು ಇತರೆ ಕಥೆಗಳು-ಗೀತಾ ನಾಗಭೂಷಣ, ಪು.೯೧

೦೬. ಸಾರಾ ಅಬೂಬಕರ್-ನಿಯಮ ನಿಯಮಗಳ ನಡುವೆ
ಚಪ್ಪಲಿಗಳು-ಸಾರಾ ಅಬೂಬಕರ್, ಪು.೮೦, ೮೩

೦೭. ಸಾರಾ ಅಬೂಬಕರ್-ಚಪ್ಪಲಿಗಳು, ಪು.೧೭

೦೮. ಬಾನು ಮುಷ್ತಾಕ್-ಜೀವಸೆಲೆ/ಬೆಂಕಿಮಳೆ/ಪಾರಿವಾಳ ರೆಕ್ಕೆಯಹಾಡು/ಎದೆಯ ಹಣತೆ

೦೯. ಡಿ.ಆರ್.ನಾಗರಾಜ-ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ ಸಮಸ್ಯೆಗಳು,
ಭಾರತೀಯ ಸ್ತ್ರೀವಾದ- ಎನ್ ಮನು ಚಕ್ರವರ್ತಿ (ಸಂ)

೧೦. ವೀಣಾ ಶಾಂತೇಶ್ವರ-ಮುಳ್ಳುಗಳು, ಪು.೧೦

೧೧ ವೀಣಾ ಶಾಂತೇಶ್ವರ-ಹೊರಟು ಹೋದವನು, ಪು.೬೦, ೬೪
ಕೊನೆಯ ದಾರಿ- ವೀಣಾ ಶಾಂತೇಶ್ವರ

೧೨. ಎಚ್.ನಾಗವೇಣಿ-ಧಣಿಗಳ ಬೆಳ್ಳಿಲೋಟ,
'ಮೀಯುವ ಆಟ', ಪು.೨೪

೧೩. ವೈದೇಹಿ-ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು
ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ-ವೈದೇಹಿ, ಪು.೫

೧೪. ವೈದೇಹಿ-ಅಕ್ಕು
ಅಂತರಂಗದ ಪುಟಗಳು-ವೈದೇಹಿ, ಪು.೫೦, ೫೮

೧೫. ವೈದೇಹಿ-ಅಮ್ಮಚ್ಚಿಯೆಂಬ ನೆನಪು
ಅಮ್ಮಚ್ಚಿಯೆಂಬ ನೆನಪು-ವೈದೇಹಿ, ಪು.೧೫೯

೧೬. ವೈದೇಹಿ-ಸುಮ್ಮನಿರಲಾರದ್ದು
ಅಮ್ಮಚ್ಚಿಯೆಂಬ ನೆನಪು-ವೈದೇಹಿ, ಪು.೪೯

೧೭. ವೈದೇಹಿ-ಸೌಗಂಧಿಯ ಸ್ವಗತಗಳು
ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ-ವೈದೇಹಿ, ಪು.೬೧, ೬೪

೧೮. ವೈದೇಹಿ-ಚಿಪ್ಪು
ಮರಗಿಡಬಳ್ಳಿ-ವೈದೇಹಿ, ಪು.೧೦೦

೧೯. ನೇಮಿಚಂದ್ರ-ಮತ್ತೆ ಬರೆದ ಕವನಗಳು
ಇಲ್ಲಿಯವರೆಗಿನ ನೇಮಿಚಂದ್ರರ ಕಥೆಗಳು, ಪು.೧೬೮

೨೦. ನೇಮಿಚಂದ್ರ-ಬದುಕು ನಿನ್ನಲ್ಲೆಂಥಾ ಮುನಿಸು
ಇಲ್ಲಿಯವರೆಗಿನ ನೇಮಿಚಂದ್ರರ ಕಥೆಗಳು, ಪು.೧೧೦

೨೧. ನೇಮಿಚಂದ್ರ-ಏನೊಂದು ಆದಗದವರು
ಇಲ್ಲಿಯವರೆಗಿನ ನೇಮಿಚಂದ್ರರ ಕಥೆಗಳು, ಪು.೨೬೦

* * * * *

ಅಧ್ಯಾಯ : ಏಳು

# ನವವಸಾಹತುಶಾಹಿ ನೆಲೆ ಮತ್ತು ದೇಶಿ ಸಂಘರ್ಷಗಳು

೭.೧. ನವವಸಾಹತುಶಾಹಿ ನೆಲೆಯ ಸಂದರ್ಭ

೭.೨. ಭೂಮಿ ಮತ್ತು ರೈತರ ಪ್ರಶ್ನೆ

೭.೩. ರೈತ ಸಂಬಂಧಿ ಕತೆಗಳು ವಿಶ್ಲೇಷಣೆ

೭.೪. ಅರಣ್ಯ ಮತ್ತು ಪರಿಸರ ನಾಶದ ಪ್ರಶ್ನೆ

೭.೪.೧. ತೇಜಸ್ವಿಯವರ ಕತೆಗಳಲ್ಲಿ ಪರಿಸರ ಕಾಳಜಿ

೭.೪.೨. ಅರಣ್ಯ ಮತ್ತು ಪರಿಸರ ಸಂಬಂಧಿ ಇತರರ ಕತೆಗಳ ವಿಶ್ಲೇಷಣೆ

೭.೫. ಜಲ ಸಮಸ್ಯೆ

೭.೬. ಜಲ ಸಂಬಂಧಿ ಕತೆಗಳ ವಿಶ್ಲೇಷಣೆ

೭.೭. ಕೈಗಾರಿಕೆಗಳ ತೊಡಕು

೭.೮. ಕೈಗಾರಿಕಾ ಸಂಬಂಧಿ ಕತೆಗಳ ವಿಶ್ಲೇಷಣೆ

## ಅಧ್ಯಾಯ : ಏಳು

## ನವವಸಾಹತುಶಾಹಿ ನೆಲೆ ಮತ್ತು ದೇಶಿ ಸಂಘರ್ಷಗಳು

### ೭.೧. ನವವಸಾಹತುಶಾಹಿ ನೆಲೆಯ ಸಂದರ್ಭ

ನವವಸಾಹತುಶಾಹಿ ಸಂದರ್ಭದಲ್ಲಿ ಕತೆಗಳನ್ನು ರಚಿಸುತ್ತಿದ್ದ ಅನೇಕ ಸಣ್ಣಕತೆಗಾರರಿಗೆ ಆ ಕಾಲಘಟ್ಟದಲ್ಲಿ ಘಟಿಸಿದ ಅನೇಕ ಘಟನೆಗಳು ಕತೆಗಳಿಗೆ ಮೂಲ ಪ್ರೇರಣೆಯಾಗಿದ್ದವು. ಆ ಸಂದರ್ಭದ ಅನೇಕ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪಲ್ಲಟಗಳಿಗೆ ಅವರು ಕತೆಗಳ ಮೂಲಕ ಸ್ಪಂಧಿಸಿದ ರೀತಿ ಅನನ್ಯವಾದುದು. ಕತೆಗಳ ವಿಶ್ಲೇಷಣೆಗೆ ತೊಡಗುವ ಮುನ್ನ ಆ ಸಂದರ್ಭದ ಕೆಲವು ವಿದ್ಯಮಾನಗಳ ಕಡೆಗೆ ಗಮನಹರಿಸಿ ಕತೆಗಳ ವಿಶ್ಲೇಷಣೆ ಕಡೆ ಸಾಗುತ್ತೇನೆ.

ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಜರುಗಿದ ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಅನೇಕ ಕಾರಣಗಳಿವೆ. ಆರ್ಥಿಕ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶದಲ್ಲಿ ಪ್ರವೇಶ ಪಡೆದವು. ಇದರಿಂದಾಗಿ ಅನೇಕ ಕ್ಷೇತ್ರಗಳಲ್ಲಿಯ ಸೇವಾವಲಯಗಳಲ್ಲಿ ಏರುಪೇರುಗಳು ಉದ್ಭವಿಸಿದವು. ಆಧುನಿಕತೆಯ ಹಾವಳಿಯಿಂದ ಕೈಗಾರಿಕೆಗಳ ಸ್ಥಾಪನೆಯಿಂದಾಗಿ ಉಂಟಾದ ಪರಿಸರ ಸಮಸ್ಯೆ, ರೈತ ಸಮಸ್ಯೆ, ಜಲಸಮಸ್ಯೆ ಮತ್ತು ಕಾರ್ಮಿಕ ಸಮಸ್ಯೆಗಳು ಅನೇಕ ಹೋರಾಟಗಳಿಗೆ ಕಾರಣವಾದವು. ಇವೆಲ್ಲಾ ಸಮಸ್ಯೆಗಳಿಗೆ ನವವಸಾಹತುಶಾಹಿ ನೆಲೆಯೇ ಮುಖ್ಯಕಾರಣವಾಗಿತ್ತು. ಈ ಎಲ್ಲಾ ಸ್ಥಿತ್ಯಂತರಗಳಿಗೆ ಹಿಂದಿನ ಬ್ರಿಟೀಷ್ ವಸಾಹತುಶಾಹಿ ಸಂದರ್ಭದಲ್ಲಿ ಭೂಮಿಕೆ ಸಿದ್ದವಾಗಿತ್ತು. ಭಾರತೀಯ ಸಂಸ್ಕೃತಿಯು ಹೊಸ ವಿನ್ಯಾಸದಲ್ಲಿ ಮೈತಳೆದಿದ್ದು ಒಂದು ರೀತಿಯಲ್ಲಿ ಭಾರತ ಐರೋಪ್ಯ ಸಂಸ್ಕೃತಿಗಳ ಸಂಗಮದ ಫಲವಾಗಿತ್ತು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಮುಖ್ಯವಾಗಿ ಈ ಪ್ರಕ್ರಿಯೆ ಪ್ರಾರಂಭಗೊಂಡು ಅದು ಮುಂದೆ ಇಪ್ಪತ್ತನೆಯ ಶತಮಾನದಲ್ಲಿ ಇನ್ನು ಹೆಚ್ಚು ಕ್ರಿಯಾಶೀಲಗೊಂಡು ಆಧುನಿಕತೆಯ ಭರಾಟೆಯಲ್ಲಿ ನಮ್ಮ ಸಂಸ್ಕೃತಿಯ ಮೇಲೆ ಬ್ರಿಟೀಷ್ ವಸಾಹತು ಸಂಸ್ಕೃತಿ ಬೀರಿದ ಪ್ರಭಾವವೂ ಅಪಾರವಾಗಿತ್ತು.

ಭಾರತವು ಇಂದು ನವವಸಾಹತುಶಾಹಿಯ ಸಂದರ್ಭದಲ್ಲಿದೆ. ಇದಕ್ಕಿಂತ ಭಿನ್ನವಾದ ವಸಾಹತುಶಾಹಿ ಕಾಲದಲ್ಲಿ ಹಿತಶತ್ರುಗಳು ನೇರವಾಗಿ ಕಾಣುತ್ತಿದ್ದರು. ಅವರ ಆಕ್ರಮಣವೂ ನೇರವಾಗಿತ್ತು. ನಮ್ಮ ಭಾಷೆ ಸಂಸ್ಕೃತಿಗಳ

ವಿಷಯದಲ್ಲಿ ಮನವೊಲಿಕೆಯ ಪ್ರಯತ್ನ ಮುಖ್ಯವಾಗಿ ನಡೆದಿದ್ದಿತ್ತು. ಇಂದು ಬಹುರಾಷ್ಟ್ರೀಯ ಕಂಪನಿಗಳಂತಹ ವ್ಯಾಪಾರಿ ಸಂಸ್ಥೆಗಳು ಜಗತ್ತಿನ ಮುಂದುವರಿದ ಅನೇಕ ದೇಶಗಳಿಂದ ಭಾರತವನ್ನು ಪ್ರವೇಶಿಸುತ್ತಿವೆ. ಇಂದಿನ ಭಾರತವೂ ಕೂಡ ಮುಕ್ತ ಆರ್ಥಿಕ ನೀತಿಯನ್ನು ಅಂಗೀಕರಿಸಿದ್ದು ಇದರ ಮೂಲಕ ಇದುವರೆಗೂ ನಮ್ಮ ದೇಶಕ್ಕಿಂದ್ದಂತಹ ಕಿಟಕಿ ಬಾಗಿಲುಗಳನ್ನು ಪೂರ್ಣವಾಗಿ ತೆರೆಯಲಾಯಿತು. ಇಂತಹ ಮುಕ್ತವಾದ ವಾತಾವರಣದಲ್ಲಿ ಭಾರತವು ಪ್ರಪಂಚವಾಗುತ್ತಿದೆ. ಮುಕ್ತ ಆರ್ಥಿಕ ಉದಾರೀಕರಣ, ಜಾಗತೀಕರಣವು ಭಾರತವನ್ನು ಪ್ರವೇಶಿಸಿ ಅನೇಕ ಗೊಂದಲಗಳನ್ನು ಸೃಷ್ಟಿಸುತ್ತಿವೆ. ಈ ನೆಲೆಯಲ್ಲಿ ನಮ್ಮ ದೇಶವು ತನ್ನ ಅನನ್ಯತೆಯನ್ನು ಕಳೆದುಕೊಳ್ಳುತ್ತದೆ. ನಮ್ಮ ಸಾಂಸ್ಕೃತಿಕ ಬದುಕಿಗೆ ಹೊಸ ಪೆಟ್ಟುಗಳು ಬೀಳುತ್ತಿವೆ. ದೇಶದ ಭಾಗವಾಗಿರುವ ಕನ್ನಡ ನಾಡಿನ ಭಾಷೆ ಮತ್ತು ಸಂಸ್ಕೃತಿಯು ಆತಂಕಕ್ಕೆ ಈಡಾಗುತ್ತಿವೆ.

ಯಾವುದೇ ಒಂದು ಸಂಸ್ಕೃತಿಯೊಡನೆ ಅನ್ಯ ಸಂಸ್ಕೃತಿಯ ಸಂಪರ್ಕವೇರ್ಪಟ್ಟಾಗ ಸಂಘರ್ಷಗಳು ಶುರುವಾಗುತ್ತವೆ. ಈ ಪ್ರಕ್ರಿಯೆಯಲ್ಲಿ ಹಲವಾರು ಸ್ಥಿತ್ಯಂತರಗಳು ನಡೆಯುತ್ತವೆ. ಇಂತಹ ಸಂಪರ್ಕ ಮತ್ತು ಪರಸ್ಪರ ಪ್ರಭಾವಗಳಿಂದ ಭಾರತದಂತಹ ಮೂರನೆ ಜಗತ್ತಿನ ರಾಷ್ಟ್ರಗಳ ಸಂಸ್ಕೃತಿಗಳ ಸಂದರ್ಭದಲ್ಲಿ ಜಾಗತಿಕ ಸಾಮ್ರಾಜ್ಯಶಾಹಿ ನೆಲೆ ಸಂಸ್ಕೃತಿಗಳ ಪ್ರಭಾವವೂ ಇದೇ ತೆರನಾಗಿ ಸಾಗಿಬಂದಿರುವುದನ್ನು ನಮ್ಮ ನವವಸಾಹತುಶಾಹಿ ನೆಲೆ ಪ್ರಕಟಪಡಿಸುತ್ತದೆ. ಪ್ರಧಾನವಾದದ್ದು ಅಧೀನವಾದುದರ ಮೇಲೆ ತನ್ನ ಹೇರಿಕೆಯನ್ನು ಪ್ರಭಾವವನ್ನು ನಡೆಸುತ್ತದೆ. ಹಾಗಾಗಿ ಮೇಲು ಸಂಸ್ಕೃತಿ ಅಧೀನ ಸಂಸ್ಕೃತಿಯ ಮೇಲೆ ಪ್ರಭಾವವನ್ನು ನಿರಂತರವಾಗಿ ನಡೆಸುತ್ತಲೇ ಸಾಗುತ್ತದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಸಾಂಸ್ಕೃತಿಕ ಸ್ಥಿತ್ಯಂತರ ಹಾಗೂ ಸಾಂಸ್ಕೃತಿಕ ಪಲ್ಲಟಗಳನ್ನು ಅಧ್ಯಯನ ಮಾಡುವ ಜರೂರು ಉಂಟಾಗುತ್ತದೆ. ಕರ್ನಾಟಕವನ್ನು ಒಳಗೊಂಡಂತೆ ಭಾರತವು ಮುಕ್ತ ಆರ್ಥಿಕ ನೀತಿ ಮತ್ತು ಬ್ರಿಟಿಷರು ಬಿಟ್ಟುಹೊದ ನೆನಪುಗಳ ಮೂಲಕ ಹಲವು ಆಕರ್ಷಣೆಗಳಿಗೆ ಈಡಾಗಿರುವಂತದ್ದು. ಮುಕ್ತ ಆರ್ಥಿಕ ನೀತಿಯ ಫಲವಾಗಿ ಹಲವಾರು ವಿದೇಶಿ ಕಂಪನಿಗಳು ಭಾರತಕ್ಕೆ ಪ್ರವೇಶಿಸಿ ತಮ್ಮ ಬಂಡವಾಳವನ್ನು ಹೂಡುತ್ತಿವೆ, ಕರ್ನಾಟಕದ ಸಂದರ್ಭದಲ್ಲಿಯೂ ಕೂಡ ಬೆಂಗಳೂರಿನಂತ ಮಹಾನಗರದಲ್ಲಿ ಐ.ಟಿ.ಬಿ.ಟಿ. ಕಂಪನಿಗಳು ತೆರೆದುಕೊಳ್ಳುತ್ತಿರುವುದು ಕೂಡ ಉದಾರವಾದಿ ಆರ್ಥಿಕ ನೀತಿಯಿಂದ. ಇಂತಹ ಖಾಸಗೀಕರಣ, ಜಾಗತೀಕರಣಗಳ ಹಿಂದಿನ ವಾಣಿಜ್ಯ ಸಂಸ್ಥೆಗಳ ಉದ್ದೇಶವಾದರೂ ಏನು? ಈ ಪ್ರಶ್ನೆಗೆ ಸಿಗುವ ಸರಳವಾದ ಉತ್ತರವೆಂದರೆ, ಲಾಭಗಳಿಕೆಯ ಉದ್ದೇಶವನ್ನು ಮೂಲವಾಗಿಟ್ಟುಕೊಂಡು ಪ್ರವೇಶಮಾಡುವ ಇವರು ಭಾರತದಂತಹ ಮೂರನೇ ಜಗತ್ತಿನ ದೇಶಗಳನ್ನು ಉದ್ಧರಿಸುತ್ತಿವೆಯೆಂದರೆ ನಂಬುವುದಾದರೂ ಹೇಗೆ? ಈ ರಹಸ್ಯಗಳು ಅಥವಾ ಹುನ್ನಾರಗಳನ್ನು ಸಂಘರ್ಷಗಳ ಮೂಲಕವೇ ಬಯಲು ಮಾಡಬೇಕಾಗುತ್ತದೆ. ಈ ಪ್ರಜ್ಞಾವಂತರ ಒಳಗಣ್ಣಿನಿಂದ ಸ್ವಾರ್ಥಪರ ಧೋರಣೆ, ಲಾಭಕೋರತನ ಮೊದಲಾದವುಗಳು ಎದ್ದುಕಾಣುತ್ತವೆ. ಅರ್ಥಶಾಸ್ತ್ರದ ತತ್ವದ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ, ಯಾವುದೇ ವಸ್ತುವನ್ನು ಉತ್ಪಾದಿಸುವಾಗ ಅದಕ್ಕೆ ನಾಲ್ಕು ಪರಿಕರಗಳು ಅತ್ಯವಶ್ಯವೆಂದು ಹೇಳುವುದು ಸರಿಯಷ್ಟೇ. ಇವುಗಳಲ್ಲಿ ಯಾವುದೇ ಲಭ್ಯವಿರದಿದ್ದರೂ ವಸ್ತುವಿನ ಉತ್ಪಾದನೆ ಅಸಾಧ್ಯವಾಗುತ್ತದೆ. ಈ ತತ್ವ ಹೀಗಿದೆ. ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆ. ಇವೆಲ್ಲವೂ ಪರಸ್ಪರ ಮತ್ತು ಪೂರಕವಾಗಿರಬೇಕು. ಭಾರತದಂತಹ ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ ಈ ಪರಿಸ್ಥಿತಿ ಬೇರೆಯೇ ಇದೆ. ಹಾಗಾಗಿ ಬಹುರಾಷ್ಟ್ರೀಯ ಕಂಪನಿಗಳು ಬಂಡವಾಳವನ್ನು ಕೈಯಲ್ಲಿ ಹಿಡಿದುಕೊಂಡುಬಂದು ತನ್ನ ಸಂಘಟನಾ ಚಾತುರ್ಯದಿಂದ ಭಾರತೀಯ ಕಚ್ಚಾ ಸಾಮಗ್ರಿಯಾದ

ಭೂಸಂಪತ್ತು, ಮಾನವನ ಶ್ರಮ ಸಂಪತ್ತನ್ನು ದುರ್ಬಳಕೆ ಮಾಡಿಕೊಂಡು ಹೇರಳವಾಗಿ ಲಾಭಮಾಡಿ ಕೊಳ್ಳುತ್ತಾ ಅಸಮಾನತೆಯ ಸಂಸ್ಕೃತೀಕರಣವನ್ನು ಜಾರಿಗೊಳಿಸುವ ನಡೆಯನ್ನು ನಡೆಸಲಾಗುತ್ತಿದೆ. ಹಾಗಾಗಿ ಭೂಮಿ, ಶ್ರಮ ನಮ್ಮದಾಗಿಯೂ ಅಂತೆಯೇ ಬಂಡವಾಳ ಮತ್ತು ಸಂಘಟನೆಗಳು ಪರಕೀಯದಾಗಿಯೂ ಪ್ರಕ್ರಿಯೆ ನಡೆದಿದೆ. ಈ ಹಂಚಿಕೆ ಪ್ರಾಮಾಣಿಕವಾಗಿ ನೆರವೇರಿದ್ದೇ ಆದರೆ ಸಾಂಸ್ಕೃತಿಕ ಸಮಸ್ಯೆಗಳು ಸೃಷ್ಟಿಯಾಗುತ್ತಿರಲಿಲ್ಲ. ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಬೇಕಾದ ವಿಚಾರವೆಂದರೆ, ಭಾರತದಲ್ಲಿ ಭೂಮಿ, ಶ್ರಮವೂಯಿದ್ದು ಬಂಡವಾಳ ಮತ್ತು ಸಂಘಟನೆಯ ಕೊರತೆಯಿರುವುದರಿಂದಾಗಿ ಅಸಮಾನತೆಗಳು ದಿನೇ ದಿನೇ ಹೆಚ್ಚುತ್ತಾ ಸಾಗಿದೆ.

ಕೈಗಾರೀಕರಣವೆಂಬುದು ಆಧುನಿಕ ಅಭಿವೃದ್ಧಿ ಮೀಮಾಂಸೆಯ ಮಂತ್ರವೆಂಬಂತೆ ಅದರ ಚರ್ಚೆ ಮುಂಚೂಣಿಯಲ್ಲಿದೆ. ಕೈಗಾರಿಕೀಕರಣದಿಂದ ಅರಣ್ಯ ನಾಶವಾಗುತ್ತದೆ. ಅದು ಹೇಗೆಂದರೆ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳ ಪೂರೈಕೆ ಅಗತ್ಯವಿದ್ದುದರಿಂದ, ಪರಿಸರದ ಅಸಮತೋಲನ ಏರ್ಪಡುತ್ತದೆ. ನಮ್ಮ ಸಂಸ್ಕೃತಿಯಲ್ಲಿ ಪೂಜ್ಯತೆಯಿಂದ ಗ್ರಹಿಸಲಾಗುತ್ತಿದ್ದ ನದಿ, ಕೆರೆ, ಅರಣ್ಯಗಳ ನಾಶವೂ ನಮ್ಮ ಅಂತಃ ಸತ್ವವನ್ನು ಭಗ್ನಗೊಳಿಸುತ್ತಿದೆ. ವಿದೇಶಗಳಿಗೆ ಹೋಲಿಸಿದಾಗ ಭಾರತದ ಕೈಗಾರಿಕೆಗೆ ಬೇಕಾದ ಇಲ್ಲಿಯ ಕಚ್ಚಾವಸ್ತುಗಳ ಬೆಲೆ ಮತ್ತು ಕೂಲಿದರ ಅತ್ಯಂತ ಕಡಿಮೆಯಾಗಿರುವುದರಿಂದ ಭಾರತದ ಮಾನವ ಮತ್ತು ಪ್ರಕೃತಿ ಸಂಪನ್ಮೂಲಗಳಿಗೆ ಶೋಷಣೆ ಕೈಗಾರಿಕೀಕರಣದಿಂದ ಸಂಭವಿಸುತ್ತದೆ.

ಕೈಗಾರಿಕೆಗಳು ಸ್ಥಾಪನೆಯಾದಂತೆಲ್ಲಾ ಗ್ರಾಮೀಣ ಜನತೆಯ ವಲಸೆ ಹೆಚ್ಚುತ್ತಲೇ ಹೋಗುತ್ತದೆ. ಇದರಿಂದ ಗ್ರಾಮೀಣ ಪ್ರದೇಶದಲ್ಲಿ ಮಾನವ ಸಂಪನ್ಮೂಲದ ಕೊರತೆಯುಂಟಾಗುತ್ತದೆ. ಈ ಸಮಸ್ಯೆ ಉಲ್ಬಣವಾದಂತೆ ಬೇಸಾಯದ ಭೂಮಿಯಲ್ಲಿ ನೀಲಗಿರಿ ಮರಗಗಳನ್ನು ಬೆಳೆಯಬೇಕಾಗುತ್ತವೆ. ಇದರಿಂದ ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆ ತಪ್ಪಿ ಗ್ರಾಮ ಪ್ರಧಾನ ದೇಶವಾದ ಭಾರತದ ಮೂಲ ಅಸ್ತಿತ್ವಕ್ಕೆ ದಕ್ಕೆಯಾಗುತ್ತದೆ. ಇದರಿಂದ ಸಂಸ್ಕೃತಿಯ ಬದುಕಿನಲ್ಲಿ ಏರುಪೇರು ಉಂಟಾಗಿ ಸಾಮಾಜಿಕ ಬದುಕಿನಲ್ಲಿ ನೇರ ದುಷ್ಪರಿಣಾಮಗಳೂ ಏರ್ಪಡುತ್ತವೆ.

ವಸಾಹತು ಕಾಲದ ಅನೇಕ ಕೆಟ್ಟ ನೆನಪುಗಳು ಇನ್ನು ಹಸಿರಾಗಿರುವಾಗಲೇ ಅನೇಕ ವಿದೇಶಿ ಶಕ್ತಿಗಳು ಭಾರತವನ್ನು ಮತ್ತೆ ಆಕ್ರಮಿಸಿದವು. ಹಿಂದೆ ಭಾರತದ ಸ್ವಾತಂತ್ರದ ಮುಕ್ತಿಗಾಗಿ ನಡೆದ ಹೋರಾಟದ ಫಲವಾಗಿ ಭೌಗೋಳಿಕ ಮತ್ತು ರಾಜಕೀಯವಾದಂತಹ, ಫಲವನ್ನು ಮಾತ್ರ ದಕ್ಕಿಸಿಕೊಳ್ಳಲಾಯಿತು. ಆದರೆ ಸಾಂಸ್ಕೃತಿಕವಾದ ಭಾರತವನ್ನು ನವವಸಾಹತುಶಾಹಿ ಬಿಡಲಿಲ್ಲ. ಭಾರತೀಯರು ಕೂಡ ಅದನ್ನು ವರ್ಜಿಸಲಿಲ್ಲ. ಅದು ಶಿಕ್ಷಣ, ಆಡಳಿತ ಸಂಸ್ಕೃತಿ ಹೀಗೆ ಹಲವು ನೆಲೆಗಳಲ್ಲಿ ಇಂದಿಗೂ ಗೋಚರಿಸುತ್ತಿದೆ. ಇದೊಂದು ನಿರಂತರವಾದ ಬೌದ್ಧಿಕ ಪ್ರಕ್ರಿಯೆಯಾಗಿದೆ. ಇದರಿಂದ ಭಾರತೀಯತೆ ಮತ್ತು ಕರ್ನಾಟಕತ್ವಗಳಿಗೆ ಅನೇಕ ಸವಾಲು ಆತಂಕಗಳು ಉಂಟಾಗಿವೆ. ಈ ಹಿನ್ನೆಲೆಯಲ್ಲಿರುವ ನವವಸಾಹತು ಸಂದರ್ಭದ ಬೌದ್ಧಿಕ ನೆಲೆಯ ಸ್ವರೂಪವನ್ನು ಅರ್ಥೈಯಿಸಿಕೊಳ್ಳಬೇಕಾಗುತ್ತದೆ.

ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಇಂಗ್ಲೀಷ್‌ನ ಪಾತ್ರ ಕಳೆದ ಐವತ್ತು ವರ್ಷಗಳಿಂದ ಕ್ರಮವಾಗಿ ಹೆಚ್ಚುತ್ತಿದೆ. ಇದರಿಂದಾಗಿ ಹಲವು ವಿದೇಶಿ ಜ್ಞಾನ ಧಾರೆಗಳು ಸುಲಭವಾಗಿ ನಮಗೆ ಲಭಿಸುತ್ತಿವೆ. ವ್ಯವಹಾರಿಕ ನೆಲೆಯಲ್ಲಿ ವಿದೇಶಗಳೊಂದಿಗೆ ಸಂಪರ್ಕ ಮತ್ತು ಸಂಬಂಧ ಸ್ಥಾಪಿಸುವುದು ಸುಲಭವಾಗಿದೆ. ಖಾಸಗೀ ವಲಯವೇ ಪ್ರಧಾನವಾಗಿರುವಂತಹ ಭಾರತೀಯ ಉದ್ಯಮ ಕ್ಷೇತ್ರಗಳಲ್ಲಿ ತಾಂತ್ರಿಕ ಇಂಗ್ಲೀಷ್ ಭಾಷೆಗೂ, ಜ್ಞಾನಕ್ಕೂ ಅಧಿಕ ಮಾನ್ಯತೆ ದೊರೆತಿದೆ. ಈ ನೆಲೆಯ ವ್ಯಕ್ತಿಗಳು ಖಾಸಗಿ ವಲಯಗಳ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳಲ್ಲಿ

'ಶಕ್ತಿ'ಗಳಾಗಿ ಬೆಳೆಯುತ್ತಿದ್ದಾರೆ. ಇದರಿಂದಾಗಿ ಬೌದ್ಧಿಕವಾಗಿ ಯಾವುದೇ ವೈಚಾರಿಕತೆಯನ್ನು ನಿರೀಕ್ಷಿಸಲಾಗದಿದ್ದರೂ ಬೌದ್ಧಿಕವಾದ ಆಕರ್ಷಣೆಯನ್ನು ಮಾತ್ರ ಉಳಿಸಿಕೊಂಡ ನೆಲೆಯಾಗಿ ಪರಿಣಮಿಸಿದೆ.

ನವವಸಾಹತು ಸಂದರ್ಭದಲ್ಲಿ ಸಮೂಹ ಮಾಧ್ಯಮಗಳು ಮುಖ್ಯವಾದವು. ಪತ್ರಿಕೆ, ಆಕಾಶವಾಣಿ, ದೂರದರ್ಶನ, ಸಿನಿಮಾ ಮೊದಲಾದವು ಈ ನೆಲೆಯಲ್ಲಿ ಮುಖ್ಯವಾದವು. ಕರ್ನಾಟಕ ಭಾರತ ಸಂದರ್ಭದಲ್ಲಿ ಸಿನಿಮಾ ಮತ್ತು ದೂರದರ್ಶನಗಳು ಮಾತ್ರ ನವವಸಾಹತುಶಾಹಿ ನೆಲೆಯ ಹೊಸ ಸೃಷ್ಟಿಗಳೆನಿಸಿವೆ. ಇವುಗಳ ಪರಿಣಾಮ ಇಂದು ಗಾಢವಾಗುತ್ತಿವೆ. ಸಿನಿಮಾ ಮಾಧ್ಯಮ ನಮ್ಮ ಸಾಂಸ್ಕೃತಿಕ ಬದುಕಿನ ಮೇಲೆ ತೀವ್ರವಾಗಿ ಅದರಲ್ಲೂ ಯುವ ಶಕ್ತಿಯ ಬೌದ್ಧಿಕ ವಲಯದ ಮೇಲೆ ಅನೇಕ ರೀತಿಯಲ್ಲಿ ದುಷ್ಪರಿಣಾಮವನ್ನು ಬೀರುತ್ತಿವೆ. ಹಾಗೇ ಇಂದಿನ ದೂರದರ್ಶನದ ವಿವಿಧ ಚಾಲಗಳಿಂದ ಕೆಲ ಪ್ರಯೋಜನಗಳಿದ್ದರೂ ಅವುಗಳಿಂದ ಹಾನಿಯೇ ಹೆಚ್ಚು. ವಿದೇಶಿ ಸಂಸ್ಕೃತಿಯ ಹಲವು ಮೌಲ್ಯಗಳು ಭಾರತೀಯ ಪರಂಪರೆಯಲ್ಲಿ ನಕಾರಾತ್ಮಕ ಮೌಲ್ಯಗಳಾಗಿವೆ. ಅವು ವಿದೇಶಿ ಚಾಲಗಳ ಮೂಲಕ ಪ್ರಸಾರಗೊಳ್ಳುವಾಗ ಭಾರತೀಯ ಮನೋಭೂಮಿಕೆಯ ಸ್ವಾಸ್ಥ್ಯ ಸಹಜವಾಗಿಯೇ ಕದಡುತ್ತಿವೆ. ಹಲವು ಆತಂಕಗಳು ಇಂತಹ ಮನೋಸ್ವಾಸ್ಥ್ಯ ಕೆಡಲು ಕಾರಣವಾಗಿವೆ. ವಿದೇಶಿ ಸಾಹಿತ್ಯ ಸಂಸ್ಕೃತಿಗಳ ಔಚಿತ್ಯವರಿತ ಬಳಕೆ-ಆರೋಗ್ಯಕಾರಿಯಾಗಿದ್ದರೂ ಅವುಗಳ ಮಿತಿಮೀರಿದ ಅನುಕರಣೆ ಅಂಧಾನುಕರಣೆಯಾಗುತ್ತಿದೆ. ಅದರ ಮೇಲೆ ಎಚ್ಚರವಿರದ ಮನಸ್ಸುಗಳು ದೇಶಿ ಸಂಸ್ಕೃತಿಯ ಮೇಲೆ ಪ್ರತಿಕೂಲ ಪರಿಣಾಮವನ್ನುಂಟು ಮಾಡುತ್ತಿವೆ.

ಹೀಗೆ ನವವಸಾಹತುಶಾಹಿ ನೆಲೆಯ ಸಂದರ್ಭದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳು ಪಡೆದುಕೊಂಡ ಬದಲಾವಣೆಗಳು ಹಲವಾರು. ನವವಸಾಹತುಶಾಹಿ ನೆಲೆಯಿಂದ ಅನೇಕ ಸಮಸ್ಯೆಗಳು ಉದ್ಭವಗೊಂಡವು. ಆಧುನಿಕತೆಯ ಪರಿಣಾಮವಾಗಿ ನೆಲೆನಿಂತ ಕೈಗಾರಿಕೆಗಳು. ಈ ಕೈಗಾರಿಕೆಗಳಿಂದ ಪರಿಸರದ ಮೇಲಾದಂತಹ ಪರಿಣಾಮಗಳು. ನೀರಿನ ಸಮಸ್ಯೆ, ಅರಣ್ಯ ಪ್ರಶ್ನೆ ಮುಂತಾದವು ಬೃಹದಾಕಾರವಾಗಿ ಬೆಳೆದವು. ಅಭಿವೃದ್ಧಿ ಮಾದರಿಯ ಯೋಜನೆಗಳಿಂದ ರೈತರ ಬದುಕಿನ ಮೇಲೆ ಆದಂತಹ ಪರಿಣಾಮಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಬೇಕಿದೆ. ಉದಾರೀಕರಣ, ಖಾಸಗೀಕರಣ, ಜಾಗತೀಕರಣದ ಪರಿಣಾಮದಿಂದ ರೈತರ ಬದುಕಿನಲ್ಲಿ ಸೃಷ್ಟಿಯಾದ ಅನೇಕ ಪ್ರಶ್ನೆಗಳಿಗೆ ಆಳುವ ವರ್ಗದಿಂದ ಯಾವ ಉತ್ತರ, ಪರಿಹಾರವೂ ದೊರಕಲಿಲ್ಲ. ನವವಸಾಹತುಶಾಹಿ ಆಕ್ರಮಣವೂ ನಮ್ಮ ಸಂಸ್ಕೃತಿಯ ಮೇಲೆ ಉಂಟುಮಾಡಿದ ಭೌತಿಕ ಮತ್ತ ಬೌದ್ಧಿಕ ಗಾಯಗಳು ವಾಸಿಯಾಗದೇ ನೋವಿನ ಕಲೆಗಳಾಗಿಯೇ ಉಳಿದವು. ಈ ಸಂದರ್ಭದಲ್ಲುಂಟಾದ ಬದಲಾವಣೆಗಳನ್ನು ಸಾಹಿತ್ಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಭೂಮಿ ರೈತರ ಪ್ರಶ್ನೆ, ಅರಣ್ಯ ಪರಿಸರ ನಾಶದ ಪ್ರಶ್ನೆ, ಮತ್ತು ಜಲ ಮತ್ತು ಕಾರ್ಖಾನೆಯ ಪ್ರಶ್ನೆಗಳಾಗಿ ವಿಂಗಡಿಸಿ ಅದರ ತಾತ್ವಿಕ ಚರಿತ್ರೆಯೊಂದಿಗೆ ಸಾಹಿತ್ಯ ಕಥನದ ಸಂವೇದನೆಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಇಲ್ಲಿನ ಉದ್ದೇಶವಾಗಿದೆ. ನವವಸಾಹತುಶಾಹಿ ನೆಲೆಯಲ್ಲಿ ದೇಶಿಯ ಕಥನ ಸಂಘರ್ಷಗಳು ಹೇಗೆ ಮುಖಾಮುಖಿಯಾದವು ಎಂಬುದನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಈ ನವವಸಾಹತುಶಾಹಿ ವಿದ್ಯಮಾನಕ್ಕೆ ಮುಖಾಮುಖಿಯಾಗಿ ಕನ್ನಡದ ಕತೆಗಾರರು ಪ್ರತಿಕ್ರಿಯಿಸಿದ ಸ್ವರೂಪವನ್ನು ಪ್ರಸ್ತುತ ಅಧ್ಯಯನವು ವಿಶ್ಲೇಷಿಸುತ್ತದೆ. ವಿಭಿನ್ನ ಕಥೆಗಾರರ ಮೇಲೆ ವಿವರಿಸಿದ ಹಲವಾರು ನೆಲೆಯ ನವವಸಾಹತುಶಾಹಿಯ ಪ್ರಭಾವಗಳಿಗೆ ಸಂವೇದಿಸಿದ, ಪ್ರತಿರೋಧ ಒಡ್ಡಿದ

ಮತ್ತು ಈ ಬಗೆಗೆ ಸೃಷ್ಟಿಯ ಪರ್ಯಾಯಗಳನ್ನು ಶೋಧಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಕ್ರಮವಾಗಿದೆ. ಇದು ಮುಂದಿನ ಅನ್ವಯಿಕ ಭಾಗಗಳಲ್ಲಿ ವಿವರವಾಗಿ ತೆರೆದುಕೊಳ್ಳುತ್ತದೆ.

**೭.೨. ಭೂಮಿ ಮತ್ತು ರೈತರ ಪ್ರಶ್ನೆ**

ಭೂಮಿ ಮತ್ತು ರೈತರ ಸಮಸ್ಯೆಗಳನ್ನು ಕುರಿತು ಅನೇಕ ಕತೆಗಾರರು ಕತೆಗಳನ್ನು ರಚಿಸುತ್ತಲೇ ಬಂದಿದ್ದಾರೆ. ನವೋದಯ ಕಾಲಘಟ್ಟದಿಂದಿಡಿದು ನವ್ಯೋತ್ತರ ಕಾಲಘಟ್ಟದವರೆಗಿನ ಎಲ್ಲ ಕತೆಗಾರರ ಕತೆಗಳಲ್ಲಿ ಭೂಮಿ ಮತ್ತು ರೈತರ ಪ್ರಶ್ನೆ ಕಾಣಿಸಿಕೊಳ್ಳುತ್ತಲೇ ಬಂದಿದೆ. ಕತೆಗಳ ವಿಶ್ಲೇಷಣೆಗೆ ತೊಡಗುವ ಮುನ್ನ ಆ ಸಂದರ್ಭದ ತಾತ್ವಿಕ ಚರಿತ್ರೆಯ ಕಡೆ ಗಮನಹರಿಸಿ ಕತೆಗಳ ವಿಶ್ಲೇಷಣೆಗೆ ತೊಡಗುತ್ತೇನೆ.

ನವವಸಾಹತುಶಾಹಿ ಸಂದರ್ಭದಲ್ಲಿ ಜಾಗತೀಕರಣದ ಪ್ರಭಾವದಿಂದ ಕೃಷಿಯನ್ನು ನಂಬಿಕೊಂಡ ರೈತರ ಬದುಕಿನ ಮೇಲೆ ಅನೇಕ ರೀತಿಯ ಪೆಟ್ಟುಗಳು ಬೀಳತೊಡಗಿದವು. ಇಲ್ಲಿ ಭೂಮಿ ಮತ್ತು ರೈತ ಪರಸ್ಪರಾವಲಂಬಿಗಳು. 'ಭೂಮಿ ತಾಯಿಯ ಚೊಚ್ಚಲ ಮಗ' ನೆಂದು ರೈತನನ್ನು ವರಕವಿ ಬೇಂದ್ರೆ ಕರೆದಿದ್ದಾರೆ. ಈ ಮಾತು ಔಚಿತ್ಯಪೂರ್ಣವಾದುದು. ಭೂತಾಯಿಯನ್ನು ದೈವವೆಂದು ಪೂಜಿಸುವ ರೈತ ಒಂದು ಕಡೆಯಾದರೆ, ಮತ್ತೊಂದು ಕಡೆಯ ಮನುಷ್ಯ ಸಮುದಾಯ ಪ್ರಕೃತಿಯಿಂದ ಬೇರ್ಪಟ್ಟು, ಈ ಭೂಮಿಯ ಸಂಪತ್ತು ತನ್ನ ಭೋಗಕ್ಕಾಗಿ ಇರುವಂಥದು ಎಂಬ ಮಾಯೆಗೆ ಒಳಗಾಗಿ ಮನುಷ್ಯ ತನ್ನನ್ನು ತಾನು ಸಂಪೂರ್ಣವಾಗಿ ಕಳೆದುಕೊಂಡ. ತನ್ನ ದೈಹಿಕ ಸುಖ ಹೆಚ್ಚಿಸುವ ಆರ್ಥಿಕ ಪ್ರಗತಿ ಮನುಷ್ಯನಿಗೆ ಕ್ಷಣಿಕ ಸುಖವನ್ನು ತರಬಹುದು ಮತ್ತು ಈ ಪ್ರಗತಿ ಅಂತ್ಯವಿಲ್ಲವೆಂಬ ಅವೈಜ್ಞಾನಿಕ ದೃಷ್ಟಿಯಿಂದ ನಿಸರ್ಗದ ಸಮಸ್ತ ಸಂಪತ್ತು ತನ್ನದೇ ಎಂಬಂತೆ ಅಹಂಕಾರದಿಂದ ಬಳಸಿಕೊಳ್ಳಲು ಆರಂಭಿಸಿದ ಸರಳ ಜೀವನ, ಪರಸ್ಪರ ಸಹಕಾರ, ನೆಮ್ಮದಿ ತೃಪ್ತಿಯೇ ಮೊದಲಾದ ಜೀವ ಪೋಷಕ ಮೌಲ್ಯಗಳು ಮೂಲೆ ಗುಂಪಾಗಿ ಇವುಗಳ ಬದಲಿಗೆ ಅಸಂಖ್ಯ ಭೋಗವಸ್ತುಗಳ ಉತ್ಪಾದನೆ ಮತ್ತು ಅವನ್ನು ತನ್ನ ಸುತ್ತ ಕೂಡಿ ಹಾಕುವುದರಲ್ಲಿ ಮನುಷ್ಯ ಮಗ್ನನಾಗಿರುವುದು ಎಲ್ಲೆಡೆ ಕಂಡುಬರುತ್ತಿದೆ.

ಇಲ್ಲಿ ಭೂಮಿಯನ್ನು ನಂಬಿಕೊಂಡ ರೈತ ಅನೇಕ ಹೋರಾಟಗಳ ಮೂಲಕ ತನ್ನ ಬದುಕನ್ನು ಕಟ್ಟಿಕೊಳ್ಳಲು ಇಂದು ಹೆಣಗಾಡುತ್ತಿದ್ದಾನೆ. ವಿಶ್ವ ಆರ್ಥಿಕ ಸಂಬಂಧ ಮತ್ತು ವಿಶ್ವ ರಾಜಕೀಯ ಸಂಪರ್ಕದಿಂದ ಮುಕ್ತ ಮಾರುಕಟ್ಟೆಯ ನೀತಿಯಿಂದಾಗಿ ಕೃಷಿ ಪದ್ಧತಿ ವಾಣಿಜ್ಯೀಕರಣಗೊಂಡಿದೆ. ವಾಣಿಜ್ಯ ಬೆಳೆಗಳು ಹೆಚ್ಚಾಗಿ, ಕೃಷಿ ಬದುಕು ಯಾಂತ್ರೀಕರಣಗೊಂಡು ದೈಹಿಕ ಶ್ರಮ ಕಡಿಮೆಯಾಗಿ ಯಂತ್ರಗಳ ಬಳಕೆ ಹೆಚ್ಚಾದಂತೆ ಕೃಷಿ ಬದುಕು ದುಬಾರಿಯಾಗತೊಡಗಿದೆ. ಬ್ರಿಟೀಷ್ ವಸಾಹತು ಶಾಹಿ ವಿರುದ್ಧ ಹೋರಾಡಿದ ಇತಿಹಾಸದ ನೆನಪುಗಳು ಇನ್ನು ಮಾಸದಿರುವ ಸಂದರ್ಭದಲ್ಲಿ, ನಮ್ಮ ನೆಲದಲ್ಲಿ ರೈತ ಚಳುವಳಿಗಳು, ರೈತರ ಸಮಸ್ಯೆಗೆ ಪರಿಹಾರವಾಗಿ ಕಾಣಿಸಿಕೊಳ್ಳತೊಡಗಿದವು. ರೈತರ ಆರ್ಥಿಕ ಬದುಕು ಅಭಿವೃದ್ಧಿಗೊಳಿಸುವ ಹಿನ್ನೆಲೆಯೊಂದಿಗೆ ರೈತ ಚಳುವಳಿಗಳೂ ಹುಟ್ಟಿಕೊಡವು.

ರೈತನೆಂದರೆ ಯಾರು? ಎಂಬ ಪ್ರಶ್ನೆಗೆ ರೈತಚಳುವಳಿಯ ಮಹಾರಾಷ್ಟ್ರದ ನಾಯಕರಾದ ಶರತ್ ಜೋಷಿಯವರು ಮತ್ತು ಅವರ ಶೇತ್ಕಾರಿ ಸಂಘಟನೆ ಆಶಯದಂತೆ ''ಯಾರು ತನ್ನ ಭೂಮಿಯನ್ನು ಸ್ವತಃ ತಾನೇ ಉಳುತ್ತಾನೆಯೋ ಅವನೇ ರೈತ''[೧] ನಾಗಿರುತ್ತಾನೆನ್ನುವ ನಿಲುವನ್ನು ವ್ಯಕ್ತಪಡಿಸಲಾಗಿದೆ. ಈ ಶೇತ್ಕಾರಿ ಸಂಘಟನೆ ರೈತ ಬದುಕಿನ ವಿವರಣೆಯನ್ನು ಕಟ್ಟಿಕೊಡುತ್ತಾ ''ಯಾರು ಕೃಷಿಯೊಂದಿಗೆ ಸಂಬಂಧವಿಟ್ಟುಕೊಂಡಿರುತ್ತಾರೋ ಅಥವಾ ಕೃಷಿಯಿಂದಲೇ

ಬದುಕುತ್ತಿದ್ದಾರೋ ಅವರೇ ರೈತರೆಂದು'' ಅರ್ಥೈಯಿಸುವ ಪರಂಪರೆಯನ್ನು ರೈತ ಚಳುವಳಿಗಳ ಮೂಲಕ ಹುಟ್ಟುಹಾಕಲಾಗಿದೆ.

ಈ ರೈತ ಮತ್ತು ಭೂಮಿಯ ಸಮಸ್ಯೆಗಳು ಅನೇಕ. ಒಂದೆಡೆ ಜಮಿನ್ದಾರಿ ಪದ್ಧತಿ, ಅವರಿಗೆ ಸೆರೆಯಾಗಿದ್ದ ಜೀತಪದ್ಧತಿ, ಮುಂತಾದ ಅನಿಷ್ಟಪದ್ಧತಿಗಳು ಎಲ್ಲೆಡೆ ತಾಂಡವವಾಡುತ್ತಿದ್ದವು. ಸಾಮಾನ್ಯ ಕೂಲಿಕಾರ್ಮಿಕರ ಬದುಕು ಸಂಕಷ್ಟದಲ್ಲಿ ಸಿಕ್ಕಿಕೊಂಡಿತ್ತು. ಇದಕ್ಕೆ ಮುಕ್ತಿಯನ್ನು ಕಾಣಿಸಲು ಎಡಪಂಥೀಯ ವಿಚಾಧಾರೆಯ ಮೂಲಕ ಅನೇಕ ಹೋರಾಟಗಳನ್ನು ರೂಪಿಸಿ ಅವರ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಯತ್ನಿಸಿದವು.

ರೈತ ಮತ್ತು ಭೂಮಿಯ ಪ್ರಶ್ನೆಯನ್ನಿಟ್ಟುಕೊಂಡು ಅಖಿಲ ಭಾರತ ಮಟ್ಟದಲ್ಲಿ 'ಕಿಸಾನ್‌ಸಬಾ' ಮತ್ತು ಕರ್ನಾಟಕದಲ್ಲಿ 'ಪ್ರಾಂತ ರೈತ ಸಂಘ'ಗಳು ಸಂಘಟನೆಯೊಂದಿಗೆ ಹೋರಾಟವನ್ನು ಮಾಡಿರುವುದು ಕಂಡುಬರುತ್ತದೆ. ಶತಶತಮಾನಗಳಿಂದ ಸಾಮಾನ್ಯ ಬಡರೈತ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾನೆ. ಜಮೀನ್ದಾರರ ಅಟ್ಟಹಾಸ ಎಲ್ಲೆಮೀರಿ ಅವರ ಶೋಷಣೆಯ ಕರಿನೆರಳಿನಲ್ಲಿ ತಮ್ಮ ಬದುಕನ್ನು ಕಮರಿಸಿಕೊಳ್ಳುತ್ತಲೆ ಬಂದಿದ್ದಾರೆ. ೧೯೫೮ ರಲ್ಲಿ ಬಾಗೂರು ನವಿಲೆ ಹೋರಾಟವು, ಹೊಸ ಆಂದೋಲನವನ್ನು ಮಾಡಿ ನಾಡಿನ ಜನರ ಗಮನ ಸೆಳೆಯಿತು. ಹಾಗೇಯೇ ಮಲಪ್ರಭಾನದಿಯ ಪ್ರದೇಶದ ರೈತರು ಕೂಡ ತಮ್ಮ ಭಾಗದ ಭೂಮಿಯ, ರೈತರ ಸಮಸ್ಯೆಯನ್ನಿಟ್ಟುಕೊಂಡು ಮಾಡಿದ ಹೋರಾಟವು ಕೂಡ ಕರ್ನಾಟಕ ರೈತ ಚಳುವಳಿಯ ಮುಖ್ಯ ತಿರುವೆಂದೇ ಹೇಳಬೇಕು.

ಕನ್ನಡ ನಾಡಿನ ಸಂದರ್ಭದಲ್ಲಿ, ಭೂಮಿ ಮತ್ತು ರೈತರ ಸಮಸ್ಯೆಗಳ ಅನೇಕ ಪ್ರಶ್ನೆಗಳು ಕಣ್ಣೆದುರಿಗೇಇದ್ದವು. ಸಣ್ಣ ಪುಟ್ಟ ಪಾಳೆಗಾರರು, ಕಟ್ಟಿಕೊಂಡಿದ್ದ ಜೀತಪದ್ದತಿ, ಬಿಟ್ಟಿದುಡಿಮೆ, ಬಡ್ಡಿವ್ಯವಹಾರ, ಜಾತಿ ಪದ್ಧತಿಯ ಸಾಮಾಜಿಕ ಅಂತಸ್ತುಗಳು ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಅನಿಷ್ಟಗಳೇ ತುಂಬಿದ್ದವು. ಜೊತೆಗೆ ಈ ಕಾಲಘಟ್ಟದಲ್ಲಿ ಭೂಸಂಬಂಧಗಳನ್ನು ಕುರಿತು ಮಾತನಾಡುವುದಾದರೆ ಜೋಡಿ ಇನಾಂ ಪದ್ದತಿಗಳು ಜಮ್ಮಾ ಜಹಗೀರುವಾರ ಗುತ್ತಿಗೆ, ಒಳಕಂದಾಯ ಪದ್ದತಿ, ಗೇಣಿ ಪದ್ದತಿಗಳು ಜಾರಿಯಲ್ಲಿದ್ದವು. ಕೆಲವು ಭಾಗದಲ್ಲಿ ಗೇಣಿ ಪದ್ದತಿಯು ನಿಜಾಮ ಶಾಹಿಯ ಕಪಿಮುಷ್ಟಿಯಲ್ಲಿತ್ತು. ಈ ಗೇಣಿ ಪದ್ದತಿಯ ಪ್ರಕಾರ ಸಾಮಾನ್ಯ ರೈತ, ಕೂಲಿಕಾರರು ತಮ್ಮ ದುಡಿಮೆಯ, ಭೂಮಿಯ ಫಲದ ಬಹುಭಾಗವನ್ನು ಭೂಮಾಲಿಕನಿಗೆ ನೀಡಬೇಕಾಗಿತ್ತು. ಜೊತೆಗೆ ಜಮಿನ್ದಾರರಿಗೆ ಬಿಟ್ಟಿ ದುಡಿಮೆಯ ಜೊತೆಗೆ ರೈತ ಕೂಲಿಕಾರರು ಹಬ್ಬಗಳಲ್ಲಿ ಉತ್ತಮ ವಸ್ತುಗಳನ್ನು ಕಾಣಿಕೆ ಕೊಡುವ ಪದ್ಧತಿಯೂ ಜಾರಿಯಲ್ಲಿರುವುದು ಕಂಡುಬರುತ್ತದೆ. ಮತ್ತು ಕೆಲವು ಭಾಗದಲ್ಲಿ ಜಮೀನ್ದಾರಿ ಪದ್ಧತಿಯ ಬದಲಾಗಿ 'ಉಳಿಗಮಾನ್ಯ ಪದ್ಧತಿ' ಸಂಪ್ರದಾಯದ ಹೆಸರಿನಲ್ಲಿ ಬಲಿಷ್ಟವಾಗಿತ್ತು. ಬಲಿಷ್ಟ ಜಮೀನ್ದಾರರು ಮಧ್ಯಮ ಹಾಗೂ ಬಡ ರೈತರನ್ನು ಶೋಷಣೆ ಮಾಡುತ್ತಿರುವುದು ಕೂಡ ಸಾಮಾನ್ಯವಾಗಿತ್ತು. ಹೀಗೆ ಭೂಮಿ ಪ್ರಶ್ನೆ, ಭೂಮಿಯನ್ನು ಕುರಿತಾದ ಸಂಬಂಧಗಳು ಅನೇಕ ಸಮಸ್ಯೆಗಳಿಗೆ ಕಾರಣವಾಗಿತ್ತು. ರೈತರೂ ಕೂಡ ಅನೇಕ ಹೋರಾಟಗಳಿಗೆ ಸಜ್ಜಾಗತೊಡಗಿದ್ದರು.

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ 'ಕಿಸಾನ್ ಸಭಾ' ಭೂಮಾಲಿಕ ಬಂಡವಾಳ ಶಾಹಿ ಪದ್ಧತಿಯನ್ನು ನಾಶಮಾಡಲು ಸ್ವಾತಂತ್ರ್ಯ ಹೋರಾಟದೊಡನೆ ರೈತ ಹೋರಾಟವನ್ನು ಬೆಸೆಯುತ್ತಾ ಭಾರತದ ರೈತಾಪಿ ವರ್ಗವನ್ನು ಒಂದು ಗೂಡಿಸಲು ''ಸಿದ್ಧಾಂತ - ಸಂಘಟನೆ - ಹೋರಾಟ''ವೆಂಬ ಮಾದರಿಯನ್ನಿಟ್ಟುಕೊಂಡು ಸಮಕಾಲೀನ

ಗ್ರಾಮೀಣ ರೈತ ಸಮಸ್ಯೆಗಳಿಗೆ ಹೋರಾಟದ ಮೂಲಕ ಪರಿಹಾರವನ್ನು ಕಾಣಿಸುವ ಉದ್ದೇಶವನ್ನು ಈ ಸಂಘಟನೆಯಿಟ್ಟುಕೊಂಡಿರುವಂತಹ ಸಂಗತಿಯನ್ನು ತಾತ್ವಿಕ ಚರಿತ್ರೆ ಹೇಳುತ್ತದೆ.

ನೂರಾರು ವರುಷಗಳಿಂದ ಭೂಮಿಯನ್ನೆ ಆಶ್ರಯಿಸಿಕೊಂಡು ತಮ್ಮ ಬದುಕನ್ನು ಕಟ್ಟಿಕೊಳ್ಳುತ್ತಿದ್ದ ರೈತಕೂಲಿ ಕಾರ್ಮಿಕರು ತಮ್ಮ ಮೇಲೆ ಭೂಮಾಲಿಕರು ನೀಡುತ್ತಿದ್ದ ಕಿರುಕುಳಗಳನ್ನು ಎದುರಿಸಲು ಆಂಧ್ರ ಪ್ರದೇಶದ ತೆಲಂಗಾಣ ಹೋರಾಟವು ಭೂಮಿ ಹಂಚಿಕೆಗೆ ಸಂಬಂಧ ಪಟ್ಟ ಹೋರಾಟವನ್ನು ರೂಪಿಸಿರುವುದು ಚಾರಿತ್ರಿಕ ಸತ್ಯವಾಗಿದೆ.

ಈ ಭೂಮಿ ಮತ್ತು ಭೂಮಿಯನ್ನು ತನ್ನದಾಗಿಸಿಕೊಳ್ಳಬೇಕೆಂಬ ಹೋರಾಟಗಳು ನಿರಂತರವಾಗಿ ನಡೆಯುತ್ತಲೇ ಬಂದಿವೆ. ಮಲೆನಾಡು ಪ್ರಾಂತದಲ್ಲಿ ಸಮಾಜವಾದಿ ಪಕ್ಷವು ಭೂಮಿ ಆಂದೋಲನ ನಡೆಸಿರುವುದು. ಇದಕ್ಕೂ ಹಿಂದೆ ಈ ಭಾಗದಲ್ಲಿ ಕಾಗೋಡು ಸತ್ಯಾಗ್ರಹದ ನೆನಪುಗಳು ಹಸಿರಾಗಿರುವಾಗಲೇ ಈ ಭೂಮಿ ಚಳುವಳಿ ಪ್ರಾರಂಭವಾಗಿದ್ದನ್ನು ಸ್ಮರಿಸಿಕೊಳ್ಳಬೇಕು. ರೈತರ ಪ್ರಮುಖ ಸಮಸ್ಯೆಯಾದ ಭೂಮಿಯ ಸಮಸ್ಯೆಯನ್ನೇ ಹಕ್ಕೊತ್ತಾಯದ ರೀತಿಯಲ್ಲಿ ಕೇಳತೊಡಗಿತು. ಸರಕಾರದ ನಿಯಂತ್ರಣದಲ್ಲಿದ್ದ ಸಾಗುವಳಿಗೆ ಒಳಪಡದ ಭೂಮಿಯನ್ನು ಸಾಗುವಳಿ ಮಾಡಲು ಸರಕಾರ ಅನುಮತಿಯನ್ನು ನೀಡಬೇಕೆಂದು ಚಳುವಳಿ ಹೂಡಿತು. ''ನೂರಾರು ವರುಷಗಳಿಂದ ಭೂಮಿಯನ್ನು ನಂಬಿ ಬದುಕುತ್ತಿರುವ ಬೇಸಾಯ ಕೂಲಿಕಾರರು ಹಾಗೂ ಭೂಹೀನ ರೈತರಿಗೆ ಅದರಲ್ಲೂ ಸಮಾಜದಲ್ಲಿ ತುಳಿದಿಟ್ಟ ಹರಿಜನ-ಗಿರಿಜನ ಇನ್ನಿತರ ಹಿಂದುಳಿದ ಜನರಿಗೆ ಗಾಂಧಿ ಶತಾಬ್ಧಿಯ ವರ್ಷದಲ್ಲಿ (೧೯೬೯) ಭೂಮಿ ದೊರಕಿಸಿಕೊಡುವ ಉದ್ದೇಶದ ಚಳುವಳಿಯನ್ನು ಕರ್ನಾಟಕದಲ್ಲಿ ಹೂಡಲು''[೨] ಸಮಾಜವಾದಿ ಪಕ್ಷ ತೀರ್ಮಾನಿಸಿ ಕಾರ್ಯರೂಪಕ್ಕೆ ತರಲು ಸಮಿತಿ ರಚಿಸಿ ಹೋರಾಟಮಾಡಿ ಭೂಹೀನರಿಗೆ ಭೂಮಿಯನ್ನು ಹಂಚಿಕೊಡುವಲ್ಲಿ ಯಶಸ್ವಿಯಾಯಿತು.

ಭೂಮಿ ಮತ್ತು ರೈತರಿಗೆ ಸಂಬಂಧಿಸಿದ ಸಮಸ್ಯೆಗೆ ಸಂಬಂಧಿಸಿದ ಚರಿತ್ರೆಯನ್ನೆ ಬರೆದಿಡುವಷ್ಟು ಸಾಮಗ್ರಿಯಿದೆ. ಆದರೆ ಇಂದು ರೈತನಿಗೆ ಸ್ವಾತಂತ್ರ್ಯ ಬಂದು ಅರ್ಧಶತಮಾನ ಕಳೆದು ಹೋದರೂ. ಆತನ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿದಿವೆ. ನೀರಿಲ್ಲದ ಬಯಲು ಸೀಮೆಯ ನಾಡಿನಲ್ಲಿ ಅತಿವೃಷ್ಠಿ-ಅನಾವೃಷ್ಠಿ ಯಿಂದಾಗಿ ರೈತ ಕಂಗಾಲಾಗಿದ್ದಾನೆ. ಸರಕಾರ ಮತ್ತು ಖಾಸಗಿ ಬೀಜ ನಿಗಮಗಳು ನೀಡುವ ಖೊಟ್ಟಿ ಬೀಜದಿಂದ ರೈತ ಸರಿಯಾದ ಬೆಳೆ ಬೆಳೆಯಲಾಗದೇ ದುಃಖತಪ್ತನಾಗಿದ್ದಾನೆ. ಆಳುವ ಸರಕಾರ ಘೋಷಿಸುವ ಅನೇಕ ಯೋಜನೆಗಳು ರೈತರ ಭೂಮಿಗೆ ತಲುಪುತ್ತಿಲ್ಲ. ಕಳಪೆ ಕ್ರಿಮಿನಾಶಕ, ಕಳಪೆಗೊಬ್ಬರ ಕಳಪೆ ಬೀಜ ವಿತರಣೆಗಳಿಂದ ರೈತ ನಷ್ಟದ ಬಾರಹೊತ್ತು ಆತ್ಮಹತ್ಯೆಯ ಕಡೆ ಸಾಗುತ್ತಿದ್ದಾನೆ. ಇಂದು ರೈತರ ಆತ್ಮಹತ್ಯೆಗಳು ಹೆಚ್ಚು ಸಂಭವಿಸುತ್ತಿರುವುದನ್ನು ಅನೇಕ ಮಾಧ್ಯಮಗಳು ವರದಿಮಾಡುತ್ತಿವೆ. ಇದಕ್ಕೆಲ್ಲಾ ಆಳುವ ವರ್ಗ ಸುದೀರ್ಘ ಮೌನವಹಿಸುತ್ತಿರುವುದು ಮತ್ತು ಸಾವಿಗೆ ಅನ್ಯಕಾರಣಗಳನ್ನು ನೀಡುತ್ತಿರುವುದು ಪ್ರಜಾಪ್ರಭುತ್ವ ಸರಕಾರದ ಬೇಜವಾಬ್ದಾರಿತನವನ್ನು ಸೂಚಿಸುತ್ತದೆ. 'ಭೂಮಿ ತಾಯಿಯ ಚೊಚ್ಚಲ ಮಗನನು ಕಣ್ತೆರೆದೊಮ್ಮೆ ನೋಡಿಹರೇನು?'ಯೆಂಬ ವರಕವಿ ಬೇಂದ್ರೆಯ ಕವಿತೆಯ ನೋವಿನ ಸಾಲುಗಳು ಆಳುವವರಿಗೆ, ಬಂಡವಾಳ ಶಾಹಿಗಳಿಗೆ ಮುಟ್ಟುತ್ತಲೇಯಿಲ್ಲ.

ಜಾಗತಿಕ ಮುಕ್ತ ಮಾರುಕಟ್ಟೆಯ ನೀತಿಯಿಂದಾಗಿ ರೈತರು ಬೆಳೆದ ಬೆಳೆಗಳಿಗೆ ಸೂಕ್ತವಾದ ಬೆಲೆಯೂ ಲಭ್ಯವಾಗುತ್ತಿಲ್ಲ. ಭೂಮಿಯ ಬೆಳೆಗಾಗಿ ಮಾಡಿದ ಸಾಲದ ಚಿಂತೆ ಕಾಡತೊಡಗಿದಂತೆ ಸ್ವಾಭಿಮಾನಿಯಾದ ರೈತರು ಆತ್ಮಹತ್ಯೆಯ ಮೊರೆ ಹೋಗುವುದು ಸಹಜವಾಗಿದೆ. ಹೀಗೆ ಭೂಮಿ ಮತ್ತು ರೈತರ ಸಮಸ್ಯೆಗಳು ದಿನೇ ದಿನೇ

ಉಲ್ಬಣಗೊಳ್ಳುತ್ತಲೇ ಸಾಗುತ್ತಿರುವುದನ್ನು ನಿತ್ಯಕಾಣುವ ದೃಶ್ಯಮಾಧ್ಯಮದ ವರದಿಯಾಗುತ್ತಿರುವುದು ಪ್ರಜಾಪ್ರಭುತ್ವದ ವ್ಯಂಗ್ಯ ಸಾಕ್ಷಿಚಿತ್ರವೂ ರೈತನಾಗಿದ್ದಾನೆ. ಇದಕ್ಕೆಲ್ಲಾ ಪರಿಹಾರವೇನು? ಎಂಬ ಚಿಂತೆ ಎಲ್ಲರನ್ನೂ ಕಾಡುವಂತದ್ದಾಗಿದೆ.

ನವವಸಾಹತುಶಾಹಿ ಸಂದರ್ಭದಲ್ಲಿ ರೈತ ಮತ್ತು ಭೂಮಿಯ ಸಂಬಂಧಗಳನ್ನಿಟ್ಟುಕೊಂಡು ಅನೇಕ ಕತೆಗಾರರು ಕತೆಗಳನ್ನು ರಚಿಸಿ ಆ ಸಂದರ್ಭದ ತಲ್ಲಣಗಳಿಗೆ ಸ್ಪಂದಿಸಿದ ರೀತಿಯೂ ಅನನ್ಯವಾಗಿರುವಂತದ್ದಾಗಿದೆ. ಆಧುನಿಕ ಕನ್ನಡದ ಬಹು ಮುಖ್ಯ ಕತೆಗಾರರಾದ ಪಿ ಲಂಕೇಶ ಅವರ ರೈತ ಸಂಬಂಧೀಕರಣದ ಎರಡು ಕತೆಗಳು ವಿಶಿಷ್ಟವಾಗಿವೆ. 'ಮುಟ್ಟಿಸಿಕೊಂಡವರು' ಕತೆಯಲ್ಲಿ ಬರುವ ಬಸಲಿಂಗಪ್ಪ ಒಬ್ಬ ಪ್ರಾಮಾಣಿಕ ಮತ್ತು ಕನಸುಗಳನ್ನಿಟ್ಟುಕೊಂಡ ಮುಗ್ಧರೈತ. ಆದರೆ ಆತನಲ್ಲಿ ಜಾತಿಯ ವಿಷಬೀಜ ಮೊಳಕೆಯೊಡೆದು ಚಿಗಿಯುವುದು ಆತನು ಕಣ್ಣು ಕಳೆದುಕೊಳ್ಳುವವರೆಗೂ ಆತನ ಮೌಢ್ಯತೆ ಬೆಳೆಯುತ್ತಿದೆ. ಲಂಕೇಶರ ಇನ್ನೊಂದು ಕತೆ 'ಸಹಪಾಠಿ'ಯಲ್ಲಿ ಬಸವೇಗೌಡ ಒಬ್ಬ ಜಮೀನ್ದಾರನಾಗಿದ್ದುಕೊಂಡು ಮಲೆನಾಡಿನ ಕುಗ್ರಾಮವಾದ ಕಿರುಮಲ್ಲಿಗೆ ಗ್ರಾಮದ ಪಟೇಲನಾಗಿರುವವನು. ಊರು, ಕಾಡು ಪರಿಸರದ ಮೇಲೆ ಹತೋಟಿಯನ್ನು ಸ್ಥಾಪಿಸಿಕೊಂಡವನು. ಆದರೆ ಆತನ ಆಳದಲ್ಲಿರುವ ಫ್ಯೂಡಲ್ ಗುಣಗಳಿಂದಾಗಿ ತನ್ನನ್ನು ತಾನೇ ಸರ್ವಾಧಿಕಾರಿಯೆಂದು ಭಾವಿಸಿಕೊಂಡು ಸುತ್ತಲ ಹಳ್ಳಿಗಳನ್ನು ತನ್ನ ಕೈಬೆರಳಿನಲ್ಲಿ ಕುಣಿಸಿದವನು. ಸಹಪಾಠಿ ಬಸವೇಗೌಡ ತನ್ನ ಈ ಫ್ಯೂಡಲ್ ಗುಣದಿಂದಾಗಿ ತನ್ನ ಅವನತಿಯ ನೆಲೆಯನ್ನು ತಾನೇ ಹುಡುಕಿಕೊಳ್ಳುತ್ತಾನೆ. ಇದೇ ರೀತಿ ಇನ್ನೊಬ್ಬ ಮಹತ್ತರ ಕಥೆಗಾರರಾದ ಮಲ್ಲಿಕಾರ್ಜುನ ಹಿರೇಮಠ ತಮ್ಮ ಅಮಿನಾಪುರ ಸಂತೆಯಲ್ಲಿ ರೈತನೊಬ್ಬನ ದುರಂತದ ಕತೆಯನ್ನು ವಿಶಿಷ್ಟವಾದ ಸಂವೇದನೆಯಲ್ಲಿ ಪ್ರಕಟಪಡಿಸಿದ್ದಾರೆ. ಹಾಗೆಯೇ ಬಳ್ಳಾರಿ ಭಾಗದ ಪ್ರಸಿದ್ಧ ಕತೆಗಾರರಾದ ಡಾ. ರಾಜಶೇಖರ ನೀರಮಾನ್ವಿಯವರು ತಮ್ಮ ಹಂಗಿನರಮನೆಯ ಹೊರಗೆ ಕತೆಯ ಮೂಲಕ ಚರ್ಚಿತರಾದವರು. ಅವರ ತೊಂಭತ್ತರ ದಶಕಗಳಲ್ಲಿ ಬರೆದ ''ಕರ್ಪೂರದ ಕಾಯದಲ್ಲಿ ಬೆಂಕಿಯುಸಿರಾಟ'' ಎಂಬ ಕತೆ ರೈತ ಚಳುವಳಿಯ ನೆಲೆ. ಜಮಿನ್ದಾರನಾದ ಮಲ್ಲರಿಗೌಡ ಪಾಟೀಲನ ದ್ವಿಮುಖ ನೀತಿಗಳನ್ನು ಬಹಿರಂಗಪಡಿಸುತ್ತದೆ.

ಗಡಿಭಾಗದ ಕನ್ನಡದ ಮಹತ್ವದ ಕತೆಗಾರರಾದ ಕುಂ. ವೀರಭದ್ರಪ್ಪನವರು ಕೂಡ ರೈತ ಮತ್ತು ಜಮಿನ್ದಾರಿ ವ್ಯವಸ್ಥೆಯ ಕರಾಳ ಮುಖಗಳನ್ನು ತಮ್ಮ ಹಲವಾರು ಕತೆಗಳಲ್ಲಿ ಸಶಕ್ತವಾಗಿ ಹಿಡಿದಿಟ್ಟಿದ್ದಾರೆ. ಅವರ ಕಪ್ಪುನೆಲದಲ್ಲೊಂದು ಕೆಂಪು ಕತೆಯಲ್ಲಿ ಭೂಮಿಯನ್ನು ಪಡೆಯುವ ಪರತನೆಂಬ ಬಡವನ ನೋವಿನ ಕತೆಯಿದೆ. ಕನ್ನಡ ಕಥಾ ಸಾಹಿತ್ಯ ಸಂದರ್ಭದಲ್ಲಿ ಮುಖ್ಯ ಕತೆಗಾರರಾಗಿರುವ ಮಲ್ಲಿಕಾರ್ಜುನ ಹಿರೇಮಠರ ಅಮೀನಪುರದ ಸಂತೆ ಬರಗಾಲದ ನಾಡಿನ ರೈತನೊಬ್ಬನ ನೋವಿನ ಧಾರುಣ ಸಾವಿನ ಕತೆಯಿದು. ಹೈದ್ರಾಬಾದ್ ಕರ್ನಾಟಕದ ಬಹು ಮುಖ್ಯ ಕತೆಗಾರರಾಗಿ ರೂಪುಗೊಂಡಿರುವ ಅಮರೇಶ ನುಗಡೋಣಿಯವರ 'ತಮಂಧದ ಕೇಡು'ವಿನಲ್ಲಿ ಜಮಿನ್ದಾರನಾದ ಶಾಂತಗೌಡ ಮತ್ತು ಆತನ ಮನೆಯ ಜೀತಗಾರ ದುರುಗನ ವ್ಯಕ್ತಿತ್ವದ ವಿವಿಧ ಮುಖಗಳ ಚಿತ್ರಣವಿದೆ. ಅಮರೇಶರ ಇನ್ನೂ ಕೆಲವು ಕತೆಗಳನ್ನು ರೈತ ಸಂಬಂಧಿ ಸಂವೇದನೆಗೆ ಚರ್ಚೆಗೆ ಬಳಸಿಕೊಂಡಿದ್ದೇನೆ. ಇವರ ಹಾಗೆಯೇ ಇತರ ಹೊಸ ತಲೆಮಾರಿನ ಅರವಿಂದ ಮಾಲಗಿತ್ತಿಯವರ ''ಭೂಮಸೂದೆ'', ಮಲ್ಲಿಕಾರ್ಜುನ ವಣೇನೂರರ ''ಮೂಗ'' ನಟರಾಜ ಹುಳಿಯಾರರ ''ಬೀರುಬಿಟ್ಟನೆಲ''. ಎಸ್. ಗಂಗಾಧರಯ್ಯನವರ 'ನವಿಲ ನೆಲ', ಕೃಷ್ಣನಾಯಕರ ''ಮೋತುನಮದ್ವೆ'' ಕಲಿಗಣನಾಥ ಗುಡುದೂರರ ''ಮಣ್ಣು'' ಮುಂತಾದ ಕತೆಗಾರರ ಕತೆಗಳು ನವವಸಾಹತುಶಾಹಿ ಸಂದರ್ಭದಲ್ಲಿ ಸ್ಪಂದಿಸಿದ ರೀತಿಯನ್ನು ಇಲ್ಲಿ ಚರ್ಚಿಸಿದ್ದೇನೆ.

ಆಧುನಿಕ ಕನ್ನಡದ ಬಹು ಮುಖ್ಯ ಪ್ರಕಾರವಾದ 'ಸಣ್ಣಕತೆ' ಕ್ಷೇತ್ರದಲ್ಲಿ ಅನೇಕ ಹೊಸ ಭರವಸೆಯ ಕತೆಗಾರರು ಹುಟ್ಟಿ ಬರುತ್ತಿದ್ದಾರೆ. ಅವರು ರೈತ ವಿಷಯವಾಗಿ ಸ್ಪಂದಿಸಿ ರಚಿಸಿದ ಕೆಲವು ಕತೆಗಳನ್ನು ಈ ಸಂದರ್ಭದಲ್ಲಿ ಚರ್ಚೆಗೆ ಬಳಸಿಕೊಂಡಿದ್ದೇನೆ. ಅವರ ಕತೆಗಳಲ್ಲಿ ಕಾಣಿಸಿಕೊಂಡ ನವವಸಾಹತುಶಾಹಿಯ ಕೆಲವು ಪ್ರಮುಖ ಎಳೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದೇನೆ.

**೭.೩. ರೈತ ಸಂಬಂಧಿ ಕಥೆಗಳ ವಿಶ್ಲೇಷಣೆ**

ಲಂಕೇಶರ 'ಮುಟ್ಟಿಸಿಕೊಂಡವರು' ಕತೆ ಮುಗ್ಧ ರೈತನಾದ ಬಸಲಿಂಗನ ಕತೆ. ಆತನ ಬದುಕು ಸಂಕಟದಲ್ಲಿದೆ. ''ಬಸಲಿಂಗನಿಗೆ ಅದು ಪುರುಸೊತ್ತಿಲ್ಲದ ಕಾಲ. ಗೇಯುವುದನ್ನು ನಾಲ್ಕು ದಿನ ತಡ ಮಾಡಿದರೆ ಕುಳ ನೆಲದಲ್ಲಿ ನಾಟುವುದಿಲ್ಲ. ಆದರೆ ಇರುವ ಎರಡು ಎತ್ತುಗಳಲ್ಲಿ ಒಂದು ನೊಗ ಇಟ್ಟೊಡನೆ ಮಲಗಿ ಬಿಡುತ್ತದೆ. ಎಷ್ಟು ಹೊಡೆದರೂ ಏಳುವುದಿಲ್ಲ. ಇನ್ನೊಂದು ಕೂಡ ತನ್ನ ಸಹೋದ್ಯೋಗಿಯಂತೆಯೇ ಆಗಿ ಬಿಡುವ ಸೂಚನೆಗಳಿವೆ. ಎರಡು ಎತ್ತುಗಳನ್ನು ಯಾರಾದರೊಬ್ಬರಿಗೆ ಸಾಟಿಯಲ್ಲಿ ಕೊಟ್ಟು ಹೊಸ ಎತ್ತುಗಳನ್ನು ಹೊಂಚಿಕೊಳ್ಳಬೇಕು. ಮಗುವಿಗೆ ಮೈಯಲ್ಲಿ ಸರಿಯಿಲ್ಲ. ಶಿವನೂರು ಸ್ವಾಮಿಗಳಿಗೆ ತೋರಿಸಬೇಕು. ಎಂದು ಹೆಂಡ್ತಿ ಸಿದ್ಲಿಂಗಿ ಹೇಳುತ್ತಲೇಯಿದ್ದಾಳೆ.''[೩] ಭೂಮಿ ಊಳುವ ಎತ್ತುಗಳು ವಯಸ್ಸಾಗಿ ನಿತ್ರಾಣಗೊಂಡಿವೆ. ಎತ್ತುಗಳನ್ನು ಸಾಟಿಯಲ್ಲಿ ಬದಲಾಯಿಸುವ ಯೋಚನೆ ಆತನಲ್ಲಿದೆ. ಭೂಮಿ ಉಳುಮೆಮಾಡದೇ ಹೋದರೆ ಕುಳ ನೆಲದಲ್ಲಿ ನೆಡುವುದಿಲ್ಲ ಮಳೆಬಾರದೆ ಹೋಗಿದೆ. ಬಾರದ ಮಳೆಯ ರೈತನ ಕನಸು ಮನೆಯಲ್ಲಿ ಬಡತನ ಕಾಣದಂತಿದೆ. ಮಗನಿಗೆ ಖಾಯಿಲೆಯಾಗಿ ವೈದ್ಯರ ಬದಲು ಶಿವನೂರಿನ ಸ್ವಾಮಿಗಳಿಗೆ ತೋರಿಸುವ ಹಂಬಲವಿರುವ ಸಂಪ್ರದಾಯದ ಹೆಂಡತಿ. ಬಸಲಿಂಗನಿಗೆ ಇದ್ದಕ್ಕಿದ್ದಂತೆ ಕಾಣಿಸಿಕೊಂಡ ಕಣ್ಣು ನೋವು ಆತನನ್ನು ನೋವಿನ ಪ್ರಪಾತಕ್ಕೆ ತಳ್ಳಿದೆ. ಅನೇಕ ವೈದ್ಯರಲ್ಲಿ ತೋರಿಸಿದ ಆತ ಕೊನೆಗೆ ಡಾ. ತಿಮ್ಮಪ್ಪನವರಲ್ಲಿ ತೋರಿಸಿದ. ಆತ ಮುಗ್ಧನಾಗಿ ತನ್ನ ದೀನ ಸ್ಥಿತಿಯನ್ನು ಹೇಳಿಕೊಳ್ಳುತ್ತಾನೆ. ಭಿತ್ತದ ಭೂಮಿ, ಎಳೆಯಲಾರದ ಎತ್ತುಗಳು ಖಾಯಿಲೆಯಲ್ಲಿದ್ದ ಮಗ ಎಲ್ಲವನ್ನೂ ಹೇಳಿಕೊಳ್ಳುತ್ತಾನೆ. ವೈದ್ಯನಾದ ತಿಮ್ಮಪ್ಪ ಆತನ ನೋವಿಗೆ ಸ್ಪಂದಿಸಿ ನೋವಾದ ಕಣ್ಣಿಗೆ ಶಸ್ತ್ರ ಚಿಕಿತ್ಸೆ ಮಾಡಿಸಿ ಎರಡುವಾರ ತಲೆಗೆ ನೀರನ್ನು ಹಾಕಿಕೊಳ್ಳಬಾರದೆಂದು ಹೇಳಿರುತ್ತಾನೆ. ಚಿಕಿತ್ಸೆಯಿಂದ ಮನೆಗೆ ಬಂದ ಬಸಲಿಂಗನಿಗೆ ಡಾ. ತಿಮ್ಮಪ್ಪ ಹೊಲೆಯರವನು ಎಂಬುದು ತಿಳಿದಾಗ ಹೆಂಡತಿ ಕೆಂಡಾಮಂಡಲ ಸಿಟ್ಟಾಗಿ ಶುದ್ಧಿಯಾಗಲೇ ಬೇಕೆಂದು ತಲೆಗೆ ಸ್ನಾನ ಮಾಡಿಸಿಬಿಡುತ್ತಾಳೆ. ಕಣ್ಣು ಬೇನೆ ಉಲ್ಬಣಗೊಂಡು ಮತ್ತೊಂದು ಕಣ್ಣಿಗೆ ತಾಕುತ್ತದೆ. ಹೊಲದ ಕೆಲಸ ಮಾಡಲಾರದೆ ನೋವು ಕಾಡತೊಡಗುತ್ತದೆ. ಅನೇಕ ವೈದ್ಯರಲ್ಲಿ ಎಡತಾಗಿ ಕೊನೆಗೆ ಡಾ. ತಿಮ್ಮಪ್ಪನವರಲ್ಲಿ ಬಂದು ಆತನನ್ನು ಬಿಗಿದಪ್ಪಿಕೊಂಡು ಜಾತಿವಿನಾಶದ ಸಣ್ಣತನವನ್ನು ಪ್ರಾಯಶ್ಚಿತ್ತದಿಂದ ಒಪ್ಪಿಕೊಳ್ಳುತ್ತಾನೆ. ಆತನ ದೌರ್ಬಲ್ಯ, ಅಸಹಾಯಕತೆ, ಬಡತನ ಎಲ್ಲವನ್ನೂ ಕೇಳಿದ ಡಾ. ತಿಮ್ಮಪ್ಪ ಸಾವಧಾನ ಚಿತ್ತದಿಂದ ಯೋಚಿಸಿ, ಮತ್ತೊಂದು ಕಣ್ಣಿಗೆ ಶಸ್ತ್ರ ಚಿಕಿತ್ಸೆಮಾಡಿ ಕಣ್ಣು ಉಳಿಸುತ್ತಾನೆ.

ಗ್ರಾಮೀಣ ಭಾರತದ ಬಸಲಿಂಗನಂತಹ ರೈತನೊಬ್ಬನ ಮನಸ್ಸಿನಲ್ಲಿದ್ದ ಜಾತಿ ದುರಂತದ ಭಾವನೆಯನ್ನು ಲಂಕೇಶರು ಕಟು ಸತ್ಯದ ಭಾಷೆಯಲ್ಲಿ ಚಿತ್ರಿಸಿದ್ದಾರೆ. ಜಾತಿಯ ಎಲ್ಲಾ ಸಣ್ಣತನಗಳನ್ನು ಮೀರಿದ ಡಾ. ತಿಮ್ಮಪ್ಪ ತನ್ನ ಅಗಾಧವಾದ ಸಮಾನತೆಯ ವಿದ್ಯೆಯ ಅರಿವಿನಿಂದ. ಬಸಲಿಂಗನಂತಹ ಅನಕ್ಷರಸ್ಥನ ಜಾತಿ ಸಂಕರವನ್ನು ಕಿತ್ತೊಗೆಯುವುದು ಹೊಸ ಮನ್ವಂತರದ ನಿಲುವಾಗಿದೆ. ಬಸಲಿಂಗನ ಭೂಮಿ ಉಳು ಕನಸು, ಆತನ ಎತ್ತುಗಳ

ಅಸಹಾಯಕತನ, ಮಗನ ಖಾಯಿಲೆ, ಇವೆಲ್ಲಾ ನೋವಿಗಿಂತ ಮಿಗಿಲಾದ ನೋವು ಜಾತಿ ದುರಂತದ್ದಾಗಿದೆ. ಆದರೆ ಕೊನೆಯಲ್ಲಿ ಬಸಲಿಂಗ ಎಲ್ಲಾ ಸುಳ್ಳುಗಳಿಂದ ಮುಕ್ತನಾಗಿ ವೈದ್ಯನಾದ ತಿಮ್ಮಪ್ಪನ ಚಲನವಲನದಲ್ಲಿ ನಿರ್ಲಿಪ್ತ ಭಾವಕ್ಕೆ ಮೂಕನಾಗಿ ಬಿಡುತ್ತಾನೆ. ಹೊಸ ಮನುಷ್ಯನಾಗುತ್ತಾನೆ.

ಲಂಕೇಶರ 'ಸಹಪಾಠಿ' ಕತೆ ಕೂಡ ಜಮಿನ್ದಾರಿ ವ್ಯವಸ್ಥೆಯ ಪ್ರತಿನಿಧಿಯಂತಿದ್ದ ಬಸವೇಗೌಡ ಕಿರುಮಲ್ಲಿಗೆ ಗ್ರಾಮದ ಸುತ್ತಣ ನಾಲ್ಕಾರು ಗ್ರಾಮಗಳನ್ನು ತನ್ನ ಹೆಬ್ಬರಳಿನಡಿಯಲ್ಲಿ ಆಡಿಸಿದವನು ನಿರೂಪಕರ ಸಹಪಾಠಿಯಾಗಿದ್ದ ಆತ ಮಿಡಿಲ್ ಸ್ಕೂಲ್‌ನಲ್ಲಿ ಒಂದೇ ಬೆಂಚಿನಲ್ಲಿ ಕೂತು ಓದಿದವನು. ಜಮಿನ್ದಾರನಾದ ಬಸವೇಗೌಡನ ಅನುಮತಿಯಲ್ಲಿಯೇ ಸುತ್ತಣ ಹಳ್ಳಿಗಳಲ್ಲಿ ಹಬ್ಬ ಹರಿದಿನ ಜಾತ್ರೆ ಸಮಾರಂಭಗಳು ನಡೆಯುತ್ತಿದ್ದವು. ಏನೆಲ್ಲಾ ಆಗಿ ಆ ಕಗ್ಗಾಡಿನ ಊರಿನಲ್ಲಿ ದರ್ಪದಿಂದ ಬದುಕಿದವನು. ಊರಿಗೆ ಶಾಲೆ. ಪೋಲಿಸರು ಯಾರೂ ಕಾಲಿಟ್ಟರಲಿಲ್ಲ. ಎಲ್ಲಾ ಆತ ಅಂದುಕೊಂಡಂತೆ ನಡೆಯುತ್ತಿದ್ದಾಗ ನವವಸಾಹತುಶಾಹಿ ಪ್ರಭಾವದಿಂದ ಅನೇಕ ಪರಿಸರ ಹೋರಾಟಗಳು ರೂಪುಗೊಳ್ಳತೊಡಗಿದಾಗ ಪರಿಸರದ ಹುಡುಗರು ಕಿರು ಮಲ್ಲಿಗೆಯ ಸುತ್ತಣ ಹಳ್ಳಿಯ ಪರಿಸರಕ್ಕೆ ಬಂದು ಹೋಗುವುದು ಸುರುವಾಗುತ್ತಿದ್ದಂತೆ ನಾಟಾ ಕಳ್ಳತನ ಶುರುವಾಗುವುದು ಮತ್ತೊಂದು ವ್ಯಂಗ್ಯವಾಗಿತ್ತು. ಗೌಡ ತಾನೊಬ್ಬ ಜಮೀನ್ದಾರಿ ಊರ ಪಾಟೇಲನೆಂದು ಎಲ್ಲವೂ ನಿಯಂತ್ರಿಸಲು ಹೋಗಿ ನೆಮ್ಮದಿ ಕಳೆದುಕೊಂಡು ಸೋಲುಂಡು ಖಾಯಿಲೆಗೆ ತುತ್ತಾಗುತ್ತಾನೆ. ಊರುಗಳ ನೆಮ್ಮದಿಯ ಬದುಕನ್ನು ಇಲ್ಲದ ದರ್ಪದಿಂದ ಕಿತ್ತುಕೊಂಡಿದ್ದಾನೆ. ಆ ಊರಿಗೆ ಮೇಷ್ಟ್ರಾಗಿದ್ದ ಶಿವಪ್ಪನ ಮೇಲೆ ಇಲ್ಲದ ಆರೋಪ ಹೊರಿಸಿ ಆತನ ಹೆಂಡತಿಯ ಮಾನಾಪಹರಣ ಮಾಡಿದ್ದಾರೆ. ಇವೆಲ್ಲದರ ನೋವು ಆತನನ್ನು ಕಾಡುತ್ತದೆ. ದೇಹಕ್ಕೆ ಖಾಯಿಲೆ ಬಂದು ತಾನು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಿರೂಪಕರನ್ನು ಕೇಳಿಕೊಳ್ಳುವುದು. ಕಿರು ಮಲ್ಲಿಗೆಯ ಗ್ರಾಮದ ದೇವಸ್ಥಾನದ ವೇದಿಕೆಯ ಮೇಲೆ ನಿರೂಪಕರು ಸೂಚಿಸಿದ ಹಾಗೇ "'ಶಿವಪ್ಪನ ಪಾದತೊಳದು ವಿಭೂತಿ ಗಂಧ ಹಚ್ಚಿ ಹೂ ಮುಡಿಸಿದ. ಧೂಪ ಹಾಕಿ ಗಡಗಡ ನಡುಗುತ್ತಾನೆ.'' ತಾನು ಮಾಡಿದ ಪಾಪದ ಪ್ರಾಯಶ್ಚಿತ್ತಕ್ಕೆ ಕ್ಷಮೆಯಿದಾಗಿದೆ. ಆದರೆ ಬಸವೇಗೌಡ ಆ ಪ್ರಾಯಶ್ಚಿತ್ತದ ನೋವಿನಲ್ಲಿ ಪ್ರಾಣಬಿಡುತ್ತಾನೆ. ಈ ಕತೆಯಲ್ಲಿ ಲಂಕೇಶರು ತಲೆ ತಲಾಂತರದಿಂದ ಬಂದ ಜಮಿನ್ದಾರಿಕೆಯ ಗತ್ತು ಸುತ್ತಣ ಹಳ್ಳಿಗಳ ಬದುಕಿನ ಮೇಲೆ ಗೌಡ ಉಂಟು ಮಾಡಿದ ಪರಿಣಾಮಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಭೂಮಾಲಿಕನಾಗಿದ್ದ ಬಸವೇಗೌಡ ಜನರ ಮನಸ್ಸಿನ ಮಾಲಿಕನಾಗಿದ್ದಾನೆ. ತಾನು ಮಾಡಿದ ಕರ್ಮಬಲವಂತವಾಗಿ ಆತನನ್ನು ಸಾವಿನ ಅಂಚಿಗೆ ತಂದು ನಿಲ್ಲಿಸಿದೆ. ಆದರೆ ಸಾವಿಗೆ ಮುಂಚೆ ತಾನು ಮಾಡಿದ ಕರ್ಮದ ಫಲ ತೊಳೆದು ಕೊಳ್ಳುವುದು ಆತನಿಗೆ ಬೇಕಿದೆ. ಅದನ್ನು ನಿರೂಪಕರಾದ ಭಗವಾನ್‌ರಿಂದ ಸಾಧ್ಯವಾಗಿದೆ. ಜಮಿನ್ದಾರಿ ವ್ಯವಸ್ಥೆಯ ಕರಾಳಮುಖಗಳನ್ನು ಕತೆ ವಿಶ್ಲೇಷಣೆಗೆ ಒಳಪಡಿಸಿದೆ! ಗೌಡನ ಕಬಂಧ ಬಾಹುಗಳಲ್ಲಿ ಶಿವಪ್ಪ ಮೇಷ್ಟ್ರು, ಜೋನಿ ಪರಿಸರದ ಹುಡುಗರು ಹೊಸ ನೋವಿನ ಪೆಟ್ಟುಗಳಿಗೆ ತುತ್ತಾಗಿದ್ದಾರೆ.

ನವವಸಾಹತುಶಾಹಿ ಸಂದರ್ಭದಲ್ಲಿ ಮಲ್ಲಿಕಾರ್ಜುನ ಹಿರೇಮಠರ 'ಅಮೀನಪುರದ ಸಂತೆ' ಕನ್ನಡದ ಮಹತ್ವದ ಕತೆಯಿದು. ಬರಗಾಲದ ಬವಣೆಯಲ್ಲಿ ಬೆಂದು ತನ್ನ ಪ್ರೀತಿಯ ಎತ್ತನ್ನು ಮಾರಬೇಕೆಂದು ಸಂತೆಗೆ ಬಂದ ರೈತನಾದ ಬಸಪ್ಪನ ನೋವಿನ ಕತೆಯಿದು. ಆ ಎತ್ತು ಅವನಿಗೆ ಕೇವಲ ಎತ್ತಾಗಿ ಉಳಿಯದೆ ಬಸವಣ್ಣನಾಗಿದ್ದಾನೆ. ಗ್ರಾಮೀಣ ಭಾಗದ ರೈತರು ಹೊಲದಲ್ಲಿ ದುಡಿಯುವ ಈ ಮೂಕ ಬಸವಣ್ಣನಲ್ಲಿ ತಾದಾತ್ಮ್ಯ ಸಂಬಂಧವನ್ನು ಇಟ್ಟುಕೊಂಡಿರುತ್ತಾರೆ. ಬಸಪ್ಪ ಊರು ಬರಗಾಲಕ್ಕೆ ತುತ್ತಾದಾಗ ಈ ಬಸವಣ್ಣನನ್ನು ರಕ್ಷಿಸಲು ಮತ್ತೊಬ್ಬರ ಬಣವೆಯ

ಮೇವನ್ನು ಕದ್ದು ತರಲು ಹೋಗಿ ಸಿಕ್ಕಿ ಬೀಳುತ್ತಾನೆ. ಪಂಚಾಯ್ತಿಯಲ್ಲಿ ಬಸಪ್ಪ ಅವಮಾನಕ್ಕೆ ತುತ್ತಾಗಿ ಕೊನೆಗೆ ನೋವಿನಿಂದ ಮನೆಯ ಬಡತನ ನೀಗಿಸಲು ಈ ಎತ್ತಾದ ಮೂಕ ಬಸವಣ್ಣನನ್ನು ಮಾರಲು ಆತ ಅಮೀನಾಪುರದ ಸಂತೆಗೆ ಸುಡು ಬಿಸಿಲಿನಲ್ಲಿ ನಡೆದು ಬರುತ್ತಾನೆ. ದಾರಿಯಲ್ಲಿ ಸಿಕ್ಕ ಮತ್ತೊಬ್ಬ ಊರಿನ ರೈತನೊಂದಿಗೆ ಮಳೆ ಬೆಳೆ ಮುಂತಾಗಿ ಮಾತನಾಡುತ್ತಲೇ ರೈತರ ನೋವಿನ ಬದುಕಿನ ಸಂಗತಿಗಳ ಬಗ್ಗೆ ಚರ್ಚೆಮಾಡುತ್ತಾ ಸಂತೆಗೆ ಬರುತ್ತಾರೆ. ನವವಸಾಹತುಶಾಹಿಯ ಅನೇಕ ಬದಲಾವಣೆಗಳಿಗೆ ಒಳಗಾಗಿದ್ದ ಸಂತೆಯಲ್ಲಿ ಆತನ ಎತ್ತಿಗೆ ತಕ್ಕ ಬೆಲೆ ಸಿಕ್ಕುವುದಿಲ್ಲ. ಕೊಳ್ಳಲು ಬಂದ ಕಟುಗರಿಗೆ ಎತ್ತು ಮಾರದೆ ಹಠಕ್ಕೆ ಬೀಳುತ್ತಾನೆ. ಎತ್ತಿನ ಬಾಲದ ಸುಳಿ ಸರಿಯಾಗಿಲ್ಲವೆಂದು ವ್ಯವಸಾಯದ ಜನ ಕೊಳ್ಳಲು ಮುಂದೆ ಬರುವುದಿಲ್ಲ. ಸಂಜೆಯಾಗುತ್ತಿದ್ದಂತೆ ಸಂತೆ ಖಾಲಿಯಾಗಿ ಬಿಕೋ ಎನ್ನತೊಡಗುತ್ತದೆ. ಮರಳಿ ಊರಿಗೆ ಹೋಗಲು ಬಸಪ್ಪನಿಗೆ ಮನಸ್ಸಾಗುವುದಿಲ್ಲ ಊರಿನಲ್ಲಿಯು ಅವಮಾನ. ಮನೆಯ ಬಡತನ ಆತನನ್ನು ಸಾವಿನ ಹಂಚಿಗೆ ತಂದು ನಿಲ್ಲಿಸಿದೆ. ಕೊನೆಗೆ ಆತ ಎತ್ತಿನ ಹಗ್ಗ ಬಿಚ್ಚಿ ದೊಡ್ಡ ಬೇವಿನ ಮರಕ್ಕೆ ನೇಣು ಹಾಕಿಕೊಳ್ಳುತ್ತಾನೆ. ನಿತ್ರಾಣಗೊಂಡ ಎತ್ತು ಕೂಡ ಆತನೊಂದಿಗೆ ಸಾವು ತಂದುಕೊಂಡಿದೆ. ಈ ಕತೆಯಲ್ಲಿ ಮಲ್ಲಿಕಾರ್ಜುನ ಹಿರೇಮಠರು ಉತ್ತರ ಕರ್ನಾಟಕದ ಹಳ್ಳಿಗಾಡಿನ ಬರಗಾಲದ ಚಿತ್ರಣ ಮತ್ತು ಮಳೆ ಬಾರದೆ ಹೋದಾಗ ರೈತರ ಬದುಕು ವಿನಾಶವಾಗುವ ಪರಿಯನ್ನು ಧ್ವನಿ ಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ. ಇಲ್ಲಿನ ರೈತನ ಸಾವಿಗೆ ಬೆಲೆಯಿಲ್ಲವಾಗಿದೆ. ನಗರ ಸಭೆಯ ಸದಸ್ಯನೊಬ್ಬ 'ಈತನಿಗೆ ಸಾಯಲು ಬೇರೆ ಜಾಗ ಸಿಗಲಿಲ್ಲವೇ''[*] ? ಎಂದು ಜನರಿಗೆ ಪ್ರಶ್ನಿಸುತ್ತಾನೆ. ಒಬ್ಬ ಬಡ ರೈತನ ಬರಗಾಲ ಪೀಡಿತನ ಸಾವು ಲೆಕ್ಕಕ್ಕೆ ಬರುವುದಿಲ್ಲ. ಗ್ರಾಮೀಣ ಭಾಗದ ಬಯಲು ಸೀಮೆಯ ರೈತರ ಬದುಕಿನ ನೋವಿನ ಕತೆಯಾಗಿ ಓದುಗನನ್ನು ತಟ್ಟುತ್ತದೆ.

ಬಡತನ ಬರಗಾಲಕ್ಕೆ ಸಿಕ್ಕ ರೈತನಾದ ಬಸಪ್ಪನಿಗೆ ಆತ್ಮಹತ್ಯೆಯೇ ಅನಿವಾರ್ಯವಾಗಿದೆ. ಶ್ರೀಮಂತರ ಮನೆಯ ಜೀತದಾಳಾಗಿ ಬದುಕುವುದಕ್ಕಿಂತ ಮಾನವಂತನಾದ ಬಸಪ್ಪ ಸಾವಿಗೆ ಶರಣಾಗಿ ಬಿಡುತ್ತಾನೆ. ಇಲ್ಲಿ ರೈತನಾದ ಬಸಪ್ಪನ ಸಾವು ಮಾನವೀಯತೆಯನ್ನು ಕಳೆದುಕೊಂಡ ವ್ಯವಸ್ಥೆಯ ಘೋರ ದುರಂತವಾಗಿ ಕಾಣುತ್ತದೆ. ಬರಗಾಲಕ್ಕೆ ತುತ್ತಾದ ಪ್ರಾಣಿ, ಮನುಷ್ಯನ ಈ ದುರಂತವು ಇಡೀ ವ್ಯವಸ್ಥೆಯಲ್ಲಿಯೇ ಪ್ರೀತಿ ಕಳೆದುಹೋಗಿದೆ ಅನಿಸುತ್ತದೆ. ಊರಿನಲ್ಲಿ ಬಡವನಾದ ಬಸಪ್ಪನನ್ನು ಶ್ರೀಮಂತ ಮನುಷ್ಯನಾದ ಗೌಡ ಪ್ರೀತಿಯಿಂದ, ಕರುಣೆಯಿಂದ ಕಾಣುವುದಿಲ್ಲ. ಆದರೆ ಬಸಪ್ಪನ ಹೊಲವನ್ನು, ಮನಸ್ಸನ್ನು ಹಸನುಮಾಡುವ ಎತ್ತು ಪ್ರೀತಿಯಿಂದ ಕಾಣುತ್ತದೆ. ಇಲ್ಲಿ ಮನುಷ್ಯನಿಂದ ಸಿಗದ ಪ್ರೀತಿ ಕರುಣೆ ಎತ್ತಿನಿಂದ ಸಿಗುತ್ತದೆ. ಎತ್ತಿನ ಪ್ರೀತಿ ಬಸಪ್ಪನಲ್ಲಿ ಅಂತಃಕರಣ ಕಲಕುವಂತೆ ಮಾಡುತ್ತದೆ.

ಬರಗಾಲಕ್ಕೆ ತುತ್ತಾದ ಬಸಪ್ಪನೆಂಬ ರೈತನೊಬ್ಬನು ಅನುಭವಿಸುವ ನೋವಿನ ಹೃದಯ ವಿದ್ರಾವಕ ಚಿತ್ರಣ ಕತೆಯಲ್ಲಿದೆ. ಯಾವ ರಂಜಕತೆ ವೈಭವೀಕರಣವಿಲ್ಲದೇ ಕತೆ ವಾಸ್ತವಿಕವಾಗಿ ರೈತರ ಬದುಕನ್ನು ಕಟ್ಟಿಕೊಡುತ್ತದೆ.

ಕನ್ನಡ ಕಥಾ ಸಾಹಿತ್ಯವು ನವವಸಾಹತುಶಾಹಿ ನೆಲೆಯ ವಿವಿಧ ಮುಖಗಳನ್ನು ಅನಾವರಣಗೊಳಿಸಿದೆ. 'ಹಂಗಿನರ ಮನೆಯ ಹೊರಗೆ' ಕತೆಯಿಂದ ಪ್ರಸಿದ್ಧರಾಗಿ ಡಾ. ರಾಜಶೇಖರ ನೀರ ಮಾನ್ವಿಯವರ ''ಕರ್ಪೂರದ ಕಾಯದಲ್ಲಿ ಬೆಂಕಿಯುಸಿರಾಟ'' ಕತೆ ಕೂಡ ಮುಖ್ಯವಾಗಿ ರೈತ ಚಳುವಳಿಯ ಆಳದಲ್ಲಿರುವ ತೊಳಲಾಟವೆ ಪ್ರಧಾನ ಆಶಯವಾಗಿ ಚಿತ್ರಿತವಾಗಿದೆ. ನಾಡಿನ ಗಡಿ ಭಾಗದಲ್ಲಿ ರೈತ ಚಳುವಳಿ ಕುದಿಯೊಡೆದಿತ್ತು. ರೈತರು ತಾವು ಬೆಳೆದ ಬೆಳೆಗೆ ನ್ಯಾಯ ಬೆಲೆ ಸಿಗುತ್ತಿಲ್ಲವೆಂದು ಹೋರಾಟದ ದಾರಿ ಹಿಡಿದಿದ್ದರು. ಚಳುವಳಿ ಉಗ್ರರೂಪತಾಳಿದ್ದು ನಾಡಿನಲ್ಲೆಲ್ಲಾ ಸುದ್ದಿಯಾಗುತ್ತದೆ. ಪತ್ರಕರ್ತ ಮೋಹನ ರೈತರ ಸಮಸ್ಯೆಯ ಮೇಲೆ ವಿಶೇಷ ವರದಿ ಸಂಗ್ರಹಿಸಲು ಗಡಿಭಾಗಕ್ಕೆ

ಬರುತ್ತಾನೆ. ಈತನಿಗೆ ಗಡಿ ಸಮಸ್ಯೆ, ಭಾಷಾ ಸಮಸ್ಯೆ, ರೈತರ ಸಮಸ್ಯೆಗಳು ಮನಸ್ಸನ್ನು ಕಲಕುತ್ತವೆ. ಹಳ್ಳಿಯ ಜಮೀನ್ದಾರನಾಗಿದ್ದ ಮಲ್ಲಾರಿ ಗೌಡರನ್ನು ಕಾಣುತ್ತಾನೆ. ಗೌಡರು ಪತ್ರಕರ್ತ ಮೋಹನನನ್ನು ಪತ್ರಕರ್ತರು ಹಣಮಾಡುವ ದಂಧೆಯವರೆಂದು ವಿಡಂಬಿಸಿದಾಗ ಅದಕ್ಕೆ ಪ್ರತಿಯಾಗಿ ಮೋಹನ್ ''ನೀವು ನಿಜವಾದ ರೈತರಾದರೆ ಎಷ್ಟು ತಾಸು ಹೊಲದಾಗ ದುಡಿತೀರಿ. ಈ ಕಡೆ ಸರಕಾರದ ಸವಲತ್ತು ಹೊಡಿತೀರಿ ಆಕಡೆ ರೇಟು ಏರುಸ್ತೀರಿ ಈ ಚಳುವಳಿ ಒಂದು ತೆವಲು ಅಲ್ಲದೆ ಮತ್ತೇನು?''[೬] ಎಂಬ ಮೋಹನನ ಮಾತು ಪ್ರಸ್ತುತ ರೈತ ಮುಖಂಡರ ಒಳಮುಖವನ್ನು ದ್ವಂದ್ವ ನೀತಿಯನ್ನು ಈ ಸಾಲುಗಳು ಸೆರೆಹಿಡಿದಿವೆ.

ಈ ಕತೆಯಲ್ಲಿ ಬರುವ ಮತ್ತೊಂದು ಪಾತ್ರ ಮಾರುತಿ ಜಾದವ ಮಹಾರಾಷ್ಟ್ರದ ಪಾಟೇಲರ ಫ್ಯಾಕ್ಟರಿಯಲ್ಲಿ ನೌಕರಿಯಲ್ಲಿದ್ದ ಈತ ಯೂನಿಯನ್ ತಂಟೆಯಲ್ಲಿ ನೌಕರಿಗೆ ಶರಣು ಹೊಡೆದವನು. ಅನ್ಯಾಯ ಕಂಡರೆ ಸಹಿಸದ ಈ ಮಾರುತಿ ಜಾದವ್ ಆ ಭಾಗದ ಬಲ ಹೀನ ರೈತರ ಮೇಲೆ, ಅಧಿಕಾರಿಗಳು ಕಂದಾಯ, ಬ್ಯಾಂಕ್‌ಸಾಲ ಕಟ್ಟದಿದ್ದ ಸಂದರ್ಭದಲ್ಲಿ ಬ್ಯಾಂಕ್‌ನವರು ಜಪ್ತಿಮಾಡಲು ಬಂದಾಗ ಈತ ರೈತರೊಟ್ಟಿಗೆ ಹೋರಾಟ ಮಾಡಿ ಅವರಿಗೆ ನ್ಯಾಯ ಕಲ್ಪಿಸಿಕೊಟ್ಟವನು. ಮರಾಠಿಗಳ ಮತ್ತು ಸರಕಾರಿ ಅಧಿಕಾರಿಗಳ ಕೆಂಗೆಣ್ಣಿಗೆ ಮಾರುತಿ ಗುರಿಯಾಗುತ್ತಾನೆ. ಈತನನ್ನು ಮಟ್ಟ ಹಾಕಲು ಕಣ್ಣಿಟ್ಟು ಕಾಯುತ್ತಿರುವಾಗ. ಗಡಿಭಾಗದಲ್ಲಿ ಭಾಷಾ ಚಳುವಳಿಯ ನೆಪದಲ್ಲಿ ಆರಂಭವಾದ ಹೋರಾಟದಲ್ಲಿ ಅನೇಕ ಮುಗ್ಧ ರೈತರು ಮಾರಣ ಹೋಮಕ್ಕೆ ತುತ್ತಾಗುತ್ತಾರೆ. ಈ ಗಲಭೆಯಲ್ಲಿ ಮಾರುತಿ ಜಾದವ್‌ನನ್ನು ಉಳಿಸಲು ಬಂದ ಮೋಹನನ ಶ್ರಮ ನಿರರ್ಥಕವಾಗುತ್ತದೆ. ಎಲ್ಲರ ಕಂಗೆಣ್ಣಿಗೆ ತುತ್ತಾಗಿದ್ದ ಮಾರುತಿ ಕೊಲೆಯಾಗಿ ಹೋಗುತ್ತಾನೆ. ಭಯೋತ್ಪಾದನೆ ತಾರಕ್ಕೇರುತ್ತದೆ.

ಈ ಕತೆಯಲ್ಲಿ ನೀರಮಾನ್ವಿಯವರು ತಲತಲಾಂತರದಿಂದ ಬಂದಿರುವ ಭೂಮಿಯತಾಯಿಯ ಒಕ್ಕಲು ಮಕ್ಕಳಾದ ರೈತರ ಬವಣೆಯನ್ನು ಕತೆಯಾಗಿಸಿದ್ದಾರೆ. ಗ್ರಾಮೀಣ ಭಾಗದ ಮಲ್ಲರಿಗೌಡರಂತವರು ರೈತ ಚಳುವಳಿಯನ್ನು ನೋಡುವ ಲಾಭದದೃಷ್ಟಿ ಕತೆಯಲ್ಲಿ ಚಿತ್ರಿತವಾಗಿದೆ. ಈ ಕತೆಯ ಹಂದರದೊಳಗೆ ರೈತ ಸಮಸ್ಯೆಯ ಜೊತೆ ಗಡಿಭಾಗದ ಸಮಸ್ಯೆಯೂ ಇಲ್ಲಿ ಚರ್ಚಿತವಾಗಿದೆ.

ಕಡುಬಡವರ, ರೈತರ ಸಮಸ್ಯೆಗಳಿಗೆ ಸ್ಪಂದಿಸಿದ ಸ್ವತಂತ್ರ್ಯ ಭಾರತ ಕಂಡ ಧೀಮಂತ ಜನಪದ ಮುಖ್ಯಮಂತ್ರಿಯೆಂದರೆ ದೇವರಾಜ ಅರಸು. ಭಾರತದಲ್ಲೇ ಅತ್ಯಂತ ಪರಿಣಾಮಕಾರಿಯಾಗಿ ಭೂಸುಧಾರಣೆಯನ್ನು ಜಾರಿಗೆ ತಂದ ಮುಖ್ಯಮಂತ್ರಿ ಇವರು. ಈ ಸಂದರ್ಭದಲ್ಲಿ ಎಷ್ಟೋ ಲಕ್ಷ ಗೇಣಿದಾರರು ನಿಜವಾದ ಭೂಮಿಯ ಒಡೆಯರಾದರು. ಭೂಮಿ ಕನಸನ್ನು ಒತ್ತು ಚಿಂತಿಸುತ್ತಿದ್ದ ಕೆಳವರ್ಗದ ಜನ ಭೂಮಿ ಹಂಚಿಕೆಯಿಂದ ಉಲ್ಲಾಸಗೊಂಡರು. ದೇವರಾಜ ಅರಸು ಅವರು ದುರ್ಬಲ ವರ್ಗದವರ ಏಳಿಗೆಗಾಗಿ 'ಗರೀಬಿ ಹಠಾವೋ', 'ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ', 'ಹಿಂದುಳಿದವರಿಗೆ ಐದು ಸೆಂಟ್ಸ್ ಭೂಮಿ ಮತ್ತು ಉಚಿತ ವಸತಿ ಸೌಲಭ್ಯ' ಮುಂತಾದ ಕಾರ್ಯಯೋಜನೆಗಳು ಅನುಷ್ಠಾನಕ್ಕೆ ಬಂದು ಬಡ ರೈತರ ಸಮಸ್ಯೆಗಳು ಪರಿಹಾರದ ದಾರಿ ಕಂಡವು. ಈ ಸುಧಾರಣೆಯನ್ನು ಎಲ್ಲಾ ಸೇವಾವಲಯಗಳು ಮುಕ್ತ ಮನಸ್ಸಿನಿಂದ ಹೊಗಳಿದವು. ಅರಸು ಕಾಲ ಗತಿಸಿ ಎಷ್ಟೋಕಾಲವಾದರೂ ಭೂಮಿಯ ಪ್ರಶ್ನೆ, ರೈತರ ಪ್ರಶ್ನೆಗೆ ಸ್ಪಷ್ಟ ಉತ್ತರ ನೀಡಲು ಅಧಿಕಾರಿಗಳು, ಜಮೀನ್ದಾರರು ಯತ್ನಿಸದಿರುವುದು ಈ ದೇಶದ ದುರಂತವೂ ಆಗಿದೆ.

'ಭೂಮಿ' ಯ ರೈತನಾಗುವ ಕನಸನ್ನು ಹೊತ್ತು ಸಂಕಷ್ಟಕ್ಕೆ ತುತ್ತಾಗುವ ಕುಂ. ವೀರಭದ್ರಪ್ಪನವರ 'ಕಪ್ಪು ನೆಲದಲ್ಲೊಂದು ಕಪ್ಪುಕತೆ'ಯ ಕಪ್ಪು ಜನಾಂಗದವನಾದ 'ಪರತ' ನ ದುಃಖದುಮ್ಮಾನದ ಕತೆಯಿದು. ಕೂಗಳ್ಳಿಯ ಕಪ್ಪು ಜನಾಂಗದ ಪರತ ಸ್ವಂತ ರೈತನಾಗುವ ಕನಸು ಕಾಣುತ್ತಲೇ ಊರ ಜನಾಂಗಗಳ ಮಧ್ಯೆ ಅವಮಾನಕ್ಕೆ ತುತ್ತಾಗುತ್ತಾನೆ. ಸರಕಾರವು ಭೂಮಿಯಿಲ್ಲದ ನಿರ್ಗತಿಕರಿಗೆ ಜಮೀನು ಹಂಚುವ ಯೋಜನೆಯನ್ನು ಕಾರ್ಯ ರೂಪಕ್ಕೆ ತಂದಾಗ, ಗ್ರಾಮೀಣ ಭಾಗದ ಕಪ್ಪು ಜನಾಂಗದವನಾದ ಪರತ ಊರಿನ ಕುಲಕರಣಿಯನ್ನು ತಾನು ಭೂಮಿ ಪಡೆದುಕೊಳ್ಳುವ ಸಲುವಾಗಿ ಬೇಟಿಯಾಗುತ್ತಾನೆ. ಈ ಸಂದರ್ಭವನ್ನೇ ದುರುಪಯೋಗ ಪಡಿಸಿಕೊಂಡು ಕುಲಕರ್ಣಿ ಪರತನನ್ನು ಶೋಷಣೆಗೆ ಒಳಪಡಿಸುತ್ತಾನೆ. ''ಎನ್ಲೆ... ಪರತ, ನಾಳೆ ಇಪ್ಪತ್ತುಕೊಡು, ಸರಕಾದೋರು ನಿಂಗ್ದೆ ಎಲ್ಡೆಕರೆ ಹೊಲಕೊಡುವಾಂಗ ಮಾಡೀನಿ. ನಾಳೆ ನೀನು ಇಪ್ಪತ್ತು ಕೊಟ್ರ ಮುಂದಿನ ವಾರವೇ ಪಟ್ಟ ಬರತ್ತೈತಿ'' ಅಂದಾಗ ಪರತ ''ಹೊಲ ಯಾವ್ಕಡೆ ಕೊಟ್ಟಾರೆ.. ಮುಂದಿನ ವರ್ಷ ಬಿತ್ತುಬಹುದಾ..? ಅಂತ ಒಂದೇ ಉಸಿರಿಗೆ ಕೇಳಿದ. ಊರ ಗೋಡನ ಹೊಲ ಹಳ್ಳದ ಪಕ್ಕ ಐತೆಲ್ಲಾ ಆ ಹೊಲ್ದಾಗ ಕೊಟ್ಟಾರ.. ನಾಳೆ ಚಾವ್ಡಿ ಹತ್ರ ಇಪ್ಪತ್ತು ರೂಪಾಯಿ ತಗಂಬಾರ್ಲೆ ಮತ್ತ ಅಂತ ಹೇಳುತ್ತಾ ಹೋಗಿದ್ದ.'' ಕುಲಕರಣಿಯ ಮಾತುಗಳಿಂದ ಪರತ ಭೂಮಿ ದಕ್ಕಿದಷ್ಟು ಸಂಭ್ರಮಗೊಳ್ಳುತ್ತಾನೆ. ಜೀತ ಮಾಡುತ್ತಿದ್ದ ಗೌಡರ ಹೊಲವೇ ತನಗೆ ಒಲಿದು ಬರುವ ಕನಸು ಕಾಣುತ್ತಾನೆ. ಅಲ್ಲಿ ಇಲ್ಲಿ ಕಾಡಿಬೇಡಿ ಇಪ್ಪತ್ತು ರೂಪಾಯಿ ಹೊಂದಿಸಿಕೊಂಡು ಕುಲಕರಣಿಗೆ ಕೊಡುತ್ತಾನೆ. ಭೂಮಿಯ ಕನಸು ಅವನನ್ನು ನಿದ್ದೆಗೆಡೆಸುತ್ತದೆ. ''ತಾನು, ಮುದುಕಿ, ಮಗು, ಮಗಳು ಎಲ್ಲಾ ಹೊಲದಲ್ಲಿ ರಂಟೆ ಹೊಡೆದಂತೆಯೂ, ಗೊಬ್ಬರಹಾಕಿದಂತೆಯೂ ಜೋಳಭಿತ್ತಿದಂತೆಯೂ, ಸುಗ್ಗಿ ಮಾಡಿದಂತೆಯೂ..''[೬] ಕನಸು ಕಾಣುತ್ತಾನೆ. ಕುಲಕರಣಿ ಪರತನಿಗೆ ಮೋಸಮಾಡುತ್ತಾನೆ. ಅವನಲ್ಲಿ ಕನಸುಗಳನ್ನು ಬೆಳೆಸಿ ಕತ್ತರಿಸಿಹಾಕುತ್ತಾನೆ. ಜೊತೆಗೆ ಗೌಡರಿಗೆ 'ಪರತ' ನಿಮ್ಮ ಭೂಮಿಯನ್ನು ಪಡೆಯಲು ಹೊಂಚುಹಾಕುತ್ತಿದ್ದಾನೆಂದು ಚಾಡಿ ಹೇಳಿ ಗೌಡರ ಮನೆಯಿಂದ ಅನ್ನದಕ್ಕದಂತೆ ಮಾಡುತ್ತಾನೆ. ಸಿಟ್ಟಿಗೆದ್ದ ಗೌಡ ಪರತನಿಗೆ ತನ್ನ ಭೂಮಿಯ ಒಡೆಯನಾಗುವ ಸಲುವಾಗಿ ಸರಕಾರಕ್ಕೆ ಸಲ್ಲಿಸಿದ ಅರ್ಜಿಯನ್ನು ವಾಪಸು ಪಡೆಯಲು ಆಜ್ಞಾಪಿಸುತ್ತಾನೆ. ಪರತ, ಗೌಡನ ಮಾತನ್ನು ನಿರಾಕರಿಸಿ ರೈತನಾಗುವ ಹೆಬ್ಬಯಕೆ ತಿಳಿಸಿ ಗೌಡನ ಮನೆಯಿಂದ ತಿರಸ್ಕಾರಕ್ಕೆ ಒಳಗಾಗಿ ಬೀದಿಪಾಲಾಗುತ್ತಾನೆ. ಕುಲಕರಣಿ ಬಳಿ ಹಣ ಕೇಳಿ ಅಪಹಾಸ್ಯಕ್ಕೆ ತುತ್ತಾಗುತ್ತಾನೆ. ಕೊನೆಗೆ ಊರಿಗೆ ಬಂದ ತಮ್ಮ ಜನಾಂಗದ ಮಂತ್ರಿಯ ಬಳಿ ತಮ್ಮ ಮನೆತನದ ತನ್ನ ದುಃಖವನ್ನು ಹೇಳಿ ಕೊಳ್ಳಲು ಯತ್ನಿಸಿ ಜನಸಾಗರದ ಮಧ್ಯೆ ಕಾಲ್ತುಳಿತಕ್ಕೆ ಒಳಗಾಗಿ ಸತ್ತು ಹೋಗುತ್ತಾನೆ.

ಕುಂ.ವೀ. ಯವರು ಆ ಕತೆಯಲ್ಲಿ ಜಮೀನ್ದಾರಿ ವ್ಯವಸ್ಥೆಯ ಕರಾಳ ಮುಖದ ಚಿತ್ರಣ ನೀಡಿದ್ದಾರೆ. ಇಲ್ಲಿ ಭೂಮಿ ಮತ್ತು ರೈತನಾಗುವ ಪರತನ ಕನಸಿಗೆ ಮನಸಿಗೆ ಚಾಟಿಯ ಏಟು ಹಾಕುವ ಗೌಡ ಕುಲಕರಣಿ ಶೋಷಣೆಯ ರಾಹುಕೇತುಗಳಂತೆ ಕಂಡು ಬರುತ್ತಾರೆ. ಕಪ್ಪು ಜನಾಂಗದವನಾದ 'ಪರತ'ನು ರೈತನಾಗಿ ಭೂಮಿ ಉತ್ತಿ ಬೆಳೆಯಬೇಕೆಂಬ ಕನಸು ನನಸಾಗದೇ ಸಾವಾಗಿ ಹೋಗುವುದು ವ್ಯವಸ್ಥೆಯ ಕ್ರೂರತನವನ್ನು ಕತೆಯಲ್ಲಿ ಬಂಡಾಯ ಮನೋಭಾವದೊಂದಿಗೆ ವಿಶ್ಲೇಷಣೆಗೆ ತೊಡಗಿದ್ದಾರೆ. ಪರತ ಜೀತಗಾರನಾಗಿ ಗೌಡರ ಮನೆಯಲ್ಲಿಆಳಾಗಿ ಉಳಿಯುವ ಪಟ್ಟಭದ್ರ ಹಿತಾಶಕ್ತಿಗಳ ತಂತ್ರ ಫಲಿಸುತ್ತದೆ.

ಕುಂ.ವೀ.ಯವರ ಬಹಳಷ್ಟು ಕತೆಯಲ್ಲಿ ಜಮೀನ್ದಾರಿ ವ್ಯವಸ್ಥೆಯ ಕ್ರೂರ ಮುಖಗಳು ಅನಾವರಣಗೊಳ್ಳುತ್ತವೆ. ಗ್ರಾಮೀಣ ಬದುಕಿನ ಸಮೃದ್ಧ ವಿವರಗಳೊಂದಿಗೆ ಪ್ರಾದೇಶಿಕ ಭಾಷೆಯ ನಿರೂಪಣೆಯೊಂದಿಗೆ ಕತೆಗಳು ಹೊಸ ಜಗತ್ತನ್ನು ತೆರೆದು ತೋರಿಸುತ್ತವೆ.

'ಉಳುವವನೇ ಭೂಮಿಯ ಒಡೆಯ'ನೆಂಬ 'ಭೂ ಮಸೂದೆ' ಕಾನೂನು ಅಸ್ತಿತ್ವಕ್ಕೆ ಬಂದ ಆ ಕಾಲದ ಸಾಂಸ್ಕೃತಿಕ ಸಂದರ್ಭವನ್ನು ಅರವಿಂದ ಮಾಲಗತ್ತಿಯವರ 'ಭೂ ಮಸೂದೆ' ಕತೆ ಅರ್ಥ ಪೂರ್ಣವಾಗಿ ವಿಶ್ಲೇಷಣೆಗೆ ತೊಡಗುತ್ತದೆ. ಬಾಳಪ್ಪ ಮತ್ತು ಅರಿಮಯ್ಯ ಬಾಲ್ಯದ ಗೆಳೆಯರು. ಅರಿಮಯ್ಯನ ಮನೆ ಮಗನಂತಿದ್ದ ಬಾಳಪ್ಪ ಅಯ್ಯನ ಮನೆ ಹೊಲಗಳನ್ನು ಜೀತಮಾಡಿ ಬದುಕಿದನು ಆದರೆ ಈ ಬಾಳಪ್ಪನ ಮಗ ಕರಿಬಸವಯ್ಯ ಮತ್ತು ಬೆಳ್ಳಿಯಪ್ಪ ಸ್ನೇಹಿತರಾಗಿ ಶಾಲೆ ಸೇರಿ ವಿದ್ಯೆ ಕಲಿತು 'ಭೂ ಮಸೂದೆ' ಜಾರಿಗೆ ಬಂದ ಮೇಲೆ ಬೆಳ್ಳಿಯಪ್ಪನ ವಿಚಾರಧಾರೆಯೇ ಬದಲಾಗುತ್ತದೆ. ತಾತನ ಕಾಲದಿಂದ ತಮ್ಮವರು ಅರಿಮಯ್ಯನ ಮನೆತನದಲ್ಲಿ ಜೀತಮಾಡುತ್ತಲೇ ಮುಕ್ತಿಕಾಣದೇ ಹೋದವರು. ಆದರೆ ಬೆಳ್ಳಿಯಪ್ಪ ತಾವು ನಿಯತ್ತಿನಿಂದ ದುಡಿಯುತ್ತಿದ್ದ ಭೂಮಿ ತನ್ನ ಭೂಮಿಯಾಗಬೇಕೆಂದು 'ಉಳುವವನೆ ಭೂ ಒಡೆಯ'ನೆಂಬ ಘೋಷಣೆಯನ್ನು ಊರಜನರಲ್ಲಿ ಬಿತ್ತುತ್ತಾ, ಅರಿಮಯ್ಯ ಮತ್ತು ಕರಿಬಸವಯ್ಯನವರ ಮನಸುಗಳಿಗೆ ಕಿಡಿ ಹಚ್ಚತೊಡಗುವನು. ಆದರೆ ಬಾಳಪ್ಪ 'ಅಯ್ಯ'ನ ಮನೆಯ ಜೀತಮಾಡುತ್ತಲೇ ಮಗನನ್ನು ಬೈಯತೊಡಗಿದ್ದ "ಭೂಮಿ ಆಳಲಿಕ್ಕೆ ಹೋದವರೆಲ್ಲ ಅಳದರೋ ಊಳದವರೇ ಉಳಿಯುವವರು.. ಭೂಮಿ ತಾಯಿ ಉಡ್ಯಾಗ ಮಗನಾಗಿ ಆಡುದ ಕಲಿಯೋ ಓದಿದರೆ ಬುದ್ಧಿ ಬರ್ತದೆ ಅಂದು ಕೊಂಡೆ. ಆದರೆ ನೀನು ಮನಿಯಿಂದ ನಮ್ಮನ್ನೆಲ್ಲಾ ಹೊರಗೆ ನಿಲ್ಲಿಸದೆ ಮನಿಮಾರುವಾಗ ನನಗೆ ನಾನೇ ಮಾರಿಕೊಂಡಾಂಗ ಅನಸ್ತು ಇನ್ನ ಅವು ಭೂಮಿ ಕಿತ್ತುಕೊಳ್ಳಕ ಹೊರಟರೆ ಅವುಗೇನ ಅನಸ್ತದ ಏನಾರ ವಿಚಾರ ಮಾಡಿಯೇನು"[೮] ಹೀಗೆ ತಂದೆ ಮಗನ ಆಲೋಚನೆಯಲ್ಲಿ ದೊಡ್ಡ ಕಂದರವೇ ಬೆಳೆಯುತ್ತದೆ.

ಅರಿಮಯ್ಯ ಮಯ್ಯನವರಲ್ಲಿ ಮಾನವೀಯತೆಯ ಎಳೆ ಸೂಕ್ಷ್ಮವಾಗಲು ಅದೇ ಊರಿನಲ್ಲಿದ್ದ ಸಣ್ಣ ಬಸಯ್ಯನವರ ಮನೆತನದ ವಿಚಾರಗಳೂ ಕಾರಣವಾಗಿದ್ದವು. ಸಣ್ಣ ಬಸವಯ್ಯನವರ ಗದ್ದೆ ಊಳುತ್ತಿದ್ದ ಬಾಳಪ್ಪನ ಸಂಬಂಧಿಕರಾದ ಯಲುಗಪ್ಪ ಮತ್ತು ಮಕ್ಕಳಾದ ಸೋಮಪ್ಪ ನೀಲಪ್ಪ ಭೂ ಮಸೂದೆ ಕಾನೂನು ತನಗೆ ತೊಡಕಾಗ ಬಹುದೆಂದು ಅರಿತ ಸಣ್ಣಬಸಯ್ಯ ತನ್ನ ಭೂಮಿ ಉಳುಮೆ ಮಾಡುತ್ತಿದ್ದ ನೀಲಪ್ಪನನ್ನು ಸಂತೆಗೆ ಕರೆದುಕೊಂಡು ಹೋಗಿ ಕಂಠಮಟ್ಟ ಕುಡಿಸಿ ಹೊಳೆಯ ನೀರಿನಲ್ಲಿ ಮುಳುಗಿಸಿ ಬಿಡುತ್ತಾನೆ. ನೀಲಪ್ಪ ಸತ್ತುಹೋಗುತ್ತಾನೆ. ಈ ಭೀತಿ ಜನರನ್ನು ಕಾಡತೊಡಗುತ್ತದೆ. ಬೆಳ್ಳಿಯಪ್ಪನ ಸ್ನೇಹಿತನಾದ ನೀಲಪ್ಪನ ಸಾವಿನಿಂದ ತತ್ತರಿಸುತ್ತಾನೆ. ತಾನು ಉಳುವ ಭೂಮಿಗಾಗಿ ಹೋರಾಟ ನಡೆಸಿ ಸಂಬಂಧಿಸಿದ ಕಛೇರಿಗಳನ್ನು ಎಡತಾಕುತ್ತಾನೆ, ಮನೆ ಮಾರುತ್ತಾನೆ.

ತನ್ನ ಜಾತಿಯ ಮೇಲಾಧಿಕಾರಿಯೊಬ್ಬರಿಂದ ಬೆಂಬಲ ದೊರೆತು. ಭೂಮಿ ತನ್ನ ಪಾಲಾಗುತ್ತದೆ. ತುಂತುರು ಬೇಸಾಯ ಆರಂಭಿಸಿ ತೋಟ ಬೆಳಸಿ ಜನರ ಕಣ್ಣು ಕುಕ್ಕಿಸುತ್ತಾನೆ. ಜಾತಿರಾಜಕಾರಣದ ಪ್ರಭಾವದಿಂದ ಯಥೇಚ್ಛವಾಗಿ ಸಾಲ ದೊರೆಯುತ್ತದೆ. ಬೆಳ್ಳಿಯಪ್ಪ ಥಳ ಥಳ ಹೊಳೆಯತೊಡಗಿ ಪುಟ್ಟರಾಜಕೀಯ ಪುಡಾರೀಯಂತೆ ಚಿಗುರತೊಡಗುತ್ತಾನೆ. ಈ ಎಲ್ಲಾ ಬೆಳವಣಿಗೆಗಳ ಮದ್ಯೆ ಆತನ ಬದುಕಿನ ಅವನತಿಯೂ ಆರಂಭವಾಗುತ್ತದೆ. ತೋಟದ ಬಾವಿಯಲ್ಲಿ ಕಲ್ಲು ಬೀಳುತ್ತವೆ. ಪಂಪ್‌ಸೆಟ್ ಯಂತ್ರ ಕಳುವಾಗುತ್ತದೆ. ತಾನು ನಂಬಿ ಸಹಕರಿಸಿದಂತಹ ತನ್ನ ಜಾತಿಯ ಅಧಿಕಾರಿಗಳು ವರ್ಗಾವಣೆಯಾಗಿ ಹೊಗುತ್ತಾರೆ. ಬಾಳಿನಲ್ಲಿ ಸುಖದ ಮೆಟ್ಟಿಲು ಏರುತ್ತಿದ್ದ ಬೆಳ್ಳಿಯಪ್ಪ ನೆಲಕಚ್ಚತೊಡಗುತ್ತಾನೆ. ಆತ ಭೂಮಿಯ ಮೇಲೆ ಮಾಡಿದ ಸಾಲದ ವಸೂಲಿಗೆ ಮನೆ ಜಪ್ತಿಯಾಗುವ ಸುದ್ದಿ ತಿಳಿದು, ತಲ್ಲಣಗೊಳ್ಳುತ್ತಾನೆ. ಗೆಳೆಯ ನೀಲಪ್ಪನಂತೆಯೇ ಸ್ವಾಭಿಮಾನಿಯಾದ ಬೆಳ್ಳಿಯಪ್ಪ ತೋಟದ ಬಾವಿಯ ಗಡಗಡಿಗೆಯ ನೊಗಕ್ಕೆ ನೇಣು ಹಾಕಿಕೊಂಡು ಜೀವಕಳೆದುಕೊಳ್ಳುತ್ತಾನೆ. ಕೊನೆಯಲ್ಲಿ ಕತೆಯ ಸಾಲುಗಳು "ಆತನ

ತೋಟದ ಸುತ್ತೆಲ್ಲಾ ಆಗಲೇ ತುಂತುರು ಬೇಸಾಯ ತಲೆ ಎತ್ತಿದ್ದವು, ಬೆಳ್ಳಿಯಪ್ಪನ ತೋಟ ಹಾಳು ಬಿದ್ದ ಹೊಲವಾಯಿತು. 'ಭೂ ಮಸೂದೆ'ಯಿಂದ ಎರಡು ಜೀವಗಳು ಬಲಿಯಾಗುವುದರ ಜೊತೆಗೆ, ಹೊಸ ತಲೆಮಾರಿನ ಜನ ಮತ್ತೆ ಈ ಕಾನೂನಿನ ಹಿಡಿತದಿಂದ ತುಂತುರು ಬೇಸಾಯ ಆರಂಭವಾಗುವುದು, ಹೋರಾಟದ ಮುಂದುವರಿದ ಭಾಗವಾಗಿದೆ.

ಈ ಕತೆಯಲ್ಲಿ ಅರವಿಂದ ಮಾಲಗತ್ತಿಯವರು ಭೂಮಸೂದೆಯಿಂದ ನಿರ್ಗತಿಕರು ಭೂಮಿ ಪಡೆದು ಭೂಮಿಯ ಒಡಲಲ್ಲಿ ಮಣ್ಣಾಗಿ ಹೋದ ದುರಂತವನ್ನು ನೋವಿನಿಂದ ಅಭಿವ್ಯಕ್ತಿಸಿದ್ದಾರೆ. ಅದರಲ್ಲೂ ಜಮೀನ್ದಾರಿ ವ್ಯವಸ್ಥೆ ಮತ್ತು ಅಧಿಕಾರಶಾಹಿ ವರ್ಗದಿಂದ ಬಂದೊದಗಿದ ಆಪತ್ತನ್ನು ಬೆಳ್ಳಿಯಪ್ಪ, ನೀಲಪ್ಪರ ಸಾವಿನ ಘಟನೆಯ ಮೂಲಕ ಹೃದಯ ಕಲಕುವಂತೆ ಕಟ್ಟಿಕೊಟ್ಟಿದ್ದಾರೆ. ಆದರೆ ಬೆಳ್ಳಿಯಪ್ಪನ ಮಗ ಬಂಗಾರಪ್ಪನು ಭೂಮಿಯ ಆಸೆಯನ್ನು ಬಿಟ್ಟು, ಊರನ್ನೂ ಬಿಟ್ಟು ಮುಂಬೈ ಸೇರಿ ಕಾರ್ಖಾನೆಯೊಂದರಲ್ಲಿ ನೌಕರಿ ಹಿಡಿದವನು ಅವನಿಂದಲೇ ಕತೆಗಾರರು ಹಿಂದಿನ ಘಟನೆಗಳನ್ನು ಬಿಚ್ಚುತ್ತಾ ಹೋಗುತ್ತಾರೆ. ಇದು ಈ ಕತೆಯ ವಿಶಿಷ್ಟ ತಂತ್ರವೂ ಆಗಿದೆ.

ಭೂಮಿ ಮತ್ತು ಮನುಷ್ಯ ಸಂಬಂಧಗಳ ಮಾನವೀಯ ಮತ್ತು ಅಮಾನವೀಯ ನೆಲೆಗಳ ಹೊಸ ಹುಡುಕಾಟವನ್ನು ಈ ಕತೆಯಲ್ಲಿ ಮಾಲಗತ್ತಿಯವರು ಶೋಧಿಸಿ ಕತೆಯಾಗಿಸಿದ್ದಾರೆ.

ನವ್ಯೋತ್ತರ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕತೆಗಳನ್ನು ಬರೆಯತೊಡಗಿದ ಅಮರೇಶ ನುಗಡೋಣಿಯವರ ಬಹುಪಾಲು ಕತೆಗಳು ಹೈದರಾಬಾದ್ ಕರ್ನಾಟಕದ ಜಮಿನ್ದಾರಿ ವ್ಯವಸ್ಥೆಯ ವಿವಿಧ ಮುಖಗಳನ್ನು ಅದ್ಭುತವಾಗಿ ತಮ್ಮ ಕತೆಗಳಲ್ಲಿ ಸೆರೆಹಿಡಿದಿದ್ದಾರೆ. ಅವರ ಕತೆಗಳ ಜೀವಾಳ ಪುಟ್ಟ ಹಳ್ಳಿಗಳೇ. ಅಲ್ಲಿಯ ಜಮಿನ್ದಾರರು ಅವರ ಹೊಲಗದ್ದೆಗಳಲ್ಲಿ ಜೀತಮಾಡುವ ನಿರ್ಗತಿಕರ ಬದುಕೇ ಕತೆಯಲ್ಲಿ ಮೂಡಿಬಂದಿದೆ. ಅವರ ಮಹತ್ವಾಕಾಂಕ್ಷೆಯ ಕತೆ 'ತಮಂಧದ ಕೇಡು' ಈ ಕತೆಯಲ್ಲಿ ಬರುವ ಜಮಿನ್ದಾರನಾದ ಶಾಂತಗೌಡ ತನ್ನ ಮನೆಯಲ್ಲಿ ನಿಷ್ಠೆಯಿಂದ ದುಡಿಯುತ್ತಿದ್ದ ದುರುಗನನ್ನು ಬಾಲ್ಯದ ಸ್ನೇಹಿತನ ಹಾಗೆ ಕಾಣುತ್ತಾನೆ ಅಷ್ಟೇ. ಆದರೆ ದುರುಗ ಹೆಂಡತಿ ಚಂದವ್ವಳನ್ನು ತನ್ನ ಕಾಮಪಿಪಾಸೆಗೆ ಬಳಸಿಕೊಳ್ಳುತ್ತಾನೆ. ಆದರೆ ದುರಗನಿಂದ ಹುಟ್ಟಿದ ಮಗ ಚೆನ್ನಮಲ್ಲ್ಯ ಶಾಂತಗೌಡನ ಮಗಳನ್ನೆ ಪ್ರೀತಿಸುತ್ತಾನೆ ತಮ್ಮ ತಾಯಿಯ ಮೇಲಾದ ಅನ್ಯಾಯವನ್ನು, ಪ್ರೀತಿ ವಿಶ್ವಾಸದಿಂದ ಅಕ್ಕಮಹಾದೇವಿಯ ಮನಸ್ಸನ್ನು ತಾನು ಕಲಿತ ಬುದ್ಧಿ ವಿವೇಕ ಶಿಕ್ಷಣದ ಮೂಲಕ ಚೆನ್ನಮಲ್ಲಯ್ಯ ಗೆಲ್ಲುತ್ತಾನೆ. ತನ್ನ ಮಗಳನ್ನು ದಲಿತ ದುರುಗನ ಮಗ ಚನ್ನಮಲ್ಲಯ್ಯ ಪ್ರೀತಿಸಿರುವುದು ತಿಳಿದು ಶಾಂತಗೌಡ ವ್ಯಾಘ್ರಗೊಳ್ಳುವುದು, ದುರುಗನಿಗೆ ಮಗನಿಗೆ ಬುದ್ಧಿ ಹೇಳಲು ಎಚ್ಚರಿಕೆ ನೀಡುವುದು. ಗೌಡನ ಮನೆಯನ್ನು ಆತನ ಭೂಮಿಯನ್ನು ಜತನದಿಂದ ಕಾಪಾಡುವುದರ ಜೊತೆಗೆ ದುರುಗ ಮಗನಿಗೆ ಒದ್ದು ಬುದ್ಧಿ ಕಲಿಸಬೇಕೆಂದು ಹೋಗುತ್ತಾನೆ. ಆದರೆ ಪುಸ್ತಕ ರಾಶಿಯ ಮಧ್ಯೆ ಓದುಲು ಕುಳಿತ ಮಗನನ್ನು ಕಂಡು ಮನಸು ಕರಗಿ ಸಿಟ್ಟಿಳಿದು, ಜೀವ ಉಕ್ಕಿಬಂದು, ಕಣ್ಣೀರು ತರುತ್ತಾನೆ. ರಾತ್ರಿಯೆಲ್ಲಾ ನಿದ್ದೆಗೆಟ್ಟ ದುರುಗನಿಗೆ ನಡುರಾತ್ರಿ ಕೆಟ್ಟಕನಸು ಬಿದ್ದು ಎಚ್ಚರವಾಗುತ್ತದೆ. ತನ್ನ ಸುತ್ತೆಲ್ಲಾ ಕತ್ತಲು. ಆತನ ಮನಸ್ಸಿನಲ್ಲೂ ಏನೂ ತೋಚದ ಕತ್ತಲು ಮೇಲಿಂದ ಸುರಿದ ಮಂಜು ಕಾಲು ಮಡಿದು ಮನೆಯೊಳಗೆ ಬಂದಾಗ ಆತನ ಮೈಯೆಲ್ಲಾ ನಮ್ಮಗಿತ್ತು ದುರಗ ಮನೆಯಲ್ಲಿ ಹುಡುಕಾಡಿ ಚಿಮಣಿ ಮುಡಿಸಿದ ಪಂಚೆಯಿಂದ ಮೈ ಒರೆಸಿಕೊಂಡ ದುರುಗನಿಗೆ ಮಳೆಯಿಲ್ಲದ ಸಂಕಷ್ಟಗಳಿಗೆ ತುತ್ತಾಗುತ್ತಿದ್ದ ರೈತರ ಬವಣೆ ನೆನಪಾಗಿ "ಮಳಿಯಂತೂ ಬರ್ಲಿಲ್ಲ, ಹೊಲಗುಳು ಈ ವರ್ಷ ಬೀಜ ಕಾಣ್ಲೆಲ್ಲ ಎಳ್ಳಮಾಸಿ ಇರ್‍ಲಿ, ಚೆಟ್ಟೆಮಾಸಿ ಇನ್ನ ಬಂದಿಲ್ಲ. ಆಗ್ಲೆ ಮಂಜು ಬಿಳಾಕ ಸುರುವಾಯ್ತು!

ಮಳಿ ಬೆಳೆಯಿಲ್ದಕಾಲದಾಗ.’’[೯] ಅಂತ ತನಗೆ ತಾನು ಪೇಚಾಡುವ ದುರುಗ ಶಾಂತಗೌಡನ ಹೊಲ ಮನೆಯಲ್ಲಿ ದುಡಿಯುತ್ತಲೇ ಮಳಿ ಬೆಳಿ ರೈತರ ಬದುಕಿನ ಬಗ್ಗೆ ಸಂಕಟ ಪಡುತ್ತಾ ತಮ್ಮ ಕಾಲದ ನೆನಪುಗಳನ್ನು ಮೆಲುಕು ಹಾಕತೊಡಗಿದ್ದಾನೆ. ತಾವು ಬೆಳಿಸಿದ ಬೃಹದಾಕಾರದ ಮರಗಳನ್ನು ಶಾಂತಗೌಡ ಕಡಿದು ಮನೆಗೆ ಗಳೇವು ಸಮಾನು ಬಂಡಿಗಳನ್ನು ಮಾಡಿಸಿಕೊಂಡಿದ್ದಾನೆ. ಇದು ಜೀತ ಪದ್ಧತಿಯನ್ನು ತನ್ನ ಕಾಲಿಂದ ತುಳಿದು ಉಳಿಸಿಕೊಂಡ ಸಂಕೇತವಾಗಿದೆ. ಆದರೂ ದುರುಗ ತನ್ನ ಮಗನಿಗೆ ಬುದ್ಧಿವಾದ ಹೇಳಿದಾಗ ಆತ ತನ್ನ ಮತ್ತು ಅಕ್ಕಮಹಾದೇವಿಯ ಅಚಲ ಪ್ರೀತಿಯನ್ನು ಪ್ರಕಟಿಸುತ್ತಾನೆ. ಇದರಿಂದ ರೊಚ್ಚಿಗೆದ್ದ ದುರುಗ “ಇದೇನು ಬಸ್ವಣ್ಣಪ್ಪನ ಕಾಲ ಎನಲೇ ಚಪ್ಲಿ ಹೊಲೆವ ಕೈಯಿಗೆ ಲಿಂಗ ಬರದ್ಕ!’’ ಅಂತ ಚೀರಿಕೊಳ್ಳುಕ್ತಾನೆ. ಅಮರೇಶರ ಕತೆಗಳಲ್ಲಿ ಜಮೀನ್ದಾರಿ ವ್ಯವಸ್ಥೆಯನ್ನು ಒಪ್ಪಿಕೊಂಡ ದಲಿತರು ಸಿಡಿದೇಳದೆ ವ್ಯವಸ್ಥೆಯೊಳಗೆ ತಮ್ಮ ಉದಾರವಾದಿ ನಿಲುವನ್ನು ಒಪ್ಪಿಕೊಂಡಿದ್ದಾರೆ. ಈ ಕತೆಯ ಕೊನೆಯಲ್ಲಿ ಶಾಂತಗೌಡ ಅಕ್ಕ ರುದ್ರಮ್ಮನ ಮನೆಗೆ ಹೋಗುವಾಗ ದುರುಗನನ್ನು ತನ್ನೊಂದಿಗೆ ಕರೆದುಕೊಂಡು ಹೋಗುತ್ತಾನೆ. ತುಂಗಮ್ಮನ ಹೊಳೆ ದಾಟುವಾಗ ದುರುಗನ ಹೆಗಲ ಮೇಲೆ ಕೂತಿದ್ದಾನೆ. ಆದರೆ ತುಂಗಮ್ಮ ಹೊಳೆ ತುಂಬಿ ಬಂದು ಇಬ್ಬರನ್ನು ತನ್ನ ಒಡಲೊಳಗೆ ಸೇರಿಸಿಕೊಂಡು ಬಿಡುತ್ತಾಳೆ. ಸಾವಿನಲ್ಲಿ ಇಬ್ಬರು ಸಮಾನವಾಗುತ್ತಾರೆ. ನಿರೂಪಕರು ಚೆನ್ನನನ್ನು ದೂರವಿಡುವುದರ ಮೂಲಕ ಶಾಂತಗೌಡ ದುರಗರನ್ನು ಪರಸ್ಪರ ಅವಲಂಬಿಗಳನ್ನಾಗಿ ಮಾಡಿ ಶೋಷಕ-ಶೋಷಿತರ ಬಗೆಗೆ ಹೊಸ ಅರಿವು ದಕ್ಕುವಂತೆ ಮಾಡಿದ್ದಾರೆನ್ನುವ ಪುರುಷೋತ್ತಮ ಬಿಳಿಮಲೆಯವರ ಅಭಿಪ್ರಾಯ ಮೆಚ್ಚುವಂತದ್ದಾಗಿದೆ. ಜಮೀನ್ದಾರಿ ವ್ಯವಸ್ಥೆಯಿಂದ ಕೊಬ್ಬಿಹೋದ ಶಾಂತಗೌಡ ನಂಥ ಬಂಡವಾಳಶಾಹಿವರ್ಗ ತಮ್ಮನಿರಂತರವಾದ ಶೋಷಣೆಗೆ ಹೊಸ ದಿಕ್ಕುಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಈ ಕತೆಗೆ ಲೇಖಕರು ತಮಂಧದ ಕೇಡು ಎಂದು ಹೆಸರಿಸಿರುವುದು ಔಚಿತ್ಯ ಪೂರ್ಣವಾಗಿದೆ. ಶಾಂತಗೌಡ ದುರಗರ ಆಳದ ಅಜ್ಞಾನದ ಕತ್ತಲು ನಾಶವಾಗುವುದು. ಚನ್ನನಲ್ಲಿರುವ ಶಿಕ್ಷಣದ ಮೂಲಕ, ಕತೆಯಲ್ಲಿ ಗೌಡ ದುರಗ ತುಂಗಮ್ಮನ ಪಾಲಾಗಿ ಚೆನ್ನ-ಅಕ್ಕಮಹಾದೇವಿ ಬದುಕಿ ಉಳಿಯುವುದು. ಕತೆಗೆ ಹೊಸ ದಿಕ್ಕನ್ನು ಸೂಚಿಸುತ್ತದೆ. ಅಮರೇಶ ನುಗಡೋಣಿಯವರ ಕತೆಯಲ್ಲಿ ಬಸವಣ್ಣನವರ ಕಾಲದಲ್ಲಿ ಅದರಲ್ಲಿಯೂ ತಮ್ಮ ತವರಾದ ಕಲ್ಯಾಣ ಕರ್ನಾಟಕದಲ್ಲಿ ನಡೆದ ಸಾಮಾಜಿಕ ಕ್ರಾಂತಿಯ ಆಶಯಗಳನ್ನು ಅನೇಕ ಕತೆಗಳಲ್ಲಿ ಬಳಸಿಕೊಂಡಿದ್ದಾರೆ. ಈ ಭಾಗದ ಮಹತ್ವದ ಕತೆಗಾರ ಕುಂ.ವೀರಭದ್ರಪ್ಪನವರ ಕತೆಗಳಲ್ಲಿ ಜಮೀನ್ದಾರಿ ವ್ಯವಸ್ಥೆ ಅಥವಾ ಭೂಮಾಲಿಕ ವ್ಯವಸ್ಥೆಯ ಪರ್ಯಾಯ ಸಾಧ್ಯತೆಗಳ ಹುಡುಕಾಟ ಕಂಡರೆ ಅಮರೇಶ ನುಗಡೋಣಿಯವರ ಕತೆಗಳಲ್ಲಿ ಜಮೀನ್ದಾರಿ ವ್ಯವಸ್ಥೆಯೊಂದಿಗೆ ಮೌನವಾಗಿ ಬದುಕುವಂತ ದಲಿತರ ಉದಾರವಾದಿ ನಿಲುವು ಗೋಚರವಾಗುತ್ತದೆ.

ಅಮರೇಶ ನುಗಡೋಣಿಯವರ ‘ಬೇಟೆ’ ಕೂಡ ಬಡಕುಟುಂಬವೊಂದು ಭೂಮಿಗಾಗಿ ನಡೆಸುವ ಹೋರಾಟವನ್ನು ಸಮರ್ಥವಾಗಿ ಕಟ್ಟಿಕೊಡುತ್ತದೆ. ಮಲ್ಲಿಹಳ್ಳಿಯ ಜಮೀನ್ದಾರ ಗೌಡನಿಂದ ಒಂದು ಕೂರಿಗಿ ಹೊಲವನ್ನು ಆತನ ಮನೆಯಲ್ಲಿ ಜೀತಮಾಡುತ್ತಿದ್ದ ಚನ್ನಪ್ಪ ಪಡೆದುಕೊಂಡಿದ್ದಾನೆ. ಚನ್ನಪ್ಪನ ಮಗ ಪರಮಶಿವಯ್ಯ ಲಿಂಗದಹಳ್ಳಿಯಿಂದ ಮದುವೆಮಾಡಿಕೊಂಡು ಮನೆ ತುಂಬಿಸಿಕೊಂಡಿದ್ದ ಗಂಗವ್ವ ಬೆವರು ಸುರಿಸಿ ಕೂಲಿನಾಲಿ ಮಾಡಿ ಬದುಕು ಕಟ್ಟಿಕೊಂಡವರು. ಮಾವ ಚನ್ನಪ್ಪ ತೀರಿದ ಮೇಲೆ ಹಿರೇಗೌಡ ನೀಡಿದ ಊರ ಹೊರಗಿನ ಗುಡ್ಡದ ಪಕ್ಕದ ಹೊಲಕ್ಕೆ ತಾವೇ ಭೂಕಂದಾಯ ಕಟ್ಟಿ ತಮ್ಮ ಹೆಸರಿಗೆ ಭೂಮಿ ಮಾಡಿಸಿಕೊಂಡು ಬದುಕುತ್ತಿದ್ದರು. ಆದರೆ ಬೀಳು ಬಿದ್ದ ಆ

ಭೂಮಿಯನ್ನು ಗಂಗವ್ವ ಕೂಲಿ ಕೆಲಸ ಮುಗಿದ ಮೇಲೆ ನಿತ್ಯ ಸಂಜೆ ಹೊಲಹಸನು ಮಾಡಿ ನಾಕಾರು ವರುಷಗಳಲ್ಲಿ ಆ ಭೂಮಿಯಲ್ಲಿ ಬೆಳೆ ತೆಗೆಯಲು ತೊಡಗಿದ್ದಳು. ಊರಲ್ಲಿ ಉಂಡು ಉಡಾಳನಾಗಿ ತಿರುಗುತ್ತಿದ್ದ ಪರಶಿವಯ್ಯನ ತಮ್ಮ ಈರಪ್ಪ ಕೇರಿ ಮಂದಿಯನ್ನು ಕೂಡಿಹಾಕಿ ಆ ಭೂಮಿಯಲ್ಲಿ ಪಾಲು ಕೇಳುತ್ತಾನೆ. ಸಿಟ್ಟಿಗೆದ್ದ ಪರಶಿವಯ್ಯನಿಗೂ ತಮ್ಮನಿಗೂ ಜಗಳವಾಗಿ ಈರಪ್ಪನನ್ನು ಥಳಿಸಿ ಬಿಡುತ್ತಾರೆ ಒಡೆತ ಆಯ ತಪ್ಪಿ ಪೆಟ್ಟು ಬಿದ್ದ ಈರಪ್ಪ ಸತ್ತು ಹೋಗುತ್ತಾನೆ. ಸಾವಿನ ಭೀತಿಯಿಂದ ಪರಮಶಿವಯ್ಯ, ಗಂಗವ್ವ ಊರು ಬಿಟ್ಟು ಲಿಂಗದಹಳ್ಳಿ ಸೇರಿಕೊಳ್ಳುತ್ತಾರೆ. ಸಂಸಾರ ನಾಲ್ಕಾರು ವರುಷ ಅಲ್ಲೆ ಬಿಡಾರ ಹೂಡಿದಾಗ ಹಿರೇಗೌಡನ ಮಗ ಪಂಪಾಪತಿ ಗೌಡನಿಗೆ ಇವರ ಆ ಭೂಮಿಯಲ್ಲಿ ಪ್ಯಾಕ್ಟರಿ ಕಟ್ಟಲು ಯೋಜನೆ ರೂಪಿಸುತ್ತಾನೆ. ಸರ್ಕಾರಿ ಲೆಕ್ಕಪತ್ರದಲ್ಲಿ ಭೂಮಿಯ ಒಡೆತನ ಚನ್ನಪ್ಪ ಮತ್ತು ಮಕ್ಕಳ ಮೇಲಿರುವುದು ತಿಳಿದು ಆ ಕುಟುಂಬವನ್ನು ತಮ್ಮ ಮನೆಯಲ್ಲಿ ಜೀತಕ್ಕಿಟ್ಟುಕೊಂಡು 'ಭೂಮಿ' ಪಡೆಯಲು ಹುನ್ನಾರಮಾಡುತ್ತಾನೆ. ಪರಶಿವಯ್ಯನನ್ನು ಕರೆದು ಮನೆಯಲ್ಲಿ ಜೀತ ಮಾಡಲು ಹೇಳುತ್ತಾನೆ. "ಗುಡ್ಡದ ಹೊಲ ನಮ್ಮುದು ಅಂತ ಗೊತ್ತಿಲ್ಲೇನು ಅಂದ ಪಂಪಾಪತಿಗೌಡ 'ನಮ್ಮಪ್ಪಗ ನಿಮ್ಮ ಹೆತ್ತೋರು ದಾನ ಮಾಡಿದ್ರು ಅದು ಕಗ್ಗಾಡಿನಂಗಿದ್ದದ್ದನ್ನು ನಾವು ಜೀವ ಬತ್ತಂಗ ದುಡುದ ಹೊಲ ಅಂತ ಕಾಣುವಂಗ ಮಾಡಿಕೊಂಡಿದ್ವಿ ಒಮ್ಮೆದಾನ ಕೊಟ್ಟ ಮ್ಯಾಲೆ ಮತ್ತೆ ಕಸಗಂಡ್ರೆ, ನಿಮ್ಮನ್ನುಹೆತ್ತೋರಿಗೆ ಶಾಂತಿ ಸಿಗುತ್ತೇನು"[೧೦] ಅದಕ್ಕೆ ಗೌಡ ಆ ಭೂಮಿ ನನಗ ಬೇಕು ಅಲ್ಲಿ ಪ್ಯಾಕ್ಟರಿ ಹಾಕಬೇಕಂತ ಮಾಡೀನಿ. ನಿನ್ನ, ನಿನ್ನ ಹೆಣ್ತಿ ಮಕ್ಕಳಿಗೆ ಕೆಲ್ಸ ಕೊಡ್ತಿನಿ ಬದುಕಿ ಕೊಂಡು ಇರು ನಿಮ್ಮ ತಮ್ಮನ ಕೊಲೆ ಕೇಸು ಬಗೆಹರಿಸ್ತೀನಿ! ಗೌಡನ ಮಾತಿಗೆ ಪರಶಿವಯ್ಯ ಬಗ್ಗುವುದಿಲ್ಲ. ತನ್ನ ಜಾತಿಯ ರಾಜಕೀಯ ಮುಖಂಡನಾದ ಪುರುಷೋತ್ತಮನ ಬಳಿ ತಮ್ಮ ದುಃಖ ಹೇಳಿಕೊಳ್ಳುತ್ತಾರೆ. ನಾನು ನ್ಯಾಯ ಇತ್ಯರ್ಥಮಾಡುವುದಾಗಿ ಮಲ್ಲಿಹಳ್ಳಿಗೆ ಬಂದಿರಲು ಹೇಳುತ್ತಾನೆ. ಆತನ ಮಾತಿಗೆ ಬೆಲೆ ಕೊಟ್ಟು ಅವರೆಲ್ಲಾ ಲಿಂಗದಳ್ಳಿಯಿಂದ ಮೂರು ಮಕ್ಕಳನ್ನು ಕಟ್ಟಿಕೊಂಡು ಬಂಡಿಯಲ್ಲಿ ಬರುವಾಗ ಕೊನೆಯ ಮಗ ಹಸುಗೂಸು ಭೂಮಿಲಿಂಗ ಸಾವನ್ನಪ್ಪುತ್ತಾನೆ. ತಮ್ಮ ಭೂಮಿಯ ಮೇಲೆ ತಮ್ಮ ಜಾತಿಯ ಮುಖಂಡ ಪುರುಷೋತ್ತಮನಿಗೂ ಕಣ್ಣಿರುವುದನ್ನು ಗ್ರಾಮಲೆಕ್ಕಾಧಿಕಾರಿ ನಿಂಗಪ್ಪನಿಂದ ತಿಳಿದು ಗಂಗವ್ವ ಮತ್ತು ಪರಶಿವಯ್ಯ ನೊಂದುಹೋಗುತ್ತಾರೆ. ಬಡವನ ಶಾಪ ದವಡೆಗೆ ಮೂಲಯೆನ್ನುವಂತೆ ಹಳ್ಳದ ಉಸುಕಿನಲ್ಲಿ ಮಗನ ಹೆಣ ಊಣಿ ದಿಕ್ಕು ತಪ್ಪಿದಂತೆ ಕೂತು ಬಿಡುತ್ತಾರೆ.

ಈ ಕತೆಯಲ್ಲಿ ಬಡ ನಿರ್ಗತಿಕ ಕುಟುಂಬವೊಂದು ಭೂಮಿ ಪಡೆದುಕೊಳ್ಳಲು ಮಾಡುವ ಹೋರಾಟಕ್ಕೆ ಫಲ ದೊರಕುವುದಿಲ್ಲ. ಬಡವರ ಕೂಗು, ಅಳಲು ಜಮೀನ್ದಾರರಿಗೆ ಮುಟ್ಟುವುದಿಲ್ಲ. ಅವರ ನಂಬಿದ ಜಾತಿ ಮುಖಂಡನಾದ ಪುರುಷೋತ್ತಮ ಕೂಡ ಗೌಡನೊಂದಿಗೆ ಸೇರಿಕೊಂಡು ಇವರ ಬದುಕಿನ ಮೇಲೆ 'ಬೇಟೆ' ಯಾಡಿಬಿಡುತ್ತಾರೆ. ಇವರ ಬದುಕು ನಾಯಿ ಪಾಡಾಗುತ್ತದೆ. ಗ್ರಾಮೀಣ ಅನುಭವದ ದಟ್ಟ ಜೀವನಾನುಭನದೊಂದಿಗೆ ಕತೆ ಹೊಸ ಚಿಂತನೆಯನ್ನು ಮೂಡಿಸುತ್ತದೆ. ಜಮೀನ್ದಾರಿ ವ್ಯವಸ್ಥೆಯ ಕರಾಳ ಮುಖಗಳ ಮಧ್ಯೆ ಪರಶಿವಯ್ಯ, ಗಂಗವ್ವರ ಬದುಕು ನೋವಿನ ಮಡುವಿನಲ್ಲಿ ಮುಳಗಿ ಹೋಗುತ್ತದೆ. ಅವರ ಭೂಮಿ ಹೋರಾಟದ ಕನಸು ನನಸಾಗುವುದಿಲ್ಲ.

ಅಮರೇಶ ನುಗಡೋಣಿಯವರ "ಮನ್ನಿಸಿ ಮೂಕಾದ ಮೇಲೆ" ಕತೆಯಲ್ಲಿಯೂ ಕೂಡ ತಾನು ಹುಟ್ಟಿ ಬೆಳೆದ ಊರು ಮತ್ತು ಕಡಿದುಹೋದ ಭೂಮಿ ಸಂಬಂಧದ ನಂಟನ್ನು ವಿವರಿಸುತ್ತದೆ. ನಾಯಕನಾದ ಮಲ್ಲಿಕಾರ್ಜುನ ಹಳ್ಳಿಯಲ್ಲಿ ಹುಟ್ಟಿ ಬೆಳೆದವನು ಚಿಕ್ಕಂದಿನಲ್ಲಿ ತಾಯಿ ತೀರಿದ ಮೇಲೆ ದೊಡ್ಡಮ್ಮಳ ಆಶ್ರಯದಲ್ಲಿ ಬೆಳೆದು

ಕಾಲೇಜು ಶಿಕ್ಷಣ ಮುಗಿಸಿದವನು ಆತ ಮುಂದೆ ಎಂ.ಎ.ಓದಲು ದೊಡ್ಡಮ್ಮ ಆತನ ತಂದೆ ಭೂಮಿಯನ್ನು ಒತ್ತೆಯಿಟ್ಟು ಹಣನೀಡಿ ಮಲ್ಲಿಕಾರ್ಜುನನ ವಿದ್ಯೆಗೆ ನೆರವಾದವರು ಆದರೆ ಯುನಿವರ್ಸಿಟಿಯ ವಿದ್ಯಾಭ್ಯಾಸದಲ್ಲಿ ಮಲ್ಲಿಕಾರ್ಜುನ ನಾಗಲಕ್ಷ್ಮಿಯನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಆತನ ತಂದೆಯಿಂದ ಖಾಸಗೀ ಕಾಲೇಜೊಂದರಲ್ಲಿ ಅಧ್ಯಾಪಕನಾಗಿ ಹುಟ್ಟಿದ ಊರು ಮನೆಯ ಬಡತನಕ್ಕೆ ಸ್ಪಂದಿಸದೇ ಹೋಗುತ್ತಾನೆ. ಹೆಂಡತಿಯ ಮಾತುಗಳಿಗೆ ತಲೆಹಾಕುತ್ತಾ ಬೆಳೆದು ಕರುಳ ಸಂಬಂಧ ಕಡಿದುಕೊಂಡವನು. ಇದ್ದಕ್ಕಿದ್ದಂತೆ ದೊಡ್ಡಪ್ಪ ಕಾಯಿಲೆಯಿಂದ ಹಾಸಿಗೆ ಹಿಡಿದಿರುವುದು ತಿಳಿದು ತನ್ನ ಹುಟ್ಟೂರಿಗೆ ಬರುತ್ತಾನೆ. ತಾನು ಹುಟ್ಟಿ ಬೆಳೆದ ಊರಿಗೆ ಬರುವಾಗ ಪಾಪ ಪ್ರಜ್ಞೆ ಕಾಡತೊಡಗುತ್ತದೆ. ತಾನು ಓದಿ ಉದ್ಯೋಗ ಸೇರಿದ ಮೇಲೆ ಮನೆಯ ಮಂದಿಗೆ ಅನ್ನ ನೀಡುತ್ತಿದ್ದ, ತನ್ನ ಶಿಕ್ಷಣಕ್ಕಾಗಿ ಮಾರಿದ 'ಭೂಮಿ'ಯನ್ನು ಬಿಡಿಸಿಕೊಡುತ್ತೇನೆ, ಹೊಲದಲ್ಲಿ ಬಾವಿ ತೋಡಿಸಿ ತೋಟಮಾಡಿಸುತ್ತೇನೆಂದು ಜನರ ಮುಂದೆ ಹೇಳಿಕೊಂಡ ಮಾತುಗಳು ಹೆಂಡತಿಯಿಂದಾಗಿ ಫಲಕಾಣದೋಗುತ್ತವೆ. ಅಕ್ಕನ ಮಗಳು ಮಾದೇವಿಯನ್ನು ಮದುವೆಯಾಗುತ್ತೇನೆಂದ ಮಾತೂ ನೆಡೆಸಿಕೊಡದೇ ಹೋದದ್ದು ತಾಯಿಯನ್ನು ಕಳೆದುಕೊಂಡ ಆಕೆ ಊರ ಕೆಳ ಜಾತಿಯವನನ್ನು ಪ್ರೀತಿಸಿ ಮದುವೆಗೆ ಮುಂಚೆ ಬಸಿರಾಗಿ ಮನೆಯ ಮರ್ಯಾದೆ ತೆಗೆಯದೇ ಸಾಮಾಜಿಕ ನಿಂಧನೆಗೆ ಒಳಗಾಗಿ ಹೊಟ್ಟೆಯಲ್ಲಿರುವ ಮಗುವನ್ನು ತೆಗೆಸಿಕೊಂಡು ವಯಸ್ಸಾದ 'ಅವ್ವ' ತಾತನ ಜೋಪನಕ್ಕೆ ನಿಂತವಳು. ಊರಲ್ಲಿಯ ಹೆಂಡೆ ಮನೆ ನೆಲಕಚ್ಚಿ ಹೋದ ಮೇಲೆ ದೊಡ್ಡವ್ವ, ಅಪ್ಪ ಊರ ಮುಂದಿನ ಹೊಲದಲ್ಲಿ ಗುಡಿಸಲು ಹಾಕಿಕೊಂಡು ಬದುಕುತ್ತಿದ್ದುದನ್ನು ಕಂಡು ಮಲ್ಲಿಕಾರ್ಜುನ ತನ್ನಿಂದಾಗಿ ಮನೆತನದ ಸ್ಥಿತಿ ಇಂತಾಯಿತೆಂದು ಮರುಗುತ್ತಾನೆ. ಆದರೆ 'ದೊಡ್ಡವ್ವ' ಅಪ್ಪ ಅಷ್ಟೆ ಪ್ರೀತಿ ವಾತ್ಸಲ್ಯದಿಂದ ಮಾತನಾಡಿಸಿ ಮೊಮ್ಮಕ್ಕಳ ಬಗ್ಗೆ ಖುಷಲ ವಿಚಾರಿಸುತ್ತಾರೆ. ಓರಗೆಯ ಗೆಳೆಯ ಆದೆಪ್ಪನ ಮನಿಗೆ ಹೋದಾಗ ಆತ ಸಿಟ್ಟಿನಿಂದ "ನಿನ್ನ ಸಲುವಾಗಿ ಅವರೆಷ್ಟು ದುಡಿದು ಓದಿಸಿದ್ರು ಅನ್ನುವ ಖಬುರಾದೇನು, ನಿನ್ಗೆ? ಹೊಲ ಮಾರಿದ್ರು, ಮಂದಿ ಮನ್ಯಾಗ ಬಗ್ಗಿ ದುಡುದ್ರು, ಎಲ್ಲಾ ನಿನ್ಗಾಗಿ ಮಾಡಿದ್ರು, ಮಾದೇವಿ ಅಕ್ಕನ ಮಗಳು ನಿನಗಾಗಿ ಕಾದು ಕುಂತಾಳ ಅಂಬುದು ಮರ್ತಕುಂತಿ, ಹೋಗ್ಲಿ ನೀನು ಮೆಚ್ಚಿದ ಹುಡಿಗಿನ್ನ ಮದವಿ ಮಾಡಿಕೊಂಡಿ ಸರಿ. ದೈವದಾಗ ಇದ್ದದ್ದು ಆಗಿಹೋಯ್ತು ಆಮ್ಯಾಲೆ ಮಾದೇವಿಗೆ ಒಂದು ವರ ನೋಡಿ ಮದಿವಿ ಮಾಡಿಕೊಡಬೇಕಂತ ವಿಚಾರ ಹೊಳಿಲಿಲ್ಲ ನಿನ್ಗೆ?"[೧೫] ಗೆಳೆಯನ ಮಾತುಗಳಿಗೆ ಮಲ್ಲಿಕಾರ್ಜುನ ತಲೆತಗ್ಗಿಸಿ ಕೂತು ನೋವು ನುಂಗಿಕೊಳ್ಳುತ್ತಾನೆ. ದೊಡ್ಡಮ್ಮ ತಂದೆ ತನ್ನನ್ನು ಮನ್ನಿಸಿ ಮೂಕವಾಗಿರುವುದು ಆತನಿಗೆ ತಿಳಿದು ತನಗೆ ತಾನೇ ಪಾಪ ಪ್ರಜ್ಞೆಯಿಂದ ನರಳುತ್ತಾನೆ. ಹೆಂಡತಿಯ ಮಾತಿನಿಂದ ತಾನು ಈ ರೀತಿ ಕೆಟ್ಟು ಹೋಗಿರುವುದು ಅರಿವಾಗುತ್ತದೆ. ರಾತ್ರಿ ಮಲಗಿದ್ದವನಿಗೆ ಯೋಚನೆಯಲ್ಲಿ ನಿದ್ದೆ ಬಾರದೆ, ಗುಡಿಸಲಿಂದ ಹೊರಬಂದು ತಾನು ಹುಟ್ಟಿ ಬೆಳೆದ ಮನೆ, ಭೂಮಿ ನೆನಪಾಗುತ್ತದೆ. ತಾನು ಹೊಲದ ತುಂಬೆಲ್ಲಾ ಓಡಾಡಿದ ನೆನಪು ಕಾಡತೊಡಗುತ್ತದೆ. ತಂದೆ ಶರಣನಂತೆ ತತ್ವಪದಗಳನ್ನು ಹಾಡುತ್ತಾ ನೋವು ನುಂಗಿ ಬದುಕುವುದನ್ನು ಕಂಡು ಮರುಗುತ್ತಾನೆ. ಕೊನೆಯಲ್ಲಿ ಅವರನ್ನು ಪೇಟೆ ಮನೆಗೆ ಕರೆಯುತ್ತಾನೆ. ಅವರು ಬರಲೊಪ್ಪದೆ ನಿರಾಶೆ ಹೊಂದುತ್ತಾನೆ. ಪೇಟೆಗೆ ಮರಳಿದ ಮೇಲೆ ತಂದೆಯ ಮಾತು ನೆನಪಾಗಿ ಮಾವನ ಮನೆಯಲ್ಲಿ ಹಂಗಿನಲ್ಲಿರಬಾರದೆಂದು ದೃಢನಿರ್ಧಾರ ಮಾಡಿ ಬಾಡಿಗೆ ಮನೆ ಹುಡುಕಲು ಹೆಂಡತಿಗೆ ಹೇಳುತ್ತಾನೆ. ಆಕೆಗೆ ಈ ಬದಲಾವಣೆಗೆ ಅಚ್ಚರಿ ಹುಟ್ಟಿಸುತ್ತದೆ. ತಾನು ಕಟ್ಟಿಸುತ್ತಿರುವ ಮನೆಗೆ ಸಿಮೆಂಟು, ಕಬ್ಬಿಣ ಬಂದಿರುವುದು ತಿಳಿದು ಇಂಜಿನೀಯರಿಗೆ ಎರಡು ರೂಮಿಗೆ ಆಗುವಷ್ಟು ಸಿಮೆಂಟು-ಕಬ್ಬಿಣ ಊರಿಗೆ ಹಾಕಿ ಬರಲು ಹೇಳುತ್ತಾನೆ. ಊರಲ್ಲಿ ದೊಡ್ಡವ್ವ ತಂದೆಗೆ ಮನೆ ಕಟ್ಟಿಸಿಕೊಡಲು ನಿರ್ಧರಿಸುತ್ತಾನೆ.

ಮಲ್ಲಿಕಾರ್ಜುನನಿಗೆ ತಾನು ಸಾಗಿದ ತಪ್ಪಿನ ಅರಿವಾಗಿ ತನಗಾಗಿ ಕಳೆದುಕೊಂಡ ಭೂಮಿಯ ಸಂಬಂಧ ನೆಮ್ಮದಿ ಎಲ್ಲವನ್ನು ಮರಳಿ ಹಡೆದವರಿಗೆ ನೀಡಬೇಕೆಂಬ ನಿಲುವಿಗೆ ಬರುತ್ತಾನೆ. ಹುಟ್ಟಿ ಬೆಳೆದ ಊರು ನೆಡೆದಾಡಿದ ಹೊಲ -ಮನೆ ಆತನ ಯಾಂತ್ರಿಕವಾದ ಬದುಕನ್ನು ಬದಲಾಯಿಸಿಬಿಡುತ್ತದೆ. ತನ್ನೂರ ನೆಲದ ಮಣ್ಣಿನ ಬದುಕು ಆತನ ಮನಸ್ಸನ್ನು ಕಲಕಿ ಹೊಸ ನಿರ್ಧಾರಕ್ಕೆ ಸಜ್ಜುಗೊಳಿಸಿಬಿಡುತ್ತದೆ. ಎಲ್ಲರು ಮನ್ನಿಸಿ ಮೂಕವಾದದ್ದೆ ಆತನ ಬದಲಾವಣೆಗೆ ದಾರಿಯಾಗುತ್ತದೆ.

ಜಮೀನ್ದಾರ ರೈತನೊಬ್ಬನ ಭೂಮಿ ನಂಟಿನ ಪ್ರಶ್ನೆಯನ್ನು ಮುಖ್ಯ ಆಶಯವಾಗಿಟ್ಟುಕೊಂಡಿರುವ ಅಮರೇಶ ನುಗಡೋಣಿಯವರ 'ಪಕ್ಕಕಲ್ಲದೆ ಪರಿಣಾಮ ಕಾಣಿಸದು' ಈ ಕತೆಯ ನಾಯಕ ಶರಭನಗೌಡ, ನಾಲ್ಕುನೂರು ಎಕರೆ ಭೂಮಿಯ ಒಡೆಯ ಈತನ ಭೂಮಿಯನ್ನು ಬಡಜನರಿಗೆ ಹಂಚುವ ನಿರ್ಧಾರವನ್ನು ಕೈಕೊಂಡ ಕತೆ ಊರ ಮುಂದಿನ ಗುಡ್ಡದ ಪಕ್ಕದಲ್ಲಿ ಬಂದಿಳಿದ ಚಳುವಳಿಗಾರರಿಂದ ಗೌಡ ನಿದ್ದೆಗೆಡುತ್ತಾನೆ. ಎಷ್ಟೋ ಜಮೀನ್ದಾರರನ್ನು ಹತ್ಯೆಮಾಡಿಬಂದ ಚಳುವಳಿಗಾರರು ಉಳ್ಳವರ ಭೂಮಿಯನ್ನು ಇಲ್ಲದವರಿಗೆ ಹಂಚುತ್ತಾರೆ. ಈ ಚಳುವಳಿಗಾರರ ನಾಯಕ ಚಂದ್ರಪ್ಪ ಗೌಡನಿಗೆ ಮುಖಾಮುಖಿಯಾಗಿ ವಾದಿಸಿ ಒಂದು ನಿರ್ಧಾರಕ್ಕೆ ಬರಲು ಆಜ್ಞಾಪಿಸುತ್ತಾನೆ. ಗೌಡನ ಹೊಲದಲ್ಲಿ ತಲತಲಾಂತರ ದುಡಿದ ಊರ ಕೆಳವರ್ಗದ ಜನ ಜೀತಗಾರರಾಗಿಯೇ ಬದುಕು ತಳ್ಳಿದ್ದಾರೆ. ಈ ಬಡಜನರ ಧನಿಯಾಗಿ ಚಂದ್ರಪ್ಪ ಗೌಡನಿಗೆ.' ''ಗೌಡ್ರೇ, ನನ್ನ ತಾತ ರಂಗಪ್ಪ ನಿನ್ನ ಜ್ವಾಳದ ರಾಶಿ ಮಾಡುವಾಗ ತಿಂಗಳಗಟ್ಟಲೆ ಹಲಿಗೆ ನುಡಿಸ್ತಿದ್ದ, ರಾಶಿ ಮಾಡುವ ಕೂಲಿಕಾರರ ಧಣಿವನ್ನು ಕಳಿತಿದ್ದ ನನ್ನ ಅಂಥ ತಾತಂದಿರಿಗೆ ನೀನು ಕೊಟ್ಟದ್ದು ಅಂಗೈ ಅಗಲದ ರೊಟ್ಟಿ, ಹಿಡಿ ಜೋಳದ ಅನ್ನ, ನೀರುಮಜ್ಜಿಗೆ ಅಲ್ಲೇನ್ರೀ ಗೌಡ್ರೇ? ರೊಟ್ಟಿ ಕೊಟ್ಟೇರಿ ಆ ರೊಟ್ಟಿನ್ನ ಬೆಳೆವ ಭೂಮಿನ್ನ ನೀವು ಇಟಗಂಡೀರಿ. ಈಗ ಭೂಮಿನ್ನ ಕೊಟ್ಟು ಬುಡ್ರೀ ಗೌಡ್ರೇ ರೊಟ್ಟಿನ್ನ ಬೆಳಕಂಡು ತಿಂತಾರ ಕೇರಿ ಮಂದಿ''[೧೨] ಅಂದಾಗ ಗೌಡ ಭೂಮಿ ಕೊಡಬೇಕೆನ್ನುವ ಮಾತಿಗೆ ರೊಚ್ಚಿಗೇಳುತ್ತಾನೆ.

ತಾನು ಸಂಪಾದಿಸಿದ ಭೂಮಿಯನ್ನು ಬಡವರಿಗೆ ಹಂಚಲು ಗೌಡ ನಿರಾಕರಿಸುವ ಮಾತನಾಡುತ್ತಾನೆ. ಚಳುವಳಿಗಾರರ ಭಯ ಆತನನ್ನು ಕಾಡುತ್ತದೆ. ಮೂಲತಃ ಗೌಡನ ಮಕ್ಕಳಿಗೆ ಹಳ್ಳಿ ಹೊಲ-ಮನೆಯ ಬಗ್ಗೆ ಮೋಹವಿಲ್ಲ. ಒಬ್ಬ ಮಗ ದೆಹಲಿಯಲ್ಲಿ ಖ್ಯಾತ ವೈದ್ಯನಾದರೆ ಮತ್ತೊಬ್ಬ ಕಿರಿಯ ಮಗ ವಿದೇಶದಲ್ಲಿ ಖ್ಯಾತ ಇಂಜಿನೀಯರು. ಮಗಳು ಗಂಡನೊಂದಿಗೆ ವಿದೇಶದಲ್ಲಿದ್ದಾಳೆ. ಎಲ್ಲಾರೂ ಗೌಡನನ್ನು ಊರು ಬಿಡಲು ಸತಾಯಿಸಿದರೂ ಗೌಡನಿಗೆ ಊರು ಹೊಲ ಮನೆಯ ಮೋಹ ಬಿಡುವುದಿಲ್ಲ. ಭೂಕಾಯ್ದೆ ಬಂದರೂ ಗೌಡ ಭೂಮಿ ಹಂಚದೆ ಭಂಡ ಧೈರ್ಯದಿಂದಿರುತ್ತಾನೆ. ನಾಡಿನ ಮೂಲೆ ಮೂಲೆಗಳಲ್ಲಿ ಕಾಣಿಸಿಕೊಂಡ ಚಳುವಳಿಗಳ ಕಾವು ಗೌಡನಿಗೆ ತಾಕುವುದಿಲ್ಲ. ಚಂದ್ರಪ್ಪ ಹೇಳುತ್ತಾನೆ ''ಇಲ್ಲ ಇಲ್ಲ ಗೌಡ್ರೇ ಭೂರಹಿತರಿಗೆ ಅದೂ ನಿಮ್ಮ ಜಮೀನಿನಲ್ಲಿ ಹಿಂದಿನಿಂದಲೂ ದುಡಕಂಡು ಬಂದ ನಿಮ್ಮ ಕೇರಿ ಮಂದಿಗೇ ಬದುಕಲು ಭೂಮಿ ಹಂಚ್ರಿ ಅಂತ ಕೇಳ್ತೀವಿ ನಿಮ್ಮ ಮನ ಒಲಿಸ್ತೀವಿ. ನೀವು ಇವರಿಗೆ ಭೂಮಿ ಕೊಟ್ಟರೆ ಈ ಜನ ಈ ದೇಶದ ಜನ ಮೊದಲ ಸಲ ತಮ್ಮ ದೇಶದಾಗ ಅಸ್ತಿತ್ವ ಪಡಿತಾರ''[೧೩] ಆತನ ಮಾತುಗಳನ್ನು ಗೌಡ ಗಹನವಾಗಿ ಯೋಚಿಸುತ್ತಾನೆ. ಸಿಟ್ಟಿನಿಂದ ಚಂದ್ರಪ್ಪ ತೋರಿಸಿದ ಪಿಸ್ತೂಲು ಗೌಡನನ್ನು ಸಾವಾಗಿ ಕಾಡಿಸುತ್ತದೆ. ಪಕ್ಕದೂರಿನಲ್ಲಿ ಭಂಡಹಟದಿಂದ ಸತ್ತ ನರಸೇಗೌಡನ ಹತ್ಯೆ ನೆನಪಾಗಿ ಗೌಡ ಭೂಮಿ ಹಂಚುವ ನಿರ್ಧಾರಕ್ಕೆ ಬರುತ್ತಾರೆ. ಈ ಕತೆಯಲ್ಲಿ ಕತೆಗಾರರು ಅಪ್ರಾಂತದಲ್ಲಿ ಕಾಲಕ್ಕೆ ತಕ್ಕ ಮಳೆ

ಸುರಿಯದೆ ಜನ ಗುಳೆ ಹೋಗಲು ತೊಡಗಿದ್ದು ಕೃಷಿ ಬದುಕು ಲಾಭವಿಲ್ಲದೆ ಸಾಲವೇ ಮೈಮೇಲೆ ಬಂದು ರೈತರು ಆತ್ಮಹತ್ಯೆಗೆ ಶರಣಾಗಿದುನ್ನು ನೋವಿನಿಂದ ಹೇಳುತ್ತಾರೆ. ಗೌಡನಿಗೂ ಭೂಮಿಯಿಂದ ಸಾಲವಾಗಿದೆ. ಆದರೆ ದೆಹಲಿಯಲ್ಲಿರುವ ದೊಡ್ಡಮಗ ಅಪ್ಪ ವಿದೇಶಿ ಕಂಪನಿಗಳು ನಮ್ಮೂರಿನ ಸರಹದ್ದಿನಲ್ಲಿ ಸ್ಥಾಪನೆ ಆಗಲಿವೆ. ಆ ಕಂಪನಿಗೆ ಭೂಮಿ ಬಾಳಬೇಕು. ಆಗ ನಮ್ಮ ಭೂಮಿಗೂ ಬೆಲೆ ಬರ್ತದೆ. ವರ್ಷ ಎರೆಡು ವರ್ಷ ನೀನು ಸದ್ಯ ಊರಲ್ಲಿರು ಅಂದಿದ್ದು ನೆನಪಾಗುತ್ತದೆ. ಆದರೂ ಚಳುವಳಿಗಾರರ ಪಿಸ್ತೂಲಿನ ಬೆದರಿಕೆ ನೆನೆದು ಭೂಮಿ ಹಂಚಲು ಮುಂದಾಗುತ್ತಾನೆ. ಆದರೆ ಊರಿನ ಯಾರೊಬ್ಬರೂ ಗೌಡ ಕೊಡುವ ಭೂಮಿಯನ್ನು ಪಡೆಯಲು ಮುಂದಾಗುವುದಿಲ್ಲ. ಅವರಿಗೆ ಭೂಮಿಬೇಕಿಲ್ಲ. ಉದ್ಯೋಗ ಕೇಳುತ್ತಾರೆ. ಗೌಡ ಅವರ ಮಾತುಗಳಿಗೆ ತತ್ತರಿಸುತ್ತಾನೆ.

ಈ ಕತೆಯಲ್ಲಿ ಅಮರೇಶ ನುಗಡೋಣಿಯವರು ನವವಸಾಹತುಶಾಹಿ ಸಂದರ್ಭದಲ್ಲಿ ಜಮೀನ್ದಾರರು ಭೂಮಾಲಿಕರು ಕೆಳವರ್ಗದ ಜನರನ್ನು ಶೋಷಿಸುವುದುರ ಜೊತೆಗೆ, ಭೂಕಾಯ್ದೆ ಬಂದು ಹೋದರೂ ಇಂತಹ ಎಷ್ಟೋ ಜನರು ದೊಡ್ಡ ರೈತರಾಗಿ ಉಳಿದು ಬಂದಿರುವ ಪರಿಯನ್ನು ಚಿತ್ರಿಸುತ್ತಾರೆ. ಇಂತಹ ಭೂಮಾಲಿಕರ ಸೊಕ್ಕನ್ನು ಇಳಿಸಲು ಅನೇಕ ಚಳುವಳಿಗಳು ಹುಟ್ಟಿಕೊಂಡಿರುವುದನ್ನು ಹೇಳುತ್ತಾರೆ ಈ ಕತೆಯಲ್ಲಿ ಬರುವ ಚಂದ್ರಪ್ಪ, ಗೌಡನಿಗೆ ಆತನ ಜಮೀನ್ದಾರಿಕೆಯ ಗತ್ತಿಗೆ ತಲೆಬಾಗದೇ ನಯವಾಗಿ ಆತನಿಗೆ ತಿಳಿ ಹೇಳುವುದರ ಮುಖಾಂತರ ಮಾತು ಆರಂಭಿಸಿ ಕೊನೆಗೆ ಪಿಸ್ತೂಲು ತೋರಿಸಿದಾಗ ಗೌಡ ತತ್ತರಿಸಿ ಬಡ ಬಗ್ಗರಿಗೆ ಭೂಮಿಹಂಚಲು ಮುಂದೆ ಬರುತ್ತಾನೆ. ಆದರೆ ಜನ ಭೂಮಿ ಸ್ವೀಕರಿಸಲು ನಿರಾಕರಿಸುತ್ತಾರೆ. ಮಳೆಬಾರದೇ ಬಂಜರು ಬಿದ್ದ ಭೂಮಿ. ಅದರಲ್ಲೂ ಕೃಷಿ ಪದ್ಧತಿಯು ನಷ್ಟದ ಅಂಚು ತಲುಪಿದ ಬಗೆಯನ್ನು ನಿರ್ಗತಿಕರೇ ಗೌಡನಿಗೆ ಮನವರಿಕೆ ಮಾಡಿಕೊಡುತ್ತಾರೆ. ಜನರಿಗೆ ಭೂಮಿ ಹಂಚದೆ ಹೋದರೆ ತಾನು ಚಂದ್ರಣ್ಣನ ಪಿಸ್ತೂಲಿಗೆ ಬಲಿಯಾಗಬೇಕಾದಿತೆಂಬ ಭಯಕಾಡಿ ದೆಸೆಗೆಟ್ಟು ನಿಲ್ಲುತ್ತಾನೆ.

ಈ ಕತೆಯ ಮೂಲಕ ಅಮರೇಶರು ಭೂಮಿ ಪ್ರಶ್ನೆ, ವಿದೇಶಿಕಂಪನಿಗಳ ಆಗಮನ ಗೌಡನ ಭೂಮಿ ವ್ಯಾಮೋಹದ ನಂಟು, ರೈತರ ಸಮಸ್ಯೆ ಬೆಳೆಯನಾಶದ ಹಿನ್ನೆಲೆಯಲ್ಲಿ ರೈತರ ಆತ್ಮಹತ್ಯೆಯ ಸಂಗತಿಗಳನ್ನು ಚರ್ಚೆಗೆ ಒಡ್ಡುತ್ತಾರೆ. ಜನ ಭೂಮಿ ಸಂಬಂಧದಿಂದ ಬಿಡಿಸಿಕೊಂಡು ಉದ್ಯೋಗ ಹುಡುಕಿಕೊಂಡು ಗುಳೆ ಹೋಗುವ ಸನ್ನಿವೇಶವನ್ನು ನೈಜತೆಯಿಂದ ಕತೆಯಾಗಿಸಿದ್ದಾರೆ.

ರೈತರ ಬವಣೆಯ ಬದುಕು ನೆಮ್ಮದಿಯಲ್ಲಿರಬೇಕೆಂದು ಹುಟ್ಟಿಕೊಂಡ 'ರೈತ ಸಂಘ'ಗಳು ನಾಡಿನ ಎಲ್ಲಾ ಮೂಲೆಗಳಲ್ಲಿ ಸ್ಥಾಪನೆಗೊಂಡು ಚಲನ ಶೀಲವಾಗಿ ಕಾರ್ಯ ನಿರ್ವಹಿಸಿ ಹೊಸ ಚಿಂತನೆಯನ್ನು ಹುಟ್ಟುಹಾಕಿದವು. ರೈತ ಸಂಘಟನೆಗಳು ಅಷ್ಟೇ ಬೇಗ ನೆಲಕಚ್ಚತೊಡಗಿದ ಘಟನೆಗಳೂ ಈ ನೆಲದಲ್ಲಿ ನೆಡದವು ಇದಕ್ಕೆ ರೈತ ಸಂಘದ ಒಳಗಡೆ ಸೃಷ್ಟಿಯಾದ ಭಿನ್ನಾಭಿಪ್ರಾಯಗಳೂ ಪ್ರಮುಖ ಕಾರಣಗಳಾಗಿದ್ದವು.

ನಟರಾಜ ಹುಳಿಯಾರರ "ಬಿರು ಬಿಟ್ಟ ನೆಲ" ಕತೆ ಗ್ರಾಮೀಣ ಜಗತ್ತಿನ ಬರಗಾಲದ ಬವಣೆಯನ್ನು ಸಾರುವ ಕತೆಯಾಗಿದೆ. ಕೊನೆಹಳ್ಳಿಯಲ್ಲಿ ಮಳೆ-ಬೆಳೆ ಬಾರದೇ ಹೋದಾಗ ಊರಿನ ಮಧ್ಯಮ ವರ್ಗದ ರೈತನ ಮಗನಾದ ರಾಜಣ್ಣ ಬದುಕು ಹುಡುಕಿಕೊಂಡು ನಗರ ಸೇರುತ್ತಾನೆ. ನಂತರ ಬಹಳಷ್ಟು ದಿನಗಳು ಗತಿಸಿ ಹೋದ ಮೇಲೆ ಮರಳಿ ಊರಿಗೆ ಬರುತ್ತಾನೆ. ಊರು ಬರಗಾಲದ ಬವಣೆಯಿಂದ ತತ್ತರಿಸತೊಡಗಿರುತ್ತದೆ. ಮಳೆಬಾರದೆ ಭೂಮಿ ಬೆಳೆಯಿಲ್ಲದೆ ಬಿರುಕು ಬಿಟ್ಟಿರುತ್ತದೆ ಬಡತನದ ಛಾಯೆಯಲ್ಲಿ ಮುಳುಗಿದ ಊರು, ಮನೆಯನ್ನು ಕಂಡು

ಮರುಗುತ್ತಾನೆ. ಒಂದು ಕಾಲದಲ್ಲಿ ಕೊನೇಹಳ್ಳಿಯ 'ರೈತ ಸಂಘ'ವೆಂದರೆ ಅಧಿಕಾರಿಗಳು ಊರು ಪ್ರವೇಶಿಸಲು ಸಂಘದ ಪರವಾನಿಗೆ ಪಡೆಯಬೇಕಿರುತ್ತದೆ. ಆದರೆ ಪರಸ್ಪರ ಒಳ ಜಗಳ, ರಾಜಕಾರಣದಿಂದ 'ರೈತ ಸಂಘ' ಒಡೆದು ಹೋಳಾಗಿರುತ್ತದೆ. ಇದಕ್ಕೆ ತನ್ನ ತಂದೆ-ಅಣ್ಣ ಕಾರಣವೆಂದು ತಿಳಿದು ರಾಜಣ್ಣ ಮರುಗುತ್ತಾನೆ. ಅಣ್ಣ ಶಿವಣ್ಣ ರಾಜಣ್ಣನಿಗೆ ''ಕೆರೆ ಹಿಂದಿನ ಭೂಮಿನ ನಾರಿನ ಪ್ಯಾಕ್ಟರಿಗೆ ಮಾರಿಬಿಡಾನ ಅಂತಿದೀನಿ, ಪಾಲು ಮಾಡಿ ಬಿಡೋಣಕಣಯ್ಯ ಈ ಬೇವರ್ಸಿ ಊರಲ್ಲಿ ಸಾಯೋದಕ್ಕಿಂತ ತಿಪಟೂರಲ್ಲಿ ಬೀಡಿ ಅಂಗಡಿ ಇಡಬೇಕು ಅಂತ ಮಾಡಿನಿ''[೧೬] ಎಂಬ ಅಣ್ಣನ ಮಾತಿನಲ್ಲಿ ಬರಗಾಲದ ನೋವಿದೆ ರಾಜಣ್ಣನಿಗೆ ನಂತರ ಅಣ್ಣ-ತಂದೆಯಿಂದ ಊರಿನ ರೈತ ಸಂಘವು ಒಡೆದು ಹೋಳಾಗಿರುವುದು ತಿಳಿಯುತ್ತಲೇ ಮನೆಯ ಸ್ಥಿತಿಗತಿಯನ್ನು ಮೆಲ್ಲನೆ ಅರಿತುಕೊಳ್ಳುತ್ತಾನೆ. ರಾಜಕೀಯ ಸ್ಥಿತ್ಯಂತರಗಳ ಮಧ್ಯೆ ಅನೇಕ ಬವಣೆಗಳನ್ನು ಊರು ನುಂಗಿಕೊಂಡಿದೆ. ಮನೆಯಲ್ಲಿ ದೊಡ್ಡವ್ವಳ ಮಗಳು ಗೌರಿ ಗಂಡನ ಮನೆಯಲ್ಲಿ ಶೋಷಣೆಗೆ ಒಳಗಾಗಿ ಮನೆ ಸೇರಿದ್ದಾಳೆ. ಚುನಾವಣೆಯ ಗದ್ದಲದಲ್ಲಿ ಊರು ಒಡೆದು ಹೋಳಾಗಿ ಹೋಗಿರುತ್ತದೆ. ಮಳೆಯಿಲ್ಲದೆ ಬಿರುಕುಬಿಟ್ಟು ಬಂಜೆ ನೆಲ, ಹಸಿದ ಹೊಟ್ಟೆಯ ನರಳಾಟ ಊರಿನ ಹೆಣ್ಣುಮಕ್ಕಳು ಹೊಟ್ಟೆತುಂಬಿಸಿಕೊಳ್ಳಲು ಮೈಮಾರಿಕೊಳ್ಳುವ ದಂಧೆಗೆಯಿಳಿದಿರುತ್ತಾರೆ.

''ಬೀರುಬಿಟ್ಟ ನೆಲ'' ಈ ಕತೆ ಪ್ರಧಾನವಾಗಿ ಬರಗಾಲ, ರೈತರ ಬವಣೆ, ಮತ್ತು ಅನೇಕ ಆಶಯಗಳೊಂದಿಗೆ ಹುಟ್ಟಿಕೊಂಡ 'ರೈತಸಂಘ'ದ ಅವನತಿಯನ್ನು ಮಾರ್ಮಿಕವಾಗಿ ಚಿತ್ರಿಸುತ್ತದೆ.

ಭೂಮಿತಾಯಿಯ ಚೊಚ್ಚಲ ಮಗನಾದ ರೈತ ನೆಮ್ಮದಿಯಿಂದ ಇದ್ದರೆ ದೇಶದ ಬದುಕು ನೆಮ್ಮದಿಯಿಂದಿರುತ್ತದೆ. ಭೂಮಿಯನ್ನು ಆರಾಧ್ಯ ದೈವವೆಂದು ನಂಬಿಕೊಂಡ ಆತ ಪ್ರತಿಕ್ಷಣಭೂಮಿ ಬೆಳೆಯ ಬಗ್ಗೆ ನೂರಾರು ಕನಸುಗಳನ್ನು ಹೊತ್ತು ಸಾಗುತ್ತಿರುತ್ತಾನೆ. ಮಲ್ಲಿಕಾರ್ಜುನ ವಣೇನೂರರ 'ಮೂಗ' ಕತೆಯಲ್ಲಿ ಮಾತು ಬಾರದ ಒಬ್ಬ ಮೂಗನಿಗೆ ರೈತನಾಗಿ ಹೊಲ ಉಳುವ ಕನಸು ಚಿಗುರುತ್ತಲೇ ಹೋಗುತ್ತದೆ. ಊಳೂರಿನಲ್ಲಿ ಎಲ್ಲರ ಪ್ರೀತಿಗೆ ಪಾತ್ರನಾದ ಆತ ಊರಿನ ಸಣ್ಣ ಮಕ್ಕಳಿಗೆ ಆಟದ ಸಾಮಾನುಗಳನ್ನು ಮಾಡಿಕೊಡುತ್ತಿರುತ್ತಾನೆ. ಗೌರಿ ಹುಣ್ಣಿಮೆಯ ದಿನಗಳಲ್ಲಿ ಓಣಿಯ ಪಡ್ಡೆಹುಡುಗರಿಗೆ ಕೋಲಾಟವನ್ನು ಕಲಿಸಿಕೊಡುತ್ತಿದ್ದ ಮೂಗ ಊಳೂರಿನ ಜೀವನಾಡಿಯಾಗಿದ್ದನು.

ಮೂಗನಿಗೆಯಿದ್ದ ಹೊಲವನ್ನು ಕಿತ್ತುಕೊಳ್ಳಲು ಈರಾರೆಡ್ಡಿಯ ಮಗ 'ಎನ್ನುಗ' ಹೊಲದಲ್ಲಿ ಬಂದು ''ಭೂಮಿ ಬುಟ್ಟು ಬುಡಲೇ ನಾನೆ ಬಿತ್ಗಂಡು ನಿನ್ಗೆ ಇಷ್ಟಂತ ಕಾಳು ಕೊಡ್ತೀನಿ''[೧೭] ಅಂತದ್ದೆ ಮೂಗ ತನ್ನನೆಲ ಕಿತ್ತಿಕೊಳ್ಳಲು ಬಂದ ಎನ್ನುಗನನ್ನು ಝಾಡಿಸಿ ಹೊಟ್ಟೆಗೆ ಒದ್ದು ಬಿಡುತ್ತಾನೆ. ಎನ್ನುಗ ಆತನ ಪರಿವಾರದವರು ಮೂಗನ್ನು ಸಿಕ್ಕ ಸಿಕ್ಕಲ್ಲಿ ಒಡೆದು ಪ್ರಜ್ಞಾಹೀನ ಸ್ಥಿತಿಗೆ ತಂದು ಬಿಡುತ್ತಾರೆ. ಮೂಗನ ಹೊಲವನ್ನು ತಾನೇ ಬಿತ್ತಿ ಬೆಳೆಯತೊಡಗುತ್ತಾರೆ. ಭೂಮಿ ಎನ್ನುಗನ ಪಾಲಾಗುತ್ತದೆ.ಮೊದಲ ಹೆಂಡತಿಯನ್ನು ಕಳೆದುಕೊಂಡ ಮೂಗ. ಎರಡನೆ ಹೆಂಡತಿಯನ್ನು ಕಟ್ಟಿಕೊಂಡು ನೋವಿನ ಬದುಕು ಸಾಗಿಸುತ್ತಾನೆ. ಬಡಿಗೇರು ಮಾರೆಣ್ಣ ಮೂಗನಿಗೆ ಸಾಂತ್ವನ ಹೇಳುತ್ತಾ...

''ನೋಡಪಾ ಮೂಕ ಅವುನು ಎನ್ನುಗ ಇದಾನಲ್ಲ ಆ ಮಿಂಡ್ರುಮಗ ಅವನಂತೂ ಹೊಲ

ಬಿಟ್ಟು ಕೊಡೋನಲ್ಲ ಮೊದ್ಲೆ ನೀನು ಭೂಮ್ಮಮ್ಮ ಅಂದ್ರೆ ಬಿದ್ದು ಸಾಯೋ ಮನುಷ್ಯ''[೧೮]

ಅಂದಾಗ ಅಂಗಡೆಲ್ಲಮ್ಮ ''ನೋಡಲೋ ಅಲ್ಲಿಹಗರ‍್ಯಾಗ ಒಂದೀಟು ಜಾಗ ಐತೆ, ಆ ಉಸುಕಿನ್ಯಾಗ ಕರಿಬಿಚ್ಚಣ್ಣು ಅವು ಇವು ಬೇಕಾದಂಗ ಬೆಳೆತಾವ ನೀನು ಮಾಡಿಕ್ಯಂಬಗಿದ್ರೆ ನೋಡು ಮತ್ತೆ'' (ಪುಟ-೯) ಅನ್ನುತ್ತಾಳೆ. ಮೊದಲೇ ಭೂಮಿಯನ್ನು ಕಳೆದುಕೊಂಡ ಮೂಗನಲ್ಲಿ ಮತ್ತೆ ಭೂಮಿ ರೈತನಾಗುವ ಕನಸು ಚಿಗುರೊಡೆಯತೊಡಗುತ್ತದೆ.

'ಸ್ವಂತ' ನನ್ನ ಭೂಮಿನ ಅವ್ನು ಕಸುಕೊಂಡ, ಎಮ್ಮೆ ಪುಡಿ ಪುಡಿ ಆಂಗವದ್ನ, ನ್ಯಾಯ ಅಂಬೊದುಯಿದ್ರೆ ಅವುನೊಲನಾ ನನ್ಗೆ ಬಿಡಿಸಿಕೊಡ್ರಿ ಮೂಗ ಸಂಜ್ಞೆಯಿಂದ ನನ್ನೊಲ ಯೆನ್ನುವಾಗ ಎದೆತಟ್ಟಿಹೇಳಿದ ರೀತಿ 'ನ್ಯಾಯ ಅಂಬೂದು ಇದ್ರೆ' ಎನ್ನುವಾಗ ನೆಲತಟ್ಟಿ ಹೇಳಿದ ತೀವ್ರತೆ ಅವನಿಗೆ ಹೊಲದ ಮೇಲಿರುವ ವ್ಯಾಮೋಹ, ಹೊಲ ಬಿಟ್ಟು ಬದುಕಲಾರೆನೆನ್ನುವ ತೀವ್ರ ನೋವು ಕಣ್ಣಿಗೆ ರಾಚಿದಷ್ಟೇ ಸ್ಪುಟವಾಗಿ ಅಲ್ಲಿದ್ದವರಿಗೆಲ್ಲಾ ಸ್ಪಷ್ಟವಾಗಿತ್ತು.

ನಂತರ ಹಗರಿಯಲ್ಲಿ ಊರ ಜನರು ಹೇಳಿದ ಉಸುಕಿನ ಭೂಮಿಯನ್ನು ಆಕ್ರಮಿಸಿಕೊಳ್ಳಲು ಹೋದಾಗ ಅಲ್ಲಿಯೂ ಜನರು ಬೆನ್ನತ್ತಿಬಂದು ಆತನನ್ನು ಓಡಿಸುತ್ತಾರೆ. ಜನರ ಕಾಟಕ್ಕೆ ಓಡೋಡಿ ಬಂದು ಈಶ್ವರ ಗುಡಿಯ ಮುಂದಿದ್ದ ಬಿಲ್ಪತ್ರೆ ಮರವನ್ನು ಊರ್ಧ್ವ ಮುಖವಾಗಿ ಮೇಲೆರತೊಡಗುತ್ತಾನೆ. ಊರಿನ ಜನ ಮರದ ಸುತ್ತ ನಿಂತು ಆತನನ್ನು ಕೆಳಗಿಳಿಸಲು ಯತ್ನಿಸುತ್ತಾರೆ. ಆದರೆ ಊರಿನ ಕೆಟ್ಟ ಮನಸ್ಸುಗಳ ಆಚೆ ಮೂಗ ಜಗಿದು ಹೋಗಿರುತ್ತಾನೆ. ಆತನ ಭೂಮಿಯ ಆಸೆ ರೈತನಾಗುವ ಕನಸು ಕೈಗೂಡುವುದಿಲ್ಲ. ಈ ಕತೆಯಲ್ಲಿ ಮಲ್ಲಿಕಾರ್ಜುನ ವಣೇನೂರರು ಒಬ್ಬ ಮೂಗನು ಭೂಮಿಯನ್ನು ಕಳೆದುಕೊಂಡು, ಭೂಮಿಯನ್ನು ಹೋರಾಟದಿಂದ ಪಡೆಯಲು ಯತ್ನಿಸಿ ಜನ ಸಮುದಾಯದ ಮಧ್ಯೆ ತನ್ನ ರೈತನಾಗುವ ಕನಸನ್ನು ಹೇಳಿಕೊಳ್ಳಲಾರದೆ ಹೋದ ಸಂದರ್ಭ ಆತನ ಕನಸಿನ ಲೋಕವನ್ನು ಅಂತರಾಳದ ತಳ ಮಳಗಳನ್ನು ಕತೆಯಲ್ಲಿ ಸಮರ್ಥವಾಗಿ ಸೆರೆಯಿಡಿದಿದ್ದಾರೆ.

ರೈತನಿಗಿರುವ ಭೂಮಿಯ ಸಂಬಂಧಗಳು ಅನನ್ಯವಾದಂತವುಗಳು. ಈ ಸಂಬಂಧದೊಂದಿಗೆ ರೈತರು ತಮ್ಮ ಸುತ್ತಣ ಬದುಕನ್ನು ಅರ್ಥ ಪೂರ್ಣವಾಗಿ ಕಟ್ಟಿಕೊಂಡಿರುತ್ತಾರೆ. ತಾವು ಬದುಕುವ ಬದುಕು, ನಂಬಿಕೊಂಡ ಭೂಮಿ ಅವರ ಜೀವಮಾನದ ಅನೇಕ ನೆನಪುಗಳನ್ನು ಸದಾ ಹಸಿರಾಗಿಟ್ಟಿರುತ್ತದೆ. ಭೂಮಿ ಸಾರ್ಥಕತೆಯಂತೆ, ರೈತನ ಬದುಕು ಕೂಡ ಸಾರ್ಥಕವಾಗಿರುತ್ತದೆ.

ಎಸ್.ಗಂಗಾಧರಯ್ಯನವರ 'ನವಿಲ ನೆಲ' ಕತೆಯೂ ಕೂಡ ಭೂಮಿಯೊಂದಿಗೆ ಇದ್ದ ಮಾನವೀಯ ಸಂಬಂಧಗಳನ್ನು ವಿವರಿಸುತ್ತದೆ. ನಗರದ ಯಾಂತ್ರಿಕ ಬದುಕಿನಲ್ಲಿ ಬೇಸತ್ತ ಚಕ್ರಪಾಣಿ ಕಂದಾಯ ಇಲಾಖೆಯಿಂದ ನಿವೃತ್ತಿಯಾಗಿ ಹುಟ್ಟಿದ ಹಳ್ಳಿಗೆ ಬಂದು ನೆಲೆ ನಿಲ್ಲುತ್ತಾನೆ. ಇದ್ದೊಬ್ಬ ಮಗ ಇಂಜನಿಯರಿಂಗ್ ಶಿಕ್ಷಣ ಮುಗಿಸಿ ವಿದೇಶಕ್ಕೆ ಹೋದಮೇಲೆ ಚಕ್ರಪಾಣಿ ಹಳ್ಳಿಯ ಮಣ್ಣಿನಲ್ಲಿ ಬದುಕಬೇಕೆಂದು ನಿರ್ಧರಿಸಿ ಊರಿಗೆ ಬಂದಿದ್ದಾನೆ. ಆತ ಕಂದಾಯ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದಾಗ ಊರು ಪಕ್ಕದಲ್ಲಿದ್ದ ಎರಡು ಎತ್ತರದ ದಿಬ್ಬಗಳ ಕೆಳಗಿನ ಸಮತಟ್ಟದ ಸುಂದರ ಪರಿಸರದ ಭೂಮಿಯನ್ನು ತನ್ನದಾಗಿಸಿಕೊಳ್ಳಲು ಯತ್ನಿಸುತ್ತಾನೆ. ಹಿಂದುಳಿದ ವರ್ಗದವರಿಂದ 'ಬಗರ್ ಹುಕಂ'ಗೆ ಅರ್ಜಿಹಾಕಿಸಿ ಅವರಿಗೆ ಬಂದ ಭೂಮಿಯನ್ನು ಚಕ್ರಪಾಣಿ ಹಣದ ಆಸೆ ತೋರಿಸಿ ಆ ಭೂಮಿಯನ್ನು ತನ್ನ ಹೆಸರಿಗೆ ಬರೆಯಿಸಿಕೊಂಡು ಬಿಡುತ್ತಾನೆ. ಊರ ಮುಂದಿನ ಮಲ್ಪಿಯ ನೆಲ ಆತನಿಗೆ ನೆಮ್ಮದಿಯನ್ನು ನೀಡುತ್ತದೆ. ಭೂಮಿಯೊಂದಿಗೆ ಚಕ್ರಪಾಣಿಯ ಬದುಕು ಎಣೆದುಕೊಳ್ಳತೊಡಗುತ್ತದೆ. ಈ ಸಂದರ್ಭದಲ್ಲಿ ಸರಕಾರವು ಅಂತರ್ಜಲ ಅಭಿವೃದ್ಧಿಗಾಗಿ ಹಳ್ಳಿಗಳಲ್ಲಿದ್ದ ಕೆರೆಗಳ ಹೂಳೆತ್ತುವ, ಅಗತ್ಯವಿದ್ದ ಕಡೆ ಹೊಸಕೆರೆಗಳನ್ನು ನಿರ್ಮಿಸುವ ಯೋಜನೆ ಹಾಕಿಕೊಳ್ಳುತ್ತದೆ. ಹಾಗೇ ಸರಕಾರವು ನೀಡಿದ 'ಬಗರ್ ಹುಕಂ ಭೂಮಿ'ಗಳಲ್ಲಿ ಕೆರೆ ನಿರ್ಮಿಸುವ ಯೋಜನೆಗೆ ಚಾಲನೆ ದೊರೆತಿದ್ದರಿಂದ ಊರಿನ ಜನ ಸಹಿ ಸಂಗ್ರಹಿಸಿ ಚಕ್ರಪಾಣಿಯ ಭೂಮಿಯಲ್ಲಿ ಕೆರೆ ನಿರ್ಮಿಸಲು ಅರ್ಜಿ ಸಲ್ಲಿಸುತ್ತಾರೆ. ಈ ಸುದ್ದಿ ತಿಳಿದ ತಕ್ಷಣ ಚಕ್ರಪಾಣಿ ತನ್ನ ಭೂಮಿ ಕೈ ಬಿಟ್ಟು ಹೋಗಬಾರದೆಂದು ಆ ಭೂಮಿಯಲ್ಲಿ ಹಣ್ಣಿನ ಗಿಡಗಳನ್ನು ನೆಟ್ಟು ತೊಂದರೆಯಾಗದಂತೆ ನೋಡಿಕೊಳ್ಳುತ್ತಾನೆ. ತಾನು ಪಡೆದ ಭೂಮಿಯಲ್ಲಿ ಸುಂದರ

ಕನಸುಗಳನ್ನು ಕಟ್ಟಿಕೊಂಡು ಬದುಕಬೇಕೆಂದು ವ್ಯವಸ್ಥೆಯ ವಿರುದ್ಧ ಭೂಮಿ ಉಳಿಸಿಕೊಳ್ಳಲು ಹೋರಾಡುತ್ತಾನೆ. ತಾನು ತೋಟ ಬೆಳೆಸಿದರೆ ಬೆಳೆದ ಬೆಳೆಯ ಮೇಲೆ ಸರಕಾರ ಕ್ರಮ ಜರುಗಿಸಲಾರದೆಂದು ತೋಟ ಬೆಳೆಸಲು ಶತ ಪ್ರಯತ್ನಮಾಡುತ್ತಾನೆ. ಆದರೆ ಆ ಭೂಮಿಯಲ್ಲಿ ಹಣ್ಣಿನ ಗಿಡಗಳು ನಿಂತು ಚಿಗುರೊಡೆಯುವುದಿಲ್ಲ. ಅತ್ತ ವಿದೇಶದಲ್ಲಿದ್ದ ಮಗ ತಂದೆ-ತಾಯಿಯನ್ನು ಕೇಳದೆ ಅಲ್ಲಿಯೇ ಮದುವೆಯಾಗಿ ಹುಟ್ಟಿದ ಮಗಳಿಗೆ 'ನವಿಲು' ಯೆಂದು ಹೆಸರಿಟ್ಟು ತಂದೆಯಾದ ಚಕ್ರಪಾಣಿಗೆ ಕ್ಷಮೆಕೋರಿ ಪತ್ರಬರೆಯುತ್ತಾನೆ. ಮಗನ ನಿರ್ಧಾರದಿಂದ ತಲ್ಲಣಗೊಂಡ ಚಕ್ರಪಾಣಿಗೆ ಅತ್ತ ನವಿಲು ಇತ್ತ ನೆಲ ಎರಡೂ ಕೈತಪ್ಪಿಹೋದ ಅನುಭವವಾಗತೊಡಗುತ್ತದೆ. ಊರಿನ ಜನ ಕೆರೆ ನಿರ್ಮಾಣದ ಸಂದರ್ಭದಲ್ಲಿ ಪುನರ್ವಸತಿ ಮತ್ತು ಕೆರೆ ನಿರ್ಮಾಣಕ್ಕೆ ಈತನ ಹೊಲದ ಮೇಲೆ ಕಣ್ಣಿಟ್ಟಿರುತ್ತಾರೆ. ''ಚಕ್ರಪಾಣಿಗೆ ಹಟ್ಟಿ ಜನರ ಮಾತುಗಳಿಂದ ಆತನ ಎದೆಯಲ್ಲಾದ ನೋವು, ಭೂಮಿಯಿಂದಾಗಬಹುದಾದ ಗಾಯಕ್ಕೆ ನಿದ್ದೆ ಕಳಕಂಡು ಮದ್ದಿಗಾಗಿ ಅಲೆಯುತ್ತಿದ್ದ''[೧೫] ಆತ ನಂಬಿದ ಪ್ರೀತಿಯ ಮಗ ಹೇಳದೆ ಕೇಳದೆ ವಿದೇಶದಲ್ಲಿ ಮದುವೆಯಾದದ್ದು ತಾನು ಅವನ ಬದುಕಿಗಾಗಿ ಪಟ್ಟಕಷ್ಟ, ಕಟ್ಟಿದ ಕನಸು ನುಚ್ಚುನೂರಾಗುತ್ತದೆ. ಆದರೆ ಮಗ ತಮ್ಮ ಭೂಮಿಯಲ್ಲಿ ಕುಣಿದಾಡುತ್ತಿದ್ದ ನವಿಲಿನ ಗುಂಗಿನಿಂದ ಮಗಳಿಗೆ ನವಿಲೆಂದು ಹೆಸರಿಟ್ಟು ತನ್ನ ಹಳ್ಳಿಯ ನೆಲದ ಮೇಲಿನ ಪ್ರೀತಿಪ್ರಕಟಿಸುತ್ತಾನೆ.

ತನ್ನ ಕನಸಿನ ಭೂಮಿಗಾಗಿ ಚಕ್ರಪಾಣಿ ಪಡುವ ಪಾಡು ಊರಸಮುದಾಯವನ್ನು ಎದುರು ಹಾಕಿಕೊಂಡು ಭೂಮಿ ಉಳಿಸಿಕೊಳ್ಳಲು ಮಾಡುವ ಹೋರಾಟವು ಭೂಮಿಯೊಂದಿಗೆ ಮನುಷ್ಯನಿಗಿರುವ ಮಾನವೀಯ ಸಂಬಂಧವನ್ನು ಕತೆ ಅರ್ಥಪೂರ್ಣವಾಗಿ ವಿವರಿಸುತ್ತದೆ. ಜೊತೆಗೆ ಊರಿನ ಎಲ್ಲಾ ರೈತರು ಊರಿಗೆ ಕೆರೆಯಾದರೆ ತಮ್ಮ ದೈನಂದಿನ ಸಮಸ್ಯೆ ಪರಿಹಾರವಾಗಿ ಕೆರೆಯ ನೀರಿನಿಂದ ಭೂಮಿಗೆ ನೀರುಣಿಸಿಕೊಂಡು ಬೆಳೆ ಬೆಳೆದು ಅನ್ನದ ಸಮಸ್ಯೆಯನ್ನು ನೀಗಿಸಿಕೊಳ್ಳಬಹುದೆಂದು ಯೋಚಿಸುತ್ತಾರೆ. ಜೊತೆಗೆ ಸರಕಾರ ನೀಡಿದ ಬಗರ್‌ಹುಕಂ ಭೂಮಿಯಲ್ಲಿ ಕೆರೆಯಾಗಲೆಂದು ಸರಕಾರಕ್ಕೆ ಒತ್ತಾಯಿಸುತ್ತಾರೆ. ಈ ಕತೆಯಲ್ಲಿ ಊರ ರೈತರ ಸಮಸ್ಯೆ ಮತ್ತು ಚಕ್ರಪಾಣಿಯು ಭೂಮಿ ಉಳಿಸಿಕೊಳ್ಳುವ ಹೋರಾಟ ಎರಡು ಪ್ರಮುಖ ಪ್ರಶ್ನೆಗಳಾಗಿ ಕತೆಯಲ್ಲಿ ಕಾಣಿಸಿಕೊಂಡಿವೆ.

ಈ ಸಂದರ್ಭದಲ್ಲಿ ಅನೇಕ ಕತೆಗಾಗರು ಅಲ್ಪಸಂಖ್ಯಾತ ಸಮುದಾಯಗಳ ಅನನ್ಯವಾದ ಉಪ ಸಂಸ್ಕೃತಿಯ ನೆಲೆಗಳನ್ನು ಶೋಧಿಸತೊಗಿದರು ಮೂಲತಃ ಲಂಬಾಣಿ ಜನಾಂಗದಿಂದ ಬಂದಿರುವ ಕೃಷ್ಣನಾಯಕರು ಆ ಜನಾಂಗದಲ್ಲಿದ್ದ ಜಮೀನ್ದಾರಿ ವ್ಯವಸ್ಥೆ ಜೀತಪದ್ಧತಿಯ ಕರಾಳ ಮುಖಗಳನ್ನು 'ಮೋತುನ ಮದ್ವೆ' ಕತೆಯಲ್ಲಿ ನಿರೂಪಿಸಿದ್ದಾರೆ. ಗೌಡನ ಮನೆಯಲ್ಲಿದ್ದಾಗ ತಂದೆಯನ್ನು ಖಾಯಿಲೆಯಿಂದ ಬಂಧ ಮುಕ್ತಗೊಳಿಸಲು ದವಾಖಾನೆಗೆ ತೋರಿಸಲು ಲಾಯಿ ಇದ್ದ ನಾಲ್ಕು ಎಕರೆ ಭೂಮಿಯನ್ನು ಒತ್ತೆಹಾಕಿ ಹಣತರುತ್ತಾಳೆ. ಅತ್ತ ತಂದೆಯೂ ಬದುಕದೆ ಆ ಸಾಲದ ಹೊರೆ ದೊಡ್ಡದಾಗಿ ಬೆಳೆದು ಮುಟ್ಟಿಸಲಾರದೆ, ಸಾಹುಕಾರ ತನ್ನ ಗಂಟು, ಬಡ್ಡಿಗೆ ಭೂಮಿಯನ್ನು ತನ್ನದನ್ನಾಗಿ ಮಾಡಿಕೊಂಡಿರುತ್ತಾನೆ. ಹೇಗಾದರೂ ಮಾಡಿ ಜಮೀನ್ದಾರನ ಸಾಲ ತೀರಿಸಿ ಭೂಮಿ ತನ್ನದನ್ನಾಗಿ ಮಾಡಿಕೊಳ್ಳಬೇಕೆಂದು ಸಾಹುಕಾರನ ಮನೆಯಲ್ಲಿ ಜೀತಕ್ಕೆ ನಿಂತರೂ ಸಾಲ ತೀರಿಸಲಾಗದೆ ಹೋದಾಗ ಹೊಸ ನಿರ್ಧಾರ ತೆಗೆದುಕೊಳ್ಳುತ್ತಾನೆ. ಇದ್ದೊಬ್ಬ ತಾಯಿಗೆ ಮಾರಾಷ್ಟ್ರದ ರತ್ನಗಿರಿಗೆ ಗುಳೆಹೋಗಿ ದುಡಿದು ದುಡ್ಡು ಕಾಸು ಮಾಡಿಕೊಂಡು ಬಂದು ಸಾಲತೀರಿಸಿ ಭೂಮಿ ಬಿಡಿಸಿಕೊಳ್ಳುವ ನಿರ್ಧಾರ ತಿಳಿಸುತ್ತಾನೆ. ತಾಯಿ ಇದ್ದೊಬ್ಬ ಮಗನನ್ನು ದೂರ ಕಳುಹಿಸಲು ಒಲ್ಲದ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾಳೆ. ನಾಕಾರು ತಿಂಗಳು ದುಡಿದು ಸೊರಗಿದ ದೇಹದಲ್ಲಿ

ದುಡ್ಡು ಕಾಸು ಜೋಡಿಸಿಕೊಂಡು ಮೋತು ತಾಂಡಕ್ಕೆ ಬರುತ್ತಾನೆ. ತಾಯಿ ಸೊರಗಿದ ಮಗನನನ್ನು ಕಂಡು ದುಃಖಿಸುತ್ತಾಳೆ. ತನ್ನ ಕೊನೆಗಾಲದಲ್ಲಿ ಮೋತುನ ಮದುವೆಗೆ ಒತ್ತಾಯಿಸುತ್ತಾಳೆ. ಆದರೆ ಮಗ ಮೊದಲು ಸಾಲ ತೀರಿಸಿ ಭೂಮಿಯನ್ನು ತಮ್ಮದು ಮಾಡಿಕೊಳ್ಳಬೇಕೆಂದು ನಿರ್ಧಾರ ಪ್ರಕಟಿಸಿದಾಗ ತಾಯಿ ಸುಮ್ಮನಾಗುತ್ತಾಳೆ. ಆದರೆ ತಾಂಡದ ಜನ ಭರ್ಜರಿ ಮದುವೆ ಮಾಡಿಕೊಂಡು ಎಲ್ಲಾರಿಗೂ ಭರ್ಜರಿ ಊಟ ಹಾಕಿಸಲು ಒತ್ತಾಯಿಸುತ್ತಾರೆ. ಮೋತು ಮನಸ್ಸು ಬದಲಾಯಿಸಿ ವೈಭವದಿಂದ ಮದುವೆಯಾಗಲು ಒಪ್ಪುತ್ತಾನೆ. ಚಪ್ಪರ ಹಾಕಿಸಿ ಪಕ್ಕದ ತಾಂಡದ ಚಂದುನಾಯ್ಕನ ಚಂದುಳ್ಳಿ ಚೆಲುವಿಯನ್ನು ಮದುವೆಯಾಗುತ್ತಾನೆ. ಮದುವೆಯಾಗಿ ದುಡಿದ ಹಣದ ಜೊತೆಗೆ ಸಾಲ ಮಾಡಿ ಎಲ್ಲಾರಿಗೆ ಊಟ ಹಾಕಿಸಿ ಸಾಲಗಾರರಾಗಿ ಹಟ್ಟಿಲ್ಲಿ ಉಳಿದ ಕುರಿ, ದನಗಳನ್ನು ಮಾರಿಕೊಳ್ಳುತ್ತಾರೆ. ಸಾಹುಕಾರರಿಂದ ಭೂಮಿ ಬಿಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಮೋತುವಿನ ಭೂಮಿಯ ಕನಸು ತಾನು ರೈತನಾಗಿ ಹೊಲ ಉಳುವ ಕನಸು ಭಗ್ನವಾಗುತ್ತದೆ. ಮದುವೆಗೆ ಮಾಡಿದ ಸಾಲತೀರಿಸಿ ಭೂಮಿಯನ್ನು ತನ್ನದಾಗಿಸಿಕೊಳ್ಳಲು ಮತ್ತೆ ಹೆಂಡತಿಯ ಜೊತೆಗೆ ಮಹಾರಾಷ್ಟ್ರದ ರತ್ನಗಿರಿಗೆ ಹೋಗುತ್ತಾನೆ. ತಾಯಿ ಅರೆಹುಚ್ಚಿಯಂತೆ ಗುಡಿಸಲು ಮುಂದೆ ಪೇಚಾಡುತ್ತಾ ಕೂಡುತ್ತಾಳೆ. ತಾಯಿಗೆ ಮಗ ಮೋತು ''ಎಟ್ ವರ್ಷ ಕಳದರೂ ನಮ್ಮ ಸಾಲ ತೀರೋದಿಲ್ಲ ನಮ್ಮ ಭೂ ಬಿಡಿಸ್ಕೊಳೋದು ಆಗುವುದಿಲ್ಲ ಅದಕ್ ಒಂದು ಮೂರ್ನಾಕ್ ತಿಂಗಳು ನೀ ಗಟ್ಟಿ ಮನಸ್ಸು ಮಾಡಿ ಇರು. ನಾ ದುಡುದು ರುಪ್ಯೆ ಗಳಿಸಿಕೊಂಡು ಬರ್ತೀನಿ''[೧೬] ಎಂದು ಹೇಳಿ ಮಗ ಸೊಸೆ ಗುಳೆ ಹೋಗಿಬಿಡುತ್ತಾರೆ. ಲಂಬಾಣಿ ಜನಾಂಗದಲ್ಲಿಯೂ ಕೂಡ, ಜಮೀನ್ದಾರಿ ವ್ಯವಸ್ಥೆಯ ಕರಾಳ ಮುಖಗಳು ಬಡವರ ಮೇಲೆ ತಮ್ಮ ಕರಾಳ ನೆರಳು ಚಾಚಿ ಅವರ ಕನಸುಗಳನ್ನು ನುಚ್ಚು ನೂರು ಮಾಡಿರುವುದು ಈ ಕತೆ ಸಾಬೀತು ಮಾಡುತ್ತದೆ. ಈ ಜನಾಂಗದ ಅನೇಕ ವೈವಿಧ್ಯಮಯ ಸಂಸ್ಕೃತಿಯ ಚಿತ್ರಣವೂ ಇಲ್ಲಿ ದಾಖಲಾಗಿದೆ.

ಭೂಮಿ ಮತ್ತು ರೈತನ ಸಂಬಂದ ಅನೂನ್ಯವಾಗಿರುವಂತದ್ದು. ಒಕ್ಕಲು ಮಗ ಭೂಮಿಯನ್ನು ಭೂತಾಯಿಯೆಂದು ಆರಾಧಿಸುತ್ತಲೇ ಭೂಮಿಯನ್ನು ಬಿತ್ತಿ ಬೆಳೆ ತೆಗೆಯುತ್ತಾನೆ. ಹೈದ್ರಾಬಾದ್ ಕರ್ನಾಟಕದ ಇತ್ತೀಚಿಗೆ ಉತ್ತಮ ಕತೆಗಾರರಾಗಿ ರೂಪು ಗೊಂಡಿರುವ ಕಲಿಗಣನಾಥ ಗುಡುದೂರರ 'ಮಣ್ಣು' ಕತೆಯಲ್ಲಿ ಬರುವ ಸಾಂತಪ್ಪ ಭೂತಾಯಿಯನ್ನು ನಂಬಿಕೊಂಡು ತನ್ನೆರೆಡು ಎತ್ತುಗಳೊಂದಿಗೆ ಭೂಮಿಯೊಂದಿಗೆ ಒಕ್ಕಲು ಬದುಕಿಗೆ ತೊಡಗಿಸಿಕೊಂಡವನು. ತಂದೆ ಸಾಯುವಾಗ ''ನೀನು ಹಿರಿಮಗ ಅದಿ ನೀನ್ನನ್ನ ಇನ್ಮುಂದ ಮಣ್ಣಿನ ಮಗ ಆಗು ಮಣ್ಣನ್ನನಂಬಿ ಬದುಕು ಇದ್ದಷ್ಟು ಹೊಲಾ ಉಳಿಸ್ಕಂಡು ಹೋಗು ತಮ್ಮನ್ನ ಚೆಲೋತ್ನಾಗಿ ಆತಗ ಸಾಕು ಅನ್ನ ತಕ್ಕ ಓದ್ಸು ತಂಗೀದು ಮದಿವಿ ಎಲ್ಲಾ ನಿನ್ನ ಮ್ಯಾಲ ಹೊರ್ಸಾಕ್ ಹತ್ತೀನಿಯೆಂದು,''[೧೬] ಹೇಳಿದ ಮಾತಿನಂತೆ ನೆಡೆದುಕೊಂಡವನು ತಮ್ಮ ಬಸವರಾಜನನ್ನು ಓದಿಸಿ ನೌಕರಿಹಿಡಿಸಲು ಈ ಭೂಮಿಯೇ ಆತನಿಗೆ ಆಶ್ರಯವಾಗಿರುತ್ತದೆ. ಭೂಮಿಯೊಂದಿಗೆ ಅವಿನಾಭಾವ ಸಂಬಂಧವಿಟ್ಟುಕೊಂಡ ಸಾಂತಪ್ಪ ಅಪ್ಪನ ಕನಸಿನಂತೆ ಹೊಲವನ್ನೇ ನೆಚ್ಚಿಕೊಂಡು ಬದುಕು ನೆಡೆಸಿಕೊಂಡು ಬಂದವನು. ಆದರೆ ತಮ್ಮ ಓದಿ ನೌಕರಿಯಿಡಿದು ರಾಜಕೀಯ ಜನರೊಂದಿಗೆ ಸಂಗಮಾಡುತ್ತಾನೆ. ಮಾಜಿ ಎಂ.ಎಲ್.ಎ. ಬಸನಗೌಡನೊಂದಿಗೆ ಕೂಡಿ, ಸಾಂತಪ್ಪನ ನಾಲ್ಕು ಎಕರೆ ಹೊಲ ಕೊಂಡು ಅದರಲ್ಲಿ ಗುಳಿಗಿ ಪ್ಯಾಕ್ಟರಿ ನಡೆಸಲು ಹುನ್ನಾರ ಮಾಡುತ್ತಾರೆ. ಊರಿಗೆ ಬಂದು ಆಳು ಭರಮ್ಯಾನೊಂದಿಗೆ ತಮ್ಮ ಅಣ್ಣ ಸಾಂತಪ್ಪನನ್ನು ಕರೆದುಬರಲು ಹೇಳುತ್ತಾರೆ. ಭರಮ್ಯಾನಿಂದ ಸುದ್ದಿ ತಿಳಿದ ಸಾಂತಪ್ಪ ಭೂಮಿಯೊಂದಿಗೆ ತನ್ನ ಸಂಬಂಧವನ್ನು ಹಂಚಿಕೊಳ್ಳುತ್ತಾನೆ. ಸಿಟ್ಟಿಗೆದ್ದು ''ಥೂ ಇವನೌನ ನಾಡ ಆ ಸುಡುಗಾಡು ಪ್ಯಾಕ್ಟರಿ ಯಾವನಿಗಿ

ಬೇಕಾಗೈತಿ. ಲಾಭ ಬರ್‍ರೈತಿ ಅಂತೇಳಿ ಹೊಲನೆಲ್ಲಾ ಮಾರಾಕ ಆಗತ್ತೇನು ಅವುನ್ಯಾಕ ಈ ಜಗತ್ತಿನ್ಯಾಗಿನ ಅಣ್ಣ ತಮ್ಮು ಅಂದ್ರೆನ, ಹಿಂಗ ಯಾರಿಗಿ ಯಾರಿಗಿ ಆಗ್ತಾರ? ಹಂಗೇನಾದ್ರ ಅವುನಿಗೆ ಕಳ್ಳು - ಕಕ್ಕುಲಾತಿ ಇತ್ತಂದ್ರ ಈ ಹೊಲ ಮಾರಾಕ ಬರ್‍ತಿರ್‍ಲಿಲ್ಲ'' ಹೀಗೆ ಮಾತನಾಡುತ್ತಲೇ ನೋವು ತಲ್ಲಣಗಳಿಗೆ ಒಳಗಾಗುತ್ತಾನೆ. ಮನೆಗೆ ಬಂದಾಗ ಮನೆಯವರೆಲ್ಲಾ ಸಗರಪ್ಪನತ್ತನ ಪಂಚಾಯ್ತಿ ಕಟ್ಟೆಯಲ್ಲಿ ತನ್ನನ್ನು ಕಾಯುತ್ತಿರುವುದು ತಿಳಿಯುತ್ತದೆ. ದುಃಖವಾಗಿ ಭೂಮಿ ತನ್ನ ಕೈಬಿಡುತ್ತದೆಂದು ತಿಳಿದು 'ಈ ಮಣ್ಣು ಕೈತಪ್ಪಿದ ದಿವುಸಾನ ನಂದೂ ಮಣ್ಣು ಅಂತ ತಿಳಿದಿದ್ದೆ ಅದಕ್ಕ ನನ್ನ ಮಾತು ನಡಿಬೇಕಲ್ಲ. ಅಂತ ಹೀಂಗ್ಹ ಮಾಡಿಕ್ಕೆಂಡಿನಿ ನನ್ನ ಸಾವಿಗೆ ನಾನೆ ಕಾರಣ'ವೆಂದು ಪತ್ರಬರೆದಿಟ್ಟು ವಿಷ ಕುಡಿದು ದುಃಖದಿಂದ ಮಲಗುತ್ತಾನೆ. ನಂತರ ಜನಸೇರಿ ಆಸ್ಪತ್ರೆಗೆ ಸೇರಿಸಿ ಬದುಕಿಸುತ್ತಾರೆ. ಕೊನೆಗೆ ತಮ್ಮನೇ ಅಣ್ಣನ ಮುಂದೆ ಕ್ಷಮೆಕೇಳಿ 'ನಾನು ಹೊಲಮನೆ ಸನೇಕ ಇನ್ನೊಮ್ಮೆಬರಾಂಗಿಲ್ಲ ನಂದು ತಪ್ಪಾತು' ಎನ್ನುತ್ತಾನೆ ಹೀಗೆ ಸಾಂತಪ್ಪ ಭೂಮಿ ಮಾರಲು ತಮ್ಮ ಬಂದಾಗ, ಹೊಲದ ನಂಟು ಕೈತಪ್ಪುತ್ತದೆಂದು ಸಾವಿಗೆ ಲೆಕ್ಕಿಸದೇ ವಿಷಕುಡಿಯುವುದು ಭೂಮಿಯೊಂದಿಗಿನ ಆತನ ಅನ್ಯೋನ್ಯವಾದ ಸಂಬಂಧವನ್ನು ಈ ಕತೆ ಭಾವಪೂರ್ಣವಾಗಿ ನಿವೇದಿಸುತ್ತದೆ. ''ಮಣ್ಣು'' ಕತೆ ರೈತನಾದ ಸಾಂತಪ್ಪನ ಭೂಮಿಯೊಂದಿಗಿನ ಆದರ್ಶ ಸಂಬಂಧಗಳನ್ನು ಮನಕರಗುವಂತೆ ವಿಶ್ಲೇಷಿಸುತ್ತದೆ.

**೭.೪. ಅರಣ್ಯ ಮತ್ತು ಪರಿಸರ ನಾಶದ ಪ್ರಶ್ನೆ**

ನವವಸಾಹತುಶಾಹಿ ಸಂದರ್ಭದ ಕಾಲಘಟ್ಟದಲ್ಲಿ ಸೃಷ್ಟಿಯಾದ ಅನೇಕ ಸಮಸ್ಯೆಗಳಲ್ಲಿ ಅರಣ್ಯ ಪರಿಸರ ನಾಶದ ಪ್ರಶ್ನೆಯೂ ಒಂದು. ಈ ಕಾಲ ಘಟ್ಟದಲ್ಲಿ ಹುಟ್ಟಿಕೊಂಡ ಅನೇಕ ಚಳುವಳಿಗೆ ಸ್ಪಂದಿಸಿದ ಕನ್ನಡದ ಕತೆಗಾರರು ತಮ್ಮದೇ ಆದ ನಿಲುವಿನೊಂದಿಗೆ. ಕತೆಗಳ ರಚನೆಯಲ್ಲಿ ಪರಿಸರ ಪ್ರಶ್ನೆಯನ್ನು ಕುರಿತು ಚಿತ್ರಿಸಿದರು. ಇಲ್ಲಿ ಅರಣ್ಯ ಮತ್ತು ಪರಿಸರ ನಾಶದ ಕುರಿತ ತಾತ್ವಿಕ ಬಿಕ್ಕಟ್ಟುಗಳನ್ನು ಗಮನಿಸಿ ಕತೆಗಳ ವಿಶ್ಲೇಷಣೆಗೆ ತೊಡಗುತ್ತೇನೆ. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಚರ್ಚಿತವಾದ ಅನೇಕ ವಿಷಯಗಳಲ್ಲಿ ಅರಣ್ಯ, ಪರಿಸರದ ಸಮಸ್ಯೆಯೂ ಒಂದು ಇಂದು ಮಾನವ ತನ್ನ ವಿಲಾಸಿ ಜೀವನಕ್ಕಾಗಿ, ಹಣ ಮಾಡುವ ದುರಾಲೋಚನೆಗೆ ಒಳಗಾಗಿ ಸಮೃದ್ಧವಾದ ಅರಣ್ಯ, ಪರಿಸರವನ್ನು ಲೂಟಿ ಮಾಡುತ್ತಿದ್ದಾನೆ. ಇಂದು ಪರಿಸರವೆನ್ನುವಂತಹುದು. ಜೀವ ನಿರ್ಜೀವ, ಭೌತ ಅಭೌತ ನಿರ್ಮಿತ ಸ್ವಾಭಾವಿಕವಾದ ಎಲ್ಲಾ ವಸ್ತು ಸ್ಥಿತಿಗಳನ್ನು ಒಳಗೊಂಡಿರುವಂತದ್ದು. ಇಂದು ಅರಣ್ಯ ಪರಿಸರ ಅಧ್ಯಯನ ಕೂಡ ಯಾವುದೇ ಒಂದು ಶಿಸ್ತಿಗೆ ಸಂಬಂಧಿಸಿದ್ದುಯೆಂದು ವ್ಯಾಖ್ಯಾನಿಸಲು ಸಾಧ್ಯವಾಗುವುದಿಲ್ಲ. ವಿಜ್ಞಾನ, ಸಮಾಜವಿಜ್ಞಾನ, ಸಾಹಿತ್ಯ, ಕಲೆ ಇವೆಲ್ಲವೂ ಒಂದುರೀತಿಯಲ್ಲಿ ಪರಿಸರವನ್ನು ಪ್ರತಿನಿಧಿಸುತ್ತವೆ. ಇಂದು ಅಧಿಕ ಅರಣ್ಯ ಪರಿಸರವನ್ನು ಮನುಷ್ಯ ನಾಶಮಾಡುವುದಕ್ಕೆ ತೊಡಗುತ್ತಿದ್ದಾನೆ.

ಇಂದು ಈ ನಾಶದ ಸಮಸ್ಯೆ ಜಾಗತಿಕ ನೆಲೆಯಲ್ಲಿ ಚರ್ಚೆಗೆ ಒಳಗಾಗುತ್ತಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ ಹೊಸ ಆರ್ಥಿಕನೀತಿ ಹಾಗೂ ಅದರ ಅನುಬಂಧಗಳಾದ ಖಾಸಗೀಕರಣ, ಉದಾರಿಕರೀಣ, ಜಾಗತಿಕರಣ, ಇಂದಿನ ಮಾರುಕಟ್ಟೆಯ ಆರ್ಥಿಕ ನೀತಿ ಮುಂತಾದ ಪ್ರಕ್ರಿಯೆಗಳು ಕಾರಣಗಳಾಗಿವೆ. ಅನೇಕ ಉಧ್ಯಮಗಳು ಬೃಹತ್ ಪ್ರಮಾಣದಲ್ಲಿ ಕಾರ್ಯಾರಂಭ ಮಾಡಿ ಪರಿಸರದ ಚರ್ಚೆಯನ್ನು ಜಾಗತಿಕ ಸಮಸ್ಯೆಯನ್ನಾಗಿಸಿ. ಪರಿಸರ ಬಿಕ್ಕಟ್ಟು ತಲೆದೂರುವಂತೆ ಮಾಡಿವೆ. ಅರಣ್ಯ ಪರಿಸರಕ್ಕೆ ಸಂಬಂಧಪಟ್ಟ ಸಣ್ಣ ಪ್ರಮಾಣದ ಚಟುವಟಿಕೆಗಳು ಇಂದು ಬೃಹತ್ ಪ್ರಮಾಣದಲ್ಲಿ ಬೆಳೆದು ಸಮಸ್ಯೆಗಳ ಸ್ವರೂಪವನ್ನೆ ಬದಲಾಗಿಸಿವೆ. ಇಂದು ಬೃಹದಾಕಾರದಲ್ಲಿದ್ದ ನಿತ್ಯಹರಿದ್ವರ್ಣ

ಕಾಡುಗಳು ಇಂಚಿಂಚಾಗಿ ನಾಶಗೊಳ್ಳುತ್ತಿವೆ. ಅರಣ್ಯ ಇಲಾಖೆಯೆನ್ನುವುದು ಅರಣ್ಯ ನಾಶಕ್ಕೆ ಇಂಬುಕೊಟ್ಟು ವಿನಾಶದ ಪರಿಣಾಮವಾಗಿ ಕಾರ್ಯಕ್ರಮ ರೂಪಿಸಿ ಕೈತೊಳೆದು ಕೊಳ್ಳುತ್ತಿರುವುದು ಕಂಡುಬರುತ್ತದೆ. ದಟ್ಟಕಾಡಿನಲ್ಲಿ ಬೆಲೆ ಬಾಳುವ ತೇಗ, ಹೊನ್ನೆ, ಶ್ರೀಗಂಧ ಮುಂತಾದ ಮರಗಳು ಕಾಡುಗಳ್ಳರ ಕೈಗೆ ತುತ್ತಾಗಿ ದಟ್ಟ ಅರಣ್ಯಗಳು ಬಯಲಾಗುತ್ತಿವೆ. ಅರಣ್ಯಗಳನ್ನು ಕೆಲವೆಡೆ ಸರ್ಕಾರಗಳೇ ನಾಶಮಾಡಿ ಬೃಹತ್ ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸಿ ಹೊಸ ಹೋರಾಟಗಳ ಹುಟ್ಟಿಗೆ ಕಾರಣವಾಗುತ್ತಿವೆ. 'ಮನೆಗೊಂದು ಮರ ಊರಿಗೊಂದು ವನ' ವೆಂಬ ಅರಣ್ಯ ನೀತಿ . ಕಣ್ಮರೆಯಾಗುತ್ತಿದೆ. ಇದರಿಂದಾಗಿ ಅನೇಕ ಪರಿಸರ ವಾದಿಗಳು ಅನೇಕ ಭಾಗಗಳಲ್ಲಿ ಪರಿಸರ ನಾಶವನ್ನು ತಡೆಗಟ್ಟಲು ಹೋರಾಟಗಳನ್ನು ರೂಪಿಸುತ್ತಿರುವುದು ಕಂಡು ಬರುತ್ತಿದೆ.

ಈ ಪರಿಸರದ ಮೇಲೆ ಮಾನವ ಅಧಿಕ ಪ್ರಮಾಣದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಲು ಹೊರಟಿದ್ದ ವಸಾಹತು ನಂತರದ ದಿನಗಳಲ್ಲಿ ಹಾಗೂ ವಸಾಹತು ಆಳ್ವಿಕೆ ಪ್ರಾರಂಭಗೊಂಡ ನಂತರದ ದಿನಗಳಲ್ಲಿ ಹಾಗೂ ವಸಾಹತು ಆಳ್ವಿಕೆ ಪ್ರಾರಂಭಗೊಂಡ ನಂತರ, ಪಶ್ಚಿಮ ಘಟ್ಟಗಳು ರಬ್ಬರ, ತಂಬಾಕು, ಟೀ, ಕಾಫಿ ತೋಟಗಳಾಗಿ ಪರಿವರ್ತನೆ ಹೊಂದಲು ಪ್ರಾರಂಭವಾಯಿತು. ವಾಣಿಜ್ಯ ಬೆಳೆ ಬೆಳೆಯುವ ಪ್ರವೃತ್ತಿ ಇಲ್ಲಿಂದ ಪ್ರಾರಂಭಗೊಂಡಿತು. ವಸಾಹತು ಆಳ್ವಿಕೆ ರೂಪಿಸಿದ ಔದ್ಯಮಿಕ ಆರ್ಥಿಕ ನೀತಿ ವಸಾಹತೋತ್ತರ ಘಟ್ಟದಲ್ಲಿಯೂ ಬೆಳೆಯುತ್ತಾ ಹೋಯಿತು. ಗುಡಿ ಕೈಗಾರಿಕೆ ಹೋಗಿ ಬೃಹತ್ ಯಂತ್ರಗಾರಿಕೆ ಪ್ರಚಾರಕ್ಕೆ ಬಂತು ಈ ಸಂದರ್ಭದಲ್ಲಿ ಪರಿಸರ ಕುರಿತ ಚರ್ಚೆಯ ವಸ್ತುವಾಗಿ, ಸಮಸ್ಯೆಯಾಗಿ ಪರಿವರ್ತನೆಗೊಂಡಿತು. ಗಿಡ ಮರಗಳಿಂದ ತುಂಬಿ ರಾರಾಜಿಸುತ್ತಿದ್ದಂತಹ ಅರಣ್ಯ ಪರಿಸರವು ಹೊಸ ಹೊಸ ಯೋಜನೆಗಳಿಂದಾಗಿ ವಿನಾಶದ ದಿಕ್ಕು ಹಿಡಿದಿವೆ. ನವವಸಾಹತುಶಾಹಿ ಕಾಲ ಘಟ್ಟದಲ್ಲಿ ಬೃಹತ್ ಉದ್ದಿಮೆಗಳು ಹೊಸ ಆರ್ಥಿಕ ನೀತಿಯೊಂದಿಗೆ ಅಸ್ತಿತ್ವಕ್ಕೆ ಬಂದವು. ಗ್ಯಾಟ್ ಒಪ್ಪಂದ ಡಂಕಲ್ ಪ್ರಸ್ತಾವನೆಯ ಒಪ್ಪಂದಗಳು ಏರ್ಪಟ್ಟು ಬಂಡವಾಳಶಾಹಿ ರಾಷ್ಟ್ರಗಳು ನಿರ್ಧಾರಕ ಶಕ್ತಿಗಳಾದವು. ಬಂಡವಾಳ ಕ್ಷೇತ್ರ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಂಡಿತು ಇದರಿಂದಾಗಿ ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಜಾಗತೀಕರಣದೊಂದಿಗೆ ಬಂದ ಹೊಸ ಆರ್ಥಿಕ ನೀತಿಯೂ ಪರಿಸರವನ್ನು ಜಾಗತಿಕ ನೆಲೆಯಲ್ಲಿ ಚರ್ಚಿಸುವಂತೆ ಮಾಡಿತು.

ಇತ್ತೀಚಿನ ದಶಕಗಳಲ್ಲಿ ಪರಿಸರ ಪ್ರಜ್ಞೆ, ಪರಿಸರ ಪ್ರಶ್ನೆಯಾಗಿ ಬಲಗೊಳ್ಳಲು ಮೇಲಿನ ಅನೇಕ ಕಾರಣಗಳು ಪ್ರಮುಖವಾಗಿವೆ. ಇಲ್ಲಿಯ ಬಹುದೊಡ್ಡ ಸಂಖ್ಯೆಯ ಜನರ ಬದುಕನ್ನು ಪರಿಗಣನೆಗೆ ತೆಗೆದುಕೊಳ್ಳದೆ ಆಧುನೀಕರಣವನ್ನು ಮುಂದುವರಿಸಿರುವುದು. ಗಣಿಗಾರಿಕೆ, ಆಣೆಕಟ್ಟು ನಿರ್ಮಾಣ, ಉದ್ದಿಮೆಗಳ ಸ್ಥಾಪನೆ ಮುಂತಾದ ಉದ್ದೇಶಗಳಿಗೆ ಭೂಮಿಯನ್ನು ಬಳಸುವ ಸಂದರ್ಭದಲ್ಲಿಯೂ ಆಧುನೀಕರಣವು ಮುಗ್ಗರಿಸಿದೆ. ದಕ್ಷಿಣ ಕನ್ನಡ, ಉತ್ತರ ಕನ್ನಡ, ಕೊಡಗು, ಚಿಕ್ಕಮಗಳೂರು, ಶಿವಮೊಗ್ಗ ಮುಂತಾದ ಜಿಲ್ಲೆಗಳಲ್ಲಿ ಮಧ್ಯಮ ವರ್ಗವು ಅನೇಕ ಪರಿಸರ ಸಂಬಂಧಿತ ಚಳುವಳಿಗಳನ್ನು ಹುಟ್ಟುಹಾಕಿದೆ. ಉದಾ: ಕೈಗಾ, ಕೊಜೆಂಟ್ರಿಕ್ಸ್, ಎಂ.ಆರ್.ಪಿ.ಎಲ್. ಪಾಲಿಪೈಬರ್ ಮುಂತಾದ ಯೋಜನೆಗಳ ವಿರುದ್ಧ ನಡೆಸುತ್ತಿರುವ ಚಳುವಳಿಗಳಲ್ಲಿ ಶ್ರೀಮಂತ ವರ್ಗವೂ ಭಾಗವಹಿಸುವಿಕೆಯಿಲ್ಲವೆಂದಲ್ಲ ಆ ವರ್ಗವೂ ನೇರವಾಗಿ ಇದರಲ್ಲಿ ಭಾಗವಹಿಸಿ ಅರಣ್ಯ ಪರಿಸರದ ನಾಶವನ್ನು ತಡೆಗಟ್ಟಲು ಅನೇಕ ಪರಿಹಾರಗಳನ್ನು ಸೂಚಿಸಿತು. ಇಪ್ಪತ್ತನೆಯ ಶತಮಾನದ ದ್ವಿತಿಯಾರ್ಧದಲ್ಲಿ ಕೈಗಾರಿಕೀಕರಣ ಮತ್ತು ನಾಗರೀಕರಣಗಳೇ ಪರಿಸರ ಬಿಕ್ಕಟ್ಟಿಗೆ ಮೂಲ ಕಾರಣಗಳು ಎಂಬಂತೆ ಕಂಡು ಬರುತ್ತಿವೆ. ಗಣಿಗಾರಿಕೆ,

ಜಲವಿದ್ಯುತ್ ಯೋಜನೆ, ಅಣುವಿದ್ಯುತ್ ಯೋಜನೆ ಹಾಗೂ ಇನ್ನಿತರ ಯೋಜನೆಗಳ ಹೆಸರಿನಲ್ಲಿ ದಟ್ಟ ಅರಣ್ಯಗಳು ಜಲಾಶಯಗಳಾಗಿಯೋ ಇಲ್ಲವೆ ಕಾಂಕ್ರಿಟ್ ಕಾಡುಗಳಾಗಿಯೋ ಅಣು ರಿಯಾಕ್ಟರ್‌ಗಳಾಗಿಯೋ ರೂಪ ತಳೆದಿವೆ. ಇವು ಕರ್ನಾಟಕದ ಬಹುತೇಕ ಎಲ್ಲಾ ಜಿಲ್ಲೆಗಳಿಗೂ ಹರಡಿಕೊಂಡಿವೆ.

ಅರಣ್ಯ ಇಲಾಖೆಯೂ ಕೂಡ ನಿಷ್ಕ್ರಿಯೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ''ಒಂದು ಕಡೆ ಕಾಡು, ನೆಲ, ನದಿ, ಸಸ್ಯ ಹಾಗೂ ಪ್ರಾಣಿ ಸಂಪತ್ತುಗಳು ಸೇರಿದ ಪರಿಸರವನ್ನು ಕೇವಲ ವಸ್ತುವಾಗಿ ಉತ್ಪನ್ನವಾಗಿ ಅಥವಾ ಮಾರಾಟದ ಸರಕಾಗಿ ನೋಡುವ ದೃಷ್ಟಿಕೋನ ಅರಣ್ಯಾಧಿಕಾರಿಗಳ ಮನದಲ್ಲಿದೆ.''[೧೫] ಎಂಬ ರಾಜೇಂದ್ರ ಚೆನ್ನಿಯವರ ನಿಲುವು ಸತ್ಯಾಂಶವಾಗಿದೆ. ಇಂದು ಪ್ರಗತಿಯೆಂದರೆ ಸಂಪತ್ತಿನ ಸೃಷ್ಟಿ, ಆಧುನಿಕ ಜಗತ್ತಿನ ಚಪಲಗಳನ್ನು ಪೂರೈಸುವ ಕೆಲಸ ಮಾತ್ರವೆಂದು ಭಾವಿಸಿ ಅದಕ್ಕಾಗಿ ವಿಜ್ಞಾನ ತಂತ್ರಜ್ಞಾನದ ಪೌರುಷದ ಬೆಂಬಲವನ್ನು ಪಡೆಯುವ ಪುರುಷ ಪ್ರಧಾನ ಪ್ರವೃತ್ತಿ ಬೆಳೆಯುತ್ತಿದೆ. ಈ ಪ್ರವೃತ್ತಿಯು ಮೂಲದಲ್ಲಿಯೇ ಆಕ್ರಮಣಕಾರಿಯೂ, ಹಿಂಸಾತ್ಮಕವೂ ಆಗಿರುವಂತದ್ದು ಮಾತ್ರವಲ್ಲ ಪರಿಸರದ ಬಳಕೆಯನ್ನು ಯಾವ ಎಗ್ಗಿಲ್ಲದೆ ಒಪ್ಪಿಕೊಳ್ಳುವಂಥದ್ದು. ಪ್ರಕೃತಿಯನ್ನು ಕೇವಲ ಪ್ರಾಪಂಚಿಕ ನೋಡುವ ಈ ಜೀವನ ದೃಷ್ಟಿಯ ಪ್ರಕಾರ ಪ್ರಕೃತಿಗೆ ಅದರದೇ ಆದ ಜೀವವೆನ್ನುವುದಿಲ್ಲ ಲಯವೆನ್ನುವುದಿಲ್ಲ ಧರಣೆಗೆ ತಾಳಿಕೆಯ ಗುಣವಿಲ್ಲ ನದಿಗಳಿಗೆ ವ್ಯಕ್ತಿತ್ವವಿಲ್ಲ. ಮುಖ್ಯವಾಗಿ ಪ್ರಕೃತಿಯಲ್ಲಿ ಮನುಷ್ಯ ಅನ್ನ, ಸುಖಕ್ಕಾಗಿ, ಚಪಲಕ್ಕಾಗಿ ಎಲ್ಲಕ್ಕಿಂತ ಹೆಚ್ಚಾಗಿ ಅಭಿವೃದ್ಧಿಗಾಗಿ ವಿವೇಕ ನಿಗ್ರಹಗಳಿಲ್ಲದೇ ಪರಿಸರದ ನಾಶದ ಕಡೆಗೆ ತೊಡಗಿರುವುದು ಕಂಡು ಬರುತ್ತಿದೆ.

ಕರ್ನಾಟಕವನ್ನು ಪ್ರಮುಖವಾಗಿಟ್ಟುಕೊಂಡು ಪರಿಸರ, ಅರಣ್ಯನಾಶದ ವಿವರಣೆಯನ್ನು ಮಾಡುವಾಗ ಗಣಿಗಾರಿಕೆಗೆ ಸಂಬಂಧಿಸಿದ ಸಮಸ್ಯೆಗಳು ಪ್ರಮುಖ ಸ್ಥಾನವನ್ನು ಪಡೆಯುತ್ತವೆ. ನಾಡಿನ ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ , ತುಮಕೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಗಣಿಗಾರಿಕೆ ನಡೆಯುತ್ತಿರುವುದು ಕಂಡು ಬರುತ್ತದೆ. ಇಲ್ಲಿರುವ ಅರಣ್ಯವೂ ಗಣಿಗಾರಿಕೆಯಿಂದ ನಾಶವಾಗುತ್ತಿದೆ. ಗ್ರಾಮೀಣ ಬದುಕಿನ ಜನ ನಿತ್ಯ ವ್ಯವಸಾಯ ಚಟುವಟಿಕೆಗಳಿಂದ ದೂರ ಸರಿದು ಹಣದ ಹೊಳೆ ಹರಿಸುವ ಗಣಿಗಾರಿಕೆ ಕೆಲಸಕ್ಕೆ ನಿರತರಾಗುತ್ತಿದ್ದಾರೆ. ನೂರಾರು ಚಿಕ್ಕ ಪುಟ್ಟ ಖನಿಜ ಸಂಸ್ಕರಣ ಘಟಕಗಳೂ ಎಲ್ಲೆಂದರಲ್ಲಿ ಹುಟ್ಟಿಕೊಂಡು ಜನರ ಆರೋಗ್ಯ ಮತ್ತು ಪರಿಸರವನ್ನು ವಿನಾಶದ ಕಡೆ ತಂದು ನಿಲ್ಲಿಸಿವೆ.

ಕರ್ನಾಟಕದಲ್ಲಿ ಈ ಗಣಿಗಾರಿಕೆ ಎರಡು ರೀತಿಯಲ್ಲಿ ನಡೆಯುತ್ತಿವೆ. ಅವುಗಳೆಂದರೆ ಸರಕಾರಿ ಸ್ವಾಮ್ಯದ ಸಂಸ್ಥೆಗಳು ನಡೆಸುವ ಗಣಿಗಾರಿಕೆ ಮತ್ತು ಖಾಸಗಿ ಸಂಸ್ಥೆಗಳು ನಡೆಸುತ್ತಿರುವ ಗಣಿಗಾರಿಕೆ, ರಾಜ್ಯದ ಅಭಿವೃದ್ಧಿಯ ದೃಷ್ಟಿಯಿಂದ ಗಣಿಗಾರಿಕೆ ಅನಿವಾರ್ಯವಾದರೂ, ಇಂದು ಈ ಗಣಿಗಾರಿಕೆ ಅಕ್ರಮ ಗಣಿಗಾರಿಕೆಯಾಗಿದ್ದು ಇದರಿಂದ ಅಭಿವೃದ್ಧಿ ಕುಂಟಿತವಾಗುತ್ತಿದೆ.

ಈ ಗಣಿಗಾರಿಕೆ ನಡೆಯುತ್ತಿರುವ ಪ್ರತಿಯೊಂದು ಜಿಲ್ಲೆಯಲ್ಲಿ ಪ್ರತಿಭಟನೆಗಳು ತೀವ್ರ ಸ್ವರೂಪ ಪಡೆದುಕೊಳ್ಳುತ್ತಿವೆ. ಮಲೆನಾಡಿನಲ್ಲಿ ಹುಟ್ಟಿಕೊಂಡ 'ಸಹ್ಯಾದ್ರಿ ಗಣಿ ವಿರೋಧಿ ವೇದಿಕೆ', ಮುಖ್ಯವಾಗಿ ಸಾಗರದಲ್ಲಿದ್ದ ಮಲೆನಾಡಿನ ದಟ್ಟ ಹಸಿರಿನ ನಡುವೆ ನಡೆಯುತ್ತಿದ್ದ ಗಣಿಗಾರಿಕೆಯನ್ನು ನಿಲ್ಲಿಸುವುದೇ ಇದರ ಉದ್ದೇಶವಾಗಿದೆ. ಈ ಪ್ರದೇಶದ ಶಿವಮೊಗ್ಗ, ಭದ್ರಾವತಿ, ಸಾಗರ, ಶೃಂಗೇರಿ, ಹೊಸ ನಗರ, ಶಿರಸಿ, ಸಿದ್ದಾಪುರ, ಹೊನ್ನಾಳಿ, ಸೊರಬ, ಹೊನ್ನಾವರ ಮತ್ತು ಚೆನ್ನಗಿರಿ ತಾಲೂಕಿನುದ್ದಕ್ಕೂ ಗಣಿಗಾರಿಕೆ ನಡೆಸಲು ಸುಮಾರು ೩೫ ದೇಶಿ ಹಾಗೂ ವಿದೇಶಿ

ಕಂಪನಿಗಳು ಅರ್ಜಿಸಲ್ಲಿದ್ದವು. ಈ ಸ್ಥಿತಿಯಿಂದ ಜನರಲ್ಲಿ ಪರಿಸರವಾದಿಗಳಲ್ಲಿ ಆಂತಕ ಸುರುವಾಗಿ ಅರಣ್ಯ ಪರಿಸರವನ್ನು ಸಂರಕ್ಷಿಸಲು ಚಳುವಳಿಯನ್ನು ರೂಪಿಸಲು ಸಹ್ಯಾದ್ರಿ ಗಣಿ ವಿರೋಧಿ ವೇದಿಕೆ ಹೊಸ ಹೋರಾಟಗಳನ್ನು ರೂಪಿಸಿತು. ಸರಕಾರವೂ ಸ್ಪಷ್ಟ ಮಾಹಿತಿ ನೀಡದೇ ಹೋದದ್ದರಿಂದ ಸಹ್ಯಾದ್ರಿಯ ಹಸಿರಾದ ಅರಣ್ಯದಲ್ಲಿ ಪ್ಲಾಟಿನಂ, ಚಿನ್ನ, ಬೆಳ್ಳಿ, ನಿಕ್ಕಲ್ ಹಾಗೂ ವಜ್ರದ ನಿಕ್ಷೇಪಗಳು ಇವೆ ಎಂಬ ಕಾರಣಕ್ಕೆ ಗಣಿಗಾರಿಕೆಗೆ ತೊಡಗಲು ಆಸಕ್ತಿ ತೋರಿದವು. ಆದರೆ ಇಲ್ಲಿ ಈ ನಿಕ್ಷೇಪಗಳು ಇವೆಯೇ ಅಥವಾ ಇಲ್ಲವೇ ಎನ್ನವುದು ಇನ್ನೂ ತೀರ್ಮಾನವಾಗಿಲ್ಲ. ಆದರೆ ಈ ಎಲ್ಲಾ ಕಂಪನಿಗಳು ಪರಿಶೋಧನಾ ಗಣಿಕೆಗೆ ಮುಂದಾಗಿವೆ. ಸಹ್ಯಾದ್ರಿಯ ತಪ್ಪಲಿನಲ್ಲಿರುವ ಫಲವತ್ತಾದ ಭತ್ತದ ಗದ್ದೆ ಅಡಿಕೆ ತೋಟ ತೆಂಗಿನ ತೋಟಗಳನ್ನು ರಕ್ಷಿಸುವುದು ವೇದಿಕೆಯ ಉದ್ದೇಶವಾಗಿತ್ತು. ಈ ಗಣಿಗಾರಿಕೆಯಿಂದ ಭೂಯ ಅಗೆತ ಯಥೇಚ್ಛವಾಗಿ ನಡೆದು ಪರಿಸರವೂ ಹಾನಿಗೊಳ್ಳುತ್ತಿರುವುದು ಎಲ್ಲೆಡೆ ಕಂಡು ಬರುತ್ತದೆ.

ಕರ್ನಾಟಕದ ಸಂದರ್ಭದಲ್ಲಿ ವಿವರಿಸುವುದಾದರೆ, ಗಣಿಗಾರಿಕೆಯ ಯೋಜನಾ ಪ್ರದೇಶದಲ್ಲಿ ನಿಸರ್ಗದ ಇತರೆ ಆಸ್ತಿಗಳನ್ನು ರಕ್ಷಿಸುವ ಪ್ರಯತ್ನ ಯಶಸ್ವಿಯಾಗದಿರುವುದೇ ಈ ಆತಂಕಕ್ಕೆ ಕಾರಣವಾಗಿವೆ. ಏಕೆಂದರೆ ಕುದುರೆ ಮುಖ. ಬಸಗೋಡು, ದಾಂಡೇಲಿ ಮತ್ತು ಸಂಡೂರು ಗಣಿಗಳ ಚಿತ್ರಗಳು ಪರಿಸರ ಸಮಸ್ಯೆಗಳಾಗಿ ಹಸಿರಾಗಿಯೇ ಉಳಿದಿವೆ.

ಬಳ್ಳಾರಿಯ ಹೊಸಪೇಟೆ, ಸಂಡೂರು ಸುತ್ತಮುತ್ತಲ ಪ್ರದೇಶದಲ್ಲಿ ಅಕ್ರಮ ಗಣಿಗಾರಿಕೆ ಯಥೇಚ್ಛವಾಗಿ ನಡೆಯುತ್ತಿದೆ. ಅನೇಕ ಗಣಿ ಮಾಲಿಕರು ಈ ಭಾಗದ ಭೂಮಿಯನ್ನು ಅಗೆದು ಖನಿಜಕ್ಕಾಗಿ ಭೂತಾಯಿ ಹೃದಯ ಸಿಡಿಯುವಂತೆ ಸಿಡಿ ಮದ್ದುಗಳನ್ನು ಸಿಡಿಸಿ ಕುರುಡು ಕಾಂಚಾಣದ ಚೆನ್ನಹತ್ತಿ ಪರಿಸರವನ್ನು ಹದಗೆಡಿಸುತ್ತಿದ್ದಾರೆ. ರೈತರು ಗಣಿಗಾರಿಕೆಗಾಗಿ ತಮ್ಮ ಭೂಮಿಯನ್ನು ಗಣಿ ಮಾಲಿಕರಿಗೆ ಒತ್ತೆಯಿಡುತ್ತಿದ್ದಾರೆ. ಇತ್ತೀಚೆಗೆ ರಾಜ್ಯ ರಾಜಕಾರಣದಲ್ಲಿ ಹೊಸ ಸುದ್ದಿಯಾದ ಈ ಭಾಗದ ಗಣಿ ಮಾಲಿಕರು ಗಣಿಗಾರಿಕೆಗಾಗಿ, ಮಾಜಿ ಪ್ರಧಾನಿಗಳ ಕುಟುಂಬ ವರ್ಗಕ್ಕೆ, ಸಹಾಯಕರಿಗೆ ನೂರಾರು ಕೋಟಿ ಗಣಿಕಪ್ಪ ಕೊಟ್ಟಿರುವುದಾಗಿ ಬಹಿರಂಗ ಹೇಳಿಕೆ ನೀಡಿ ರಾಜಕಾರಣಕ್ಕೆ ಹೊಸ ತಲ್ಲಣವನ್ನು ಉಂಟುಮಾಡಿದ್ದರು. ಈ ಸಂದರ್ಭದಲ್ಲಿ ಗಣಿಗಾರಿಕೆ ಕುರಿತು ತನಿಖೆ ಆರಂಭವಾಗಿ ನೇಮಕವಾದ ಸಮಿತಿ ಕೇಂದ್ರ ಸರ್ಕಾರಕ್ಕೆ ವರದಿ ನೀಡಿರುವುದು ನಡೆದು ಹೋಗಿದೆ. ಕೆಲ ದಿನ ಮಾತ್ರ ನಿಂತ ಗಣಿಗಾರಿಕೆ ಈಗ ಮತ್ತೆ ಚುರುಕುಗೊಂಡಿದೆ. ಇದಕ್ಕೆ ಸರಕಾರ ಮತ್ತು ಅರಣ್ಯ ಇಲಾಖೆ, ಪೊಲೀಸ್ ಇಲಾಖೆಯೂ ಹಣದ ದುರಾಸೆಗಾಗಿ ಕುಮ್ಮಕ್ಕು ನೀಡುತ್ತಿರುವುದು ಕಂಡು ಬರುತ್ತಿದೆ. ನಿರುದ್ಯೋಗಿಗಳಾದ ಅನೇಕ ಯುವಕರು ಗಣಿ ಮಾಲಿಕರ ಅಡಿಯಾಳುಗಳಾಗಿ ನೂರಾರು ದುಷ್ಚಟಗಳಿಗೆ ಬಲಿಯಾಗಿ ಭೂಮಿಯ ಸಂಪತ್ತನ್ನು ಲೂಟಿ ಮಾಡುತ್ತಿದ್ದಾರೆ. ಚಿನ್ನವಲ್ಲ ಅದಕ್ಕಿಂತ ಹೆಚ್ಚಿನ ಯಾವುದೇ ಅಮೂಲ್ಯವಾದ ಅದಿರು ಸಿಗುತ್ತದೆಯೆಂದರೂ, ಗಣಿಗಾರಿಕೆಗೆ ಮಾತ್ರವಲ್ಲ ಪರಿಶೋಧನಾ ಗಣಿಗಾರಿಕೆಗೂ ಅವಕಾಶ ನೀಡಬಾರದು ಎಂದು ಅನೇಕ ಪರಿಸರವಾದಿಗಳೂ ಒಗ್ಗಟ್ಟಾಗಿ ಚಳುವಳಿ ನಡೆಸಬೇಕಿದೆ. ಈ ಭಾಗ ಗಣಿಗಾರಿಕೆಯಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಆದರೆ ಚಳುವಳಿಗಳ ದೃಷ್ಟಿಯಲ್ಲಿ ಕೆಳಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿ ದುಡಿಯುವ ವರ್ಗ, ದುಡಿಸುವ ವರ್ಗಗಳೇ ಹೆಚ್ಚಾಗಿದ್ದು ಪ್ರಶ್ನಿಸುವ ಮಧ್ಯಮ ವರ್ಗವು ಬಾಯಿ ಮುಚ್ಚಿಕೊಂಡು ಗೈರು ಹಾಜರಿಯಲ್ಲಿರುವುದು ಕಾಣುತ್ತಿದೆ. ಹೊಸ ಆರ್ಥಿಕ ನೀತಿ ಜಾರಿಗೆ ಬಂದ ನಂತರ ಬೃಹತ್ ಖಾಸಗೀ ಕಂಪನಿಗಳು ಈ ಬಳ್ಳಾರಿ ಜಿಲ್ಲೆಗೆ ಪ್ರವೇಶಿಸಿ ಕೈಗಾರೀಕರಣ ಪ್ರಕ್ರಿಯೆ

ಚುರುಕುಗೊಳ್ಳುವಂತೆ ಮಾಡಿದವು. ಉಳಿಗಮಾನ್ಯ ವ್ಯವಸ್ಥೆ ಜಾರಿಯಲ್ಲಿರುವ ಈ ಜಿಲ್ಲೆಯಲ್ಲಿ ಕೈಗಾರೀಕರಣದ ಪ್ರವೇಶದಿಂದ ಅತಂತ್ರವಾದ ಸ್ಥಿತಿಯನ್ನು ಎದುರಿಸುತ್ತಿವೆ. ಗಣಿಗಾರಿಕೆಯಿಂದ ಅರಣ್ಯ ಪರಿಸರ ನಾಶವಾಗಿದೆ. ಸ್ಥಳೀಯ ಶ್ರೀಮಂತ ವರ್ಗ ಬಂಡವಾಳ ಶಾಹಿ ವರ್ಗ ಈ ಜಿಲ್ಲೆಯ ನಿರ್ಧಾರಕ ಶಕ್ತಿಗಳಾಗಿರುವುದರಿಂದ ಈ ಭಾಗದಲ್ಲಿ ಚಳುವಳಿಗಳು ಹುಟ್ಟಲು ಸಾಧ್ಯವಾಗಿಲ್ಲ. ಇಲ್ಲಿಯ ಗ್ರಾಮೀಣ ಭಾಗದಲ್ಲಿ ನಡೆಯುವ ಗಣಿಗಾರಿಕೆಯಿಂದ ರೈತರ ಕೂಲಿ ಕಾರ್ಮಿಕರ ಬದುಕಿನಲ್ಲಿ ಅನೇಕ ಏರುಪೇರುಗಳಾಗಿವೆ. ಇದಕ್ಕೆ ಪ್ರಜಾತಂತ್ರ ವ್ಯವಸ್ಥೆಯೂ ಕಾರಣವಾಗಿದೆ. ಇಡೀ ಜಿಲ್ಲೆಯ ಆರ್ಥಿಕ, ಸಾಮಾಜಿಕ ಬದುಕು ಅನೇಕ ಸ್ಥಿತ್ಯಂತರಗಳಿಗೆ ಒಳಗಾಗಿದೆ. ಇದಕ್ಕೆಲ್ಲಾ ಯಾರು ಹೊಣೆ?

ಕನ್ನಡದ ಬಹು ಮುಖ್ಯ ಬರಹಗಾರರೂ, ಪರಿಸರ ಚಳುವಳಿಗಳನ್ನು ರೂಪಿಸಿ ಹೋರಾಟಕ್ಕಿಳಿದ ಡಾ. ಶಿವರಾಮ ಕಾರಂತರು ಗಣಿಗಾರಿಕೆಯಿಂದ ಉಂಟಾಗುವ ಪರಿಸರ ನಾಶವನ್ನು ಗಮನದಲ್ಲಿಟ್ಟುಕೊಂಡು ನೀಡಿದ ಪ್ರತಿಕ್ರಿಯೆ ಹೀಗಿದೆ. ''ಪ್ರಸ್ತುತ ರಾಜಕೀಯದ ಹುನ್ನಾರಗಳನ್ನು ಅರಿತು ನಮ್ಮ ದೇಶದಲ್ಲಿ ವಿವಿಧ ಉದ್ದೇಶಗಳಿಗಾಗಿ ಗಣಿಗಾರಿಕೆ ನಡೆಸಲಾಗುತ್ತಿದೆ. ಅಂಥ ಉದ್ದೇಶಗಳಲ್ಲಿ ಕೆಲವು ಸ್ಪಷ್ಟ ಮಾರ್ಗಗಳಿದ್ದರೂ ಇನ್ನೂ ಕೆಲವು ಅಸ್ಪಷ್ಟವಾಗಿವೆ. ನಮ್ಮ ಪಾಲಿಗೆ ಗಣಿಗಳು ವಿದೇಶಿ ವಿನಿಮಯವನ್ನು ಧಾರಾಳವಾಗಿ ಒದಗಿಸುವ ಮುಖ್ಯ ಸಾಧನಗಳಾಗಿವೆ. ಈ ಗಣಿಗಳಲ್ಲಿ ದೊರಕುವ ಅದಿರಿನ ಬಗ್ಗೆ ಒಂದು ನೆಪವಿದೆ. ಅದು ಹಿಂದುಳಿದ ಪ್ರದೇಶಗಳಲ್ಲಿ ಗಣಿಗಾರಿಕೆಯಿಂದ ಉದ್ಯೋಗ ದೊರಕಿಸುತ್ತದೆಯೆಂಬ ದೃಷ್ಟಿಯಿದೆ. ಇವುಗಳ ಜೊತೆ ಬಾಯಿಬಿಟ್ಟು ಹೇಳದಿರುವ ಉದ್ದೇಶಗಳೆಂದರೆ ಇಂಥ ಗಣಿಗಾರಿಕೆಯಿಂದ ಲಾಭ ಬಡುಕತನ, ಲಂಚ, ಮೊದಲಾದ ಅಡ್ಡದಾರಿಗಳಿಂದ ಖಾಸಗೀ ಸಂಪತ್ತನ್ನು ಕೂಡಿಸಿ ಕುಭೇರರಾಗ ಬಹುದಾದ ಆಕರ್ಷಣೆ ಚುನಾವಣೆಯ ಸಂದರ್ಭದಲ್ಲಿ ಕುಣಿದಾಡುವ ಕಪ್ಪು ಹಣ ಇಂಥವರಿಂದ ಬರುತ್ತದೆ. ಇಂಥ ಅಡ್ಡದಾರಿಗಳು ಕಾನೂನಿಗೆ ವಿರುದ್ಧವಾದ ದಾರಿಯಿಂದ ಸಾಧ್ಯವಾಗಿದೆ. ಇದರಿಂದ ಅಂದರೆ ಗಣಿಗಾರಿಕೆಯಿಂದ ಅರಣ್ಯ ಪರಿಸರಕ್ಕೂ, ಕೃಷಿಗೂ ಹಾನಿ ಸಂಭವಿಸಿದೆ. ನಾಡಿನ ಅರಣ್ಯಗಳಿಂದ ನಾಟಾಗಳನ್ನು ಕದ್ದು ಮಾರುವ ರೀತಿಯಂತೆ ಗಣಿಗಾರಿಕೆಯೂ ಅನೈತಿಕ ಹಣ ಸಂಪಾದನೆಗೂ ಅವಕಾಶ ಒದಗಿಸುತ್ತದೆ. ಇಂಥ ಎಲ್ಲಾ ವಿಧಾನಗಳಲ್ಲೂ ಜೀವಾಪಾಯ ತಡೆಗಟ್ಟುವ ಕಾಯಿದೆಗಳಿಗೂ ಶಾಸನಗಳೂ ಮೂಲೆ ಗುಂಪಾಗುತ್ತಿವೆ.''[೯] ಎಂಬ ಕಾರಂತರ ಮಾತು ಪ್ರಸ್ತುತ ಸಂದರ್ಭದಲ್ಲಿ ಹೊಸ ಆಲೋಚನೆಗೆ ತೊಡಗಿಸುತ್ತದೆ.

ಗಣಿಗಾರಿಕೆಯಿಂದ ಶ್ರಮಜೀವಿಗಳ ಬದುಕು ಅಪಾಯಕ್ಕೆ ಗುರಿಯಾಗಿದೆ. ಆಕಸ್ಮಿಕವಾಗಿ ಜರಗುವ ತೊಂದರೆ, ಅಪಘಾತಗಳಿಂದ ಕಾರ್ಮಿಕರು ಜೀವಕಳೆದುಕೊಳ್ಳುತ್ತಿದ್ದಾರೆ. ಮತ್ತು ವಿಚಿತ್ರವಾದ ಬೇನೆಗಳಿಂದ ನರಳುತ್ತಿದ್ದಾರೆ. ಇವರೆಲ್ಲಾ ಸದಾ ಕೆಂದೂಳಿನಿಂದ ತುಂಬಿದ ಪರಿಸರದಲ್ಲಿ ಬಾಳುವ ಪರಿಸ್ಥಿತಿ ಕಾಣಿಸಿಕೊಂಡಿದೆ. ಸಾವಿರಾರು ಜನ ಆದಿವಾಸಿಗಳು, ರೈತರು, ಹೆಂಗಸರು ಮತ್ತು ಮಕ್ಕಳು ಧೂಳಿನ ಆ ಪರಿಸರದಲ್ಲಿ ತಮ್ಮ ಅನ್ನಕ್ಕಾಗಿ ದುಡಿಯ ಬೇಕಿದೆ. ಗಣಿಗಾರಿಕೆಯಿಂದಾಗುವ ಲಾಭವನ್ನು ಎಣಿಸಿಕೊಂಡರೂ, ಅದರಿಂದಾಗುವ ಪರಿಸರ ನಷ್ಟ ಮತ್ತು ಜನಗಳ ಸ್ಥಳಾಂತರ ಎಷ್ಟು? ಅವರ ನೋವುಗಳೇನುಯೆಂಬುದು ಯಾರೂ ಪರಿಗಣಿಸುತ್ತಿಲ್ಲ. ಇಂತಹ ಅನೇಕ ವಿನಾಶದ ಬದುಕನ್ನು ಯಥಾವತ್ತಾಗಿ ಕಂಡ ಕನ್ನಡದ ಕತೆಗಾರರು ತಮ್ಮದೇ ಆದ ನೋವಿನಿಂದ ಹಸಿರನ್ನು ಸಂರಕ್ಷಿಸಬೇಕು. ಗಿಡ ಮರಗಳನ್ನು ಬೆಳೆಸಬೇಕು. ಈ ನೆಲದಲ್ಲಿ ಮತ್ತೊಮ್ಮೆ ಹಸಿರು ಕ್ರಾಂತಿಯಾಗಬೇಕೆಂದು ಅನೇಕರು ಹೊಸ ಆಲೋಚನೆಯ ಕತೆಗಳನ್ನು ಬರೆದಿದ್ದಾರೆ.

ಪೂರ್ಣಚಂದ್ರ ತೇಜಸ್ವಿಯವರ ಕತೆಗಳು ಮತ್ತು ಕುಂ. ವೀರಭದ್ರಪ್ಪನವರ 'ಡೋಮ' 'ಭಗವತಿಕಾಡು' ಮತ್ತು ಅಮರೇಶ ನುಗಡೋಣಿಯವರ 'ಒಡಲುಗೊಂಡವರು' ಶ್ರೀಧರ ಬಳಗಾರರ 'ಇಳೆಯೆಂಬ ಕನಸು', 'ಕೆಳಗಿನವರು', 'ಸುಧಾಮ', ಮೊಗಳ್ಳಿ ಗಣೇಶರ 'ತೋಪು', ಮಲ್ಲಿಕಾರ್ಜುನ ವಣೇನೂರರ 'ಬುತ್ತಿಯ ಬಟ್ಟಲು' ಬೀದರಹಳ್ಳಿ ನರಸಿಂಹಮೂರ್ತಿಗಳ "ಜೀವಹಂಸ" ಮುಂತಾದ ಕತೆಗಳಲ್ಲಿ ಕಂಡು ಬರುವ ಗಣಿಗಾರಿಕೆ ಪರಿಸರ ನಾಶದ ಕುರಿತಾದ ತಕರಾರುಗಳು ಚರ್ಚಿತವಾಗಿವೆ. ಮೇಲಿನ ಎಲ್ಲಾ ಕತೆಗಾರರ ಕತೆಗಳಲ್ಲಿ ಕಂಡುಬರುವ 'ಪರಿಸರ ಸಂರಕ್ಷಣೆ'ಯನ್ನು ಕುರಿತ ಪಾತ್ರ, ಪರಿಸರ ಚಿತ್ರಣಗಳನ್ನು ಇಲ್ಲಿ ವಿವರವಾಗಿ ಚರ್ಚೆಗೆ ಒಳಪಡಿಸುತ್ತೇನೆ.

**೭.೪.೧. ತೇಜಸ್ವಿಯವರ ಕಥೆಗಳಲ್ಲಿ ಪರಿಸರ ಕಾಳಜಿ:**

ತೇಜಸ್ವಿ ನಮ್ಮ ನಡುವಿನ ಬಹುದೊಡ್ಡ ಲೇಖಕ. ಇವರ ಕತೆಗಳಲ್ಲಿ ಚಿತ್ರಿತವಾದ ಪರಿಸರ, ವೈಜ್ಞಾನಿಕ ವೈಚಾರಿಕ ತರ್ಕದೊಂದಿಗೆ ಕೂಡಿರುವಂತದ್ದು. ನವ್ಯ ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಕತೆಗಳನ್ನು ಬರೆಯಲು ತೊಡಗಿದ ಇವರು 'ಹುಲಿಯೂರಿನ ಸರಹದ್ದು', 'ಅಬಚೂರಿನ ಪೋಷ್ಟಾಫಿಸ್', 'ನಿಗೂಡ ಮನುಷ್ಯರು', 'ಕಾರ್ವಾಲೋ' 'ಚಿದಂಬರ ರಹಸ್ಯ' ಕೃತಿಗಳ ಮೂಲಕ ಪರಿಸರದ ದೊಡ್ಡ ಪ್ರಶ್ನೆಯನ್ನು ನಮ್ಮ ಮುಂದೆ ಅನಾವರಣಗೊಳಿಸುತ್ತಾರೆ. ವಸ್ತು, ಭಾಷೆ, ತಂತ್ರ, ಅಭಿವ್ಯಕ್ತಿ ಅನುಭವ ಹಾಗೂ ರಚನಾ ವಿಧಾನದ ಮೂಲಕ ವಿಭಿನ್ನತೆಯನ್ನು ಸೃಷ್ಟಿಸಿದ ದೀಮಂತ ಕಥನಕಾರ ತೇಜಸ್ವಿಯವರು. ಕುವೆಂಪು ಅವರಂತೆ ಮಲೆನಾಡಿನ ದಟ್ಟ ಪರಿಸರ. ಅದರ ಸುತ್ತ ಇಂದು ನಡೆಯುತ್ತಿರುವ ಅರಣ್ಯ ನಾಶದ ಹುನ್ನಾರಗಳನ್ನು ಕುರಿತು ಇತ್ತೀಚಿನ ಇವರ ಕತೆಗಳು ಶೋಧನೆಗೆ ಒಳಪಡಿಸುತ್ತವೆ.

ಪರಿಸರದಲ್ಲಿರುವ ಮನುಷ್ಯರ ಜೊತೆ ನಿಸರ್ಗದ ಹಕ್ಕಿ, ಪ್ರಾಣಿ, ಗಿಡ, ಮರ, ಬಳ್ಳಿ, ಹಳ್ಳ, ಕೀಟ, ಮಳೆ, ಗಾಳಿ ಸಮಸ್ತ ಚರಾಚರಗಳನ್ನು ಒಟ್ಟಿಗೆ ವಿಶಿಷ್ಟ ದೃಷ್ಟಿಕೋನವನ್ನಿಟ್ಟುಕೊಂಡು ಬರೆದ ಶ್ರೇಷ್ಠ ಕಥನ ಕಾರ ಪೂರ್ಣಚಂದ್ರ ತೇಜಸ್ವಿಯವರು.

ತೇಜಸ್ವಿಯವರ 'ಹುಲಿಯೂರಿನ ಸರಹದ್ದು' ಮೊದಲ ಕಥಾಸಂಕಲನವಾಗಿದ್ದು, ಈ ಸಂಕಲನದಲ್ಲಿ 'ಲಿಂಗ ಬಂದ', 'ಪಂಜ್ರೋಳ್ಳಿ ಸವಾಲು', 'ಗುಡುಗು ಹೇಳಿದ್ದೇನು?', 'ಉರ್ವಶಿ', 'ಹುಲಿಯೂರಿನ ಸರಹದ್ದು' ಮತ್ತು 'ಗಾಂಧೀಜಿ ದೆಸೆಯಿಂದ' ಯೆಂಬ ಆರು ಕಥೆಗಳಿವೆ. ಇಲ್ಲಿಯ ಎಲ್ಲಾ ಕತೆಗಳೂ ಕಲಾತ್ಮಕತೆಯಿಂದ ಮತ್ತು ಸೂಕ್ಷ್ಮವಾದ ಅಭಿವ್ಯಕ್ತಿಯಿಂದ ಕೂಡಿಕೊಂಡಿವೆ. 'ಲಿಂಗಬಂದ' ಕತೆಯಲ್ಲಿ ಮಲೆನಾಡಿನ ದಟ್ಟ ಪರಿಸರದ ಚಿತ್ರಣವಿದೆ. ಅಲ್ಲಿಯ ಗಾಳಿ, ಮಳೆ, ಗುಡುಗು, ಮಿಂಚಿನ ಆರ್ಭಟ ಅರವತ್ತರ ದಶಕದ ಮಲೆನಾಡಿನ ಪ್ರಕೃತಿ ಸೌಂದರ್ಯದ ರಮಣೀಯ ದೃಶ್ಯಗಳನ್ನು ನಮ್ಮ ಮುಂದೆ ತಂದು ನಿಲ್ಲಿಸುತ್ತಾರೆ.

'ಗುಡುಗು ಹೇಳಿದ್ದೇನು?' ಮಲೆನಾಡಿನ ಪರಿಸರವನ್ನೊಳಗೊಂಡ ಈ ಕತೆ ಸೋಮಾರಿ ಅಣ್ಣ ತಮ್ಮಂದಿರುಗಳಾದ ಸೋಮ ಮತ್ತು ಲಕ್ಕರು ಚಿಕ್ಕನೂರು ಸುಬ್ಬೆಗೌಡರ ಒಕ್ಕಲುತನವನ್ನು ತ್ಯಜಿಸಿ ಕಡಿದಾಳು ಶಾಮಣ್ಣ ಗೌಡರ ಬಳಿ ಹೋಗುವ ಸಿದ್ಧತೆಯನ್ನು ಕತೆ ಮಲೆನಾಡಿನ ಪರಿಸರದ ಜೊತೆ ಬಿಚ್ಚುತ್ತಲೇ ಹೋಗುತ್ತದೆ. ಕಲಿಯುಗದ ಮಾನವನ ಧೂರ್ತ ವರ್ತನೆಗಳೇ ಕಲ್ಕಿಯ ಅವತಾರ. ಅದನ್ನೆ ಗುಡುಗು ಸಾರಿ ಸಾರಿ ಹೇಳುತ್ತದೆ. ಕತೆಯ ಕೊನೆಯಲ್ಲಿ ಬರುವ ಆಕಸ್ಮಿಕ ಘಟನೆ, ದೈವದ ವ್ಯಂಗ್ಯ ಇದರ ಪರಿಣಾಮವನ್ನು ಮೂರ್ತವಾಗಿಸಲು ಪ್ರಜ್ಞಾಪ್ರವಾಹ ತಂತ್ರವನ್ನು ತೇಜಸ್ವಿಯವರು ಇಲ್ಲಿ ಬಳಸಿದ್ದಾರೆ. ಇಲ್ಲಿ ತೇಜಸ್ವಿಯವರು ಪರಿಸರದ ವರ್ಣಣೆಯನ್ನು ಸೂಕ್ಷ್ಮ ಪ್ರಜ್ಞೆಯ ಮೂಲಕ ಕಟ್ಟಿಕೊಟ್ಟಿದ್ದಾರೆ. ಇವರ ಕತೆಗಳು ಮನುಷ್ಯನ ಸೂಕ್ಷ್ಮ ವರ್ತನೆಗಳನ್ನು ದಾಖಲಿಸುತ್ತವೆ ಜೊತೆಗೆ ಪರಿಸರ ಕಾಳಜಿಯ ಹೊಸ ರೀತಿಯ ಎಚ್ಚರವನ್ನು ಮೂಡಿಸುತ್ತವೆ.

೧೯೬೦ ರಿಂದ ೧೯೭೩ ರ ಕಾಲ ಘಟ್ಟದಲ್ಲಿ ರಚನೆಯಾದ ಎರಡನೆ ಕಥಾ ಸಂಕಲನ ''ಅಬಚೂರಿನ ಪೋಸ್ಟಾಫೀಸ್'' ಈ ಕತೆಯಲ್ಲಿ ತೇಜಸ್ವಿಯವರು ಮಲೆನಾಡಿನ ಪರಿಸರವನ್ನು ಕಟ್ಟಿಕೊಡುವುದರ ಮುಖಾಂತರ ಮನುಷ್ಯ ಆಧುನಿಕತೆಯ ಪ್ರಭಾವದಿಂದ ಆತನ ಬದುಕಿನಲ್ಲಾಗುವ ಪಲ್ಲಟಗಳನ್ನು ಇಲ್ಲಿಯ ಕತೆಗಳು ಸಾಬೀತು ಪಡಿಸುತ್ತವೆ.

'ಅಬಚೂರಿನ ಪೋಸ್ಟಾಫೀಸ್' ಕತೆಯಲ್ಲಿ ಅಂಚೆ ಕಛೇರಿಯೊಂದು ಪ್ರಾರಂಭವಾದಾಗ ಚೋಬಣ್ಣನ ಸಾಂಸಾರಿಕ ಜೀವನದಲ್ಲಿ ನೆಮ್ಮದಿ ಹಾಳಾಗಿ ಇಡೀ ಊರಿಗೆ ಊರೇ ದುರಂತದ ಕತೆಯಾಗಿದೆ. ಈ ಕತೆಯಲ್ಲಿ ಆಧುನಿಕ ನಾಗರೀಕತೆಯ ಪ್ರವೇಶಕ್ಕೆ ಈ ಪೋಸ್ಟ್ ಆಫೀಸು ಪ್ರತೀಕವಾಗಿ ಆದ್ದರಿಂದ ಉಂಟಾಗುವ ಅನಾಹುತಗಳನ್ನು ಈ ಕತೆಯಲ್ಲಿ ತೇಜಸ್ವಿ ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ. ನಾಗರೀಕತೆ ಮತ್ತು ವ್ಯಕ್ತಿ ಸಮಸ್ಯೆಗಳ ನಡುವಿನ ತಾಕಲಾಟಗಳು ಈ ಕತೆಯ ಸೂಕ್ಷ್ಮವಾದಂತ ಅಂಶಗಳಾಗಿವೆ. ತೇಜಸ್ವಿಯವರು ಸಮುದಾಯದ ಮಧ್ಯೆ ಇರುವ ವ್ಯಕ್ತಿ ಅನುಭವಿಸುವ ನಿಸ್ಸಹಾಯಕತೆ ಹಾಗೂ ಮನುಷ್ಯನ ಕ್ರೌರ್ಯಗಳನ್ನು ಈ ಕತೆಯೊಳಗೆ ಸಂಯೋಜಿಸಿದ್ದಾರೆ.

'ಅಬಚೂರಿನ ಪೋಸ್ಟಾಫೀಸ್' ಕಥಾ ಸಂಕಲನದಲ್ಲಿ ಬರುವ 'ತ್ಯಕ್ತ', 'ಅವನತಿ', 'ಕುಬಿ ಮತ್ತು ಇಯಾಲ', 'ತುಕ್ಕೋಜಿ', 'ಡೇರೆ ಡೆವಿಲ್ ಮುಸ್ತಾಫ್', 'ತಬರನ ಕಥೆ' ಮುಂತಾದ ಕಥೆಗಳಲ್ಲಿ ಮಾನವೀಯ ಸಂಬಂಧಗಳ ತುಡಿತ ಮತ್ತು ಪರಿಸರ ಸಂಬಂಧಿ ನಿಲುವುಗಳು ಕೂಡ ಮನೋಜ್ಞವಾಗಿ ಚಿತ್ರಿತವಾಗಿವೆ

''ಕಿರುಗೂರಿನ ಗಯ್ಯಾಳಿಗಳು'' ತೊಂಬತ್ತರ ದಶಕದಲ್ಲಿ ಬೆಳಕು ಕಂಡ ಕಥಾಸಂಕಲನ. ಈ ಸಂಕಲನದಲ್ಲಿ 'ಕಿರುಗೂರಿನ ಗಯ್ಯಾಳಿಗಳು', 'ಕೃಷ್ಣೇಗೌಡನ ಆನೆ', 'ಮಾಯಾಮೃಗ', 'ರಹಸ್ಯ ವಿಶ್ವ' ಯೆಂಬ ನಾಲ್ಕೂ ಕತೆಗಳಿವೆ.

ಕಿರುಗೂರಿನ ಗಯ್ಯಾಳಿಗಳು ಕತೆ ಅನಿರೀಕ್ಷಿತ ಘಟನೆಗಳ ಮೂಲಕ ಬೆಳೆಯುವ ಕತೆ. ಮಲೆನಾಡಿನ ಸಾಂಸ್ಕೃತಿಕ ಬದುಕಿನ ವಿವರಗಳನ್ನು ಕಟ್ಟಿಕೊಡುತ್ತಲೇ ಹೋಗುತ್ತದೆ. ಭಯಂಕರ ಬಿರುಗಾಳಿಯೊಂದಿಗೆ ಆರಂಭವಾಗುವ ಈ ಕತೆ ಮಲೆನಾಡಿನ ಪರಿಸರದ ವಾಸ್ತವ ಚಿತ್ರಣವನ್ನು ಅಭಿವ್ಯಕ್ತಿಸುತ್ತಲೇ ಹೋಗುತ್ತದೆ. ಕಿರುಗೂರಿನ ಗಂಡಸರು ಸೋಮಾರಿಗಳು, ಜಾತಿ ಜಗಳದಲ್ಲಿ ಮುಳುಗಿದವರು, ಈ ಊರಿನ ಹೆಂಗಸರು ಮಾತ್ರ ಸುರ ಸುಂದರಿಯರು, ಬಲಿಷ್ಠರು ಮೌನಿಗಳಾದರೂ ಗಯ್ಯಾಳಿಗಳು, ಕತೆಯಲ್ಲಿ ಜಾತಿ ಸಂಘರ್ಷ ಮುಖ್ಯವಾಗಿ ಕಾಣುವುದಿಲ್ಲ. ಹಲಸಿನ ಮರ ಬಿರುಗಾಳಿಗೆ ಬಿದ್ದು ಹೋಗಿರುವ ಮರದ ಚಿತ್ರಣ ನೀಡುವುದರ ಮೂಲಕ ತೇಜಸ್ವಿ ಕಿರುಗೂರಿನ ಸಾಮಾಜಿಕ ಮತ್ತು ಆರ್ಥಿಕ ಅವನತಿಗೆ ರೂಪಕವೆನ್ನುವಂತೆ ಪರಿಸರ ವಿನಾಶದ ಚಿತ್ರಣಗಳನ್ನು ಕತೆಯಲ್ಲಿ ತಂದಿದ್ದಾರೆ. ಸಾಂದ್ರ ಬೇಸಾಯ ಪದ್ಧತಿಯ ವಿವಿಧ ಮುಖಗಳನ್ನು ಇಲ್ಲಿ ಅನಾವರಣಗೊಳಿಸಿದ್ದಾರೆ. ಈ ಕತೆಯಲ್ಲಿ ಬರುವ ಕಿರುಗೂರಿನ ಸ್ತ್ರೀಯರ ಕ್ರಾಂತಿಯನ್ನು ವ್ಯಂಗದ ನೆಲೆಯಾಗಿ ಚಿತ್ರಿಸಿದ್ದಾರೆ. ಬಹುಶಃ ಕಿರುಗೂರಿನ ಹೆಂಗಸರ ಬಂಡಾಯ ಪ್ರಜ್ಞೆಯೇ ಆ ಊರಿನ ಗಂಡಸರ ದೃಷ್ಟಿಯಲ್ಲಿ ಗಯ್ಯಾಳತ್ವವಾಗಿ ತೋರಿರಬೇಕು. ಸ್ತ್ರೀವಾದಿ ಹೋರಾಟದ ಸ್ತ್ರೀಯರ ಬಂಡಾಯದ ಪ್ರಜ್ಞೆಯನ್ನು ಕಲಾತ್ಮಕವಾಗಿ ನಿರೂಪಿಸಿದ್ದಾರೆ. ಸ್ತ್ರೀ ಸಂಘಟನೆಯಿಂದ ಶೇಂದಿ ಅಂಗಡಿ ನಾಶವಾಗುವುದು, ತರಲೆ ಶಂಕ್ರಪ್ಪ ತಲೆಮರೆಸಿಕೊಂಡು ಪರಾರಿಯಾಗುವುದು. ಈ ಎಲ್ಲಾ ಘಟನೆಗಳು ರೈತ ಚಳುವಳಿಗೆ, ಜಾತಿ ವಿನಾಶ ಸಂಘಟನೆಗೆ ಪೂರಕವಾದ ಅಂಶಗಳಾಗುತ್ತವೆ. ಆರಂಭದಲ್ಲಿ ಬೀಸುವ ಬಿರುಗಾಳಿ ಪರಿಸರದ ದಟ್ಟ ಚಿತ್ರಣವನ್ನು ಕಟ್ಟಿಕೊಡುವುದರ ಮುಖಾಂತರ ಹಳೆಯದನ್ನು ತೂರಿ ಹೊಸದನ್ನು ಸ್ವಾಗತಿಸುವ ಮನೋಧರ್ಮದ ಸಂಕೇತವಾಗಿದೆ.

'ಕೃಷ್ಣೇಗೌಡನ ಆನೆ' ಕತೆಯಲ್ಲಿ ಮೂಡಗೇರಿಯಲ್ಲಿ ಆಗುವ ಯಾವುದೇ ಅನಾಹುತಗಳಿಗೆ ಕೃಷ್ಣೇಗೌಡನ ಆನೆಯೇ ಕಾರಣವಾಗುವ ವಿಶಿಷ್ಟ ಕಥೆಯಿದು ಇಂದಿನ ಪ್ರಸ್ತುತ ಭಾರತದ ಸಾಮಾಜಿಕ, ರಾಜಕೀಯ, ಧಾರ್ಮಿಕ,

ಸಾಂಸ್ಕೃತಿಕ ಹಾಗೂ ಅಧಿಕಾರ ಶಾಹಿ ವ್ಯವಸ್ಥೆಯ ಕರಾಳ ಸತ್ಯವನ್ನು ಈ ಕತೆ ಚಿತ್ರಿಸುತ್ತದೆ. ಕೃಷ್ಣೇಗೌಡನ ಆನೆ ಮೂಲತಃ ಘಟ್ಟದ ಕೆಳಗಿನ ಗೂಳೂರು ಮಠದ ಆನೆ. ಈಗ ಅದು ಆ ಕೃಷ್ಣೇಗೌಡನ ಜೀತದ ಆನೆ. ಅದು ಬೆಳೆದಿದ್ದೆಲ್ಲಾ ಊರಿನ ಮಧ್ಯೆ. ಒಂದು ಸಾಕುಪ್ರಾಣಿಯಂತೆ ಆನೆಯಿಂದ ಆರ್ಥಿಕವಾಗಿ ಲಾಭ ಪಡೆದ ಕೃಷ್ಣೇಗೌಡ ಅದನ್ನು ಚೆನ್ನಾಗಿ ಬೆಳೆಸಿದ. ಈ ಆನೆಯ ತಲೆನೋವಿಗೆ ಊರಿನವರೆಲ್ಲ ತಮ್ಮ ರೇಜಿಗೆಯನ್ನು ಕಟ್ಟಿಹಾಕಿಬಿಡುತ್ತಾರೆ.

ಕಾಡನ್ನು ಕಡಿದು ಕಳ್ಳನಾಟಾ ಸಾಗಿಸುತ್ತಿದ್ದ ಲಾರಿ ಚಾಲಕರಾದ ಅಬ್ಬಾಸ್ ಮತ್ತು ಕ್ಲಿನರ್ ಕೃಷ್ಣರ ಅಪಘಾತವನ್ನು ಆನೆಯ ತಲೆಗೆ ಕಟ್ಟಿದ್ದು ಕೂಡ ವಿಪರ್ಯಾಸವಾಗಿದೆ. ಅರಣ್ಯನಾಶ ಮಾಡುವ ಗುಂಪು ಅದನ್ನು ಆನೆಯಿಂದಲೇ ಆಗುತ್ತದೆಯೆಂದು ಪಿತೂರಿ ಮಾಡುತ್ತಾರೆ. ಫಾರೆಸ್ಟರ್ ನಾಗರಾಜನ ನೇತೃತ್ವದಲ್ಲಿ ಎಲ್ಲಾ ಹಾವಳಿಗೆ ಕಾರಣವಾದ ಆನೆಯ ಮೇಲೆ ಕ್ರಮ ಕೈಗೊಳ್ಳಬೇಕೆಂದು ನಿರ್ಧಾರ ಮಾಡುತ್ತಾರೆ. ಕೊನೆಗೆ ರೇಂಜರ್ ಕಾಡಿನ ನಾಶಕ್ಕೆ ಆನೆಯೇ ಕಾರಣವೆಂದು ಅದನ್ನು ಶೂಟ್ ಮಾಡಿಬಿಡುವಂತೆ ಆಜ್ಞೆಮಾಡುತ್ತಾನೆ. ಸಿಟ್ಟಿಗೆದ್ದ ಕೃಷ್ಣೇಗೌಡ ಮಾವುತ ಮೇಲಾಯುಧನನ್ನು ಬೈದಾಗ , ಆನೆಯನ್ನು ಕಾಯುತ್ತಾ ಮಲಗಿ ಅದಕ್ಕೆ ಸರಿಯಾದ ಶಿಕ್ಷೆ ಮಾಡುವೆನೆಂದು ಅತಿಯಾಗಿ ಕುಡಿದು, ತನ್ನ ಆನೆಯೆಂದೇ ಭಾವಿಸಿ ಕಾಡಾನೆಯೊಂದನ್ನು ಶಿಕ್ಷಿಸಿ, ಅದರ ಕಾಲಲ್ಲಿ ಸಿಲುಕಿ ಸಾಯುತ್ತಾನೆ. ಆನೆಯನ್ನು ಶೂಟ್ ಮಾಡಲೆಂದು ಹೋದ ನಾಗರಾಜು ಹೇಳಹೆಸರಿಲ್ಲದವನಾಗುತ್ತಾನೆ. ಆತನ ಸಾವಿನ ಬಗ್ಗೆ ಊಹಾಪೋಹಗಳು ಮಾತ್ರ ಕೇಳಿಬರುತ್ತವೆ. ಇಷ್ಟೆಲ್ಲಾ ಗೊಂದಲಕ್ಕೆ ಕಾರಣವಾದ ಆನೆ ನಾಪತ್ತೆಯಾಗಿ ಬಿಡುತ್ತದೆ. ಆನೆ ಮರಳಿ ಬಂದರೆ ಹೇಗೆ ಎಂದು ಕೃಷ್ಣೇಗೌಡ ಚಿಂತಾಕ್ರಾಂತನಾಗಿರುವಂಥ ಸಂದಿಗ್ಧತೆಯಲ್ಲಿ ಕತೆ ಮುಗಿಯುತ್ತದೆ.

ಮನುಷ್ಯ ತನ್ನ ಬೇಜವಾಬ್ದಾರಿತನವನ್ನು ಅಸಹಾಯಕತೆಯನ್ನು ಮುಚ್ಚಿಕೊಳ್ಳುವುದರ ಜೊತೆಗೆ ಅರಣ್ಯ ಪರಿಸರದ ನಾಶಕ್ಕೆ ತೊಡಗಿದ ಮನುಷ್ಯ ತಾವು ಮಾಡಿದ ನಾಶದ ಹೊಣೆಯನ್ನು ಕೃಷ್ಣೇಗೌಡನ ಆನೆಯ ಮೇಲೆ ಹಾಕಿಬಿಡುತ್ತಾರೆ.

'ಮಾಯಾಮೃಗ' ಅತ್ಯುತ್ತಮ ಕತೆಗಳಲ್ಲಿ ಒಂದು. 'ಸಾವು' ಇದರ ಕಥಾವಸ್ತು ದೆವ್ವದ ಬಗ್ಗೆ ನಂಬಿಕೆ ಇಲ್ಲದ ಸ್ನೇಹಿತರಿಬ್ಬರು ಸ್ಮಶಾನದಲ್ಲಿ ದೆವ್ವ ಇದೆಯೇ? ಇಲ್ಲವೇ? ಎಂಬುದನ್ನು ಪರೀಕ್ಷಿಸಲು ಹೋಗಿ, ಕೊನೆಗೆ ಅವರು ಎದುರಿಸುವ ಸಂಶಯ, ಗುಮಾನಿಗಳು, ಆ ಸಂದರ್ಭದಲ್ಲಿ ಪರಿಸರ ಮಧ್ಯೆ ಪಡೆದುಕೊಳ್ಳುವ ಅನುಭವಗಳು ಕುತೂಹಲಭರಿತವಾಗಿವೆ.

ದೆವ್ವವಿರುವುದು ಸ್ಮಶಾನದಲ್ಲಿ ಅಲ್ಲ, ತಮ್ಮ ಮನದಲ್ಲಿ ಎನ್ನುತ್ತಾರೆ ಲೇಖಕರು. ''ಮಾನವನ ಮೆದುಳು ಹುಟ್ಟುಹಾಕುವ ಕಲ್ಪಿಸುವ ಭಯವೇ ದೆವ್ವ, ಪಂಚೇಂದ್ರಿಯಾತೀತವಾದದ್ದು, ಆರನೆ ಇಂದ್ರಿಯದಿಂದಲೇ ಸೃಷ್ಟಿಯಾಗುವ, ಆತ್ಮದ ಪರಿವರ್ತನ ರೀತಿಯೇ ದೆವ್ವ'' ಅದು ಕಲ್ಪನೆಯಾಗಿ ಮೊಳೆತು, ಮನುಷ್ಯನನ್ನು ಬೆಚ್ಚಿಬೀಳಿಸುವ ರೂಪವೇ ಪ್ರಾಣವನ್ನು ದೇಹದಿಂದ ಬೇರ್ಪಡಿಸುವ ಕ್ರಿಯೆಯಲ್ಲಿ ಕತೆ ಪರ್ಯವಸಾನವಾಗುತ್ತದೆ.

'ರಹಸ್ಯವಿಶ್ವ' ಹುಡುಗತನದ ಹುಡುಗಾಟಿಕೆಯನ್ನು ಈ ಕತೆ ಹಾಸ್ಯಶೈಲಿಯಲ್ಲಿ ನಿರೂಪಿಸುತ್ತದೆ. ಬಾಲಕನಾಗಿದ್ದಾಗ ನಿರೂಪಕ ಸೈಕಲ್ಲನ್ನು ಸವಾರಿಮಾಡಿದ ಅವಾಂತರವೇ ಈ ಕತೆಯ ವಸ್ತುವಾಗಿದೆ. ಮಲೆನಾಡಿನ ದಟ್ಟವಾದ ಪ್ರಕೃತಿ ಸೌಂದರ್ಯದ ಚಿತ್ರಣ ಹಸಿರು ಕಕ್ಕುವ ಪರಿಸರ ನಾಶದ ಹಿಂದೆ ನಡೆಯುವ ಹುನ್ನಾರಗಳನ್ನು ಕತೆ ಮಾರ್ಮಿಕವಾಗಿ ಕಟ್ಟಿಕೊಡುತ್ತದೆ.

ಆಧುನಿಕ ಕನ್ನಡ ಕಥನ ಸಾಹಿತ್ಯ ಸಂದರ್ಭದಲ್ಲಿ ಶಿವರಾಮ ಕಾರಂತರಂತೆ ಅನೇಕ ಜ್ಞಾನ ಶಾಖೆಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದು ಗಂಭೀರವಾಗಿ ಬರೆಯುವ ಪೂರ್ಣಚಂದ್ರ ತೇಜಸ್ವಿಯವರು ಇಂದು ಕನ್ನಡದ ಅತ್ಯುತ್ತಮ

ಬರಹಗಾರರಲ್ಲಿ ಒಬ್ಬರಾಗಿದ್ದಾರೆ. ನವೋದಯ, ನವ್ಯ ನವ್ಯೋತ್ತರ ಕಾಲಘಟ್ಟಗಳ ನಡುವೆ ತಮ್ಮದೇ ಆದಂತಹ ವಿಶಿಷ್ಟ ಅಭಿವ್ಯಕ್ತಿ ಕ್ರಮವನ್ನು ರೂಡಿಸಿಕೊಂಡು ಬರೆಯುತ್ತಿರುವವರು ತೇಜಸ್ವೀಯವರು. ನವೋದಯದ ಸರಳ ಕಥಾನಕ ಶೈಲಿ, ನವ್ಯದ ಮನೋವಿಶ್ಲೇಷಣಾತ್ಮಕತೆ ಹಾಗೂ ದಲಿತ ಬಂಡಾಯದ ಸಾಮಾಜಿಕ ಕಳಕಳಿಯನ್ನು ರೂಢಿಸಿಕೊಂಡಿದ್ದಾರೆ. ಇವರ ನಡೆ-ನುಡಿ-ಚಿಂತನೆ ಹಾಗೂ ಕಾರ್ಯಗಳಲ್ಲಿ ಪರಿಸರವೇ ಕೇಂದ್ರ ಹಾಗೂ ಸ್ಥಾಯಿಯಾಗಿರುತ್ತದೆ. ವೈಜ್ಞಾನಿಕ ವಿಚಾರಧಾರೆಯೊಂದಿಗೆ ಕನ್ನಡದಲ್ಲಿ ಬರೆಯುವ ವಿರಳ ಲೇಖಕರಲ್ಲಿ ಇವರೂ ಒಬ್ಬರಾಗಿದ್ದಾರೆ. ಇವರು ಕತೆಗಳಲ್ಲಿ ನಿಸರ್ಗದೊಡನೆ ಮನುಷ್ಯ ಸಂಬಂಧವನ್ನು ವಿವರಿಸುವಾಗಲೆಲ್ಲಾ ಹಾಸ್ಯ ಪ್ರಜ್ಞೆಯನ್ನು ತರುತ್ತಾರೆ. ಬಹಳ ಎಚ್ಚರಿಕೆಯಿಂದಲೇ ಮನುಷ್ಯನ ಅಸ್ತಿತ್ವದ ಹಾಗೂ ಪ್ರಕೃತಿಯ ಅವಸಾನದ ಪ್ರಶ್ನೆಯನ್ನು ನಮ್ಮ ಮುಂದೆ ತೆರೆದಿಡುತ್ತಾರೆ. ಪರಿಸರ ನಾಶದ ಹಿಂದಿನ ಅಭಿವೃದ್ಧಿ ಯೋಜನೆಯ ತಂತ್ರಗಳನ್ನು ತೇಜಸ್ವಿ ತಮ್ಮ ಕೃತಿಗಳ ಮೂಲಕ ಲೇವಡಿಮಾಡುತ್ತಾರೆ.

ಸದಾ ಎಚ್ಚರವಾಗಿದ್ದುಕೊಂಡು, ಎದುರಿನ ಆಗುಹೋಗುಗಳಿಗೆ ಸ್ಪಂದಿಸುತ್ತಲೇ ಸಮಾಜವಾದಿ ವಾಸ್ತವಾದಿ ಬರಹಗಾರರಾಗಿ ರೂಪುಗೊಂಡಿರುವ ತೇಜಸ್ವಿ ಕರ್ನಾಟಕದ ಪರಿಸರದೊಂದಿಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ. ಪರಿಸರದ ವಿನಾಶವನ್ನು ಸಹಿಸದ ಅವರು ಪರಿಸರ ನಾಶದ ಹಿಂದೆ ಇರುವ ಕ್ರೂರ, ಭೂಗತ ಮುಖಗಳನ್ನು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಅನಾವರಣಗೊಳಿಸಿದ್ದಾರೆ. ಇವರ ಭಾಷೆ ಪ್ರಾದೇಶಿಕತೆಯ ದಟ್ಟ ಅನುಭವದೊಂದಿಗೆ ಅಭಿವ್ಯಕ್ತಿ ರೂಪ ಪಡೆದಿದೆ. ಅವರ ಪರಿಸರ ಕುರಿತ ಚಿಂತನೆ ಅಗಾಧವಾದದ್ದು. ತೇಜಸ್ವಿಯವರೇ ಹೇಳಿರುವ ಹಾಗೇ ಅವರ ಸಾಹಿತ್ಯ ಕೃಷಿಯ ಮೇಲೆ ಪ್ರಭಾವ ಬೀರಿರುವ ಮೂರು ಅಂಶಗಳೆಂದರೆ ಒಂದು: ಲೋಹಿಯಾ ಅವರ ತತ್ತ್ವ ಚಿಂತನೆ, ಎರೆಡು: ಕುವೆಂಪು ಅವರ ಕಲಾ ಸೃಷ್ಟಿ ಮೂರು: ಕಾರಂತರ ಜೀವನದ ಪ್ರಯೋಗ ಶೀಲತೆ ಮತ್ತು ಸಾಹಸ , ಈ ಮೂರು ತಾತ್ವಿಕ ಚಿಂತನೆಯೊಂದಿಗೆ, ತೇಜಸ್ವಿಯವರು ಮಲೆನಾಡಿನ ಸಾಂಸ್ಕೃತಿಕವಾದ ಪರಿಸರದ ಬದುಕನ್ನು ತಮ್ಮ ಕೃತಿಗಳಲ್ಲಿ ಕಥನವಾಗಿಸಿದ್ದಾರೆ.

**೭.೪.೨. ಅರಣ್ಯ ಮತ್ತು ಪರಿಸರ ಸಂಬಂಧಿ ಇತರರ ಕಥೆಗಳ ವಿಶ್ಲೇಷಣೆ**

ಕುಂ. ವೀರಭದ್ರಪ್ಪನವರು ನವ್ಯೋತ್ತರ ಕಥಾ ಸಾಹಿತ್ಯ ಸಂದರ್ಭದಲ್ಲಿ ನಮ್ಮ ನಡುವಿನ ಮಹತ್ವದ ಕತೆಗಾರರು. ಇವರ 'ಡೋಮ' ಕತೆಯಲ್ಲಿ ಜಮಿನ್ದಾರಿ ವ್ಯವಸ್ಥೆಯ ಪರ್ಯಾಯ ಸಾಧ್ಯತೆಗಳ ಹುಡುಕಾಟ ಕಂಡುಬರುತ್ತದೆ. ಜೊತೆಗೆ ಈ ಕತೆಯಲ್ಲಿ ಪರಿಸರ ಸಂಬಂಧಿ ಆಲೋಚನೆಗಳಿಗೆ ಇಂಬುಕೊಡುವಂತೆ ಗಿಡ-ಮರ-ಹಸಿರು ಇವುಗಳ ಸಂಬಂಧವನ್ನು ಕುರಿತು ಆಲೋಚನೆಗೆ ತೊಡಗಿಸುತ್ತಾರೆ. ಊರ ಗೌಡನ ತೋಟವನ್ನು ಕಾಯುತ್ತಿದ್ದ 'ಡೋಮ' ಗಿಡ ಮರ ಪರಿಸರದ ಬಗ್ಗೆ ಗಾಢ ಪ್ರೀತಿಯಿಟ್ಟುಕೊಂಡವನಾಗಿದ್ದಾನೆ. ತಾನು ಕಳೆದುಕೊಂಡ ಹೆಂಡತಿಯ ದುಃಖವನ್ನು ಮರೆಯಲುಯತ್ನಿಸುವುದು ಹಸಿರು ಪರಿಸರದ ಮಧ್ಯೆ. ಎರೆಡು ಮದುವೆಯಾದರೂ ಬದುಕು ಆತನಿಗೆ ಕಷ್ಟದ ಬುತ್ತಿಯನ್ನು ಕಟ್ಟಿಕೊಟ್ಟು ಇಬ್ಬರ ಮಡದಿಯರನ್ನೂ ಕಸಿದುಕೊಂಡಿದೆ. ಉಳಿದ ಮಕ್ಕಳು ಆತನ ಬದುಕಿಗೆ ಆಸರೆಯಾಗುವುದರ ಬದಲು ದುಃಖವನ್ನೆ ಹೆಚ್ಚುಮಾಡುತ್ತವೆ. ಒಬ್ಬ ಮಗ ಉಳ್ಳವರ ಗುಲಾಮನಾಗಿ ಬದುಕುತ್ತಾನೆ. ಇದ್ದೊಬ್ಬ ಮಗಳು ಹಣವಂತರಿಗೆ ಬಸಿರಾಗಿ ನೋವು ತಂದೊಡ್ಡುತ್ತಾಳೆ. ಆದರೂ ಡೋಮ ಎಲ್ಲವನ್ನು ಮರೆಯುವುದು ಗೌಡನ ತೋಟದಲ್ಲಿ ಗಿಡಗಳಿಗೆ ನೀರೆರೆಯುತ್ತಾ. ತಾನು ಒಂದು ಹಣ್ಣಿನ ಗಿಡವನ್ನು ತನ್ನ ಹಟ್ಟಿಯ ಹಿಂದಿನ ಹಿತ್ತಲಲ್ಲಿ ಬೆಳೆಸಿ ಗಿಡದ ಹಣ್ಣು ತಿನ್ನಬೇಕೆಂದು ಕನಸು ಕಾಣುತ್ತಾನೆ. ಅದೆ ಸಂದರ್ಭದಲ್ಲಿ ಸರ್ಕಾರ ಹಸಿರು

ಕ್ರಾಂತಿಗೆ ಸಂಬಂಧಿಸಿದಂತೆ ಕೊಟ್ಟಿದ್ದ ಹಣ್ಣಿನ ಗಿಡಗಳೆಲ್ಲಾ ಊರ ಗೌಡನಿಗೆ ಸೇರುತ್ತವೆ. ತನಗೂ ಒಂದು ಗಿಡ ಬೇಕೆಂದು ಊರ ಗ್ರಾಮಸೇವಕ ಮತ್ತು ಗೌಡನನ್ನು ಕೇಳಿ ನಿರಾಶನಾಗುತ್ತಾನೆ. ನಿತ್ಯ ತೋಟದಲ್ಲಿ ಗಿಡಗಳಿಗೆ ನೀರೆರೆಯುತ್ತಾ, ಗೊಬ್ಬರವಿಡುತ್ತಾ ತಾನೊಂದು ಮರ ಬೆಳೆಸಬೇಕೆಂಬ ಅದಮ್ಯ ಉತ್ಸಾಹಕ್ಕೆ ಒಳಗಾಗಿ ಗೌಡರ ಹೊಲದಲ್ಲಿಯ ಒಂದು ಹಣ್ಣಿನ ಗಿಡವನ್ನು ಕದ್ದು ತಂದು ತನ್ನ ಮನೆಯ ಹಿತ್ತಲಲ್ಲಿ ಪಾತಿಮಾಡಿ ಗಿಡನೆಟ್ಟು ಬೆಳೆಸತೊಡಗುತ್ತಾನೆ. ಆತನ ಆರೈಕೆಯಲ್ಲಿ ಆ ಹಣ್ಣಿನ ಗಿಡ ಬೆಳೆಯುತ್ತಲೇ ಹೋಗುತ್ತದೆ. ಆ ಗಿಡದಲ್ಲಿ ಹಕ್ಕಿಗಳು ಗೂಡು ಕಟ್ಟುತ್ತವೆ. ಅವುಗಳ ಚಿಲಿಪಿಲಿ ದನಿಗೆ ಆ ಗಿಡದ ನೆರಳಿನಲ್ಲಿ ಮಲಗಿ ತನ್ನ ದುಃಖವೆಲ್ಲಾ ಮರೆಯುತ್ತಾನೆ. ಇತ್ತ ಗೌಡನ ತೋಟದ ಗಿಡಗಳು ಆರೈಕೆಯಿಲ್ಲದೆ ಒಣಗಿ ಹೋದಾಗ, ಡೋಮ ತಮ್ಮ ಹೊಲದಿಂದ ಗಿಡವನ್ನು ಕದ್ದು ಬೆಳೆಸುತ್ತಿರುವುದು ತಿಳಿದು ಗೌಡ ವ್ಯಾಘ್ರಗೊಳ್ಳುತ್ತಾನೆ. ರಾತ್ರೋರಾತ್ರಿ ಬಂದು ಡೋಮ ಬೆಳೆಸಿದ ಹಣ್ಣಿನ ಗಿಡವನ್ನು ಕಡಿದುಹಾಕಿಬಿಡುತ್ತಾನೆ. ತುಂಡು ತುಂಡಾಗಿ ಕತ್ತರಿಸಿ ಬಿದ್ದ ಗಿಡವನ್ನು ಕಂಡ ಡೋಮ ಹುಟ್ಟಿದ ಮಗನನ್ನೆ ಕಳೆದುಕೊಂಡವನಂತೆ ಗಿಡವನ್ನು ಅಪ್ಪಿಕೊಂಡು ರೋದಿಸುತ್ತಾನೆ. ಇದಕ್ಕೆ ಗೌಡನ ಎಂಜಲಿಗೆ ಕೈಚಾಚುವ ಮಗನೇ ಕಾರಣವೆಂದು ಸೇಡಿಗೆ ಸೇಡು ತೀರಿಸಿಕೊಳ್ಳಬೇಕೆಂದು ಮನೆಯಲ್ಲಿದ್ದ ಗೊಂಡರ ಗೊಡಲಿಯಿಂದ ಗೌಡನ ಅಳಿದುಳಿದ ತೋಟದ ಗಿಡಗಳನ್ನು ಕಡಿದು ನಾಶಮಾಡಿಬಿಡುತ್ತಾನೆ. ''ಲೇ...ಲೇ..ಡೋಮ ಕಡಿಬ್ಯಾಡಲೇ ಗಿಡನಾ ಕಡಿಬ್ಯಾಡ...''[೨೦] ಎಂದು ಕೂಗಿದರೂ ಡೋಮ ಗೌಡನ ತೋಟವನ್ನು ಕೊಡಲಿಯಿಂದ ಸವರಿ ಹಾಕಿ ಬಿಡುತ್ತಾನೆ. ಗೌಡ ಅವನನ್ನು ಪಂಚಾಯ್ತಿ ಕಟ್ಟೆಗೆ ಹಿಡಿದು ತಂದಾಗ ಹುಚ್ಚನಂತೆ ವಿಕಾರವಾಗಿ ನಕ್ಕುಬಿಡುತ್ತಾನೆ. ಆತನಿಗೆ ಹುಚ್ಚು ಹಿಡಿದಿದೆಯೆಂದು ಜನ ಮಾತಾಡಿಕೊಳ್ಳುತ್ತಾರೆ. ಆತ ವಾಯುವ್ಯ ದಿಕ್ಕಿನ ಕಡೆ ಗಹಗಹಿಸಿ ನಗುತ್ತಾ ಹೋಗಿಬಿಡುತ್ತಾನೆ. ಈ ಕತೆಯಲ್ಲಿ ಡೋಮನು ಹಸಿರ ಬಗ್ಗೆ ಗಿಡಮರಗಳ ಬಗ್ಗೆ ಅವುಗಳನ್ನು ಆಶ್ರಯಿಸಿಕೊಂಡ ಪಕ್ಷಿಗಳ ಬಗ್ಗೆ ಅದಮ್ಯವಾದ ಪ್ರೀತಿಯಿಟ್ಟುಕೊಂಡವನು. ಆದರೆ ತಾನು ಕನಸುಕಟ್ಟಿಕೊಂಡು ಬೆಳೆಸಿದ ಗಿಡ ನಾಶವಾದಾಗ. ನಾಶಮಾಡಿದವರ ತೋಟವನ್ನು ನಾಶಮಾಡಿ ಸೇಡು ತೀರಿಸಿಕೊಳ್ಳುತ್ತಾನೆ. ಬಂಡಾಯ ಗುಣ ಕತೆಯಲ್ಲಿಯ ಡೋಮನಿಗೆ ತುಂಬಿದ್ದಾರೆ. ಜಮಿನ್ದಾರರ ಅಟ್ಟಹಾಸಕ್ಕೆ ಡೋಮ ಹೊಸ ಪಾಠಕಲಿಸಿದ್ದಾನೆ. ಹಸಿರಿನ ಅಳಿವು ಉಳಿವಿನ ಪ್ರಶ್ನೆ ಈ ಕತೆಯಲ್ಲಿ ಕಾಣಿಸಿಕೊಂಡಿದೆ. ಗಿಡಮರಗಳನ್ನು ಕುರಿತು ಗ್ರಾಮೀಣ ಜನತೆಯಿಟ್ಟುಕೊಂಡಿರುವ ಪ್ರೀತಿ, ಗೌರವ, ಭಕ್ತಿ ಅನನ್ಯವಾದದ್ದು.

'ಕುಂ. ವೀ'ಯವರ ಮತ್ತೊಂದು ಕತೆ 'ಭಗವತಿಕಾಡು' ಗ್ರಾಮೀಣ ಬದುಕಿನ ದಟ್ಟ ಜೀವನಾನುಭವಗಳನ್ನು ಕಟ್ಟಿಕೊಡುವ ಕತೆ. ಈ ಕತೆಯಲ್ಲಿ ಬರುವ ನಾಗವ್ವ ಆಕೆಯ ಕುಟುಂಬ ವರ್ಗ ಸದಾ ಕಲಹಗಳಿಂದಲೇ ಬದುಕನ್ನು ಕಟ್ಟಿಕೊಂಡು ಸಾಗಿದವರು. ಆಕೆಯ ಮನೆಯ ಮುಂದಿದ್ದ ವಿಶಾಲ ಬೇವಿನ ಮರ ಇಡೀ ಕೇರಿಗೆ ನೆರಳಾಗಿರುವಂತದ್ದು. ಆಮರದ ಮೇಲೆ ಊರಗೌಡನ ಕಣ್ಣುಬೀಳುತ್ತದೆ. ಆ ಮರವನ್ನು ಕಡಿದು ತಮ್ಮ ಮನೆಗೆ ಒಕ್ಕಲುತನಕ್ಕೆ ಸಾಮಾನುಗಳನ್ನು ಮಾಡಿಕೊಳ್ಳಬೇಕೆಂದು ಹುನ್ನಾರ ಹೂಡುತ್ತಾನೆ. ನಾಗವ್ವಳನ ಗಂಡ ಭರಮ್ಯಾನಿಗೆ ಹಣ ಹೆಂಡದ ಆಶೆ ತೋರಿಸುತ್ತಾನೆ. ಗೌಡ ನೀಡಿದ ಹಣದಿಂದ ಭರಮ್ಯಾ ಮನೆಮಂದಿಗೆಲ್ಲಾ ನೆಲ್ಲಕ್ಕಿ ಅನ್ನ ಉಣ್ಣಿಸಿ ಗೌಡನಿಗೆ ಮರ ಮಾರಿರುವುದಾಗಿ ಹೇಳುತ್ತಾನೆ. ಇದರಿಂದ ಸದಾ ಜಗಳವಾಡುತ್ತಿದ್ದ ಅತ್ತೆ ಸೊಸೆಯರು ಒಂದಾಗಿ ಬೇವಿನ ಮರ ರಕ್ಷಿಸಲು ಕಂಕಣ ಬದ್ಧರಾಗಿ ನಿಲ್ಲುತ್ತಾರೆ. ಇದಕ್ಕೆ ಇಡೀ ಕೇರಿಯೇ ಬೆಂಬಲವಾಗಿ ನಿಲ್ಲುತ್ತದೆ. ಭರಮ್ಯಾನ ಮಗನು ಮರ ಕಡಿಯಲು ಗೌಡರ ಆಳುಗಳಿಗೆ ಕುಮ್ಮಕ್ಕು ನೀಡಿರುವುದು ತಿಳಿದು. ಸಿಟ್ಟಿಗೆದ್ದ ನಾಗವ್ವ ''ಲೋ..

ನೀನು ಈಟ್ಟಿದ್ದಾಗ ನಿನ್ನ ಬದುಕಸಿದ್ದು.. ಆ ಮರ ಲೋ.. ಅದೇ ಕೊಂಬೆಗೆ ತೃಟ್ಲಕಟ್ಟಿ ನಿರಾಕಿ ನಿನ್ನ ಮಲಗಿಸಿ ಬಿಟ್ರೆ.. ಗಪ್ಪಾಂತ ಮಲಗ್ತಿದೆ. ಹೆತ್ತಾಕಿ ಬೇರೆಲ್ಲಾ.. ಆಮರ ಬ್ಯಾರೆ ಅಲ್ಲ.. ಕೇರ್‍ಯಾಗ ಒಂದೊಳ್ಳೇದ್ದೂ ಆ ಮರ ಬೇಕು ಕೆಟ್ಟದ್ದೂ ಆ ಮರ ಬೇಕು..''[೨೨] ಅಂತಂದು ಗುಡುಗುತ್ತಾಳೆ. ಅದಕ್ಕೆ ತಕ್ಕಂತೆ ಕೇರಿಯ ಹಿರಿಯ ಕವಳಜ್ಜ ''ಮರಕೇರಿಗೆ ಆಸ್ತಿ ಇದ್ದಂಗಲೇ ವುಡ್ಗಮುಂಡೆದೇ'' ಎನ್ನುತ್ತಾನೆ. ಇಡೀ ಕೇರಿಯೇ ಸೇರಿ ಗೌಡನ ಆಳುಗಳ ವಿರುದ್ಧ ಪ್ರತಿಭಟನೆ ನಿಂತು ಮರವನ್ನು ರಕ್ಷಿಸುತ್ತಾರೆ. ನಾಗವ್ವ ಆ ಸಂದರ್ಭದಲ್ಲಿ ಮೈಯಲ್ಲಿ ದೇವತೆ ಹೊಕ್ಕವಳಂತೆ ಕಚ್ಚೆಕಟ್ಟಿ ಕುಣಿಯುತ್ತಾ ಗೌಡರ ಆಳುಗಳನ್ನು ಓಡಿಸಿಬಿಡುತ್ತಾಳೆ. ಮರ ನೂರಾರು ಹಕ್ಕಿ ಪಕ್ಷಿಗಳಿಗೆ ಕೇರಿಯ ಜನರಿಗೆ ಆಶ್ರಯ ತಾಣವಾಗಿ ಉಳಿಯುತ್ತದೆ.

ಈ ಕತೆಯಲ್ಲಿ ಕುಂ.ವೀಯವರು ನಮ್ಮ ಮದ್ಯೆ ಕಣ್ಮರೆಯಾಗುತ್ತಿರುವ ಗಿಡ ಮರಗಳನ್ನು ನಾವು ಸಂರಕ್ಷಿಸಬೇಕು. ಉತ್ತಮ ಹಸಿರಾದ ಪರಿಸರವನ್ನು ನಾವೆಲ್ಲಾ ಬೆಳೆಸಬೇಕೆಂದು ತಿಳಿಸಿದ್ದಾರೆ. ಪಟ್ಟಭದ್ರ ಹಿತಾಶಕ್ತಿಗಳ ಕಪಿಮುಷ್ಠಿಗೆ ಸಿಕ್ಕಿ ಅರಣ್ಯ ಅಲ್ಲಿಯ ಹಸಿರು ಅನೇಕ ಬೆಲೆಬಾಳುವ ಗಿಡ ಮೃಗಗಳು ಇಂದು ಕಣ್ಮರೆಯಾಗುತ್ತಿರುವುದನ್ನು ಕಾಣುತ್ತೇವೆ. 'ಹಸಿರೇ ಉಸಿರಾಗ ಬೇಕು' 'ಮನೆಗೊಂದು ಮರ ಊರಿಗೊಂದು ವನ'ವೆನ್ನುವ ಮಾತು ಎಲ್ಲೆಡೆ ಕಾರ್ಯರೂಪಕ್ಕೆ ತರಬೇಕಿದೆ.

ಕುಂ.ವೀಯವರು ಪರಿಸರ ಸಂರಕ್ಷಣೆ ಗಿಡ ಮರಗಳ ಉಳಿವಿಗಾಗಿ ಜನ ಸಮುದಾಯ ಹೋರಾಟಕ್ಕೆ ಇಳಿಯ ಬೇಕೆಂಬ ಆಶಯ ಈ ಕತೆಯಲ್ಲಿ ತುಂಬಿದ್ದಾರೆ.

ಅಮರೇಶ ನುಗಡೋಣಿಯವರ 'ಒಡಲುಗೊಂಡವರು' ಕತೆ ಗಣಿಗಾರಿಕೆಯಿಂದ ಒಂದು ಹಳ್ಳಿಯ ಪರಿಸರದಲ್ಲಿ ಆ ಊರಿನ ಒಕ್ಕಲು ಮಕ್ಕಳು ಭೂಮಿಯನ್ನು ಗಣಿಕಂಪನಿಗೆ ಮಾರಿಕೊಳ್ಳುವ ದೀನ ಸ್ಥಿತಿಯನ್ನು ವಿಶ್ಲೇಷಿಸುತ್ತದೆ. ಈ ಕತೆಯ ನಾಯಕ ಹರಿಶ್ಚಂದ್ರ ಕೆಳಜಾತಿಯಲ್ಲಿ ಹುಟ್ಟಿದವನು ಕಣವೆ ಹಳ್ಳಿಯ ಚಂದ್ರಪ್ಪನ ಮಗನಾದ ಈತ ಎರೆಡು ಡಿಗ್ರಿಗಳನ್ನು ಪಡೆದು ಉದ್ಯೋಗವಿಲ್ಲದೆ ಪರದಾಡಿದವನು. ತಂದೆ ಚಂದ್ರಪ್ಪ ಊರಿನಲ್ಲಿ ಗೌರವದಿಂದ ಬದುಕಿ ಸತ್ತವನು ಉಳಿದ ತಮ್ಮಂದಿರು ಬದುಕು ಹುಡುಕಿಕೊಂಡು ಶಹರ ಸೇರಿದವರು. ತಾಯಿ ಬಸವ್ವನೊಂದಿಗೆ ಕಣಿವೆಯಲ್ಲಿ ಬದುಕಿ ಓದಿದ ಹರಿಶ್ಚಂದ್ರ ತಾಲೂಕು ಕೇಂದ್ರ ಸೇರಿದವನು. ಆ ದಿನದಲ್ಲಿ ಊರಿನ ಸುತ್ತ ಮುತ್ತ ಗಣಿಗಾರಿಕೆ ಆರಂಭವಾಯಿತು. ಅದನ್ನು ಕಂಡು ಹರಿಶ್ಚಂದ್ರ ತನ್ನ ಗೆಳೆಯರ ಜೊತೆ ಸೇರಿಕೊಂಡು 'ಪರಿಸರ ಉಳಿಸಿ ಚಳುವಳಿ' ಪ್ರಾರಂಭಿಸುತ್ತಾನೆ. ಆದರೆ ಹೋರಾಟ ಫಲಕಾಣದೆ ಊರ ಗಣಿ ಮಾಲಿಕ ಕಣ್ಣಿಗೆ ಕಿಸರಾಗುತ್ತಾನೆ. ಈ ಹಿಂದೆ ಸತ್ತತಂದೆಯನ್ನು ಇದ್ದ ಮಾಸರೆ ಹೊಲದಲ್ಲಿ ಮಣ್ಣು ಮಾಡಿ ಸಮಾದಿಕಟ್ಟಿಸಿ ತಿಥಿ ಮಾಡಿದವನು. ಊರಲ್ಲಿ ಮೈನ್ಸ್‌ಕಂಪನಿಗಳು ತಲೆಯೆತ್ತಿ. ಎಲ್ಲಾ ಭೂಮಿಗಳನ್ನು ಕೊಂಡುಕೊಳ್ಳುತ್ತಿರುವಾಗ ನಿರುದ್ಯೋಗಿಯಾದ ಹರಿಶ್ಚಂದ್ರ ಎರೆಡು ಎಕರೆ ಮಸಾರೆ ಹೊಲವನ್ನು ಮೈನ್ಸ್‌ಕಂಪನಿಗೆ ಮಾರುತ್ತಾನೆ. ಅದರಲ್ಲಿ ಒಂದು ಗುಮಾಸ್ತ ಕೆಲಸವನ್ನು ಆತನಿಗೆ ಮಾಲಿಕರು ನೀಡಿರುತ್ತಾರೆ. ಇತ್ತ ತಾಯಿ ಹಾಸಿಗೆ ಹಿಡಿದಾಗ ಗೋವಾದಲ್ಲಿದ್ದ ಅಣ್ಣನ ಹೆಂಡತಿ ಗೌರಕ್ಕಳನ್ನು ತಾಯಿಯ ಆರೈಕೆಗೆ ಕರೆಯಿಸಿಕೊಳ್ಳುತ್ತಾನೆ. ಮನೆಗೆ ಬಂದ ಗೌರಕ್ಕನಿಗೆ ಹರಿಶ್ಚಂದ್ರ ಬದುಕಿನ ಎಲ್ಲಾ ವಿವರಗಳು ಗೊತ್ತಾಗುತ್ತವೆ. ಹೊಲಮಾರಿದ್ದು ತಾಲೂಕಿನಲ್ಲಿ ಚಿಕ್ಕ ಪುಟ್ಟ ಹೋರಾಟಗಳನ್ನು ಮಾಡುತ್ತಾ ಮುಖಂಡರ ಜೊತೆ ಶಾಮೀಲಾಗಿ ಹೆಸರು ಕೆಡಿಸಿಕೊಂಡಿರುವುದು. ಕಣಿವೆಹಳ್ಳಿಯ ರೆಡ್ಡಿಗಳ ಜೊತೆ ಸಿಟ್ಟಿಗೆ ಕಾರಣವಾಗಿರುವುದು. ಎಲ್ಲವೂ ತಿಳಿಯುತ್ತದೆ. ತಾಯಿ ಬಸವ್ವನ ಆಸೆಯಂತೆ ಕಣಿವೆ ಹಳ್ಳಿಯ ಗಂಡ ಚಂದ್ರಪ್ಪನ ಸಮಾದಿತಾಗ ನನ್ನ ಮಣ್ಣು

ಮಾಡಬೇಕೆಂದಾಗ ತಾಯಿಗೆ ಸುಳ್ಳ ಹೇಳಿ ತಾಯಿಯನ್ನು ಊಳಲು ಜಾಗಕ್ಕಾಗಿ ಎಲ್ಲಡೆ ಪರದಾಡುತ್ತಾನೆ. ಜೀವದ ಗೆಳೆಯರು ಈತನನ್ನು ತಿರಸ್ಕರಿಸಿ ಬಿಡುತ್ತಾರೆ. ತನ್ನ ಬದುಕಿನ ನೋವೆಲ್ಲಾ ಗೌರಕ್ಕನ ಮುಂದೆ ಹೇಳಿಕೊಳ್ಳುತ್ತಾನೆ. ಕಣಿವೆಹಳ್ಳಿಗೆ ಹೋಗಿ ಬಂದಿದ್ದ ಗೌರಕ್ಕ ಊರು ಬದಲಾಗಿರುವುದು ಜನ ಮೈನ್ಸ್‌ಕಂಪನಿಗಳಿಗೆ ಭೂಮಿ ಮಾರಿಕೊಂಡು ಕೆಂಪಾನು ಕೆಂಪನೆಯ ಮಣ್ಣಿನಲ್ಲಿ ಮುಳುಗಿ ಹೋಗಿರುವುದು, ಊರ ಮಧ್ಯ ಹೈವೇ ರಸ್ತೆಯಾಗಿ ಊರು ಬದಲಾಗಿರುವುದು ಎಲ್ಲಾ ತಿಳಿದುಕೊಳ್ಳುತ್ತಾಳೆ. ಹರಿಶ್ಚಂದ್ರನಿಂದ ಎಲ್ಲಾ ನಡೆದುಹೋಗಿದೆ. ಆತನಿಗೆ ಅಕ್ಕನ ಮಗಳು ರೇಣುಕಳನ್ನು ಮದುವೆ ಮಾಡುವ ಯೋಚನೆ ಗೌರಕ್ಕಳಿಗೂ ಇತ್ತು. ಆದರೆ ರೇಣುಕಾ ಹರಿಶ್ಚಂದ್ರರ ಮನಸ್ಸುಗಳಲ್ಲಿ ಮಧ್ಯೆ ಬಿರುಕು ಮೂಡಿ ದೂರವಾಗಿರುವ ಕಾರಣ ತಿಳಿದುಕೊಳ್ಳುತ್ತಾಳೆ. ಗೌರಕ್ಕಳಿಗೆ ಕಣಿವೆ ಹಳ್ಳಿ ಬದುಕು ಕಾಡತೊಡಗುತ್ತದೆ. ತಾನು ಹೊಸದಾಗಿ ಚಂದ್ರಪ್ಪನ ಮನೆಗೆ ಸೊಸೆಯಾಗಿ ಬಂದಾಗ. ''ಊರು ಸುತ್ತ ಬೆಟ್ಟಗುಡ್ಡಗಳು ಸಾಲು ಹಸಿರಿನಿಂದ ಕಣ್ಣಿಗೆ ಮುದ ನೀಡುತ್ತಿದ್ದವು. ಈಗ ಎಲ್ಲ ಬೆಂಕಿಗೆ ತಗುಲಿದಂಗ್ಹ ನಿಂತಿದ್ದವು. ಚೆಂದದ ಬೆಟ್ಟಗಳು ರೂಪ ಕಳೆದುಕೊಂಡು ವಿಕಾರವಾಗಿದ್ದವು. ಊರ ಕೆಳಗಡೆ ಕಣ್ಣಿಗೆ ಎದ್ದು ಕಾಣುವಂತೆ ಮೈನ್ಸ್ ಕಂಪನಿಯೊಂದು ಕಂಡಿತು. ಕೆಮ್ಮಣ್ಣಿನ ಧೂಳು ಮೈಯಿಗೆ ಅಡರುತ್ತಲೇಯಿತ್ತು.''[೨೨] ಗಣಿಗಾರಿಕೆಯಿಂದ ಕಣಿವೆಯ ಹಳ್ಳಿಯ ಪರಿಸರ ನಾಶದಿಂದ ವಿನಾಶಗೊಂಡಿರುವುದನ್ನು ಇಲ್ಲಿ ಕಾಣಬಹುದು. ಪರಿಸರ ಚಳುವಳಿಗಳೂ ಕೂಡ ಹೊಸ ಬಿಕ್ಕಟ್ಟುಗಳನ್ನು ಹೇಗೆ ಅನುಭವಿಸುತ್ತಿದೆ ಎಂಬುದು ಈ ಕತೆಯಲ್ಲಿ ಚರ್ಚಿತವಾಗಿದೆ. ಬಂಡವಾಳಶಾಹಿಗಳ ಕೈಯಲ್ಲಿ ಹರಿಶ್ಚಂದ್ರನಂಥ ವಿದ್ಯಾವಂತರು ಹೇಗೆ ಅವರ ಕೈಗೊಂಬೆಯಾಗಿ ಚಳುವಳಿಗಳನ್ನು ಬದಿಗೊತ್ತಿ ವಿನಾಶದ ಬದುಕಿಗೆ ಅಂಟಿಕೊಳ್ಳುತ್ತಾರೆಂಬ ಸತ್ಯವನ್ನು ಕತೆ ಕಟ್ಟಿಕೊಡುತ್ತದೆ. ಪರಿಸರ ನಾಶದ ಹಿಂದಿನ ಗಣಿಮಾಲಿಕರ ಹುನ್ನಾರಗಳು, ಎಲ್ಲರನ್ನೂ ತಮ್ಮ ಕಾಲಡಿ ತುಳಿದಿಟ್ಟುಕೊಳ್ಳುವ ಪಟ್ಟ ಭದ್ರ ಹಿತಾಶಕ್ತಿಗಳ ಒಳಮುಖಗಳನ್ನು ಕತೆಗಾರರು ಸೆರೆ ಹಿಡಿದಿದ್ದಾರೆ. ಇಂದು ಎಲ್ಲೆಡೆ ಕೇಳಿ ಬರುತ್ತಿರುವ ಪರಿಸರ ನಾಶದ ಕೂಗು ನಿಲ್ಲುತ್ತಲೇ ಇಲ್ಲ. ಅರಣ್ಯ ಹಸಿರು ಇಂದು ನಮ್ಮ ಕಣ್ಮುಂದೆ ಕಣ್ಮರೆಯಾಗುತ್ತಿರುವುದು ಲೇಖಕರನ್ನು ತೀವ್ರವಾಗಿ ಕಾಡಿದೆ.

ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಅಭಿವೃದ್ಧಿ ಯೋಜನೆಯ ಹೆಸರಿನ ಅನೇಕ ಬದಲಾವಣೆಗಳು ಕಾಣಿಸಿಕೊಂಡವು. ಕಾಳಿ ನದಿಗೆ ಆಣೆಕಟ್ಟು ಕಟ್ಟುವ ಸಂದರ್ಭದಲ್ಲಿ ಉತ್ತರ ಕನ್ನಡದ ಆ ಭಾಗದಲ್ಲಿ ಅನೇಕ ಊರುಗಳ ಮದ್ಯೆ ಕೂಸಾಗಿ ಹರಿಯುತ್ತಿದ್ದ ನದಿ ಬಂದಿಯಾಗುವಾಗ ಅಲ್ಲಿಯ ಪರಿಸರ-ಭೂಮಿ ಮನೆಗಳನ್ನು ಜನ ಕಳೆದುಕೊಳ್ಳುವ ಸ್ಥಿತಿ ಒದಗಿ ಬರುತ್ತದೆ. ಈ ಸಂದರ್ಭವನ್ನಿಟ್ಟುಕೊಂಡು ಶ್ರೀಧರ ಬಳಗಾರರು 'ಇಳೆಯೆಂಬ ಕನಸು' ಕತೆ ರಚಿಸಿದ್ದಾರೆ. ಕಾಳಿನದಿಗೆ ಆಣೆಕಟ್ಟು ನಿರ್ಮಾಣವಾಗುವಾಗ ಆ ಊರಿನ ಜನ ತಮ್ಮ ಊರು ನದಿ ನೀರಿನಲ್ಲಿ ಮುಳುಗಿ ಹೋಗುತ್ತದೆಯೆಂದು ತಿಳಿದು ತಲ್ಲಣಗೊಳ್ಳುತ್ತಾರೆ. ಆ ಊರಿನ ಹಿರಿಯನಾದ ಜನಕಜ್ಜ ಈ ಅಭಿವೃದ್ಧಿ ಯೋಜನೆಯಿಂದ ಇಲ್ಲಿಯ ಕಾಡು-ಹೊಲ-ಮನೆ ನಾಶವಾಗುತ್ತದೆಂದು ತಮ್ಮ ಭಾಗದ ಜನ ಸಮುದಾಯವನ್ನು ಕಟ್ಟಿಕೊಂಡು ಹೋರಾಟ ಮಾಡುತ್ತಾನೆ. ಆಧುನಿಕತೆಯ ಮೂಲಭೂತ ತತ್ವವಾದ ಪ್ರಗತಿಯ ಬೆನ್ನುಹತ್ತಿ ಘಟಿಸುವ ಪರಿಸರ ಹಾನಿ ಎಲ್ಲರನ್ನೂ ತಲ್ಲಣ ಗೊಳಿಸುವಂತದ್ದು, ಜನಕಜ್ಜನ ಹೋರಾಟಕ್ಕೆ ಫಲ ದೊರೆಯುವುದಿಲ್ಲ. ಊರಿನ ಜಮೀನುಗಳು ಸರ್ವೆಯಾಗಿ ಅವರಿಗೆ ಸರಕಾರ ಪರಿಹಾರ ಧನ ನೀಡಿ ಪುನರ್ವಸತಿ ಕಲ್ಪಿಸಿಕೊಟ್ಟಾಗ. ಜನ ಆ ಕಡೆಗೆ ಗುಳೆಹೋಗುತ್ತಾರೆ. ಇದೆಲ್ಲಾ ಕಂಡು ಆತನಿಗೆ ದುಃಖ ಒತ್ತರಿಸಿ ಬರುತ್ತದೆ. ''ಆ ಊರಿನ ಹಸಿರಾದ ಸುಂದರ ಪರಿಸರ ತಮ್ಮ ಮನೆ ದೇವರಾದ ಮಾರುತಿ ದೇವರ ಗುಡಿ ಮುಳುಗಿ ಹೋಗುವುದು

ಕಂಡು ಜನಕಜ್ಜ ಮಮ್ಮಲ ಮರುಗುತ್ತಾನೆ.''[೨೨] ಅಭಿವೃದ್ಧಿ ಯೋಜನೆ ತನ್ನ ಕರಾಳ ಹಸ್ತಗಳನ್ನು ಪರಿಸರದ ಮೇಲೆ ಚಾಚುತ್ತಲೇ ಹೋಗುತ್ತದೆ. ಊರು ಮುಳುಗುತ್ತಿರುವಾಗ ಅನಿವಾರ್ಯವಾಗಿ ಊರುಬಿಟ್ಟು ಜನಕಜ್ಜ ಪುನರ್ವಸತಿ ಕೇಂದ್ರಕ್ಕೆ ಬರುತ್ತಾನೆ. ಆತನ ಕನಸಾಗಿದ್ದ, ಬಾಳಿ ಬದುಕಿದ ನೆಲ-ಜಲ, ಹಸಿರಾದ ಸುತ್ತಲ ಅರಣ್ಯ ಪ್ರದೇಶ, ಎತ್ತರದ ದಿಬ್ಬಗಳು, ದಿಬ್ಬದ ಮೇಲಿದ್ದ ಅಶೋಕ ವೃಕ್ಷಗಳ ಆಶ್ರಯದಲ್ಲಿದ್ದ ವನದೇವತೆಗಳ ಮೇಳ, ತಾನು ಬದುಕಿದ ಊರು ಮುಳುಗಿ ಹೋಗುವ ಪರಿಗೆ ಮೌನ ಪ್ರತಿಭಟನೆ ಸಾರುತ್ತಾನೆ. ಜನ ಹಣದ ಆಸೆಗೆ ಬೆನ್ನತ್ತಿ ಸಡಗರದಿಂದ ಊರು ಬಿಡುತ್ತಾರೆ. ಜನಕಜ್ಜ ಪುನರ್ವಸತಿ ಕೇಂದ್ರದಲ್ಲಿ ಎಲ್ಲರ ನಡುವೆ ಮಾತು ಕಳೆದುಕೊಂಡು ಎಲ್ಲರಿಂದ ದೂರವಾಗಿ ವೇಷ ಬದಲಾಯಿಸಿ ಕೊಂಡುಬಿಡುತ್ತಾನೆ. ಎಲ್ಲರೂ ವ್ಯವಸ್ಥೆಯೊಂದಿಗೆ ಬದುಕುಳಿಯಲು ಯತ್ನಿಸಿದಾಗ ಜನಕಜ್ಜ ತನ್ನ ಊರು ಪರಿಸರದೊಡನೆ ಜೀವಾಳವಾದ ಸಂಬಂಧವಿಟ್ಟುಕೊಂಡ ಆತನಿಗೆ ಅವರೊಂದಿಗೆ ಬದುಕುವುದು ಸಾಧ್ಯವಾಗದೇ ತಾನೇ ಪರಿಸರದ ವಿಚಿತ್ರ ಸಂಕೇತವಾಗಿ ಪರಿವರ್ತಿತನಾಗಿ ಆತ ಕಾಡಿನೊಳಗೆ ಹಸಿರಿನ ಮಧ್ಯೆ ಸೇರಿಕೊಂಡು ಬಿಡುತ್ತಾನೆ. ಶ್ರೀಧರ ಬಳಗಾರರು ಈ ಕತೆಯಲ್ಲಿ ಪರಿಸರ ಹಾನಿಯ ಕರಾಳ ಮುಖಗಳನ್ನು ಈ ಅಭಿವೃದ್ಧಿ ತಂತ್ರದ ಹುನ್ನಾರಗಳನ್ನು ಇಲ್ಲಿ ಸಮರ್ಥವಾಗಿ ಸೆರೆಹಿಡಿದಿದ್ದಾರೆ. ಇವರ ''ಕೆಳಗಿನವರು'' ಕತೆ ಕೂಡ ಅರಣ್ಯ ನಾಶದ ಅಮಾನವೀಯ ಪ್ರವೃತ್ತಿಯನ್ನು ವಿವರಿಸುತ್ತದೆ. ಒಂದು ಹಳ್ಳಿಯ ಬದುಕು ಸುಂದರವಾದ ಕಾಡಿನ ಪರಿಸರದ ಮಧ್ಯೆ ವಿನಾಶ ಹೊಂದುವ ಪರಿ ಈ ಕತೆಯಲ್ಲಿದೆ. ಘಟ್ಟದ ಮೇಲಿದ್ದ ಪುಟ್ಟಯ್ಯ ಕೆಳಗಿದ್ದ ಕೆಂಚನ ಗದ್ದೆ ಊರಿನ ಮೇಲೆ ಹೆಬ್ಬಂಡೆಗಳನ್ನು ಉರುಳಿಸಿ ಅಲ್ಲಿಯ ಜನರನ್ನು ಊರು ಬಿಡಿಸುತ್ತಾನೆ. ಪೆದ್ರುವಿನ ತಾಯಿಯೂ ಕೂಡ ಉರುಳಿ ಬಿದ್ದ ಬಂಡೆಯ ಕೆಳಗೆ ಸಾವನ್ನಪ್ಪುತ್ತಾಳೆ. ಇದನ್ನು ಕಂಡು ದುಃಖತಪ್ತನಾಗಿ ಆತನೂ ಘಟ್ಟದ ಮೇಲೆ ಬರುತ್ತಾನೆ. ಈ ಪೆದ್ರುವಿಗೆ ಪುಟ್ಟಯ್ಯ ಸಹಾಯ ಮಾಡುವ ನಾಟಕ ಮಾಡಿ ಆತನಿಗೆ ಮದುವೆ ಮಾಡಿಸಿ ಕಾಡು ಕಡಿಯಲು ಆತನನ್ನು ಬಳಸಿಕೊಳ್ಳುತ್ತಾನೆ. ಪೆದ್ರು ರಾತ್ರಿ ಕಾಡಿನಲ್ಲಿದ್ದಾಗ ಪೆದ್ರುವಿನ ಹೆಂಡತಿಯನ್ನು ಪುಟ್ಟಯ್ಯ ಹಣದ ಆಸೆ ತೋರಿಸಿ ಮೋಹಿಸಿ ಬಿಡುತ್ತಾನೆ. ಪುಟ್ಟಯ್ಯ ಘಟ್ಟದ ಮೇಲಿನ ಎಲ್ಲಾ ಜನರಿಗೆ ಆಧುನಿಕತೆಯ ಸೌಲಭ್ಯಗಳನ್ನು ಒದಗಿಸುವುದರ ಜೊತೆಗೆ ಅವರನ್ನೆಲ್ಲಾ ಕಾಡು ನಾಶದ ಹುನ್ನಾರಕ್ಕೆ ಬಳಸಿಕೊಳ್ಳುತ್ತಾನೆ. ಮೆಲ್ಲನೆ ಅರಣ್ಯ ನಾಶವಾಗುತ್ತಲೇ ಹೋಗುತ್ತದೆ. ಜನ ತಮ್ಮ ಬದುಕಿನ ಬಹುಭಾಗವನ್ನು ಕಾಡಿನಲ್ಲಿಯೇ ಕಳೆಯುತ್ತಾರೆ. ಅವರ ಮಧುರ ದಾಂಪತ್ಯ ಫಲವನ್ನು ಪುಟ್ಟಯ್ಯ ಅನುಭವಿಸುತ್ತಾನೆ.

ಈ ಕತೆಯಲ್ಲಿ ಶ್ರೀಧರ ಬಳಗಾರರು ಮುಖ್ಯವಾಗಿ ಉತ್ತರ ಕನ್ನಡ ಭಾಗದಲ್ಲಿ ನಡೆಯುತ್ತಿರುವ ಅರಣ್ಯ ನಾಶದ ವಿವಿಧ ಮುಖಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹಸಿರು ನಮ್ಮ ಉಸಿರಾಗಬೇಕು ಆ ಹಸಿರನ್ನು ಉಳಿಸುವುದರಿಂದ ಪ್ರಕೃತಿಯಲ್ಲಿ ಅನೇಕ ಬದಲಾವಣೆಗಳು ನಡೆದು ಕಾಲಾನುಕಾಲಕ್ಕೆ ಮಳೆ ಬೆಳೆ ಸಮೃದ್ಧಿಯಾಗಲೂ ಸಾಧ್ಯವಾಗುತ್ತದೆ. ಆದರೆ ನಮ್ಮ ಮಧ್ಯೆ ಈ ಅರಣ್ಯ ಇಲಾಖೆಯ ಲಂಚಗೂಳಿತನ ಭ್ರಷ್ಟ ವಾತವರಣದಿಂದ ಕಾದಿಟ್ಟ ಅರಣ್ಯಗಳು ನಮ್ಮ ಮುಂದೆ ಕಡಿದಿಟ್ಟ ಅರಣ್ಯಗಳಾಗುತ್ತಿರುವುದು ದುರ್ದೈವದ ಸಂಗತಿಯಾಗಿದೆ. ''ಮೊಗಳ್ಳಿ ಗಣೇಶರ' 'ತೋಪು'' ಕತೆ ಇಂದಿನ ಔದ್ಯೋಗಿಕೃತ ಮತ್ತು ಲಾಭ ಬಡುಕ ಸಮಾಜದ ದುರಾಸೆಯಿಂದಾಗಿ ಪರಿಸರ ನಾಶವಾಗುವ ಪರಿಯನ್ನು ಈ ಕತೆ ವಿವರಿಸುತ್ತದೆ. ವಾಸ್ತವದ ಯಥಾರ್ಥ ಜೀವಾನುಭವಗಳನ್ನು ಸಾರುತ್ತಿದ್ದ ಅವರ ಉಳಿದ ಕತೆಗಳಿಂದ ಭಿನ್ನವಾದ ಕತೆಯಿದು. ಈ ಕತೆಯಲ್ಲಿ ತೋಪು ಕೇವಲ ಪರಿಸರದ ಸಂಕೇತವಾಗಿ ಬಾರದೆ ಒಂದು ಸಮಾಜದ ಅದರೊಡನೆ ಹೊಂದಿರುವ ಆಳವಾದಂತ ಭಾವನಾತ್ಮ ಸಂಬಂಧವಾದ ಸಂಕೇತವಾಗಿ ಮೂಡಿ

ಬಂದಿದೆ. ಹಳ್ಳಿಯ ಪ್ರಗತಿಯ ಹೆಸರಿನಲ್ಲಿ ತೋಪನ್ನು ನಾಶಮಾಡಲು ತೊಡಗಿದ ಸುಬ್ಬೆಗೌಡ ಸ್ವಾರ್ಥದ ಬೆನ್ನುಹತ್ತಿದ ಭ್ರಷ್ಟ ರಾಜಕಾರಣಿಯಾಗಿ ಕಾಣುತ್ತಾನೆ. ಪರಿಸರ ನಾಶಕ್ಕೆ ರಾಜಕೀಯ ಪಾತ್ರವನ್ನು ಕತೆ ಸಮರ್ಥವಾಗಿ ಸೂಚಿಸುತ್ತದೆ. ಕತೆಯ ಮತ್ತೊಂದು ಆಯಾಮವೆಂದರೆ ದಲಿತ ಸಮುದಾಯದವರು ತಮ್ಮ ರಕ್ಷಣೆಗಾಗಿ ಸಂಘಕಟ್ಟಿ ಕೊಂಡು ತಾಯವ್ವನ ಹೋಟೆಲ್ಲಿಗೆ ನುಗ್ಗುವುದು. ಅವರ ಕ್ಷುಲ್ಲಕ ಗುಣಗಳನ್ನು ಕತೆಗಾರರು ಸಮರ್ಥವಾಗಿ ಸೆರೆಹಿಡಿದಿದ್ದಾರೆ. ಪರಿಸರ ನಾಶಕ್ಕೆ ಇವರು ಕಾರಣರಾಗಿದ್ದಾರೆ. ಈ ಕತೆಯ ನಿವೇದಕನಿಗೆ ಬಾಲ್ಯದ ನೆನಪುಗಳ ಸಂಕೇತವಾಗಿ ತೋಪು ಕಾಣಿಸಿಕೊಳ್ಳುತ್ತದೆ. ಆ ಯುವಕರ ಚಟುವಟಿಕೆಗಳಲ್ಲಿ ಒಲ್ಲದ ಮನಸ್ಸಿನಿಂದ ಪಾಲುಗೊಳ್ಳುವ ಕತೆಗಾರ ಅವರ ಪರಿಸ್ಥಿತಿಯನ್ನು ನಿಯಂತ್ರಿಸಲು ಅವನಿಂದ ಸಾಧ್ಯವಾಗುವುದಿಲ್ಲ. ಈ ಕತೆಯಲ್ಲಿ ಮೊಗಳ್ಳಿಯವರು ಇಂದಿನ ಪರಿಸರ ನಾಶಕ್ಕೆ ತೋಪು ನಾಶಕ್ಕೆ ಯುವ ಶಕ್ತಿಯಲ್ಲಿರುವ ಅಜ್ಞಾನ ಅಂಧಕಾರ ಹಣದ ದುರಾಶೆಗಳನ್ನು ಈ ಕತೆಯ ಮೂಲಕ ವಿವರಿಸಿದ್ದಾರೆ. ಈ ಎಲ್ಲಾ ನಾಶದ ವಿಕೃತಿಗಳನ್ನು ತಡೆಗಟ್ಟಲು ಒಂದು ಸಮಯ ಬಂದೇ ಬರುತ್ತದೆಂದು ತಿಳಿಸುತ್ತಾರೆ. ಮೂಲತಃ ದಲಿತ ಜನಾಂಗದ ನೋವುಗಳನ್ನಿಟ್ಟುಕೊಂಡು ಕತೆ ಬರೆಯುವ ಮೊಗಳ್ಳಿ 'ತೋಪು' ವಿನಂತ ಕತೆಯಲ್ಲಿ ಅರಣ್ಯ ಪರಿಸರ ನಾಶದ ಹಿಂದೆ ನಡೆಯುವ ಪಟ್ಟಭದ್ರ ಹಿತಾಶಕ್ತಿಗಳ ಹುನ್ನಾರಗಳನ್ನು ಇಲ್ಲಿ ಕತೆಯಾಗಿಸಿದ್ದಾರೆ.

ಬಳ್ಳಾರಿ ಸೀಮೆಯ ಬುದುಕನ್ನು ಮಲ್ಲಿಕಾರ್ಜುನ ವಣೇನೂರರ ''ಬುತ್ತಿಯ ಬಟ್ಟಲು'' ಕತೆ ವಿಶ್ಲೇಷಣೆಗೆ ಒಡ್ಡುತ್ತದೆ. ಗಣಿಗಾರಿಕೆಯಿಂದ ಪರಿಸರನಾಶವಾಗುವುದರ ಜೊತೆಗೆ ಒಕ್ಕಲು ಮಕ್ಕಳ ಬದುಕು ವಿನಾಶ ಹಂಚಿಕೆ ತಲುಪಿರುವುದನ್ನು ಹೇಳುತ್ತಾರೆ. ಈ ಕತೆಯ ನಾಯಕನಾದಂತ ಮಲಿಯ ಗಣಿಗಾರಿಕೆಯಲ್ಲಿ ಶ್ರಮಜೀವಿಯಾಗಿ ಬದುಕು ಕಟ್ಟಿಕೊಳ್ಳುತ್ತಿದ್ದವನು. ಜೊತೆಗೆ ಗಣಿಗಾರಿಕೆಯ ಅಪಾಯ ಇಲ್ಲಿ ಕಾಣಿಸಿಕೊಂಡಿದೆ. ''ಮೊನ್ನೆ ಸಂಡೂರು ಮೈನ್ಸನಾಗ ಇಬ್ರು ಅಲ್ಲೆ ಅದೇ ಜಾಗದ್ದಾಗೇ ಚಟ್ನಾದ್ರಂತೆಪೋ..''[೨೫] ಎನ್ನುವ ಮಲಿಯ ಮನೆಯವ ಒತ್ತಾಯಕ್ಕೆ ಮೈನ್ಸ್‌ನಲ್ಲಿಯ ಕೆಲಸಕ್ಕೆ ಅಂಟಿಕೊಂಡವನು ಅನೇಕ ದುರಂತಗಳಿಗೆ ಈಡುಮಾಡಿದ ಈ ಗಣಿಗಾರಿಕೆ ಅಪಾರ ಹಣ ಬರುತ್ತದೆಂಬ ಆಸೆಯಿಂದ ಅನೇಕ ಒಕ್ಕಲು ಮಕ್ಕಳು ಈ ಬದುಕಿಗೆ ಆಕರ್ಷಿಸಲ್ಪಟ್ಟಿದ್ದಾರೆ. ಇದ್ದಕ್ಕಿದ್ದಂತೆ ಈ ಗಣಿಗಾರಿಕೆ ನಿಂತು ಹೋಗುತ್ತದೆ. ನಂತರ ಮಲಿಯ ಬೆಟ್ಟದ ಪಕ್ಕದಲ್ಲಿದ್ದ ಹೊಲಕ್ಕೆ ಬಾವಿ ತೋಡಿಸಿ ಪಂಪ್ ಸೆಟ್ ಕೂಡಿಸಿ, ಮೆಣಸಿನಕಾಯಿ, ಮೆಕ್ಕೆಜೋಳ, ಬೀಜ ಊರಿಸಿ ಹೊಲದ ಸುತ್ತ ಬೇಲಿ ಹಾಕಿಸಿ ರೈತನಾಗಿ ಬೆಳೆ ಬೆಳೆಯುವ ಕನಸು ಕಂಡವನು. ಮಲಿಯನ ಹೆಂಡತಿಗೆ ಹೊಲ ಮಾಡುವುದಕ್ಕಿಂತ ಅಧಿಕ ಹಣ ಬರುವ ಮೈನ್ಸ್‌ನಲ್ಲಿ ದುಡಿಯುವುದೇ ಇಷ್ಟವಾಗಿರುತ್ತದೆ. ಮಳೆ ಸರಿಯಾದ ಸಮಯಕ್ಕೆ ಬಾರದೇ ಹೋದಾಗ ನೀರಿನ ತೊಂದರೆಯಾಗುತ್ತದೆ. ದನಗಳಿಗೆ ಮೇವಿನ ತೊಂದರೆಯಾಗಿ ಮಲಿಯನ ಮೆಣಸಿನಕಾಯಿ ಗಿಡಗಳನ್ನು ದನಗಳು ತಿನ್ನ ತೊಡಗುತ್ತವೆ. ಇದರಿಂದ ವ್ಯಾಘ್ರಗೊಂಡ ಮಲಿಯ ಮೇಟಿ ತಿಮ್ಮಪ್ಪನ ಎಮ್ಮೆಗೆ ಬಾಣದ ಸರವನ್ನು ಕಟ್ಟಿ ಊರಲ್ಲಿ ಓಡಿಸಿಬಿಡುತ್ತಾನೆ. ಆ ಎಮ್ಮೆ ಚಿಲ್ಲರೆಕಾಸಿನ ರೌಡಿಯಾಗಿದ್ದ ದುಬ್ಬು ಸುಂಕನನ್ನು ಹಾಯ್ದು ಕೆಡವಿ ಬಿಡುತ್ತದೆ. ಇದು ಊರಲ್ಲಿ ಸುದ್ದಿಯಾಗಿ ದುಬ್ಬು ಸುಂಕನ ಪರಿವಾರದವರು ಮಲಿಯನ್ನು ತಳಿಸುತ್ತಾರೆ.

ಬಡಿತದ ಗಲಾಟೆಯಲ್ಲಿ ಮಲಿಯನ ಬುತ್ತಿಯ ಬಟ್ಟಲು ನೆಲಕ್ಕೆ ಬಿದ್ದು ಜನರ ತುಳಿತದಲ್ಲಿ ಕಣ್ಮರೆಯಾಗುತ್ತದೆ. ಇಲ್ಲಿ ಮಲಿಯನ ಬುತ್ತಿಯ ಬಟ್ಟಲು ಕಣ್ಮರೆ ಒಕ್ಕಲು ಮಗನ ಬೆಳೆಯ ಕನಸಿನ ಕಣ್ಮರೆಯೂ ಆಗಿದೆ. ಪಾಪಿನಾಯಕನ ಹಳ್ಳಿಯ ಜನ ಗಣಿ ಕೆಲಸ ಬಿಟ್ಟು ವ್ಯವಸಾಯಕ್ಕೆ ನಿಂತ ಮಲಿಯನನ್ನು ಅಪಹಾಸ್ಯ ಮಾಡುತ್ತಾರೆ. ಮಳೆ ಬಾರದೇ ಹೋಗುತ್ತದೆ. ಊರಿಗೆ ಕುಡಿಯುವ ನೀರಿಗೂ ಬರಬರುತ್ತದೆ. ಇಂದೆಲ್ಲಾ ಸವೆದು ಹೋಗುತ್ತಿರುವ ಬೆಟ್ಟ ಅರಣ್ಯ

ಮುಂತಾದ ಪರಿಸರ ನಾಶದ ಕಾರಣಗಳೇ ಆಗಿವೆ. ಇದಕ್ಕಾಗಿ ಊರಿನಲ್ಲಿ ಊರಮ್ಮನಿಗೆ ದ್ಯಾವರು ಮಾಡುವ ಸಿದ್ಧತೆಯೂ ನಡೆಯುತ್ತದೆ. ಈ ಎಲ್ಲಾ ಸಂಕಟಗಳ ಮಧ್ಯೆ ಮೋಡ ಕಟ್ಟಿ ಕುಂಭ ದ್ರೋಣ ಮಳೆ ಸುರಿಯ ತೊಡಗುತ್ತದೆ. ಮಲಿಯ ಮಳೆಯಲ್ಲಿ ಹುಚ್ಚನಂತೆ ಕುಣಿಯತೊಡಗುತ್ತಾನೆ. ಆತನಿಗೆ ಕಳೆದುಹೋದ ಬುತ್ತಿಯ ಬಟ್ಟಲು ನೆನಪಾಗುತ್ತದೆ. ಅದನ್ನೆ ಸ್ಮರಿಸುತ್ತಾ ಕುಣಿಯತೊಡಗುತ್ತಾನೆ. ಈ ಕತೆಯಲ್ಲಿ ವಣೇನೂರರು ಇಂದಿನ ಔದ್ಯೋಗಿಕ ಪ್ರಗತಿಯ ಸಂದರ್ಭದಲ್ಲಿ ಪರಿಸರವನ್ನು ನಾಶಮಾಡುವ ಗಣಿಗಾರಿಕೆ ಅದರಿಂದ ಜನ ಸಾಮಾನ್ಯರ ಬದುಕಿನಲ್ಲಿ ಉಂಟಾಗುವ ಏರುಪೇರುಗಳು, ಪುಟ್ಟ ಹಳ್ಳಿಯ ಪರಿಸರದ ಮೇಲಾಗುವ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳನ್ನು ಚರ್ಚೆಗೆ ಒಡ್ಡಿದ್ದಾರೆ.

ಇಂದಿನ ವ್ಯವಸ್ಥೆಯಲ್ಲಿ ಅರಣ್ಯ ನಾಶ ಮಾಡುವವರು ಹಲವರಾದರೆ, ಶಿಕ್ಷೆಗೆ ಒಳಗಾಗುವವರು ಮತ್ತಾರೋ ಆಗಿರುತ್ತಾನೆ. ಶ್ರೀಧರ ಬಳಗಾರರ ''ಸುಧಾಮ'' ಕತೆಯಲ್ಲಿ ಮನುಷ್ಯ ತಾನು ಬದುಕುತ್ತಿರುವ ಸುತ್ತಣ ಹಸಿರಾದ ಪರಿಸರವನ್ನು ಸದಾ ಜೀವಂತವಾಗಿಟ್ಟುಕೊಳ್ಳಬೇಕೆಂಬ ನಿಲುವು ಇಲ್ಲಿ ವ್ಯಕ್ತವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಜನನಿ ಬಿಡವಾದ ಅರಣ್ಯ ಪ್ರದೇಶಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಬಂದ ಸದಾಶಿವ ಮೂಲತಃ ಅದೇ ಪ್ರದೇಶದವನು. ತನ್ನೂರಿಗೆ ಬಂದ ಆತ ಬಾಲ್ಯದ ಗೆಳೆಯನಾದ ಸುಧಾಮನ ಬಗ್ಗೆ ಪೂರ್ವ ವಿವರಗಳನ್ನು ಶೋಧಿಸತೊಡಗುತ್ತಾನೆ. ಅಲ್ಲಿಯ ದಟ್ಟವಾದ ಕಾಡು ಸದಾ ಕಾಡಿನಲ್ಲಿಯ ಬಗೆ ಬಗೆ ಗಿಡಮರಗಳ ಬಗ್ಗೆ ಅವಿನಾಭಾವ ಸಂಬಂಧವಿಟ್ಟುಕೊಂಡ ಸುಧಾಮ ಅರಣ್ಯದಲ್ಲಿಯೇ ಬದುಕಿನ ಬಹು ಭಾಗವನ್ನು ಕಳೆದವನಾಗಿರುತ್ತಾನೆ. ಸದಾ ಕಾಡಿನಲ್ಲಿ ತಿರುಗುತ್ತಿದ್ದ ಈ ಸುಧಾಮನ ಮೇಲೆ, ಅರಣ್ಯ ನಾಶಕ್ಕೆ ನಿಂತ ಪಟ್ಟಭದ್ರ ಹಿತಾಶಕ್ತಿಗಳು ಹೊಸ ಆರೋಪವನ್ನು ಹೊರಿಸಿ ತಪ್ಪಿತಸ್ಥರನ್ನಾಗಿ ಮಾಡಿ ಗಡಿಪಾರು ಮಾಡಿಸಿಬಿಟ್ಟಿರುತ್ತಾರೆ. ಬಯಲು ಸೀಮೆಯಲ್ಲಿದ್ದ ತನ್ನ ಮಗಳು ಸುನಾಮಳ ಮನೆಯಲ್ಲಿ ತಲೆಮರೆಸಿಕೊಂಡು ಸುಧಾಮನಿರುತ್ತಾನೆ. ಈತನನ್ನು ಹುಡುಕಿಕೊಂಡು ಬರುವ ಸದಾಶಿವಗೆ, ಬೈರಾಗಿಯಂತೆ ಗಡ್ಡ ಬಿಟ್ಟುಕೊಂಡು ಮನೆಯ ಮೂಲೆಯಲ್ಲಿ ಕೂತಿದ್ದ ಆತನ ಬಗ್ಗೆ ಕನಿಕರ ಬರುತ್ತದೆ. ವನವಾಸಿಯಾದ ಈತನನ್ನು ರಕ್ಷಿಸಿ ಮತ್ತೆ ಈ ಸುಧಾಮನನ್ನು ಸುಂದರ ಕಾಡಿನ ಮಧ್ಯೆ ಬಿಡುತ್ತಾನೆ. ಅರಣ್ಯದಲ್ಲಿದ್ದ ಬಗೆ ಬಗೆಯ ಹಕ್ಕಿಗಳ ಝೇಂಕಾರಕ್ಕೆ ಮಾರು ಹೋಗಿ ಜಡವಾಗಿದ್ದ ಸುಧಾಮ ಹಸಿರು ಪರಿಸರದ ಮಧ್ಯೆ ಹೊಸ ಚೈತನ್ಯವನ್ನು ತುಂಬಿಕೊಂಡು ಗದ್ದೆ ಬಯಲಿನಲ್ಲಿ ಮರಹಕ್ಕಿಗಳನ್ನು ಬೆನ್ನಟ್ಟಿ ಓಡತೊಡಗುತ್ತಾನೆ. ಒಂದು ರೀತಿಯಲ್ಲಿ ಕಾರ್ವಾಲೋ ಕಾದಂಬರಿಯ ಮಂದಣ್ಣನಂತೆ ಕಾಣುವ ಸುಧಾಮ ಅನನ್ಯವಾದ ನಿಸರ್ಗ ಪ್ರೇಮವುಳ್ಳವನು. ವಿನಾಕಾರಣ ಶಿಕ್ಷೆಗೆ ಒಳಪಟ್ಟವನು. ಯಾರೋ ಮಾಡಿದ ಅರಣ್ಯ ನಾಶಕ್ಕೆ ಈತ ಕೈಗೊಂಬೆಯಾಗಿ ಬಳಕೆಯಾಗಿರುವುದು ಇಂದಿನ ದುರಂತವಾಗಿದೆ. ಸುಧಾಮ ಕತೆ ಉತ್ತರಕನ್ನಡ ಜಿಲ್ಲೆಯ ಅರಣ್ಯ ನಾಶದ ಹಿಂದಿನ ಒಳಮುಖಗಳನ್ನು ಅನಾವರಣಗೊಳಿಸುವ ಜೊತೆಗೆ ಸುಧಾಮನ ನಿಸರ್ಗ ಪ್ರೇಮವನ್ನು ಈ ಕತೆ ಚರ್ಚೆಗೆ ಒಳಪಡಿಸುತ್ತದೆ.

ಈ ನಿಟ್ಟಿನಲ್ಲಿ ಯೋಚಿಸಬೇಕಾದ ಬಿದರಹಳ್ಳಿ ನರಸಿಂಹಮೂರ್ತಿಯವರ ''ಜೀವ ಹಂಸ'' ವಿಶಿಷ್ಟವಾದ ಕತೆ. ಅರಣ್ಯ ನಾಶದ ವಿವರ, ಅರಣ್ಯದಲ್ಲಿಯ ಜೀವ ಸಂಕುಲ ಪರವಾದ ನಿಲುವು ಈ ಕತೆಯ ಜೀವದ್ರವ್ಯವಾಗಿದೆ. ರಕ್ಷಿತಾರಣ್ಯದ ಸ್ಮಶಾನ ಮೌನದಿಂದ ಕತೆ ಆರಂಭಗೊಳ್ಳುತ್ತದೆ. ''ಅರಣ್ಯದ ಸಿಂಹಧಾಮದಲ್ಲಿದ್ದ ಒಂದು ಸಿಂಹ ತಪ್ಪಿಸಿಕೊಂಡು ರಂಗ ಮತ್ತು ಬಿಲ್ಲಾನ ಮೇಲೆ ಆಕ್ರಮಣಮಾಡಿ ರಂಗನ ದೇಹವನ್ನು ಬಗೆದು ತಿಂದು ಬಿಲ್ಲಾನ

ದೇಹವನ್ನು ರಕ್ತ ಸಿಕ್ತಗೊಳಿಸಿ ಸೆರೆಯಿಂದ ಹೊರ ಬಂದು ಹಸಿರು ಅರಣ್ಯದ ಮಧ್ಯೆ ಸ್ವಚ್ಛೆಯಾಗಿ ಹಂಸ ಪಕ್ಷಿಯಂತೆ ಅಲೆಯು ತೊಡಗುತ್ತದೆ. ಶಹರ, ಕಾಡು ನದಿ ಮೂಲಗಳಲ್ಲಿ ಹೆಜ್ಜೆ ಹಾಕ ತೊಡಗುತ್ತದೆ. ಕ್ರೂರಿಯಾದ ವ್ಯಾಘ್ರವಾದ ಸಿಂಹ ಪ್ರಕೃತಿಯ ಎಲ್ಲಾ ಬದಲಾವಣೆಗಳಿಗೆ ಜೀವ ಚೈತನ್ಯಗಳಿಗೆ ಸ್ಪಂದಿಸುತ್ತಲೇ ಸಾಗತೊಡಗುತ್ತದೆ.''[೫೫] ಶಹರದ ಹೊರ ವಲಯವನ್ನು ದಾಟಿ ಸಿಂಹವು ಆದಿ ರಂಗಪ್ಪನ ಗುಡಿಯ ಹಸಿರು ತೋಪಿನಲ್ಲಿ ನಡೆದಾಡತೊಡಗುತ್ತದೆ. ಆ ತೋಪಿನಲ್ಲಿ ಗವಾಯಿಯೊಬ್ಬ ಹಣತೆ ಹಚ್ಚಿಕೊಂಡು ತಲ್ಲೀನನಾಗಿ ಹಾಡುತ್ತಿದ್ದ ಸಂಗೀತಕ್ಕೆ ಸಿಂಹ ತಲೆದೂಗುತ್ತದೆ. ಆತನ ಗಾನಲಹರಿಗೆ ಸಿಂಹದಲ್ಲಿದ್ದ ಕ್ರೌರ್ಯ ಶಮನವಾಗುತ್ತದೆ. ತದನಂತರ ಸಿಂಹ ತುಂಗಾ ನದಿ ಮೂಲದ ಕಾಡಿಗೆ ಬರುತ್ತದೆ. ಮುಂದೆ ತೀರ್ಥಹಳ್ಳಿಯ ನಿಸರ್ಗ ರಮಣೀಯತೆಯ ಮರಳ ಗಂಗೆಯ ತೀರದಲ್ಲಿ ತೇಲಿ ಬಂದ ಮರದ ಬೊಡ್ಡೆಯೊಂದಿಗೆ ಸಂಭಾಷಿಸುವುದು ಮರದ ಬೊಡ್ಡೆಯಿಂದ ಕಾಡು ನಾಶದ ಕತೆ ಕೇಳಿದ ಸಿಂಹ ಮರಗಳ್ಳರಿಗೆ ತಕ್ಕ ಪಾಟ ಕಲಿಸಲು ಯೋಚಿಸುತ್ತದೆ. ಪರಿಸರ ನಾಶವನ್ನು ತಡೆಗಟ್ಟಬೇಕೆಂಬ ದೃಢ ಸಂಕಲ್ಪದೊಂದಿಗೆ ಸಿಂಹವು ಹಂಸ ನಡಿಗೆಯಲ್ಲಿ ಗಂಗಡಿ ಕಲ್ಲುಗುಡ್ಡದ ನೆತ್ತಿಗೆ ಬರುತ್ತದೆ. ಅಲ್ಲಿ ವಿದೇಶಿ ಕಂಪನಿಗಳು ಗುಡ್ಡವನ್ನು ಖನಿಜಕ್ಕಾಗಿ ನೆಲ ಸಮಮಾಡಲು ನಿಂತಿರುವುದು ತಿಳಿದು ಸಿಂಹವು ದುಃಖಪಡುತ್ತದೆ. ವ್ಯಾಘ್ರವಾಗಿ ಧ್ವನಿಮಾಡಿ ಅವರನ್ನು ದಿಕ್ಕಾಪಾಲು ಮಾಡುತ್ತದೆ.

ಪ್ರಕೃತಿನಾಶದಿಂದ ನೀರ ಸೆಲೆ ಬತ್ತಿಹೋಗಿ ತುಂಗಾ ಭದ್ರಾ, ಶರಾವತಿ, ನೇತ್ರಾವತಿ ನದಿಗಳು ಬತ್ತಿಹೋಗಿ ಅಪಾಯದ ಅಂಚು ತಲುಪಿದ್ದನ್ನು ಕತೆ ನಿರೂಪಿಸುತ್ತದೆ. ಇಲ್ಲಿ ಸಿಂಹ ಪರಿಸರವನ್ನು ಕಾಪಾಡುವ ಶಕ್ತಿಯಾಗಿದೆ. ಪರಿಸರವಾದಿಗಳು ಒತ್ತಡದಿಂದ ಸಿಂಹವನ್ನು ಗಂಗಡಿ ಕಲ್ಲಿನ ಕಾಡಿಗೆ ಕಳುಹಿಸಿದ್ದ ಕಾರಣದಿಂದ ಕಾಡು ಮತ್ತು ಅಲ್ಲಿಯ ಜೀವದಾತುಗಳಾದ ಮರಗಿಡ ಪ್ರಾಣಿ ಪಕ್ಷಿಗಳಿಗೆ ರಕ್ಷಣೆ ದೊರೆತಂತಾಗಿ ದುಷ್ಟ ಮಾನವರ ಅಟ್ಟಹಾಸ ನಿಂತುಬಿಡುತ್ತದೆ. ಪರಿಸರ ನಾಶವೂ ನಿಲ್ಲುತ್ತದೆ.

ಈ ಕತೆಯ ಮೂಲಕ ಬಿದರಹಳ್ಳಿ ನರಸಿಂಹ ಮೂರ್ತಿಯವರು ಅರಣ್ಯ ನಾಶದ ವಿವರ, ಜೀವ ಸಂಕುಲದ ಅಳಿವು ಉಳಿವು ಜೊತೆಗೆ ಗುಡ್ಡ ಬೆಟ್ಟಗಳನ್ನು ಖನಿಜಕ್ಕಾಗಿ ಅಗೆಯುವುದು, ಜೀವ ನದಿಗಳು ಬತ್ತಿಹೋಗುವ ಕಾರಣಗಳು ಈ ಎಲ್ಲಾ ಪರಿಸರ ಅರಣ್ಯ ನಾಶವನ್ನು ತಡೆಗಟ್ಟಿ ಹೊಸ ಬದುಕು ರೂಪಿಸಬೇಕೆಂಬ ಕಾಳಜಿ ವ್ಯಕ್ತಪಡಿಸಿದ್ದಾರೆ. ಕತೆಯ ಶೈಲಿ ಕಾವ್ಯಮಯವಾಗಿದ್ದು ಬಹು ಕಾಲ ಮನದಂಗಳದಲ್ಲಿ ಅಚ್ಚೊತ್ತಿದಂತೆ ನಿಲ್ಲುತ್ತದೆ. ತುಂಗಾ ಮೂಲ ಉಳಿಸಿ ಚಳುವಳಿಗೆ ಮುಖಾಮುಖಿಯಾಗಿ ಪರಿಸರ ಕಾಳಜಿಯನ್ನಿಟ್ಟುಕೊಂಡ ಈ ಕತೆ ಪರಿಸರದ ಸಂರಕ್ಷಣೆಯ ಮೂಲ ಮಂತ್ರವನ್ನು ದಾಖಲಿಸುತ್ತದೆ.

**೭.೫. ಜಲ ಸಮಸ್ಯೆ**

ನವವಸಾಹತುಶಾಹಿ ಸಂದರ್ಭದಲ್ಲಿ ಹುಟ್ಟಿಕೊಂಡ ಅನೇಕ ಸಮಸ್ಯೆಗಳಿಗೆ ಸಾಂಸ್ಕೃತಿಕ ಬದುಕು ಛಿದ್ರಗೊಳ್ಳತೊಡಗಿತು. ಆ ಸಂದರ್ಭದಲ್ಲಿ ಕನ್ನಡದ ಕತೆಗಾರರು ಸ್ಪಂದಿಸಿದ ರೀತಿ ಅನನ್ಯವಾದದ್ದು. ನವ್ಯೋತ್ತರ ಕಾಲಘಟ್ಟದ ಹಿರಿಯ ಮತ್ತು ಕಿರಿಯ ಕತೆಗಾರರು ನಮ್ಮ ಸುತ್ತ ಉಲ್ಬಣಿಸುತ್ತಿದ್ದ. ಸಾಮಾಜಿಕ ಸ್ಥಿತ್ಯಂತರಗಳಿಗೆ ಭಾಷೆಯ ಮೂಲಕ ಹೊಸ ಆಲೋಚನೆಯ ಕತೆಗಳನ್ನು ಕಟ್ಟಿದರು. ಪರಿಸರ ಸಮಸ್ಯೆಯ ಜೊತೆಗೆ, ಹೊಸ ಹೊಸ ಅಭಿವೃದ್ಧಿ ಯೋಜನೆಯಿಂದ ಬದುಕಿನಲ್ಲಾಗುವ ಏರು ಪೇರುಗಳಿಗೆ ಅನೇಕ ಸಮಸ್ಯೆಗಳು ಸೃಷ್ಟಿಯಾದವು. ಇಂತಹ ಸಂದರ್ಭದಲ್ಲಿ ಸೃಷ್ಟಿಯಾದ ಪರಿಹಾರ ಕಾಣದೆ ಉಳಿದ ಸಮಸ್ಯೆಗಳಲ್ಲಿ ನೀರು ಮತ್ತು ನೀರಾವರಿ ಸಮಸ್ಯೆಯೂ

ಒಂದು. ನಾಡು ಸ್ವತಂತ್ರಗೊಂಡು ಅರ್ಧಶತಮಾನ ಕಳೆದರು ಈ ಜಲ ವಿವಾದ ಸಮಸ್ಯೆಗಳು ಪರಿಹಾರ ಕಾಣದೇ ಹಾಗೇ ಜೀವಂತವಾಗಿದೆ. ಇದರಿಂದ ರಾಜ್ಯದ ಪ್ರಗತಿಗೂ ತೊಡಕಾಗಿದೆಯೆಂದರೆ ತಪ್ಪಾಗಲಾರದು. ದಕ್ಷಿಣ ಭಾರತದಲ್ಲಿ ಎಲ್ಲರೂ ಪೂಜಿಸುವ ಕಾವೇರಿ ನದಿ ವಿವಾದ ಕಳೆದೆರಡು ದಶಕಗಳಿಂದ ಕರ್ನಾಟಕ ತಮಿಳುನಾಡು ರಾಜ್ಯಗಳಲ್ಲಿ ಕಲಹಗಳನ್ನೆ ಸೃಷ್ಟಿಮಾಡುತ್ತಿದೆ. ಈ ಜಲವಿವಾದ ಸಮಸ್ಯೆಯ ಜೊತೆಗೆ ನಾಡಿನ ಕೃಷ್ಣ, ಭೀಮಾ, ಮಹಾದಾಯಿ ನದಿ ನೀರಿನ ಸಮಸ್ಯೆಗಳೂ ರಾಜ್ಯರಾಜ್ಯಗಳ ನಡುವೆ ಸೃಷ್ಟಿಯಾಗಿರುವದನ್ನು ಚರಿತ್ರೆ ತಿಳಿಯಪಡಿಸುತ್ತದೆ. ಜೊತೆಗೆ ನಿಸರ್ಗ ವಿಕೋಪಗಳಿಂದ ಕಾಲಾನುಕಾಲಕ್ಕೆ ಮಳೆ ಸುರಿಯದೆ ಹೋಗಿ ನೀರಾವರಿ ಸಮಸ್ಯೆಯ ಜೊತೆ ಗ್ರಾಮೀಣ ಮತ್ತು ನಗರ ಭಾಗದಲ್ಲಿ ಕುಡಿಯುವ ನೀರಿನ ಸಮಸ್ಯೆಯೂ ಎಲ್ಲೆಡೆ ಬೃಹದಾಕಾರವಾಗಿ ಬೆಳೆದು ನಿಂತಿರುವಂತದ್ದು ಕಾಣಬಹುದಾಗಿದೆ.

ಕಾವೇರಿ ನದಿ ನೀರಿನ ಸಮಸ್ಯೆ ಸಾವಿರಾರು ವರ್ಷಗಳಷ್ಟು ಹಳೆಯದು. ಕಾವೇರಿ ನೀರನ್ನು ತಮಿಳುನಾಡು ಸಿಂಹಪಾಲು ಪಡೆಯುತ್ತಲೇ ಇದೆ. ಇದಕ್ಕೆ ಅನೇಕ ಕಾರಣಗಳಿವೆ. ಹಾಗೇ 'ಕೃಷ್ಣ ಕಣಿವೆ ಜಲ ಸಮಸ್ಯೆ' ಮತ್ತೊಂದು ರೀತಿಯದು. ಮೊದಲ ಪಂಚವಾರ್ಷಿಕ. ಯೋಜನೆಯಲ್ಲಿ ವಿದ್ಯುತ್ ಮತ್ತು ನೀರಾವರಿಗೆ ಆಧ್ಯತೆ ನೀಡಿದಂತೆ ಕೇಂದ್ರ ಸರಕಾರವು ಕೃಷ್ಣ-ಗೋದಾವರಿ ನದಿಗಳ ಪಾತ್ರಗಳ ರಾಜ್ಯಗಳಿಗೆ ಪತ್ರಬರೆದು ನದಿ ನೀರಿನ ಬಳಕೆಗೆ ಯೋಜನೆ ಸಿದ್ಧ ಪಡಿಸಿದ ನಂತರ ಅನೇಕ ಪ್ರಶ್ನೆಗಳು ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳ ನಡುವೆ ಸೃಷ್ಟಿಯಾದವು ಅನಂತರದ ಬೆಳವಣಿಗೆಯಲ್ಲಿ ''೧೯೬೯ ಕೃಷ್ಣ ಜಲವಿವಾದ ಮಂಡಳಿ ರಚನೆಗೊಂಡು ಕರ್ನಾಟಕ-ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶಗಳು ಎಷ್ಟೇಷ್ಟು ಟಿ.ಎಂ.ಸಿ ನೀರನ್ನು ಬಳಸಿಕೊಳ್ಳಬೇಕೆಂದು ತೀರ್ಮಾನಿಸಿತು. ೧೯೭೩ರಲ್ಲಿ ಬಚಾವತ್ ಆಯೋಗ ನೀರು ಹಂಚಿಕೆ ವಿಷಯದಲ್ಲಿ ತನ್ನ ತೀರ್ಪನ್ನು ನೀಡಿತು.''[೨] ಈ ಬಚಾವತ್ ತೀರ್ಪಿನಿಂದ ಕರ್ನಾಟಕಕ್ಕೆ ಅನೇಕ ರೀತಿ ಅನ್ಯಾಯಗಳು ಸಮಸ್ಯೆಗಳು ತಲೆದೋರಿದವು ಈ ತೀರ್ಪಿನಿಂದ ಆಂಧ್ರಕ್ಕೆ ಹೆಚ್ಚುವರಿ ನೀರನ್ನು ಬಿಡಲಾಯಿತು. ಶೇಖರಣಾ ಪ್ರಮಾಣಕ್ಕೆ ಅನುಗುಣವಾಗಿ ನೀರನ್ನು ಹಂಚದೆ, ಬೇರೆ ಬೇರೆ ಸಾಂಸ್ಕೃತಿಕ ರಾಜಕಾರಣಗಳ ಆಶಯಗಳಿಗೆ ನುಗುಣವಾಗಿ ಹಂಚಿ, ಧಾರವಾಡ, ಚಿತ್ರದುರ್ಗದಂತಹ ಕ್ಷಾಮ ಪೀಡಿತ ಜಿಲ್ಲೆಗಳ ಹಿತಾಶಕ್ತಿಗೆ ಮಾರಕವಾಗುವ ರೀತಿಯಲ್ಲಿ ತುಂಗಭದ್ರ ನೀರಿನ ಮೇಲೆ ಮಿತಿಯನ್ನು ಹೇರಿರುವುದನ್ನು ಸಹ ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಬಚಾವತ್ ತೀರ್ಪನ್ನು ಪುನಃ ವಿಮರ್ಶೆಗೆ ಒಳಪಡಿಸುವವರೆಗೂ ಆಂಧ್ರ ತನ್ನ ಪಾಲಿನ ನೀರಿನ ಜೊತೆಗೆ ಹೆಚ್ಚುವರಿ ನೀರನ್ನು ಬಳಸಬಹುದೆಂದು ಹೇಳಿದ್ದರ ಪರಿಣಾಮ ಆಂಧ್ರ ತೆಲುಗು ಗಂಗಾ ಯೋಜನೆ ರೂಪಿಸಿ ದೊಡ್ಡ ನಾಲೆಗಳನ್ನು ನಿರ್ಮಿಸಿ ವಿವಾದ ಉಂಟುಮಾಡಿರುವುದು ಇಂದು ಇತಿಹಾಸವಾಗಿದೆ.

ಕಾವೇರಿ ಮತ್ತು ಕೃಷ್ಣ ಜಲ ಸಮಸ್ಯೆಯ ಜೊತೆಗೆ ಗೋವೆಯೊಡನೆ ಮಹಾದಾಯಿ ನದಿ ನೀರಿನ ಹಂಚಿಕೆಯ ವಿಷಯದಲ್ಲಿ ಪರಗೋಡು ಬಳಿ ಪೀಡರ್ ಕಾಲುವೆ ತೋಡಿಸಿ ಆಂಧ್ರ ಸೃಷ್ಟಿಸಿದ ಗದ್ದಲ ಜೊತೆಗೆ ಚಿತ್ರಾವತಿ ನದಿಗೆ ಕಟ್ಟಿದ ಬ್ಯಾರೇಜ್‌ಗೆ ಆಂಧ್ರ ಅಡ್ಡಿಯಾಗಿರುವುದು, ಇದರಾಚೆಗೆ ಮತ್ತೊಂದು ಸುದ್ದಿಯೆಂದರೆ ಮಹಾರಾಷ್ಟ್ರ ಬಚಾವತ್ ತೀರ್ಪನ್ನು ಗಾಳಿಗೆ ತೂರಿ ಏಷ್ಯ ಖಂಡದಲ್ಲೆ ಅತಿದೊಡ್ಡದಾದ ೨೫ ಕಿ.ಮೀ. ಉದ್ದ ಭೀಮಾ ಸೀನಾ ನದಿ ಜೋಡಣೆಗೆ ಕಾಲುವೆ ನಿರ್ಮಿಸಿರುವುದು ಮತ್ತೊಂದು ಸಮಸ್ಯೆಗೆ ಕಾರಣವಾಯಿತು. ನದಿನೀರಿನ ಸಮಸ್ಯೆಯ ಜೊತೆಗೆ ಮೈಸೂರು ಮಂಡ್ಯ ನಡುವೆ ವರುಣಾನಾಲೆ, ಹಾಸನ ತುಮಕೂರು ನಡುವೆ ಬಾಗೂರು ನವಿಲೆ ವಿವಾದಗಳು, ಅಂತರ ಜಿಲ್ಲಾ ನೀರಿನ ಸಮಸ್ಯೆಗಳಾಗಿರುವಂತದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಹೀಗೆ ನವವಸಾಹತುಶಾಹಿ ಸಂದರ್ಭದಲ್ಲಿ ರಾಜ್ಯ ರಾಜ್ಯಗಳ ಮಧ್ಯೆ ಹೊಂದಾಣಿಕೆ ಮನೋಭಾವಕ್ಕೆ ಕೊರತೆಯುಂಟಾಗಿದೆ. ಅನೇಕ ಸಮಿತಿಗಳ ತೀರ್ಪುಗಳ ವಿರುದ್ಧ ಆಯಾ ಜಲಾನಯನ ಪ್ರದೇಶದ ರೈತಾಪಿ ಸಮುದಾಯವು ಅನೇಕ ಹೋರಾಟಗಳನ್ನು ಮಾಡುತ್ತಲೇ ಬಂದಿವೆ. ಅನೇಕ ಜಲ ಹೋರಾಟಗಳ ಹಿಂದೆ ಆಯಾ ನಾಡಿನ ರೈತರ ದಮನಿತ ಕಣ್ಣೀರಿನ ಕತೆಯಾಗಿದೆ. ಈ ಕಣ್ಣೀರನ್ನು ಬರೆಸುವ ತಂತ್ರದಲ್ಲಿ ಪಟ್ಟಭದ್ರ ರಾಜಕಾರಣಿಗಳು ಕುತಂತ್ರ ರಾಜಕೀಯ ಬೆರೆಸುತ್ತಲೇ ಬಂದಿದ್ದಾರೆ. ಈ ಜಲ ವಿವಾದಗಳಿಗೆ ಹೊಸ ಹುನ್ನಾರದ ಕತೆ ಕಟ್ಟಿ ತಮ್ಮ ಸ್ವಾರ್ಥ ಸಾಧನೆಗೆ ತೊಡಗಿರುವುದನ್ನು ನಾವಿಂದು ಕಾಣುತ್ತಿದ್ದೇವೆ. ಹೀಗಾಗಿ ಅನೇಕ ಜಲ ಸಮಸ್ಯೆಗಳು ಬಗೆ ಹರಿಯದೆ ಪ್ರಶ್ನೆಗಳಾಗಿಯೇ ಉಳಿದಿವೆ.

**೭.೬. ಜಲ ಸಂಬಂಧಿ ಕತೆಗಳ ವಿಶ್ಲೇಷಣೆ**

ನೀರು ಮತ್ತು ನೀರಾವರಿಗೆ ಸಂಬಂಧಪಟ್ಟಂತೆ ಅನೇಕ ಸಮಸ್ಯೆಗಳಿಗೆ ಸ್ಪಂದಿಸಿ ಕತೆಗಾರರು ಕತೆಗಳನ್ನು ರಚಿಸುತ್ತಾ ಬಂದಿದ್ದಾರೆ. ಮಲ್ಲಿಕಾರ್ಜುನ ವಣೇನೂರರ 'ಅಸಂಗತ' ರೈತರ ನೀರಾವರಿಗೆ ಸಂಬಂದಪಟ್ಟಂತ ಕತೆಯಾದರೆ, ಶ್ರೀಧರ ಬಳಗಾರರ 'ಇಳೆಯೆಂಬ ಕನಸು' ಕತೆ ಕಾಳಿನದಿಗೆ ಆಣೆಕಟ್ಟು ಕಟ್ಟುವಾಗಿನ ಸಂದರ್ಭದಲ್ಲಿ ಆ ಭಾಗದ ಜನ ಮನೆ-ಹೊಲ-ಗಳನ್ನು ಕಳೆದುಕೊಳ್ಳಬೇಕಾದ ಸಂದರ್ಭದಲ್ಲಿ ಅವರು ಪಟ್ಟಬವಣೆಯ ಕತೆ, ಅರವಿಂದ ಮಾಲಗತ್ತಿಯವರ 'ತೂತಿನ ದುಡ್ಡು ಮತ್ತು ನೀರು' ಗ್ರಾಮೀಣ ಭಾಗದ ದಲಿತರ ಕುಡಿಯುವ ನೀರಿನ ಸಮಸ್ಯೆಯ ಕತೆ, ಕುಂ. ವೀಯವರ 'ಬರಿಗೊಡಗಳು' ಕತೆ ಕುಡಿಯುವ ನೀರಿಗಾಗಿ ಗ್ರಾಮೀಣ ಭಾಗದ ಜನರು ಪಡುವ ಪಾಡು ಈ ಕತೆಯಲ್ಲಿ ಮಾರ್ಮಿಕವಾಗಿ ಚಿತ್ರಿತವಾಗಿದೆ. ಅಮರೇಶ ನುಗಡೋಣಿಯವರ 'ನೀರು ತಂದವರು' ಕತೆಯಲ್ಲಿ ನೀರು ದಲಿತರ ಬದಲಾವಣೆಯ ಅನಂತ ಸಾಧ್ಯತೆಯ ಸಂಕೇತವಾಗಿ ಮೂಡಿ ಬಂದಿದೆ. ಜನಾರ್ಧನ ಏರ್ಪಕಟ್ಟೆಯವರ 'ನೀರು' ಕತೆಯೂ ಹೊಸ ಭರವಸೆಯ ಭಾವೈಕ್ಯತೆಯ ಸಂಕೇತವಾಗಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣುತ್ತೇವೆ.

ಮೇಲಿನ ಎಲ್ಲಾ ಕತೆಗಳನ್ನು ನಾನು ನವವಸಾಹತುಶಾಹಿ ಸಂದರ್ಭದಲ್ಲಿ ಜಲ ಸಮಸ್ಯೆಗೆ ಸಂಬಂಧಿಸಿದ ಪ್ರಶ್ನೆಗೆ ಹುಡುಕಾಟವಾಗಿ ವಿಶ್ಲೇಷಣೆಗೆ ಬಳಸಿಕೊಂಡಿದ್ದೇನೆ. ಮಲ್ಲಿಕಾರ್ಜುನ ವಣೇನೂರರ 'ಅಸಂಗತ' ಕತೆ ಗ್ರಾಮೀಣ ಜಗತ್ತಿನ ರೈತಾಪಿ ಜನರ ನೋವಿನ ಬದುಕನ್ನು ದಾಖಲಿಸುವ ಕತೆ ಇಲ್ಲಿ ಬರುವ ಊಳೂರು ಗ್ರಾಮಕ್ಕೆ ತುಂಗಭದ್ರೆಯ ನೀರುಂಡು ಬೆಳೆಯುತ್ತಿದ್ದ ಹೊಲದ ಬೆಳೆಗಳಿಗೆ ಆಪತ್ತು ಬಂದೊದಗಿದೆ. ಮಳೆ ಸರಿಯಾಗಿ ಬಾರದೆ ತುಂಗಭದ್ರ ನದಿ ತುಂಬಿರದ ಕಾರಣ ನೀರಾವರಿ ಅಚ್ಚುಕಟ್ಟು ಪ್ರದೇಶ ರೈತರಿಗೆ ಸದಾ ನೀರುಣ್ಣುವ ಭತ್ತದ ಬೆಳೆಯನ್ನು ಬೆಳೆಯಬಾರದೆಂದು ಸರಕಾರ ತಾಕೀತು ಮಾಡುತ್ತದೆ. ನೀರಾವರಿ ಇಂಜಿನಿಯರುಗಳು ಊಳೂರಿಗೆ ಬರುತ್ತಾರೆ. ಊರಿನ ಜಮಿನ್ದಾರ ಬಂಡೇಗೌಡ ಊರಲ್ಲಿ ಡಂಗೂರ ಸಾರಿಸಿ ಜನ ಸೇರಿಸುತ್ತಾನೆ. ಎಮ್ಮೆಲ್ಲೆ ಸಾಹೇಬರಾದ ಕಿಷ್ಟಾರೆಡ್ಡಿ ಜನರಿಗೆ ಕೈ ಮುಗಿದು ''ನೋಡ್ರಪಾ ಈ ಹಿಂದೆ ಎಮ್ಮೆಲ್ಲೆಯಾಗಿದ್ದೊರು ಎಲೆಕ್ಸನ್ ಆದ ಮ್ಯಾಗ ತಿರುಗ್ಯನ್ನ ನೋಡಿದ್ರಾ, ಅವರು ತಿರುಗಿ ನೋಡಿದ್ದು ಯಾವಾಗ ಅಂದ್ರೆ ಇನ್ನೊಂದು ಎಲೆಕ್ಸನ್ನಿಗೇ ಆದರೆ ನಾನ್ ಮಾತ್ರಕ ಹಂಗಲ್ಲ. ಇಲ್ಲಿವರೆಗೆ ನಿಮಗೆಲ್ಲಾ ನಾನೆನ್ ಮಾಡ್ತೀನಿ ಅಂತ ಗೊತ್ತೈತೆಯಿಷ್ಟೆಲ್ಲಾ ನಾನು ನಿಮಗೆದುಕ ಮಾಡಿದ್ಯಪಾ ಅಂದ್ರೆ ನೀವುಯೆಷ್ಟತ್ತಿದ್ದರೆ ನಮ್ಮವರೇ. ಇವಾಗ ಬಂದಿರೋದು ನಿಮ್ಮವಳ್ಳೆದಕೆ, ಮಳೆ ಇಲ್ಲದಕ ಡ್ಯಾಮಿನಾಗ ಸರೀಗೆ ನೀರ್‌ಬಂದಿಲ್ಲ.., ನೆಲ್ಲುಗಿಲ್ಲು ಇಟ್ಟು ಸಾವಿರಾರು ರೂಪಾಯಿ ಲಾಸಾಗಬ್ಯಾಡ್ರಿ, ಕುಸ್ಕಿ ಫಲ ಇಟಗಳ್ರಿ''[೨೬]

ಎಂದು ಉಪದೇಶಿಸಿ ಕುಳಿತಾಗ, ನೀರಾವರಿ ಅಧಿಕಾರಿಗಳು ಮಾತನಾಡಿ ಬಂಡೇಗೌಡನ ನೇತೃತ್ವದಲ್ಲಿ ವಂತಿನ ಪ್ರಕಾರ ನೀರು ಬಿಟ್ಟುಕೊಳ್ಳಿರೆಂದು ಹೇಳಿ ಜೀಪು ಹತ್ತಿ ಮುಂದಿನ ಊರಿಗೆ ಹೋರಟುಹೋಗುತ್ತಾರೆ.

ನಂತರ ಊಳೂರಿನ ಬಂಡೇಗೌಡ ನೀರಾವರಿ ಇಲಾಖೆ, ಎಮ್ಮೆಲ್ಲೆಗಳನ್ನು ತನ್ನ ಬುಟ್ಟಿಗೆ ಹಾಕಿಕೊಂಡು, ಊರೆಂಬೂರೆಲ್ಲಾ ಜನ ಕುಸ್ಕಿ ಬೆಳೆಯಾದ ರಾಗಿ ಜೋಳ ಬಿತ್ತಿದ್ದರೆ ತಾನು ಮಾತ್ರ ನೆಲ್ಲು ಫಲವಿಟ್ಟು ಊರಿನ ನೀರನ್ನೆಲ್ಲಾ ತಾನೇ ಬಳಸಿಕೊಳ್ಳತೊಡಗುತ್ತಾನೆ. ಊರಿನ ಜನರ ಫಲಗಳು ನೀರು ಕಾಣದೇ ಒಣಗತೊಡಗಿದಾಗ ಅದೇ ಊರಿನ ಬುಲ್ಡೆತಿಮ್ಮಯ್ಯನ ಹೊಲದ ಪೈರು ನೀರಿಲ್ಲದ ಒಣಗುತ್ತಿದ್ದಾಗ ಮಗ ಪೋತಿ, ಬಂಡೇಗೌಡನ ಆಳುಗಳೊಂದಿಗೆ ಜಗಳವಾಡಿ ನೀರು ಬಿಟ್ಟುಕೊಳ್ಳಲು ಹೋಗಿ ಅವರ ಚಲಕೆಯೇಟಿಗೆ ಬಲಿಯಾಗಿ ತಂದೆಯ ತೊಡೆಯ ಮೇಲೆ ಪ್ರಾಣಬಿಡುತ್ತಾನೆ. ಊಳೂರಿನ ಜಮಿನ್ದಾರನಾದ ಬಂಡೇಗೌಡನ ದಬ್ಬಾಳಿಕೆಗೆ ರೈತರು 'ಖುಷ್ಕಿ' ಬೆಳೆಗೂ ನೀರು ಕಾಣದೆ ಬೆಳೆ ಒಣಗಿಸಿಕೊಂಡು ಸಂಕಟದ ಬದುಕಿಗೆ ತುತ್ತಾಗುತ್ತಾರೆ. ತಮ್ಮ ಹೊಲಗಳಿಗಿಲ್ಲದ ನೀರು ಗೌಡನ ಹೊಲಕ್ಕೂದಕ್ಕಬಾರದೆಂದು ಬುಲ್ಡೆತಿಮ್ಮಯ್ಯ ತನ್ನವರನ್ನು ಕರೆದು ಚಲಿಕೆ-ಗುದ್ದಲಿಯೊಂದಿಗೆ ಕಾಲುವೆಯ ಒಡ್ಡನ್ನು ತೋಡತೊಡಗುತ್ತಾರೆ. ನಂತರ ಹೊಸ ನಿರ್ಧಾರಕ್ಕೆ ಬಂದ ಜನರು ''ಅಲ್ಲಪ್ಪೋ... ಈ ಕಾಲುವೆನು ಬೇಕಾದಂಗ ವಡ್ಯೆ ಬಡಿಬೋದು ವಡೆ ಬಡ್ಯೆಂಗಿದ್ದರೆ ಡ್ಯಾಮನ್ನೆ ವಡ್ಯೆಬಡಿಬೇಕು''ಎಂದು ತುಂಗಭದ್ರಾ ಆಣೆಕಟ್ಟು ದಿಕ್ಕಿನಕಡೆ ನೋಡತೊಡಗುತ್ತಾರೆ. ಅಷ್ಟರಲ್ಲಿ ತಾವು ತೋಡಿದ ಕಾಲುವೆಯ ಒಡ್ಡು ಒಡೆದು ನೀರು ಭೋರ್ಗರೆದು ಹರಿಯತೊಡಗುತ್ತದೆ.

ಈ ಕತೆಯಲ್ಲಿ ಊಳೂರು ರೈತಾಪಿ ಜನರು ಬಂಡೇಗೌಡನ ಕುತಂತ್ರಕ್ಕೆ ಸಿಡಿದು ನಿಲ್ಲುತ್ತಾರೆ. ತಮ್ಮ ಹೊಲಕ್ಕಿಲ್ಲದ ನೀರು, ಗೌಡನ ಹೊಲಕ್ಕು ದಕ್ಕಬಾರದೆಂದು ಕಾಲುವೆಯನ್ನೆ ಒಡೆದು ಹಾಕುತ್ತಾರೆ. ಸರ್ಕಾರ ಸೃಷ್ಟಿಸಿದ ನೀರಾವರಿ ಯೋಜನೆಗಳು. ಬಡ ರೈತರ ಬದುಕಿಗೆ ದುಃಖ ತಂದೊಡ್ಡುತ್ತವೆ. ನೀರಿಗಾಗಿ ಪ್ರತಿಭಟಿಸಿದ ಬುಲ್ಡೆತಿಮ್ಮಯ್ಯನ ಮಗ ಪೋತಿ ಸಾವಿಗೆ ತುತ್ತಾಗುತ್ತಾನೆ. ವಣೇನೂರರು ಕಥೆಯ ಹಂದರದಲ್ಲಿ ಗ್ರಾಮೀಣ ಜಗತ್ತಿನ ಜೀವನಾನುಭಗಳನ್ನು ಸಮರ್ಥವಾಗಿ ಕಟ್ಟಿಕೊಡುವುದರ ಜೊತೆಗೆ ರೈತರ ಅಸಂಗತ ಬದುಕಿನ ನೀರಾವರಿ ಸಮಸ್ಯೆನ್ನು ಇಲ್ಲಿ ಕತೆಯಾಗಿಸಿದ್ದಾರೆ. ರೈತರಿಗೆ ನೀರಾವರಿ ಸಮಸ್ಯೆಗಳು ಒಂದು ರೀತಿಯಾದರೆ, ಈ ನೀರಾವರಿಗಾಗಿ ಕಟ್ಟಿದ ಆಣೆಕಟ್ಟುಗಳು ನೆಲೆ ನಿಲ್ಲುವಾಗ ಹುಟ್ಟಿಕೊಳ್ಳುವ ಪ್ರಶ್ನೆಗಳು ಹಲವಾರು ''ಶ್ರೀಧರಬಳಗಾರರ 'ಇಳೆಯೆಂಬ ಕನಸು'' ಕತೆ ಕಾಳಿನದಿಗೆ ಆಣೆಕಟ್ಟು ನಿರ್ಮಾಣವಾಗುವಾಗ ಉತ್ತರ ಕನ್ನಡ ಸೀಮೆಯ ರೈತರಿಗೆ ಈ ಯೋಜನೆಯಿಂದ ಹೊಲಗಳಿಗೆ ನೀರಾವರಿ ಸೌಲಭ್ಯ ದೊರಕುತ್ತದೆಯೆಂಬ ಕಾರಣಕ್ಕೆ ''ಕಾಡಿನ ಕೂಸಾಗಿ ಹರಿಯುತ್ತಿದ್ದ ಕಾಳಿನದಿ ಬಂದಿಯಾಗಿ ನಿಲ್ಲುವಾಗ ಆ ಪ್ರದೇಶದಲ್ಲಿ ನಾನಾ ಸಮಸ್ಯೆಯ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ನೀರಾವರಿಯಿಂದ ನೀರು ನಿಲ್ಲುತ್ತಿದ್ದಂತೆ ಊರು ಮುಳುಗಡೆಯಾಗುವ ಸಂದರ್ಭ ಸೃಷ್ಟಿಯಾಗುತ್ತದೆ. ಜನ ತಾವು ಬಾಳಿಬದುಕಿದ ಊರು-ಹೊಲ ಮನೆಗಳು ನೀರಿನಲ್ಲಿ ಮುಳುಗಿ ಹೋಗುವ ಪರಿಯನ್ನು ನೆನಸಿಕೊಂಡು ತಲ್ಲಣಗೊಳ್ಳುತ್ತಾರೆ.''[೨೮] ಸರಕಾರವೂ ಊರಿನ ಜಮೀನುಗಳನ್ನು ಸರ್ವೆಮಾಡಿಸಿ ಪರಿಹಾರ ಧನ ಘೋಷಣೆ ಮಾಡುತ್ತಾರೆ. ಜನರನ್ನು ಕಟ್ಟಿಕೊಂಡು ಜನಕಜ್ಜ ಹೋರಾಟ ಮಾಡುತ್ತಾನೆ. ಈ ನೀರಾವರಿ ಯೋಜನೆಯಿಂದ ಊರು ಮತ್ತು ಮನೆ ದೇವರಾದ ಮಾರುತಿದೇವರ ಗುಡಿ ಮುಳುಗಿ ಹೋಗುವುದು ನೆನೆದು ತಲ್ಲಣಗೊಳ್ಳುತ್ತಾನೆ. ಆದರೆ ಸರಕಾರಿ ಯೋಜನೆಯ ಮುಂದೆ ಹೋರಾಟಕ್ಕೆ ಜಯಲಭಿಸುವುದಿಲ್ಲ. ಅಭಿವೃದ್ಧಿ ಯೋಜನೆಯ ಹೆಸರಿನಲ್ಲಿ ಪರಿಸರ ಸಂಸ್ಕೃತಿ ನೆಲದ ಕನಸುಗಳು ಭಗ್ನಗೊಳ್ಳುತ್ತವೆ. ಜನ ಸರಕಾರ ನೀಡುವ

ಪರಿಹಾರಧನದಿಂದ ಗೂಳಿ ಹೋಗುತ್ತಾರೆ. ಜನಕಜ್ಜ ಒಲ್ಲದ ಮನಸ್ಸಿನಿಂದ ಊರು ಬಿಟ್ಟು ಆ ಜನರ ಮಧ್ಯೆಬದುಕಲಾರದೆ ಮೌನಿಯಾಗಿ ಕಾಡಿನ ಮಧ್ಯೆ ಕಾಣೆಯಾಗುತ್ತಾನೆ. ಇಲ್ಲಿ ಶ್ರೀಧರ ಬಳಗಾರರು ಕಾಳಿನದಿಯ ನೀರಾವರಿಯ ಯೋಜನೆಯಿಂದ ಗ್ರಾಮ ಭಾರತ ಬದುಕು ಆ ನೆಲದ ಮೇಲೆ ಜನರು ಕಟ್ಟಿಕೊಂಡ ಕನಸುಗಳು ಹೇಗೆ ಭಗ್ನವಾಗುತ್ತವೆಯೆಂಬ ಚಿಂತನೆಯನ್ನು ಕತೆಯಲ್ಲಿ ಸೆರೆಹಿಡಿದಿದ್ದಾರೆ. ಅಭಿವೃದ್ಧಿ ಯೋಜನೆಗಳಾದ ನೀರಾವರಿ ಯೋಜನೆಯೊಂದು ಜನಕಜ್ಜನಂಥವರ ಜೀವನದ ಮೇಲೆ ಬೀರುವ ಪರಿಣಾಮದ ಅನಂತ ಮುಖಗಳನ್ನು ಕತೆ ನಿವೇದಿಸುತ್ತದೆ.

ನೀರಾವರಿ ಯೋಜನೆ ಮತ್ತು ನೀರಾವರಿ ಸಮಸ್ಯೆ ಒಂದು ರೀತಿಯದಾದರೆ ನಮ್ಮ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿರುವ ಜಾತಿ ಪ್ರಜ್ಞೆಯಿಂದಾಗಿ ಅನೇಕ ಗ್ರಾಮೀಣ ಭಾಗದ ದಲಿತರು ಕುಡಿಯಲು ನೀರಿದ್ದು ನೀರಿಲ್ಲದಂತೆ ಪರದಾಡುತ್ತಿದ್ದಾರೆ. ಮೇಲ್ವರ್ಗದ ಜನ ಊರಬಾವಿ, ವಕ್ರಾಣೆಗಳನ್ನು ತಮ್ಮ ಜಾತಿಗಾಗಿ ಮಾತ್ರ ಮೀಸಲಿಟ್ಟುಕೊಂಡಿದ್ದಾರೆ. ಕೆಳವರ್ಗದ ದಲಿತರಿಗೆ ಅಲ್ಲಿ ನಿಷೇದವಿದೆ! ಹೀಗೇಕೆ? ಸ್ವಾತಂತ್ರ್ಯ ಬಂದು ಅದರ ಚಿನ್ನದ ಹಬ್ಬ ಆಚರಿಸಿದರೂ. ದಲಿತರು ನೀರಿಲ್ಲದೆ ಪರದಾಡುವ ಸ್ಥಿತಿಯನ್ನು ನಮ್ಮ ನಡುವಿನ ಮುಖ್ಯ ಕಥನಕಾರ ಡಾ.ಅರವಿಂದ ಮಾಲಗತ್ತಿಯವರ 'ತೂತಿನ ದುಡ್ಡು ಮತ್ತು ನೀರು ಕತೆ ಹೊಸ ಚಿಂತನೆಗೆ ಒಳಪಡಿಸುತ್ತದೆ. ಕೂಡಲಸಂಗಮದ ಹತ್ತಿರದ ಊರಾದ ಮುದೇನೂರಿನ ಸಾಂಸ್ಕೃತಿಕ ಪರಿಸರವನ್ನು ಕತೆ ಕಟ್ಟಿಕೊಡುತ್ತಲೇ ಆ ಊರಿನ ದಲಿತರು ಶತಮಾನಗಳಿಂದ ಅನುಭವಿಸುತ್ತಲೇ ಬಂದಿರುವ ಸಾರ್ವಜನಿಕ ಸ್ಥಳಗಳಾದ ಗುಡಿ ಕುಡಿಯುವ ನೀರಿನ ಸ್ಥಳಗಳ ಪ್ರವೇಶ ನಿಷೇಧವನ್ನು ಆಧುನಿಕ ದಲಿತ ಯುವಕರು ಪ್ರತಿಭಟಿಸುತ್ತಾರೆ. ''ಆ ಊರಿನಲ್ಲಿ ದಲಿತಕೇರಿಗಳು ಸೂರ್ಯಸಾಯುವ ದಿಕ್ಕಿಗಿದ್ದರೆ, ಸೂರ್ಯ ಹುಟ್ಟುವ ದಿಕ್ಕಿಗೆ ಅವರು ನೀರು ತರುವ ಎರಡು ಬಾವಿಗಳಿವೆ.''[೨೫] ಈ ಬಾವಿಗಳನ್ನು ದನಗಳ ಮಾರಾಟದ ಉದ್ದೇಶದಿಂದ ಮೈಸೂರು ಅರಸರು ಕಟ್ಟಿಸಿದ್ದರು. ಬಲುದೂರದ ಈ ಹೊಲಸು ನೀರನ್ನು ದಲಿತರು ಕುಡಿಯುತ್ತಲೆ ಬಂದಿದ್ದಾರೆ. ಉಳ್ಳವರಿಗಾಗಿ ಶುದ್ಧಬಾವಿಗಳಿದ್ದವು ಮತ್ತು ಆ ಊರಿನ ಬಸವೇಶ್ವರ ಮಠದಲ್ಲೂ ಒಂದು ಪುರಾತನ ಕಾಲದ ಶುದ್ಧ ನೀರಿನ ಬಾವಿಯಿತ್ತು. ದಲಿತರು ಆ ಬಾವಿಯ ನೀರನ್ನು ಸೇದಬಾರದೆಂಬ ನಿರ್ಬಂದವಿದ್ದರೂ, ನಿತ್ಯ ಹೊಲಸಾದ ನೀರು ಕುಡಿದ ಕೆಲವರು ನಿರ್ಬಂಧ ಮೀರಿ ಮಠದ ಬಾವಿಯ ನೀರನ್ನು ರಾತ್ರೋರಾತ್ರಿ ಜನ ಕಾಣದ ಹೊತ್ತಿನಲ್ಲಿ ತುಂಬಿ ತಂದು ನೀರಿನ ದಾಹವನ್ನು ನೀಗಿಸಿಕೊಳ್ಳುತ್ತಾರೆ. ಆ ಊರಿನ ದಲಿತನಾದ ಸೈದ ರಾತ್ರಿ ಮಠದ ಬಾವಿಯ ನೀರು ಸೇದಿ ತರುವಾಗ, ಮಠದಲ್ಲಿ ಕಸಗುಡಿಸುವ ನೀಲವ್ವನ ಕೈಗೆ ಸಿಕ್ಕಿಬೀಳುತ್ತಾನೆ. ಪಂಚಾಯ್ತಿಗೆ ಆತನನ್ನು ಕರೆಯಿಸುತ್ತಾರೆ. ಈ ಸೈದ ಮಠದ ದನಗಳನ್ನು ಕಾಯುತ್ತಿದ್ದ. ಬಾಗೋಡಿ ಪರಸಪ್ಪನ ಮಗ ಊರ ಉಳ್ಳವರ ಪಂಚಾಯ್ತಿ ಈತನಿಗೆ ದಂಡಹಾಕಲು ಯೋಚಿಸುತ್ತದೆ. ತಂದೆ ಪರಸಪ್ಪನ ಕಳಕಳಿಯ ಬೇಡಿಕೆಯ ಮೇರೆಗೆ ಒಂದು ತೂತಿನ ದುಡ್ಡು ದಂಡ ನೀಡಲು ತೀರ್ಮಾನಿಸುವುದರ ಜೊತೆಗೆ ಮಠದ ನೀರು ಸೇದಿ ಮಲಿನಗೊಳಿಸಿದ್ದಕ್ಕಾಗಿ ಸೈದನ ತಲೆ ಮೀಸೆ ಬೋಳಿಸುತ್ತಾರೆ. ಆತ ನೀಡಿದ ದಂಡದ ದುಡ್ಡಿಗೆ ತೂತಾಕಿ ಮುದ್ದೇನೂರಿನ ಮಠದ ಬಾಗಿಲಿಗೆ ಬಡಿಯುತ್ತಾರೆ. ಈಗಲೂ ಆ ದುಡ್ಡು ಆ ಊರಿನ ಐತಿಹಾಸಿಕ ದಾಖಲೆಯಾಗಿ ಉಳಿದುಕೊಂಡಿದೆ.

ಈ ಕತೆ ಇಂದಿಗೂ ಗ್ರಾಮೀಣ ಭಾರತದ ದಲಿತರು ಕುಡಿಯುವ ನೀರಿಲ್ಲದೆ ಪರಿದಾಡಿ ಉಳ್ಳವರ ಉಚ್ಚ ಜಾತಿಯ ಜನರ ನೀರು ಸೇದಿ ಅವಮಾನಕ್ಕೆ ತುತ್ತಾದ ಪ್ರಸಂಗ ಮತ್ತು ದಲಿತರ ನೀರಿನ ಬವಣೆಯನ್ನು ಕತೆ

ಏಕಕಾಲದಲ್ಲಿ ಕಟ್ಟಿಕೊಡುತ್ತದೆ. ನವವಸಾಹತುಶಾಹಿ ಕಾಲಘಟ್ಟದಲ್ಲಿ ದಲಿತರು ಸಂಘರ್ಷದ ಬದುಕಿನಕಡೆ ಸಾಗಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುವುದನ್ನು ಈ ಕತೆ ನಿರೂಪಿಸುತ್ತದೆ.

ಕುಂ. ವೀರಭದ್ರಪ್ಪನವರ ''ಬರಿಗೊಡಗಳು'' ಕತೆ ಬರುವ ಗ್ರಾಮೀಣ ಭಾರತದ ಕುಗ್ರಾಮವಾದ ಸಿನ್ನೇರ್ನಳ್ಳಿ ಕುಡಿಯುವ ನೀರಿಲ್ಲದೆ ಪರದಾಡುವ ಗ್ರಾಮ ಗ್ರಾಮೀಣ ಭಾರತದ ಜೀವನಾಡಿಯಾದ ಬದುಕನ್ನು ಸಮರ್ಥವಾಗಿ ಕಂಡು ಯಥಾರೀತಿಯಲ್ಲಿ ಮೊನುಚಾಗಿ ಕತೆಯಾಗಿಸುವ ಕುಂ.ವೀ ಕತೆಗಳ ಲೋಕವೇ ವಿಸ್ಮಯಕಾರಿಯಾದದ್ದು. ಉಪ್ಪು ನೀರನ್ನೆ ಕುಡಿದು ಬದುಕುವ ಸಿನ್ನೇರ್ನಳ್ಳಿಯ ಜನರು ಯಾವುದೊ ಶಾಪಗ್ರಸ್ಥ ಸೀಮೆಯಲ್ಲಿ ಬದುಕುತ್ತಿರುವಂತೆ ಕಂಡುಬರುತ್ತಾರೆ. ಈ ಊರಿನ ಹೆಣ್ಣು ಮಕ್ಕಳು ತಮ್ಮ ತಮ್ಮ ಕೌಟುಂಬಿಕ ಸಮಸ್ಯೆಗಳನ್ನು ನೀರು ಬಾರದ ನಲ್ಲಿಯ ಮುಂದೆ ಚರ್ಚಿಸತೊಡಗುತ್ತಾರೆ. ''ಅರ್ಧ ಆಯುಷ್ಯ ಬರೀ ನೀರು ನಿಡಿ ಜೋಡಿಸಲು ಮೀಸಲಾದರೆ, ಕಾಳು ಕಡಿ ಜೋಡಿಸಲು ಏನು ಮಾಡಬೇಕು''[೩೦] ಎಂದು ಬದುಕಿನ ಸಂಕಟ ತೋಡಿಕೊಳ್ಳುತ್ತಾರೆ. ಊರಿನಲ್ಲಿ 'ನೀರಿನ ಹೋರಾಟ ವೇದಿಕೆ' ರೂಪಗೊಂಡು ಅದು ರಾಜ್ಯಾದ್ಯಂತ ಹೊಸ ಸುದ್ದಿ ಮಾಡುತ್ತದೆ. ಊರಿನ ಜನ ಸರಾಯಿ ಮಾರಾಟದ ವಿರುದ್ಧ ಮಾಡುವ ಹೋರಾಟವು ಫಲಪ್ರದವಾಗುತ್ತದೆ. ಈ ಊರಿನ ಜನರ ನೀರಿನ ಸಮಸ್ಯೆಗೆ ಸ್ಪಂದಿಸುವಂತ ಸರಕಾರವು ಭಾಗೀರಥಿ ಯೋಜನೆಯ ಅಡಿಯಲ್ಲಿ ಕಾಮಗಾರಿ ಕೆಲಸವನ್ನು ಆರಂಭಿಸುತ್ತದೆ. ಕೆಲದಿನಗಳಲ್ಲಿ ಕುಡಿಯುವ ನೀರಿನ ಯೋಜನೆಯ ಕಾಮಗಾರಿ ಮುಗಿದು ಉದ್ಘಾಟನಾ ಸಮಾರಂಭಕ್ಕೆ ಆಳುವ ಪಕ್ಷದಲ್ಲಿ ಆಂತರಿಕ ಕಲಹಗಳು ಆರಂಭವಾಗುತ್ತವೆ. ನೀರು ಊರು ತಲುಪದೇ ಹೋಗುವ ಸ್ಥಿತಿ ನಿರ್ಮಾಣಗೊಳ್ಳುತ್ತಿರುವಾಗ ಊರಿನ ಹಿರಿಯನಾದ ಮೂಲಿಮನಿ ಚಂದ್ರಜ್ಜ ವಾರೊಪ್ಪತ್ತಿನಲ್ಲಿ ನೀರು ಊರು ಊರು ತಲುಪದೇ ಹೋದರೆ, ತಾನು ಅಸೆಂಬ್ಲಿಯ ಎದುರಿಗೆ ಬೆಂಕಿ ಹಚ್ಚಿಕೊಂಡು ಆತ್ಮಾಹುತಿ ಮಾಡಿಕೊಳ್ಳುವುದಾಗಿ ಬೆದರಿಕೆ ಹಾಕುತ್ತಾನೆ. ಊರಿನಲ್ಲಿ ನೀರಿನ ಸಮಸ್ಯೆ ಪ್ರಶ್ನೆಯಾಗಿ ಉಳಿಯುತ್ತದೆ. ಆಳುವ ಪಕ್ಷದಲ್ಲಿ ಕಾದಾಟಗಳು ಹೆಚ್ಚುತ್ತಲೇ ಹೋಗುತ್ತವೆ. ಸಿನ್ನೇರ್ನಳ್ಳಿಯ ಕುಡಿಯುವ ನೀರಿಗಾಗಿ ಹಾಕಿದ್ದ ಪೈಪುಗಳು ಕಳಪೆ ಕಾಮಗಾರಿಯಿಂದ ಒಡೆದು ಹೋಗುತ್ತವೆ. ಜನರ ಮನದಲ್ಲಿ ನೀರಿನ ಕನಸು ಯಕ್ಷಪ್ರಶ್ನೆಯಾಗಿಯೇ ಉಳಿಯುತ್ತದೆ. ಊರು ಅನೇಕ ಕಲಹಗಳಲ್ಲಿ ಮುಳುಗಿ ಹೋಗುತ್ತದೆ. ಊರ ಮುಂದಿನ ನಲ್ಲಿಯ ಮುಂದೆ ಹೆಣ್ಣು ಮಕ್ಕಳು ಬಾರದ ನೀರಿಗಾಗಿ ಕಾದಾಟಕ್ಕೆ ನಿಲ್ಲುತ್ತಾರೆ. ಕುಂ.ವೀಯವರು ಗ್ರಾಮೀಣ ಭಾಗದ ಅನೇಕ ಸಮಸ್ಯೆಗಳನ್ನು ಈ ಕತೆಯಲ್ಲಿ ಸೆರೆಹಿಡಿದಿದ್ದಾರೆ. ನಾಡು ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಆಚರಿಸಿಕೊಂಡರೂ ಗ್ರಾಮೀಣ ಭಾಗಗಳಿಗೆ ಅತ್ಯಗತ್ಯವಾದ ಕನಿಷ್ಠ ಸೌಲಭ್ಯಗಳು ದಕ್ಕದೇ ಹೋಗಿರುವ ನೋವಿನ ಸ್ಥಿತಿಗತಿಗಳನ್ನೊಳಗೊಂಡ 'ಬರಿಗೊಡಗಳು' ಕತೆ ನಮ್ಮ ಮುಂದೆ ಸಾಕ್ಷಿಯಾಗಿ ನಿಲ್ಲುತ್ತದೆ.

''ಬಡಿಗೆ ಬೆತ್ತ ತರಲಿಲ್ಲ ನಾವು, ಸಾವು ನೋವು ನೀಡಲು ಅಲ್ಲ, ನೀರು ತಂದೀವಿನಾವು ನಿಮಗ ನೀರು ತಂದೀವಿ''[೩೧] ಎನ್ನುವ ಅಮರೇಶ ನುಗುಡೋಣಿಯವರ ''ನೀರು ತಂದವರು'' ಕತೆಯ ದಲಿತರು ಆಧುನಿಕತೆಯ ಬೆನ್ನು ಹತ್ತಿದರೂ ತಮ್ಮ ಭಾದಿಸುವ ಜಾತಿಯ ವಿಷಬೀಜ ಸಮಾಜದಿಂದ ಕಿತ್ತು ಬಿಸುಟಲು ಯತ್ನಿಸಿದವರು. ಸಿದ್ದಪ್ಪನಿಂದ ಸಮಾನತೆಯ ತತ್ತ್ವವನ್ನು ಕಲಿತವರು. ತಮಗೆ ಅನ್ನ-ನೀರು ಕೊಡದ ಉಚ್ಚ ಜಾತಿಯ ವಿರುದ್ಧ ಸಿಡಿದು ನಿಲ್ಲದೆ, ಅವರ ಮನೆಗಳಿಗೆ ಬಡಿಗೆ ಬೆತ್ತದ ಮೂಲಕ ಸಾಗದೇ, ನೀರಿನ ಕೊಡಗಳನ್ನು ಹೊತ್ತುಕೊಂಡು ಹೋಗಿ ಅವರ ಮನೆ ಬಾಗಿಲುತಟ್ಟಿ ಬಡಿದು ''ನಾವು ಸಾವು-ನೋವು ತಂದಿಲ್ಲ ನೀರು ತಂದೀವಿ'' ಅನ್ನುವ ಅವರ

ಬದಲಾವಣೆಯ ಗುಣ ಸಮಾನತೆಯಿಂದ ಕೂಡಿದ್ದು ಈ ಕತೆಯಲ್ಲಿ ಬರುವ ನೀರು ಬದಲಾವಣೆಯ ಸಂಕೇತವಾಗಿ ಮೂಡಿ ಬಂದಿದೆ. ಆಧುನಿಕ ಸೌಲಭ್ಯಗಳಿಗಾಗಿ ಊರಲ್ಲಿ ಹೋರಾಟಮಾಡುವ ದಲಿತರು ಉಳ್ಳವರ ವಿರುದ್ಧ ನಡೆದುಕೊಳ್ಳುವ ರೀತಿ ದಲಿತರ ಬದಲಾವಣೆ ಹೊಸ ದಿಕ್ಕು ಸೂಚಿಸುತ್ತದೆ. ಇಲ್ಲಿ ನೀರು ಚಲನಶೀಲ ಗುಣವಾಗಿ ಕಾಣಿಸಿಕೊಂಡಿದೆ. ವಚನಕಾರರ ಸಮಾನತೆಯ ಆಶಯದ ಬೀಜಗಳನ್ನು, ಈ ಕತೆಯಲ್ಲಿ ಸಿದ್ದಪ್ಪನು ದಲಿತ ಮನಸ್ಸುಗಳಲ್ಲಿ ಬಿತ್ತುತ್ತಾನೆ. ದಲಿತರ ಸಮಾನತೆಯ ಬೀಜ ಅಂಕುರಗೊಂಡು ಹೊಸವೃಕ್ಷವಾಗಿ ಬೆಳೆದಿದೆ. ನೀರು ಇಲ್ಲಿ ಅನಂತ ಸಾಧ್ಯತೆಗಳ ಬಾವೈಕ್ಯತೆಯ ಸಂಕೇತವಾಗಿ ಮೂಡಿ ಬಂದಿದೆ.

ಜನಾರ್ಧನ ಏರ್ಪಕಟ್ಟೆಯವರ 'ನೀರು' ಕತೆ ಕೌಟುಂಬಿಕವಾದ ಜಿದ್ದಿಗಾಗಿ ಆರಂಭವಾಗುವ ಈ ಕತೆಯಲ್ಲಿ ಬರುವ ಮಾಲಿಂಗ ತನ್ನದೊಂದು ಸ್ವಂತ ಬಾವಿ ತೋಡಿಕೊಂಡು ಅದರ ನೀರಿನಿಂದಲೇ ಬದುಕು ಕಟ್ಟಿಕೊಳ್ಳಬೇಕೆಂದು ಕನಸುಕಂಡವನು ಮಗಳು ಶಾರದೆ ಮನೆಯ ಪಕ್ಕದಲ್ಲಿದ್ದ 'ಭಾವ ಐತ್'ನ ಬಾವಿಗೆ ಕುಡಿಯುವ ನೀರು ತರಲು ಹೋಗಿ ಅವಮಾನಕ್ಕೆ ತುತ್ತಾಗುತ್ತಾಳೆ. ಇದರಿಂದ ಛಲಗಾರನಾದ ಮಾಲಿಂಗನ ಮಗ ಶಂಕರ ಬಡತನದಲ್ಲಿಯೂ ತಾನು ಸರ್ಕಾರಿ ನೌಕರಿಯಲ್ಲಿ ಕೂಡಿಟ್ಟ ಹಣದಿಂದ ಹೊಲದಲ್ಲಿ ಬಾವಿ ತೋಡಿಸುತ್ತಾನೆ. ತಂದೆ ಮಾಲಿಂಗನ ಬಹುದಿನದ ಕನಸನ್ನು ಈತ ಈಡೇರಿಸುತ್ತಾನೆ. ನೀರಿನ ಸಮಸ್ಯೆ ಪ್ರಶ್ನೆಯಾಗಿಯೇ ಉಳಿದುಕೊಂಡ ಸಂದರ್ಭದಲ್ಲಿ ಮಗ ಶಂಕರ ತೋಡಿಸಿದ ತೋಟದ ಬಾವಿಯಲ್ಲಿ ನೀರು ಸೆಲೆ ಒಡೆದು ಚಿಮ್ಮಿಬರುತ್ತದೆ ಮನೆಯವರೆಲ್ಲಾ ಸಂತೋಷದಲ್ಲಿ ಮುಳುಗಿ ಹೋಗುತ್ತಾರೆ. ಕೃಷಿಗೆ, ಕುಡಿಯಲು ನೀರು ದಕ್ಕುತ್ತದೆ. ಇದರಿಂದ ಎಲ್ಲಾರು ಸಂತೋಷಗೊಳ್ಳುತ್ತಾರೆ. ನಂತರ 'ಭಾವ ಐತ'ನು ಅಲ್ಲಿಗೆ ಬರುತ್ತಾನೆ. ಯಾರೂ ಮಾಲಿಂಗ ನಿನಗೆ ಮಾಟ ಮಾಡಿಸಿದ್ದನೆಂದು ಆತನಿಗೆ ಬಾವಿನೀರು ಕೊಡಬಾರದೆಂದು ಬರೆದುಕೊಟ್ಟ ಚೀಟಿಯನ್ನು ಹರಿದುಹಾಕಿ ತನ್ನ ತಪ್ಪನ್ನು ಮನ್ನಿಸಲು ಕ್ಷಮೆಕೇಳುತ್ತಾನೆ. ಆದರೆ ಶಂಕರ ಹೇಳುತ್ತಾನೆ. ''ನೀವು ಪಾಪಿಗಳಲ್ಲ ಮಾವ ಪುಣ್ಯಾತ್ಮರು ನೀವು ಅಂದು ನೀರಿಗೆ ತಡೆದುದರಿಂದಲೆ ನಮಗೆ ಬಾವಿ ತಗೆಸಲು ಛಲಹುಟ್ಟಿದ್ದು ಆಗಿದ್ದೆಲ್ಲಾ ಒಳ್ಳೆಯದಕ್ಕೆ ಆಯಿತು''[೨] ಎನ್ನುವ ಶಂಕರ ಮಾವನಿಗೆ ಸಕ್ಕರೆಗೆ ಹೊಸ ಬಾವಿನೀರು ಬೆರಸಿಕೊಟ್ಟು ಆಲಂಗಿಸಿಕೊಳ್ಳುತ್ತಾನೆ. ಇಲ್ಲಿ ನೀರು ಹೊಸ ಬದುಕಿನ ಭರವಸೆ ಸಂಕೇತವಾಗಿದೆ ಮತ್ತು ಕಳೆದು ಹೋದ ಬಾಂದವ್ಯದ ನಂಟನ್ನು ಮತ್ತೇ ಬೆಸೆಯುತ್ತದೆ. ನೀರು ಇಲ್ಲಿ ಸಮಸ್ಯೆಯನ್ನು ಸೃಷ್ಟಿಸುವ ಬದಲು ಹೊಸ ಪರಿಹಾರ ಭರವಸೆಯನ್ನು ಮೂಡಿಸಿದೆ.

**೭.೭. ಕೈಗಾರಿಕೆಗಳ ತೊಡಕು**

ನವವಸಾಹತುಶಾಹಿ ಸಂದರ್ಭದಲ್ಲಿ ನೀರು ಮತ್ತು ನೀರಾವರಿ ಯೋಜನೆಗಳಿಗೆ ಸಂಬಂಧ ಪಟ್ಟ ಸಮಸ್ಯೆ ಹಲವಾದರೆ ಕೈಗಾರಿಕೆಗೆ ಸಂಬಂಧ ಪಟ್ಟ ಪ್ರಶ್ನೆಗಳು ಸಮಸ್ಯೆಗಳು ಹಲವಾರು ಕೈಗಾರಿಕೆಗಳನ್ನು ಆರಂಭಿಸುವುದು ದೇಶದ ಪ್ರಗತಿ, ಆರ್ಥಿಕ ಸ್ವಾವಲಂಬನೆ ಮತ್ತು ನಿರುದ್ಯೋಗ ಸಮಸ್ಯೆಯನ್ನು ನಿವಾರಿಸುವುದು ಹೀಗೆ ಹಲವಾರು ಪ್ರಯೋಜನಗಳು ಇವೆ. ನಾವು ಬೆಳೆದ ಕಚ್ಚಾಪದಾರ್ಥಗಳನ್ನು ಸಿದ್ಧವಸ್ತುಗಳನ್ನಾಗಿಯೂ ಮಾಡಿಕೊಳ್ಳುವಲ್ಲಿ ವಿದೇಶಿಯ ಅವಲಂಬನೆ ತಪ್ಪಿಸುವ ದೃಷ್ಟಿಕೋನವೂ ಪ್ರಮುಖವಾಗಿತ್ತು. ಆದರೆ ಈ ಎಲ್ಲಾ ಯೋಜನೆಗಳು ಬಂಡವಾಳ ಶಾಹಿಗಳಿಗೆ ಕೇವಲ ಹಣಮಾಡುವ ವಾಮಮಾರ್ಗವಾಗಿದೆ. ಪ್ರಜಾತಂತ್ರ ವ್ಯವಸ್ಥೆಗೂ ಇದು ಕಣ್ಣೀರೊರೆಸುವ ತಂತ್ರವಾಗಿದೆ. ಆಧುನಿಕತೆಯ ಪ್ರವೇಶದಿಂದಾಗಿ ನಮ್ಮ ದೇಶದ ಬಂಡವಾಳಶಾಹಿಗಳು ಕೈಗಾರಿಕೆಗಳನ್ನು ಉತ್ತಮ ಪರಿಸರವಿರುವ ಅರಣ್ಯಗಳ ಮಧ್ಯೆ ನದಿತಟಗಳ ಮೇಲೆ ಜನ ವಾಸಿಸುವ ಪ್ರದೇಶಗಳ

ಮಧ್ಯೆ ನಿರ್ಮಿಸಿ ಪರಿಸರ ನಾಶಕ್ಕೆ ತೊಡಗುತ್ತಿದ್ದಾರೆ. ಈ ಕಾರ್ಖಾನೆಗಳಿಂದ ಹೊರಬೀಳುವ ವಿಷಪೂರಿತ ತ್ಯಾಜ್ಯವಸ್ತುವಾದ ಮೊಲ್ಯಾಶಿಷ್‌ನ್ನು ಹರಿಯುವ ನೀರಿಗೆ ಸೇರಿಸಿಸುವುದರಿಂದ ನೀರನ್ನು ವಿಷಪೂರಿತಗೊಳಿಸುವ ಆ ನೀರನ್ನು ಸೇವಿಸುವ ಜನರು ಸಾಂಕ್ರಾಮಿಕ ರೋಗಗಳಿಗೆ ಇಂದು ತುತ್ತಾಗುತ್ತಿದ್ದಾರೆ. ಈ ನದಿಯ ನೀರನ್ನು ಬೆಳೆಗಳಿಗೆ ಬಿಟ್ಟಾಗ ಪೈರೂ ಕೂಡ ವಿನಾಶವಾಗಿ ಹೋಗುತ್ತದೆ. ಇಂದು ನಾವು ಕುಡಿಯುವ ನೀರು ಉಣ್ಣುವಂತ ಅನ್ನದಲ್ಲಿ ವಿಷ ಬೆರೆಯುತ್ತಲೇ ಹೋಗುತ್ತಿದೆ. ಹಾಗೇ ಕೈಗಾರಿಕೆಗಳಲ್ಲಿ ದುಡಿಯುವಂತಹ ಕಾರ್ಮಿಕರಿಗೆ, ಕಾರ್ಖಾನೆಯ ಮಾಲಿಕರು ಶ್ರಮಕ್ಕೆ ತಕ್ಕ ಕೂಲಿ ನೀಡದೆ ಅವರ ಬದುಕನ್ನು ಕಷ್ಟದ ಕೂಪದಲ್ಲಿ ತಳ್ಳಿದ್ದಾರೆ. ಇದರಿಂದ ದುಡಿಯುವ ಕೈಗಳು ನ್ಯಾಯ ಕೇಳಲು ಹೋರಾಟದ ಹಾದಿ ಹಿಡಿದಿವೆ. ಕಾರ್ಮಿಕ ಸಂಘಟನೆಗಳು ಹುಟ್ಟಿಕೊಂಡು ನಾನಾ ಸಮಸ್ಯೆಗಳು ನಮ್ಮ ಮುಂದೆ ಸೃಷ್ಟಿಯಾಗಿವೆ. ಈ ಕಾರ್ಮಿಕ ಸಂಘಟನೆಗಳಿಗೂ ಮತ್ತು ಕೈಗಾರಿಗಳ ಮಾಲಿಕರಿಗೂ ಒಪ್ಪಂದವಾಗದೇ ಹೋರಾಟಗಳು ನಿರಂತರವಾಗಿ ನೆಡೆದು ಕೆಲವೊಮ್ಮೆ ಕೈಗಾರಿಕೆಗಳು ಮುಚ್ಚುವ ಸ್ಥಿತಿಗೆ ಬರುತ್ತಾರೆ. ಇದರಿಂದ ಕಾರ್ಮಿಕ ವರ್ಗವೂ ಕೆಲಸ ಕಳೆದುಕೊಂಡು ಬೀದಿ ಪಾಲಾಗುವ ಸ್ಥಿತಿಗೆ ತಲುಪುತ್ತಾರೆ. ಕಾರ್ಮಿಕರಿಗೆ ತಕ್ಕ ವೇತನ, ಬೋನಸ್ ನೀಡದೆ ಬಂಡವಾಳಶಾಹಿಗಳು ಕಾರ್ಮಿಕರನ್ನು ನರಕದ ಕೂಪಕ್ಕೆ ತಳ್ಳುತ್ತಾರೆ. ಕಾರ್ಮಿಕರಿಗಾಗಿ ಕಾರ್ಖಾನೆಯ ಕೊಳಚೆ ಪ್ರದೇದಲ್ಲಿ ನಿರ್ಮಾಣಗೊಂಡ ಮನೆಗಳಲ್ಲಿ ಬದುಕನ್ನು ಸವೆಸುತ್ತಾ ನೂರಾರು ಖಾಯಿಲೆಗಳಿಗೆ ತುತ್ತಾಗುತ್ತಾರೆ.

ಕೆಲವು ಕೈಗಾರಿಕಾ ಯೋಜನೆಗಳು ಸೃಷ್ಟಿಮಾಡಿದ ಸಮಸ್ಯೆಗಳ ಒಳಗೆ ನಡೆದಾಡಿದಾಗ ತಲ್ಲಣವೆನಿಸುತ್ತದೆ. ''ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚು ಚರ್ಚೆಗೆ ಒಳಗಾದ 'ಕೈಗಾ ಅಣು ವಿದ್ಯುತ್ ಸ್ಥಾವರ'ದ ಹೆಸರಿನಲ್ಲಿ ಕೈಗಾದ ಸುತ್ತಾ ಸುಮಾರು ೧೨೦೦ ಹೆಕ್ಟೆರ್ ಅರಣ್ಯ ಪ್ರದೇಶ ನಾಶವಾಗಿರುವುದು, ಅಣುಸ್ಥಾವರದ ವಿಕಿರಣದ ದುಷ್ಪರಿಣಾಮದಿಂದ ನೆರೆಯ ಹತ್ತಾರು ಗ್ರಾಮಗಳು ತುತ್ತಾಗಿರುವುದು.''[೩೩] ಈ ಯೋಜನೆ ಆರಂಭವಾದಾಗಿನಿಂದ ಅನೇಕ ವಿರೋಧಿ ಚಳುವಳಿಗಳು ಈ ಭಾಗದಲ್ಲಿ ಬಿರುಸಾಗಿ ಆರಂಭವಾದವು. ಉತ್ತರ ಕನ್ನಡ ಭಾಗದ ಅನೇಕ ಬುದ್ಧಿ ಜೀವಿಗಳು, ಪರಿಸರವಾದಿಗಳು ಈ ಚಳುವಳಿಯಲ್ಲಿ ಭಾಗವಹಿಸಿದ್ದರು.

ಹಾಗೇ ಹರಿಹರದ ಪಾಲಿಪೈಬರ್ ಕಾರ್ಖಾನೆ ಮೂಲತಃ ಬಿರ್ಲಾ ಮೂಲದ ಈ ಉದ್ದಿಮೆ ಪ್ರತಿಭಟನೆಗಳನ್ನು ಎದುರಿಸುವಲ್ಲಿ ಯಶಸ್ವಿಯನ್ನು ಕಂಡದ್ದು ನೋವಿನ ಸಂಗತಿ. ಪಾಲಿಪೈಬರ್ ಮತ್ತು ಗ್ರಾಸಿವರ್ ಕಾರ್ಖಾನೆಗಳು ತುಂಗಭದ್ರ ನದಿಯನ್ನು ಅವಲಂಬಿಸಿರುವುದು ಈ ಕಾರ್ಖಾನೆಯಿಂದ ಹೊರ ಚೆಲ್ಲುತ್ತಿದ್ದ ತ್ಯಾಜ್ಯವಸ್ತು ನದಿ ಪಾಲು ಮಾಡಿದ್ದರಿಂದ ಜಲಮಾಲಿನ್ಯ ಮತ್ತು ವಾಯು ಮಾಲಿನ್ಯ ಉಂಟುಮಾಡಿರುವ ಕಾರಣಕ್ಕೆ ಎಚ್ಚರಿಕೆಯ ಮನವಿಯನ್ನು ನೀಡುತ್ತಲೇ ಬಂದಿರುವುದನ್ನು ಇಲ್ಲಿ ಸ್ಮರಿಸಬಹುದು. ''ಪಾಲಿಪೈಬರ್ ಕಾರ್ಖಾನೆಯ ವಿಷಪೂರಿತ ಕೊಳಕು ನೀರನ್ನು ತುಂಗಭದ್ರನದಿಗೆ ಹರಿಬಿಟ್ಟದ್ದರಿಂದಾಗಿ ತುಂಗಭದ್ರ ನದಿಯ ಮೀನುಗಳೆಲ್ಲಾ ಸತ್ತಿದ್ದಕ್ಕೆ ವ್ಯಾಪಕ ಜನ ಪ್ರತಿಭಟನೆಗೆ ಕಾರಣವಾಯಿತು. ಈ ಭಾಗದ ಕೃಷಿಕರು, ಮೀನುಗಾರರು, ನಗರವಾಸಿಗಳೂ ಸೇರಿದಂತೆ ಬೃಹತ್ ಸಂಖ್ಯೆಯಲ್ಲಿ ಸೇರಿ ಈ ಘಟನೆಯ ವಿರುದ್ಧ ಕಾರ್ಖಾನೆಯ ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡರು.'' ಆದರೆ ಕಾರ್ಖಾನೆಯ ಮಾಲಿಕರು ಇದಕ್ಕೆ ಬೇರೆ ಕಾರಣ ನೀಡಿದರು. ಯಾರೋ ದುಷ್ಕರ್ಮಿಗಳು ಮಾಡಿರುವ ಕೆಲಸವೆಂದು ಸ್ಪಷ್ಟಪಡಿಸಿ, ಪ್ರಭಾವಿ ವಕೀಲರಿಂದ ಜಯ ತಂದುಕೊಂಡರು.

ಈ ಸಂದರ್ಭದಲ್ಲಿ ಕಾರ್ಖಾನೆಯ ಪ್ರಶ್ನೆಯನ್ನಿಟ್ಟುಕೊಂಡು ಬರೆಯುವದಾದರೆ, ಹೈದ್ರಾಬಾದ್ ಕರ್ನಾಟಕದ ಬೀದರ್ ಜಿಲ್ಲೆಯನ್ನು ಕೇಂದ್ರ ಸರಕಾರ ೧೯೮೩ರಲ್ಲಿ ಕೈಗಾರಿಕಾ ರಹಿತ ಪ್ರದೇಶವೆಂದು ಘೋಷಣೆ ಮಾಡಿದ ಮೇಲೆ ಈ ಪ್ರದೇಶದಲ್ಲಿ ಕೈಗಾರಿಕೀಕರಣ ಪ್ರಕ್ರಿಯೆ ಕಾಣಿಸಿಕೊಂಡು ಬೀದರ್‌ನ ಕೊಳಾರ ಮತ್ತು ನೌಬಾದ್ ಗ್ರಾಮಗಳನ್ನು ಕೈಗಾರಿಕಾ ಪ್ರದೇಶವಾಗಿ ಅಭಿವೃದ್ಧಿ ಪಡಿಸಲಾಯಿತು. ಆ ಗ್ರಾಮಗಳ ಜನರನ್ನು ಒಕ್ಕಲೆಬ್ಬಿಸಲಾಯಿತು. ನಿರಾಶ್ರಿತರಿಗೆ ಸೂಕ್ತ ಪರಿಹಾರ ಮತ್ತು ಪುನರ್ವಸತಿ ವ್ಯವಸ್ಥೆಯನ್ನು ಕಲ್ಪಿಸಿಕೊಡುವಲ್ಲಿ ಸಂಬಂಧಿಸಿದ ಅಧಿಕಾರಿಗಳು ಆಸಕ್ತಿ ತೋರಲಿಲ್ಲ. ಸುಮಾರು ೧೫ ರಾಸಾಯನಿಕ ಹಾಗೂ ಔಷಧಿ ಉತ್ಪಾದನಾ ಕಾರ್ಖಾನೆಗಳು ಬೀದರ್ ಕೈಗಾರಿಕಾ ಪ್ರದೇಶದಲ್ಲಿ ಕಾರ್ಯ ನಿರ್ವಹಿಸಲಾಯಿತು. ಈ ಕಾರ್ಖಾನೆಗಳು ಆರಂಭಿಕ ಹಂತದಲ್ಲಿ ಪರಿಸರ ಮಾಲಿನ್ಯ ನಿವಾರಣೆಗೆ ಸರಿಯಾದ ವ್ಯವಸ್ಥೆಯನ್ನು ಮಾಡಿಕೊಂಡಿರಲಿಲ್ಲ. ನೀರು ಶುದ್ಧೀಕರಣ ಘಟಕ ಅಳವಡಿಸಿಕೊಂಡಿರಲಿಲ್ಲ. ಪಕ್ಕದ ಕೆರೆಯ ನೀರಿಗೆ ಕಾರ್ಖಾನೆಯ ವಿಷಸೇರಿ ನೂರಾರು ದನಕರುಗಳು ಸಾವನಪ್ಪಿದವು. ಗ್ರಾಮಸ್ಥರ ಪ್ರತಿಭಟನೆಗೆ ನ್ಯಾಯ ದೊರಕಲಿಲ್ಲ ಅನೇಕ ಕಾರ್ಮಿಕರು ಕಾರ್ಖಾನೆಯ ವಿಷಗಾಳಿ ಸೇವಿಸಿ ಮೃತರಾದರು. ಅವರ ಕುಟುಂಬಗಳಿಗೆ ನ್ಯಾಯ ಬದ್ಧವಾದ ಪರಿಹಾರ ಸಿಗಲಿಲ್ಲ. ಕೈಗಾರಿಕಾ ಪ್ರದೇಶದ ಸುತ್ತಮುತ್ತಲಿನ ಭೂಮಿಯೂ ಫಲವತ್ತತೆಯನ್ನು ಕಳೆದುಕೊಂಡಿತು. ಇದಕ್ಕೆ ಕಾರ್ಖಾನೆಯ ವಿಷಮಿಶ್ರಿತ ಕಲ್ಮಶಗಳೇ ಪ್ರಮುಖ ಕಾರಣವಾಗಿತ್ತು.

ಮತ್ತೊಂದು ಪ್ರಕರಣವೆಂದರೆ ೧೯೯೩ರಲ್ಲಿ ಜಪಾನ್ ತಂತ್ರಾಧಾರಿತ ಕೈಗಾರಿಕಾ ನಗರ ಕಾಲೋನಿಯ ಹೆಸರು ಕೇಳಿ ಬಂದಾಗ ವ್ಯಾಪಕ ಪ್ರತಿಭಟನೆ ಪ್ರಾರಂಭಗೊಂಡಿತು. ಸಮಾಜದ ಎಲ್ಲಾ ವರ್ಗದ ಜನರೂ ಈ ಚಳುವಳಿಯಲ್ಲಿ ಪಾಲ್ಗೊಂಡರು. ಈ ಕೈಗಾರಿಕಾ ನಗರದ ಸ್ಥಾಪನೆಯನ್ನು ನವವಸಾಹತುಶಾಹಿಯ ಪ್ರವೇಶ ಎಂಬುದಾಗಿ ಕರೆದು ವ್ಯಾಪಕವಾಗಿ ಪ್ರತಿಭಟಿಸಲಾಯಿತು.

ಚಳುವಳಿಗಾರರು ಸರ್ಕಾರವನ್ನು ನೇರವಾಗಿ ತರಾಟೆಗೆ ತೆಗೆದುಕೊಂಡರು. ಹಲವಾರು ಪರಿಸರ ಸಂಘಟನೆಗಳು ಒಗ್ಗೂಡಿ ಜಪಾನ್ ಕೈಗಾರಿಕಾ ನಗರ ವಿರೋಧಿ ಒಕ್ಕೂಟವನ್ನು ಸ್ಥಾಪಿಸಿದವು. ಈ ಒಕ್ಕೂಟ ಕೈಗಾರಿಕಾ ನಗರದ ವಿರುದ್ಧ ಜನರನ್ನು ಸಂಘಟಿಸಿ ವ್ಯಾಪಕ ಪ್ರತಿಭಟನೆಯನ್ನು ನಡೆಸಿತು. ಕನ್ನಡದ ಹಿರಿಯ ಲೇಖಕರಾದ ಡಾ. ಎಂ. ಚಿದಾನಂದ ಮೂರ್ತಿ, ಕೆ.ವಿ. ಸುಬ್ಬಣ್ಣ ಮುಂತಾದವರು ಚಳುವಳಿಯಲ್ಲಿ ಪಾಲ್ಗೊಂಡರು. ಅಪಾರ ಸಂಖ್ಯೆಯ ರೈತರು, ಪರಿಸರ ಪ್ರೇಮಿಗಳು, ನಗರ ವಾಸಿಗಳು ವಿವಿಧ ಸಂಘಟನೆಗಳ ಸದಸ್ಯರು ಪ್ರತಿಭಟನಾ ಮೆರವಣಿಗೆ ನಡೆಸಿದರು. ಬೆಂಗಳೂರು ನಗರವನ್ನು ಇನ್ನಷ್ಟು ಮಾಲಿನ್ಯಕ್ಕೀಡು ಮಾಡಬಹುದಾದ ಈ ಯೋಜನೆ ಅದೆಷ್ಟು ಆಕರ್ಷಕವಾಗಿದ್ದರೂ. ನಮಗೆ ಬೇಡಯೆನ್ನುವ ಒತ್ತಾಯವನ್ನು ಸರಕಾರದ ಮೇಲೆ ಹೇರಲಾಯಿತು. ಈ ಚಳುವಳಿಗಳ ತೀವ್ರತೆಯನ್ನು ಅರ್ಥೈಯಿಸಿಕೊಂಡ ಸರಕಾರ ಜಪಾನ್ ಕೈಗಾರಿಕಾ ನಗರ ಯೋಜನೆಯನ್ನು ಕೈ ಬಿಟ್ಟಿತು. ಈ ಸಂಘಟನೆಯಾದ ನಂತರ ಕರ್ನಾಟಕದ ಹಲವಾರು ನಗರಗಳಲ್ಲಿ ಕೈಗಾರಿಕೆಗಳ ವಿರುದ್ಧ ಚಳುವಳಿ ಕಾಣಿಸಿಕೊಂಡಿತು.

ಈ ಸಂದರ್ಭದಲ್ಲಿ ಮತ್ತೊಂದು ಕಾರ್ಖಾನೆಯ ಸಮಸ್ಯೆಯ ಪ್ರಶ್ನೆಯನ್ನು ಕುರಿತು ವಿಶ್ಲೇಷಿಸುವುದಾದರೆ ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕಿನ ಕೈಗಾರಿಕಾ ಪ್ರದೇಶದಲ್ಲಿರುವ 'ಔಷಧಿ ತಯಾರಿಕಾ ಘಟಕ' ಮಾಕ್ಸಿ 'ಫಾರ್ಮಾ' ಕೈಗಾರಿಕೆ ೧೯೯೭ರಲ್ಲಿ ರಾಜ್ಯಾದ್ಯಂತ ಸುದ್ಧಿಮಾಡಿತು ಇದಕ್ಕೆ ಕಾರಣ ಒಂದೇ ವರ್ಷದಲ್ಲಿ ಈ ಕೈಗಾರಿಕೆಯಿಂದ ಮೂರು ಬಾರಿ ಅನಿಲ ಸೋರಿಕೆಯಾಗಿ ಈ ಭಾಗದ ಜನರ ಹಸುಗಳು ಸತ್ತು ಅನೇಕರು ಹೈಡ್ರೋಜನ್ ಸಲ್ಫೈಟ್ ಕುಡಿದು ಅಸ್ವಸ್ಥರಾಗಿದ್ದರು. ಇದರಲ್ಲಿ ನಾಲ್ಕಾರು ಜನ ಕಾರ್ಮಿಕರು ಪ್ರಾಣ ಕಳೆದುಕೊಂಡರು ಇದನ್ನು

ವಿರೋಧಿಸಿ ಕಾರ್ಖಾನೆಯ ಆಡಳಿತ ಮಂಡಳಿ ಹಾಗೂ ಮಾಲಿಕರ ವಿರುದ್ಧ ಮೊಕದ್ದಮೆಯನ್ನು ಹೂಡಲಾಯಿತು. ಈ ಮಾಲಿನ್ಯ ನಿಯಂತ್ರಣ ಮಂಡಳಿಯು ಹೊಸ ಅನುಮತಿ ನೀಡುವವರೆಗೂ ಕಾರ್ಖಾನೆಯನ್ನು ತಾತ್ಕಲಿಕವಾಗಿ ಮುಚ್ಚಬೇಕೆಂದು ಆಗ್ರಹ ಪಡಿಸಲಾಯಿತು. ಆದರೆ ಹೆಚ್ಚಿನ ಕಾರ್ಮಿಕರು ಪರಿಸರ ಸಂಘಟನೆಗಳೊಡನೆ ಬೆರೆಯಲಿಲ್ಲ. ಸ್ಥಳೀಯರ ಪ್ರಕಾರ ಈ ಕಾರ್ಮಿಕರು ಹೊರರಾಜ್ಯಗಳಿಗೆ ಸೇರಿದವರಾಗಿದ್ದು ಕಾರ್ಖಾನೆಯ ಮಾಲಿಕರ ವಿರುದ್ಧ ಹೋರಾಟ ನಡೆಸಲು ಆಸಕ್ತಿ ತೋರಿಸಲಿಲ್ಲ. ಹೋರಾಟ ನಡೆಸಿದರೆ ತಾವು ಕೆಲಸ ಕಳೆದುಕೊಳ್ಳಬೇಕಾದಿತೆಂಬ ಭಯ ಅವರಿಗಿತ್ತು. ದೊಡ್ಡ ದೊಡ್ಡ ಹುದ್ದೆಗಳಲ್ಲಿರುವ ಅಧಿಕಾರಿಗಳಿಗೆ ಎಲ್ಲಾ ಸವಲತ್ತು ಸೌಕರ್ಯಗಳೂ ಇರುವುದರಿಂದಾಗಿ ಇವರ‍್ಯಾರು ಹೋರಾಟಕ್ಕೆ ಬೆಂಬಲ ನೀಡಲಿಲ್ಲ. ಇದರಿಂದಾಗಿ ಅನಿಲ ಸೋರಿಕೆ ಉಂಟಾದರೂ ಕಾರ್ಖಾನೆಯ ಕೆಲಸ ಕಾರ್ಯಗಳು ನಿರಂತರವಾಗಿ ನಡೆಯುತ್ತಲೇಯಿದ್ದವು.

ಪರಿಸರ ಚಳುವಳಿಕಾರರು ಈ ಕಾರ್ಖನೆಯನ್ನು ವಿರೋಧಿಸಲು ಇನ್ನೊಂದು ಮುಖ್ಯ ಕಾರಣವೆಂದರೆ, ಈ ಕಾರ್ಖಾನೆಯಿಂದ ನೆರೆಯ ಗ್ರಾಮದ ಮೇಲಾಗಿರುವ ಕೆಟ್ಟ ಪರಿಣಾಮಗಳು ಅನೇಕ ಈ ಔಷಧಿಯ ತಯಾರಿಕಾ ಕಾರ್ಖಾನೆಯ ಹಿಂಬಂದಿಯಲ್ಲಿರುವ ಕಲ್ಲಳ್ಳಿಯ ಜನರು ಕಾರ್ಖಾನೆಯ ಘಾಟುವಾಸನೆಯನ್ನು ಕುಡಿಯುತ್ತಾ ಚರ್ಮರೋಗ, ಟಿ.ಬಿ. ಮೊದಲಾದ ರೋಗಗಳನ್ನು ಅನುಭವಿಸಬೇಕಾಗಿದೆ. ಬಡ ಜನರಿಂದಲೇ ತುಂಬಿಕೊಂಡಿರುವ ಈ ಹಳ್ಳಿಯನ್ನು ಕಾರ್ಖಾನೆಯ ಅಧಿಕಾರಿಗಳು ನಿಯಂತ್ರಣವಿಡುವಲ್ಲಿ ಯಶಸ್ವಿಯಾಗಿದ್ದಾರೆ. ಈ ಕಾರ್ಖಾನೆ ನಿರ್ಮಾಣ ಮಾಡುವ ಹೊತ್ತಿನಲ್ಲಿ ಈ ಹಳ್ಳಿಯ ಅನೇಕರು ಭೂಮಿಯನ್ನು ಕಳೆದುಕೊಂಡಿದ್ದರು. ಅವರಿಗೆ ಉದ್ಯೋಗ ನೀಡುವುದಾಗಿ ಭರವಸೆಯನ್ನು ನೀಡಲಾಗಿತ್ತು. ಆದರೆ ಈ ಭರವಸೆ ಇಂದಿನವರೆಗೂ ಈಡೆರಿಸಿಲ್ಲ. ಈ ಕಾರ್ಖಾನೆಯಿಂದ ಹೊರ ಬೀಳುವ ಕಲ್ಮಶ ನೀರು ಪೈಪುಗಳ ಮೂಲಕ ಕಲ್ಲಳ್ಳಿಯ ಹೊಲಗಳ ಮೂಲಕ ಕಬಿನಿ ನದಿಯನ್ನು ಸೇರಿರುವುದು. ಈ ನದಿಯ ನೀರನ್ನು ಕುಡಿದು ಹಳ್ಳಿಯ ಅನೇಕ ಹಸುಗಳು ಸತ್ತಿವೆ. ಅಲ್ಲಿಯ ಜನರು ನಾನಾರೋಗಗಳಿಗೆ ತುತ್ತಾಗಿದ್ದಾರೆ.

ಇಂತಹ ಅನೇಕ ಕೈಗಾರಿಕಾ ಸಮಸ್ಯೆಗಳು ದೇಶ ಮತ್ತು ಅನೇಕ ರಾಜ್ಯಗಳಲ್ಲಿ ಸಂಭವಿಸಿವೆ. ಈ ಅಧ್ಯಾಯದಲ್ಲಿ ಕರ್ನಾಟಕದಲ್ಲಿಯ ಕಾರ್ಖಾನೆಗಳು ಸೃಷ್ಠಿಸಿದ ಸಮಸ್ಯಾತ್ಮಕ ಪ್ರಶ್ನೆಗಳನ್ನು ಕುರಿತು ಮಾತ್ರ ವಿಶ್ಲೇಷಣೆ ಮಾಡಿದ್ದೇನೆ.

ಕಳೆದ ಮೂರು ದಶಕಗಳಲ್ಲಿ ಕರ್ನಾಟಕದಲ್ಲಿ ಪೇಟೆ ಪಟ್ಟಣ, ನಗರಗಳು ಬೃಹತ್ ಗಾತ್ರದಲ್ಲಿ ಬೆಳೆಯಲಾರಂಭಿಸಿದವು. ಅಷ್ಟೆ ಗಾತ್ರದಲ್ಲಿ ಜನಸಂಖ್ಯೆಯೂ ವರ್ದಿಸಲಾರಂಭಿಸಿತು. ಜನಸಂಖ್ಯೆ ದಿನೆ ದಿನೆ ಹೆಚ್ಚುತ್ತಿರುವುದರಿಂದ ನಾಗರಿಕ ಅನುಕೂಲಗಳು ದಿನದಿನಕ್ಕೆ ಹದಗೆಡುತ್ತಾ ಹೋಗುತ್ತಿದೆ. ಇದು ಅತಿರೇಕದ ನಗರೀಕರಣ ಮತ್ತು ಕೈಗಾರೀಕರಣದ ಫಲವಾಗಿ ಕಂಡು ಬರುತ್ತಿದೆ. ಈ ಕೈಗಾರೀಕರಣದ ತೀವ್ರತೆಯಿಂದ ಕೊಳಗೇರಿಗಳು ಹೆಚ್ಚುತ್ತಾ ಹೋಗಿ ನೆಲ ಬಳಕೆಯ ಯೋಜನೆಗಳು ಏರುಪೇರಾಗುತ್ತಿವೆ. ನಗರ ಪರಿಸರವನ್ನು ಉತ್ತಮ ರೀತಿಯಲ್ಲಿ ಕಾಯ್ದುಕೊಳ್ಳುವ ನಿರ್ದಿಷ್ಟ ಯೋಜನೆಗಳೂ ರೂಪುಗೊಳ್ಳುತ್ತಿಲ್ಲ. ಇಂದು ಬೃಹತ್ ಕೈಗಾರಿಕಾ ನಗರಗಳು ಸುತ್ತಲಿನ ಗ್ರಾಮೀಣ ಭೂಮಿಯನ್ನೆಲ್ಲಾ ನುಂಗುತ್ತಲೇ ಇನ್ನಷ್ಟು ವಿಸ್ತಾರವಾಗಿ ಬೆಳೆಯುತ್ತಲೇ ಹೋಗುತ್ತವೆ. ಇದರಿಂದಾಗಿ ಸಾವಿರಾರು ಎಕರೆ ಕೃಷಿ ಭೂಮಿ ಹರಿದು ಹಂಚಿ ಹೋಗಿದೆ.

ಹೀಗೆ ನವವಸಾಹತುಶಾಹಿಯ ಆಕ್ರಮಣದಿಂದ ನಮ್ಮ ಬದುಕು ಛಿದ್ರಗೊಳ್ಳುತ್ತಿದ್ದಾಗ ನಮ್ಮ ನೆಲದ ಬದುಕಿನ ಪ್ರಶ್ನೆಯನ್ನಿಟ್ಟುಕೊಂಡು ಅನೇಕ ಪರಿಸರವಾದಿಗಳು ದೇಶಿಯ ಸಂಘಗಳನ್ನು ಬೆನ್ನಿಗೆ ಕಟ್ಟಿಕೊಂಡು ಹೋರಾಟಗಳಲ್ಲಿ

ದುಮುಕಿರುವುದು ಕಂಡು ಬರುತ್ತಿದೆ. ನಾಡಿನ ಕೆಲವು ಕೈಗಾರಿಕೆಗಳನ್ನು ಪ್ರಶ್ನೆಯಾಗಿಟ್ಟುಕೊಂಡು, ಒಟ್ಟು ಕೈಗಾರಿಕೆಗಳ ಸಮಸ್ಯೆಗಳ ಕಡೆಗೆ ಗಮನ ಹರಿಸಿದ್ದೇನೆ.

ಆಧುನಿಕ ಕನ್ನಡದ ಅದರಲ್ಲೂ ನವ್ಯೋತ್ತರ ಸಾಹಿತ್ಯ ಸಂದರ್ಭದ ಕತೆಗಾರರು ನವವಸಾಹತುಶಾಹಿಗೆ ಮುಖಾಮುಖಿಯಾಗಿ ಕೆಲವು ಕತೆಗಳ ಮೂಲಕ ದೇಶಿಯ ಸಂಘರ್ಷಗಳನ್ನೊಳಗೊಂಡ ಕತೆಗಳನ್ನು ರಚಿಸಿದ್ದಾರೆ. ಇಲ್ಲಿ ಕೆಲವು ನವವಸಾಹತುಶಾಹಿಯ ಏಳೆಗಳುಳ್ಳ ಕತೆಗಳನ್ನು ವಿಶ್ಲೇಷಣೆಗೆ ಒಳಪಡಿಸಿಕೊಂಡಿದ್ದೇನೆ.

**೭.೮. ಕೈಗಾರಿಕಾ ಸಂಬಂಧಿ ಕತೆಗಳ ವಿಶ್ಲೇಷಣೆ**

ರಾಜಶೇಖರ ನೀರ ಮಾನ್ವಿಯವರ ''ಕರ್ಪೂರದ ಕಾಯದಲ್ಲಿ ಚೆಂಕಿಯುಸಿರಾಟ'' ಕತೆಯಲ್ಲಿ ಬರುವ ಮಾರುತಿ ಜಾದವ ಮಹಾರಾಷ್ಟ್ರದ ಗಡಿಭಾಗದ ಪಟೇಲರ, ಕಾರ್ಖಾನೆಯಲ್ಲಿ ನೌಕರಿ ಮಾಡಿದವನು. ಕಾರ್ಮಿಕ ಸಂಘಟಗಳು ಸೃಷ್ಟಿಸುವ ಗದ್ದಲದಲ್ಲಿ ಈತ ಕಾಣಿಸಿಕೊಂಡು ವಿನಾಕಾರಣ ಅಪರಾಧಿಯಾಗಿ ನೌಕರಿ ಕಳೆದುಕೊಂಡವನು.

ಬಹಳಷ್ಟು ಕಾರ್ಖಾನೆಗಳಲ್ಲಿ ಇಂತಹ ಆಂತರಿಕ ಕಲಹ ಸರ್ವೆ ಸಾಮಾನ್ಯವಾಗಿರುವಂತದ್ದು ಆದರೆ ಮಹರಾಷ್ಟ್ರದ ಪಾಟೇಲರ ಕಾರ್ಖಾನೆಯಲ್ಲಿ ಮರಾಠಿ ಮತ್ತು ಕನ್ನಡಿಗರ ನಡುವಿನ ಕಲಹ ಸಂಘರ್ಷಾತ್ಮಕ ನೆಲೆಯಲ್ಲಿ ಕಾಣಿಸಿಕೊಳ್ಳುವಂತದ್ದು. ಇಲ್ಲಿ ಜ್ಯೋತಿ ಕಾರ್ಖಾನೆ ಕರ್ನಾಟಕದಲ್ಲಿದೆ. ಮಾಲಿಕರು ಮಹಾರಾಷ್ಟ್ರದವರು. ಮಾರುತಿ ಜಾದವ ಹೇಳುವ ಹಾಗೇ ''ಸಾಹೇಬರ ಪ್ಯಾಕ್ಟರಿ ಹೊರಗಿನವರು ನಡಸೋದಕ ನಮ್ಮ ಹರಕತ್ತಿಲ್ಲ ಇಲ್ಲಿನ ನೆಲ, ನೀರು, ಕರೆಂಟು ಅಂತ ಸವಲತ್ತು ಹೊಡಕೊಂಡು ಕೆಲಸಕ್ಕ ಮಾತ್ರ ನಮ್ಮನ್ನ ಬ್ಯಾಡ ಅಂದರ ಹೆಂಗ..? ಇದರ ಸಮಂದ ಮ್ಯಾಲಿಂದ ಮ್ಯಾಲ ಗಲಾಟೆಗಳಾಗತಿದ್ರೂ ನಮ್ಮನ್ನಾಳುವವರಿಗೆ ಖಬರಿಲ್ದ ಪರವಾನಿಗಿ ಕೊಟ್ಟಾರ.''[೩೪] ಎಂಬ ಮಾತಿನಲ್ಲಿ ಇಂದಿನ ಕಾರ್ಖಾನೆಯ ಮಾಲಿಕರು ನಮ್ಮ ನಾಡಿನ ನೆಲ ಜಲವನ್ನು ಬಳಸುವುದರ ಜೊತೆಗೆ ತಾವು ನೀಡಿದ ಉದ್ಯೋಗವನ್ನು ಮಾರುತಿಯಿಂದ ಕಿತ್ತುಕೊಂಡಿದ್ದಾರೆ. ಗಡಿ ಮತ್ತು ಭಾಷಾ ಚಳುವಳಿಗಳ ಹುಟ್ಟಿಗೆ ಈ ಕಾರ್ಖಾನೆಯ ಬಂಡವಾಳ ಶಾಹಿಗಳು ಕಾರ್ಖಾನೆಯ ಕಾರ್ಮಿಕರ ಹಿತಾಶಕ್ತಿಯನ್ನು ದುರ್ಬಳಕೆ ಮಾಡಿಕೊಂಡಿದ್ದಾರೆ. ಮಾರುತಿ ಜಾದವ್ ನೌಕರಿ ಕಳೆದುಕೊಂಡು ಚಿಂಚಲಿ ಗ್ರಾಮದಲ್ಲಿ ಒಕ್ಕಲು ಮಗನಾಗಿ ಹೊಟ್ಟೆಹೊರೆದು ಕೊಳ್ಳುತ್ತಿರುವವನು. ಊರಿನ ಮಲ್ಲಾರಿ ಗೌಡರು ಈತನಿಗೆ ಮೊದ ಮೊದಲು ಸಹಕರಿಸಿದವರು. ನಂತರ ರೈತ ಚಳುವಳಿಯ ನಾಯಕತ್ವದ ಸಂಬಂಧದಲ್ಲಿ ಭಿನ್ನಮತ ಬೆಳೆಸಿಕೊಂಡವನು. ಈ ಮಾರುತಿ ಜಾದವ್ ಕಾರ್ಖಾನೆಯ ಲೇಬರ್ ಯೂನಿಯೆನ್‌ನ ನಾಯಕನಾದಗಿನಿಂದ ಉಳ್ಳವರಿಗೆ ಕಣ್ಣುಕಿಸರಾದವನು. ಕನ್ನಡದ ಹುಡುಗಿ ಮಾದೇವಿಯ ಮಾನ ರಕ್ಷಿಸಿ ಆಕೆಯನ್ನು ಮದುವೆಯಾಗಿರುತ್ತಾನೆ. ಇದೂ ಮರಾಠಿಗರಲ್ಲಿ ಸಿಟ್ಟು ತರಿಸಿದೆ. ಇದ್ದಕ್ಕಿದ್ದಂತೆ ಗಡಿಭಾಗದಲ್ಲಿ ಭಾಷಾ ಚಳುವಳಿ ಉಗ್ರ ರೂಪತಾಳಿ ನರಮೇಧ ನಡೆಯತೊಡಗುತ್ತದೆ. ಪತ್ರಕರ್ತ ಮೋಹನ ಗಡಿ ಚಳುವಳಿಯ ಸಮಗ್ರ ವರದಿ ತಯಾರಿಸಲು ಚಿಂಚಲಿಗೆ ಬಂದು ಮಾರುತಿ ಜಾದವನ ಬದುಕಿನ ಎಲ್ಲಾ ವಿವರಗಳನ್ನು ಸಂಗ್ರಹಿಸಿ ಆತನೊಂದಿಗೆ ಚರ್ಚಿಸಿ ಮಾರುತಿಯನ್ನು ಕಾಪಾಡಲೂ ಶಕ್ತಿ ಮೀರಿ ಪ್ರಯತ್ನಿಸುತ್ತಾನೆ. ಆದರೆ ಭಯೋತ್ಪಾದನೆಯ ಉಗ್ರ ಸ್ವರೂಪದ ಚಳುವಳಿಯಲ್ಲಿ ಮಾರುತಿ ಜಾದವ್ ಕೊಲೆಯಾಗಿ ಹೋಗುತ್ತಾನೆ. ಮಾದೇವಿ ವಿಧವೆಯಾಗುತ್ತಾಳೆ. ಈ ಕತೆಯಲ್ಲಿ ಕಾರ್ಮಿಕ ಚಳುವಳಿಯು ವಿವಿಧ ರೂಪ ತಾಳಿ, ಭಾಷೆ, ಗಡಿಗಳ ವ್ಯಾಪ್ತಿಯ ಸಮಸ್ಯೆಗೆ ಕಾರಣವಾಗುತ್ತದೆ. ಕಾರ್ಖಾನೆಗಳ ಮಾಲಿಕರು ಶ್ರಮ ಶಕ್ತಿಗಳ ಒಗ್ಗಟ್ಟನ್ನು ದಮನಗೊಳಿಸುವ ಪರಿ ತಲ್ಲಣಗೊಳಿಸುವಂತದ್ದಾಗಿದೆ. ಕಾರ್ಖಾನೆಗಳು, ಕಾರ್ಖಾನೆಯ ಮಾಲಿಕರು ಸೃಷ್ಟಿಸುವ ಸಮಸ್ಯೆಗಳು ನಾನಾ ಸ್ವರೂಪದಲ್ಲಿ ಹೇಗೆ ವಿನಾಶಕ್ಕೆ ಕಾರಣವಾಗುತ್ತವೆ ಎಂಬುದನ್ನು ಕತೆ ವಿಶ್ಲೇಷಿಸುತ್ತದೆ.

ಹೈದ್ರಾಬಾದ್ ಕರ್ನಾಟಕದ ಸಾಮಾಜಿಕ ವಾಸ್ತವತೆಯನ್ನು ಅರ್ಥಪೂರ್ಣವಾಗಿ ಕಥಾ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ ಕೆಲವೇ ಕತೆಗಾರರಲ್ಲಿ ರಾಜಶೇಖರ ಹತಗುಂದಿಯವರೂ ಒಬ್ಬರು. ಇವರ ''ಪೊರೆ ಕಳಚುವ ಪರಿ'' ಕತೆ ನವವಸಾಹತುಶಾಹಿ ಸಂದರ್ಭದಲ್ಲಿ ಕೈಗಾರಿಕ ಸಮಸ್ಯೆಯನ್ನು ಈ ಕತೆ ವಿಶ್ಲೇಷಣೆಗೆ ಒಳಪಡಿಸಿದೆ. ಅಂದಿನ ಜಾನಪದ ಡಪ್ಪಿನಾಟದ ವೈಶಿಷ್ಟತೆಯನ್ನು ಹೇಳುವುದರ ಜೊತೆಗೆ, ''ಕತ್ತಲ್ಳಿಯ ಅನಾದಿಕಾಲದ ಶಾಮರಾಯನೆಂಬ ಗೌಡ ತನ್ನ ಮಕ್ಕಳಿಗೆ ಸೋಮರಾಯ, ಭೀಮರಾಯನೆಂಬ ಹೆಸರಿಟ್ಟಿರುವುದು, ಆ ಮಕ್ಕಳು ಬೆಳೆದು ದೊಡ್ಡವರಾಗಿ ಕತ್ತಲ್ಳಿಯ ಜಾನಪದ ಬದುಕಿನ ಪೊರೆ ಕಳಚಿಕೊಂಡು ಆಧುನೀಕತೆಯ ಸಂಕೇತವಾಗುವುದು. ಈ ಸಂದಿಗ್ಧ ಕಾಲ ಘಟ್ಟದಲ್ಲಿ ಕತ್ತಲ್ಳಿಯಲ್ಲಿ ಕಾರ್ಖಾನೆಯೊಂದು ಪ್ರಾರಂಭವಾಗಿ ಊರಿನ ಸುಂದರ ಪರಿಸರ ಮತ್ತು ಊರಿನ ಜನರಲ್ಲಿ ಅನೇಕ ಖಾಯಿಲೆಗಳಿಗೆ ಕಾರಣವಾಗುತ್ತದೆ.''[೬೬] ಜನರ ಉಸಿರಾಟಕ್ಕೆ ತೊಂದರೆಯಾಗುತ್ತದೆ.. ಊರಿನ ಬೆಳೆಗಳಿಗೆ ಜೀವ ಜಂತುಗಳಿಗೆ ಕುತ್ತು ಒದಗಿ ಬರುತ್ತದೆ. ಕಾರ್ಖಾನೆಯ ಬೆನ್ನೆಲುಬಾಗಿದ್ದ ರಾಜಕಾರಣಿ ಮಾರುದ್ರಗೌಡನ ಕುತಂತ್ರಗಳಲ್ಲಿ ಊರಿನ ವಿನಾಶ ಕಂಡುಬರುತ್ತದೆ. ಶಾಮರಾಯ ಗೌಡಿಕಿಯ ಗತ್ತಿನಲ್ಲಿ ಎಲ್ಲವನ್ನೂ ಕಳೆದುಕೊಂಡಿದ್ದಾನೆ. ಹೆಂಡತಿಗೆ ಕಾರ್ಖಾನೆಯ ಹದಗೆಟ್ಟ ಪರಿಸರದಿಂದ ಟಿ.ಬಿ. ಬ್ಯಾನಿ ಅಂಟಿಕೊಂಡಿದೆ. ಶಾಮರಾಯನ ಹಿರಿಯ ಮಗ ಡಿಪ್ಲೊಮಾ ಓದಿ ನಿರುದ್ಯೋಗಿಯಾಗಿರುವುದು. ಕಿರಿಯ ಮಗ ಭೀಮರಾಯ ಶಾಬಾದಿ ಕಲ್ಲಿನ ಗಣ್ಯಾಗ ಡ್ರಸರ್ ಕೆಲಸಕ್ಕೆ ಸೇರಿಕೊಂಡು ಬಡತನವಿದ್ದ ಮನೆಗೆ ಉರುಗೋಲಾಗಿದ್ದಾನೆ. ಹಿರಿಯ ಮಗ ಸೋಮರಾಯ ತಂದೆಯ ಒತ್ತಾಯಕ್ಕೆ ನೌಕರಿ ಹಿಡಿಯಲು ಊರಿನ ರಾಜಕಾರಣಿಯಾದ ಮಾರುದ್ರಗೌಡನಲ್ಲಿ ಹೋರಾಟಕ್ಕೆ ನಿಲ್ಲುವುದು. ದಲಿತ ಸಂಘದ ಹುಡುಗರ ಉಪಟಳದಿಂದ ನೌಕರಿ ತಪ್ಪಿ ದುಃಖತಪ್ತನಾಗುತ್ತಾನೆ. ನಿರುದ್ಯೋಗದಂತ ಪೆಡಂಭೂತ ಯುವ ಶಕ್ತಿಯನ್ನು ಹೊಸಕಿ ಹಾಕುತ್ತದೆ. ರಾಜಶೇಖರ ಹತಗುಂದಿಯವರು ಈ ಕತೆಯಲ್ಲಿ ಬರದ ನಾಡದ ಹೈದರಾಬಾದು ಕರ್ನಾಟಕದ ಕುಗ್ರಾಮಗಳ ನೋವಿನ ಬದುಕನ್ನು ಕತೆಯಾಗಿಸಿದ್ದಾರೆ. ಜೊತೆಗೆ ನೂರಾರು ಕನಸುಗಳನ್ನು ಬಿತ್ತಿ ಆರಂಭವಾಗುವ ಕೈಗಾರಿಕೆಗಳು ಆ ಭಾಗದ ಜನರ ನೆಮ್ಮದಿಯ ಬದುಕನ್ನು ಹೊಸಕಿ ಹಾಕಿದ ಪರಿಯನ್ನು ಇಲ್ಲಿ ದಾಖಲಿಸಿದ್ದಾರೆ.

ನವ್ಯೋತ್ತರ ಕನ್ನಡ ಕಥಾ ಸಾಹಿತ್ಯ ಸಂದರ್ಭದಲ್ಲಿ ಗಮನಾರ್ಹ ಕತೆಗಾರ್ತಿಯಾದ ನೇಮಿಚಂದ್ರರ ''ಏನೊಂದೂ ಆಗದವರು'' ಕತೆಯ ನಾಯಕಿ ಶಶಿ ಬಿ.ಇ. ಶಿಕ್ಷಣ ಮುಗಿಸಿ ರವಿ ಕೆಲಸಮಾಡುತ್ತಿದ್ದ ಕಾರ್ಖಾನೆಗೆ ಆಫೀಸರ್ ಹುದ್ದೆ ಪಡೆದು ಬಂದವಳು. ರವಿ, ಶಶಿಯ ಬಾಲ್ಯದ ಗೆಳೆಯ, ಸುಸಂಸ್ಕೃತ, ಅದೇ ಕಾರ್ಖಾನೆಯಲ್ಲಿ ಸಾಮಾನ್ಯ ಕಾರ್ಮಿಕ. ಆದರೆ ಬಾಲ್ಯದಲ್ಲಿಯೇ ಶಶಿಯ ತಂದೆ ತಾಯಿಗಳು ರವಿಗೆ ಶಶಿಯನ್ನು ಕೊಟ್ಟು ಮದುವೆ ಮಾಡಬೇಕೆಂದು ನಿರ್ಧರಿಸಿದ್ದಾರೆ. ಸಭ್ಯ, ಸುಸಂಸ್ಕೃತ ಮನುಷ್ಯನಾದ ರವಿ ಕಂಪ್ಯೂಟರ್ ಬಳಸುತ್ತಿದ್ದ ರೀತಿಗೆ ಶಶಿ ಮಾರುಹೋಗಿದ್ದಾಳೆ, ಆದರೆ ಬಿ.ಇ. ಮುಗಿಸಿ ಕಂಪ್ಯೂಟರ್ ಜಗತ್ತಿಗೆ ಪ್ರವೇಶಿಸಿದ ಮೇಲೆ ರವಿ ಒರ್ವ ಟೈಪಿಷ್ಟ್‌ಗಿಂತ ಹೆಚ್ಚೇನೂ ಕೆಲಸ ಕಲಿತಿಲ್ಲವೆಂದು ಆಕೆಗೆ ಗೊತ್ತಾಗುತ್ತದೆ. ಹೀಗಾದರೂ ಸಂಜೆ ಕಾಲೇಜಿನಲ್ಲಿ ಬಿ.ಇ. ಮುಗಿಸಿ ತನ್ನ ಮಟ್ಟಕ್ಕೆ ಬರಬೇಕೆಂದು ಒತ್ತಾಯಿಸುತ್ತಾಳೆ. ಆದರೆ ರವಿಗೆ ಅದೆಲ್ಲಾ ಬೇಕಿಲ್ಲ. ಹಾಸಿಗೆಯಿದ್ದಷ್ಟು ಕಾಲು ಚಾಚಬೇಕೆಂಬ ಸ್ವಭಾವದವನು. ಶಶಿ ಮಹತ್ವಾಕಾಂಕ್ಷೆಯ ಹೆಣ್ಣು ತನ್ನ ಕೈಯಿಡಿಯುವ ಗಂಡ ತನ್ನ ಎತ್ತರಕ್ಕೆ ಬೆಳೆದು ನಿಲ್ಲಬೇಕೆಂಬ ಒತ್ತಾಸೆಯಿದೆ. ''ಕಾರ್ಖಾನೆಯಲ್ಲಿ ಸೃಷ್ಟಿಯಾದ ಅವಳ ಹುದ್ದೆ ಗೌರವಾನ್ವಿತವಾದದ್ದು. ಆದರೆ ತಾನು ಮದುವೆಯಾಗುವ ಗಂಡ ಒಬ್ಬ ಸಾಮಾನ್ಯ ಕಾರ್ಮಿಕನಾದವನು. ಅದನ್ನು ಸಹಿಸಲು ಅವಳಿಗೆ ಆಗುತ್ತಿಲ್ಲ.''[೬೭]

ಆದರೆ ರವಿ ಏನೂ ಸಾಧನೆ ಮಾಡದೆ ನಿರ್ಲಿಪ್ತ ಸ್ವಭಾವದವನು. ಶಶಿ ಬಾಲ್ಯದಲ್ಲಿ ಕಟ್ಟಿಕೊಂಡ ಆತನೊಂದಿಗಿನ ಕನಸುಗಳು ಕರಗಿ ಹೋಗುತ್ತವೆ. ಕಾರ್ಖಾನೆಯಲ್ಲಿ ಸಾಮಾನ್ಯ ಕಾರ್ಮಿಕನಾಗಿಯೇ ಸಂತೃಪ್ತ ಜೀವನ ನಡೆಸಬೇಕೆನ್ನುವ ಹಂಬಲ ಆತನದು. ಶಶಿ ದೊಡ್ಡ ಹುದ್ದೆಯಲ್ಲಿದ್ದಾಳೆಂಬ ಭಾವವೂ ಆತನಿಗಿಲ್ಲ. ಎಲ್ಲವನ್ನು ಮೌನವಾಗಿ ಸ್ವೀಕರಿಸುವ ಸ್ವಭಾವ ಆತನದು. ಕಾರ್ಖಾನೆಗಳು ಸೃಷ್ಟಿಸುವ ಗೊಂದಲಗಳು, ಮಾನಸಿಕ ದೂರಾಲೋಚನೆಗಳು ಮನುಷ್ಯನ ಕುಬ್ಜತನವನ್ನು ಕತೆ ಸಾಬೀತು ಪಡಿಸುತ್ತದೆ. ಪರಿಸರ ಮಾಲಿನ್ಯದ ಜೊತೆಗೆ ಮಾನವೀಯ ಸಂಬಂಧಗಳ ಕೊಂಡಿ ಆರ್ಥಿಕ ಸಂಬಂಧಗಳಿಂದ ಕಳಚಿ ಹೋಗುವುದನ್ನು ನಿರೂಪಕಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ವಿಶೇಷ ಅಧ್ಯಯನಕ್ಕೆ ಜರ್ಮನಿಗೆ ಹೋಗುವ ಅವಕಾಶ ಒದಗಿ ಬಂದಾಗ ಶಶಿ ಹಿಗ್ಗಿ ಹೋಗುತ್ತಾಳೆ. ರವಿಯನ್ನು ಮದುವೆಯಾಗಿ ವಿದೇಶಕ್ಕೆ ಹೋಗಲು ಮನೆಯವರು ಸೂಚಿಸಿದಾಗ, ಅವಳು ಮೌನ ತಾಳಿ ಕೊನೆಗೆ ರವಿಗೆ ತಾನು ಮದುವೆಯಾಗಲಾರನೆಂದು ನಿರ್ಧಾರ ಪ್ರಕಟಿಸಿ ಬಿಡುತ್ತಾಳೆ. ರವಿ ನಿರಾಶೆಗೊಳ್ಳುತ್ತಾನೆ.

ಕಾರ್ಖಾನೆಗಳು ಸೃಷ್ಟಿಸುವ ಹುದ್ದೆಯ ಲಾಲಾಸೆಯಲ್ಲಿ ಶಶಿ ರವಿಯ ತಾಜಾ ಪ್ರೀತಿಯನ್ನೇ ಬದಿಗೊತ್ತಿ ಬಿಡುತ್ತಾಳೆ.. ಆಕೆಗೆ ವಿದೇಶಕ್ಕೆ ಹೋಗುವ ಇಚ್ಛೆ ರವಿಗೆ ಬೇಕಿಲ್ಲವಾದರೆ, ಏನೂ ಆಗದೇ ಸಣ್ಣ ಸಾಮಾನ್ಯ ಕಾರ್ಮಿಕನಾದ ರವಿಯೂ ಆಕೆಗೆ ಬೇಕಿಲ್ಲ. ಹೀಗೆ ಇಬ್ಬರಲ್ಲೂ ಬಿರುಕು ತಾರತಮ್ಯವನ್ನು ಸೃಷ್ಟಿಮಾಡುತ್ತದೆ. ಕಾರ್ಖಾನೆಗಳ ಒಳ ರಾಜಕೀಯ ಹುನ್ನಾರಗಳನ್ನು ಕತೆ ನಿವೇದಿಸುತ್ತದೆ.

"ಅಮರೇಶ ನುಗಡೋಣಿಯವರು ತಮ್ಮ "ಸವಾರಿ" ಕತೆಯಲ್ಲಿ ಗ್ರಾಮೀಣ ಸಂಸ್ಕೃತಿಯ ಮೇಲೆ ವಿದೇಶಿ ಕಂಪನಿಗಳು ಒಡ್ಡುವ ಹಣದ ದುರಾಶೆಯ ಪ್ರತಿಫಲ ಕತೆಯಲ್ಲಿದೆ. "ಊರಿನ ಶಿವಪ್ಪಗೌಡ ತನ್ನ ಊರಿನ ಮುಂದಿದ್ದ" ರಾಷ್ಟ್ರೀಯ ಹೆದ್ದಾರಿ ಬಳಿ ವಿದೇಶಿ ಕಾರ್ಖಾನೆಯೊಂದು ತಲೆಯೆತ್ತುತ್ತದೆಂದು ತಿಳಿದುಬಂದಾಗ ಆ ಕಂಪನಿಗೆ ಮುನ್ನೂರು ಎಕರೆಯಷ್ಟು ಭೂಮಿ ಬೇಕಾಗಿದೆಯೆಂಬ ಸುದ್ದಿ ತಿಳಿಯುತ್ತಿದ್ದಂತೆ ಶಿವಪ್ಪಗೌಡ ಊರಿನ ಇದ್ದಬಿದ್ದ ಜನರ ಬೀಳು ಹೊಲಗಳನ್ನು ಕೊಂಡುಕೊಳ್ಳತೊಡಗಿದ್ದ." ತನ್ನ ನೂರು ಎಕರೆ ಭೂಮಿಗೆ, ಊರುಕೇರಿಯ ಭೂಮಿಯನ್ನು ಕೊಂಡು ವಿದೇಶಿ ಕಂಪನಿ ತನ್ನಿಂದಲೇ ಭೂಮಿ ಕೊಂಡರೆ ದೊಡ್ಡ ಮೊತ್ತದ ಲಾಭ ಸಿಗಬಹುದೆಂದು ಲೆಕ್ಕಹಾಕಿ ಸ್ಥಳೀಯ ಎಂ.ಎಲ್.ಎ. ಉಸ್ತುವಾರಿ ಸಚಿವರ ಬೆನ್ನಿಗೆ ಬಿದ್ದು ಹಣ ಮಾಡುವ ದುರಾಸೆಗೆ ಕೈ ಹಾಕುತ್ತಾನೆ. ಮಳೆ ಬಂದಾಗ ಮಾತ್ರ ಬೆಳೆಯುತ್ತಿದ್ದ ಬೀಳು ಹೊಲಗಳನ್ನು ಮಾರಲು ಮುಂದಾದಾಗ ಊರಿನ ವಿದ್ಯಾವಂತ ರೈತನಾದ ಸಿದ್ದಪ್ಪ ವಿದೇಶಿ ಕಾರ್ಖಾನೆಯು ತಮ್ಮ ಮೇಲೆ ಬೀರುವ ವಿದೇಶಿ ಸಂಸ್ಕೃತಿಯ ಸವಾರಿಯನ್ನು ಹತ್ತಿಕ್ಕಲು ಪ್ರತಿಭಟಿಸಲು ಜನರಿಗೆ ಪ್ರಚೋದಿಸುತ್ತಾನೆ. ಆ ಕಂಪನಿ ಕಾರ್ಖಾನೆಯಿಂದ ಊರಿನ ಸಂಸ್ಕೃತಿ ಪರಿಸರದ ಮೇಲೆ ಬಂದೆರಗುವ ಆಪತ್ತುಗಳನ್ನು ಮನವರಿಕೆ ಮಾಡಿಕೊಡ ತೊಡಗುತ್ತಾನೆ. ಜನ ವಿದೇಶಿ ಕಾರ್ಖಾನೆಯು ತಮ್ಮ ಮೇಲೆ ಮಾಡುವ ಸವಾರಿಯನ್ನು ಅರಿತು ಪ್ರತಿಭಟನೆಗೆ ನಿಲ್ಲುತ್ತಾರೆ. ಆಗ ಗೌಡ ಆ ಕಂಪನಿಯಿಂದ ನಿಮಗೆ ಉದ್ಯೋಗ, ಕೆಲಸಗಳು ಲಭಿಸುತ್ತವೆಯೆಂದು ಹೊಸ ಆಸೆಯನ್ನು ಒಡ್ಡುತ್ತಾನೆ. ಈ ನಡುವೆ ಊರಿನ ರೈತರಿಗೂ ತಮಗೂ ವಿವಾದ ಸೃಷ್ಟಿಯಾಗುತ್ತಲೇ ಹೋಗುತ್ತದೆ. ಶಿವಪ್ಪಗೌಡ ತನ್ನ ತಂದೆ ಸತ್ತರೂ ಸಾವನ್ನು ಮುಚ್ಚಿಟ್ಟು ವಿದೇಶಿ ಕಂಪನಿಗೆ ಊರು, ಹೊಲ ಜನ ಸಂಸ್ಕೃತಿಯನ್ನು ಮಾರಾಟ ಮಾಡುವ ಸಣ್ಣತನದ ವ್ಯವಹಾರಕ್ಕೆ ನಿಂತು ಬಿಡುತ್ತಾನೆ. ಗ್ರಾಮೀಣ ಭಾಗದ ಮುಗ್ಧ ಜನರ ಮೇಲೆ ಶಿವಪ್ಪಗೌಡನಂತವರು ಬೀರುವ ದುಷ್ಪರಿಣಾಮ ವಿದೇಶಿ ಕಂಪನಿಗಿಂತಲೂ ಅಪಾಯಕಾರಿಯಾದದ್ದಾಗಿದೆ. ಶಿವಪ್ಪಗೌಡನ ತಂದೆಯೂ ಕೂಡ ಊರಿನ ಜನರ ಮೇಲೆ ತನ್ನ

ದರ್ಪದ ಸವಾರಿ ಮಾಡಿ ಅವರ ಹೊಲ ಮನೆ ಮತ್ತೊಬ್ಬರ ಹೆಂಡತಿಯರನ್ನು ತನ್ನ ಸ್ವಂತ ಸ್ವತ್ತೆಂಬಂತೆ ಭೋಗಿಸಿ ಕೊನೆಗಾಲದಲ್ಲಿ ಪಡಬಾರದ ಹಿಂಸೆಯಲ್ಲಿಸಾಯುತ್ತಾನೆ. ಇಲ್ಲಿ ಶಿವಪ್ಪಗೌಡನೂ ತಂದೆಗಿಂತ ಒಂದು ಹೆಜ್ಜೆ ಮುಂದೆ ಸಾಗಿ ಇಡೀ ಊರಿನ ಜನರ ಹೊಲ ಬದುಕನ್ನು ವಿದೇಶಿ ಕಂಪನಿಗೆ ಮಾರುವ ಹುನ್ನಾರದ ಬಲೆ ಎಣೆದುಕೊಳ್ಳುತ್ತಾನೆ. ಊರ ಪಕ್ಕದಲ್ಲಿ ಕೆರೆಯ ನೀರು ಕಾರ್ಖಾನೆಗೆ ಬಳಕೆಯಾಗಿ, ಊರಿನ ವ್ಯವಸಾಯಕ್ಕೆ ಆಪತ್ತು ಬಂದೊದಗುತ್ತದೆಯೆಂದು ಸಿದ್ದಪ್ಪ ಜನರನ್ನು ಕಟ್ಟಿಕೊಂಡು ಹೋರಾಟ ಮಾಡಿ ತಕರಾರು ಒಡ್ಡಿದಾಗ ಗೌಡ ತಲ್ಲಣಗೊಳ್ಳುತ್ತಾನೆ. ಆತನ ವಿದೇಶಿ ಕಂಪನಿ ಊರಿನ ಮೇಲೆ ಸವಾರಿ ಮಾಡುವ ಹುನ್ನಾರ ನಿಂತು ಹೋಗುತ್ತದೆ. ಸಮಸ್ಯೆ ವಿವಾದಗ್ರಸ್ಥವಾಗಿಯೇ ಉಳಿದುಬಿಡುತ್ತದೆ.

ಅಮರೇಶರ ''ಒಡಲು ಗೊಂಡವರು'' ಕತೆಯಲ್ಲಿ ಬರುವ ಕಣಿವೆ ಹಳ್ಳಿಯೆಂಬ ಪುಟ್ಟ ಹಳ್ಳಿಯ ರೈತರು ಒಕ್ಕಲು ಮಕ್ಕಳು ಗಣಿ ಕಂಪನಿಗೆ ತಮ್ಮ ಹೊಲವನ್ನು ಮಾರಿಕೊಂಡಿದ್ದಾರೆ. ''ಎರೆಡು ಡಿಗ್ರಿಗಳನ್ನು ಪಡೆದುಕೊಂಡ ಹರಿಶ್ಚಂದ್ರ 'ಪರಿಸರ ಉಳಿಸಿ ಚಳುವಳಿ'ಯ ನೇತೃತ್ವ ವಹಿಸಿ ಬಂಡವಾಳ ಶಾಹಿಗಳ ಕೆಂಗೆಣ್ಣಿಗೆ ತುತ್ತಾದವನು.''[೩೮] ನಂತರ ಉದ್ಯೋಗವಿಲ್ಲದೆ ಹಸಿವಿನಿಂದ ಬಳಲಿದವನು. ಕೊನೆಗೆ ತನ್ನ ಭೂಮಿಯನ್ನು ಗಣಿ ಕಾರ್ಖಾನೆಗೆ ಮಾರಿಕೊಳ್ಳುತ್ತಾನೆ. ಊರ ಸುತ್ತಣ ಬೆಟ್ಟಗಳು, ಹಸಿರು ಗುಡ್ಡಗಳು ನಾಶವಾಗುತ್ತಲೇ ಹೋಗುತ್ತವೆ. ಹರಿಶ್ಚಂದ್ರನು ತಂದೆಯನ್ನು ಊಳಿಟ್ಟ ಸಮಾಧಿಯ ಮೇಲೆ ಕಾರ್ಖಾನೆ ನಿಲ್ಲುತ್ತದೆ. ಆ ಕಾರ್ಖಾನೆಯಲ್ಲಿ ಉದ್ಯೋಗ ಪಡೆದ ಹರಿಶ್ಚಂದ್ರ ತನ್ನ ಹೋರಾಟದ ಮನೋಭಾವನೆಯನ್ನು ಮಾರಿಕೊಂಡವನಂತೆ ಕಾಣುತ್ತಾನೆ. ಕಾರ್ಖಾನೆಯ ಹೊಗೆ, ಗಣಿಗಾರಿಕೆಯ ದೂಳಿನಿಂದ ಕಣಿವೆ ಹಳ್ಳಿಯ ಜನರಿಗೆ ದಮ್ಮು, ಕೆಮ್ಮಿನ ಖಾಯಿಲೆ ಅಂಟಿಕೊಂಡಿದೆ. ಹರಿಶ್ಚಂದ್ರನಿಗೆ ಖಾಯಿಲೆಯಲ್ಲಿದ್ದ ತಾಯಿ ತೀರಿಕೊಂಡರೆ ಆಕೆಯನ್ನು ಸಂಸ್ಕಾರ ಮಾಡುವುದಕ್ಕೆ ಗೇಣು ನೆಲವೂ ಸಿಗದಂತಾಗುತ್ತದೆ. ಗಣಿ ಕಾರ್ಖಾನೆಯಿಂದ ಪರಿಸರನಾಶ, ಒಂದು ಹಳ್ಳಿಯ ಬದುಕು ವಿನಾಶದ ಅಂಚು ತಲುಪಿರುವುದನ್ನು ಒಡಲುಗೊಂಡವರು ಕತೆ ಮಾರ್ಮಿಕವಾಗಿ ವಿಶ್ಲೇಷಣೆಗೆ ಒಳಪಡಿಸುತ್ತದೆ.

ಹೀಗೆ ನವವಸಾಹತುಶಾಹಿ ಸಂದರ್ಭದಲ್ಲಿ ಸೃಷ್ಟಿಯಾದ ರೈತರ ಸಮಸ್ಯೆ, ಪರಿಸರ ಸಮಸ್ಯೆ ನೀರು ಮತ್ತು ಕಾರ್ಖಾನೆ ಸಮಸ್ಯೆಗಳಿಗೆ ದೇಶಿಯ ಸಂಘರ್ಷಗಳು ರೂಪಗೊಂಡು ಅನೇಕ ಚಳುವಳಿಗಳು ಆರಂಭವಾದವು. ರೈತರ ಬದುಕು ಜಾಗತೀಕರಣ, ಉದಾರೀಕರಣ, ಮತ್ತು ಖಾಸಗೀಕರಣದಿಂದ ಅನೇಕ ಸಂಕಷ್ಟಗಳಿಗೆ ಒಳಗಾಯಿತು. ಭೂಮಿಯ ಪ್ರಶ್ನೆಯೂ ಉದ್ಭವವಾಯಿತು. ಕೈಗಾರಿಕೆಗಳ ಸ್ಥಾಪನೆಯಿಂದ ಪರಿಸರ ಸಮಸ್ಯೆಗಳು ಅಧಿಕವಾಗತೊಡಗಿದವು ಇದರಿಂದಾಗಿ ಪರಿಸರ ಉಳಿಸಿ ಚಳುವಳಿಗಳೂ ಹೊಸ ಧ್ವನಿಯನ್ನು ಮೊಳಗಿಸ ತೊಡಗಿದವು. ನವವಸಾಹತುಶಾಹಿಯ ಕರಾಳ ಛಾಯೆ ಎಲ್ಲೆಡೆ ತನ್ನ ಕಬಂಧ ಬಾಹುಗಳನ್ನು ಚಾಚತೊಡಗಿದವು. ನಾಡಿನಲ್ಲಿ ಆರಂಭವಾದ ನೀರಾವರಿ ಯೋಜನೆಗಳು ಕೂಡ ಅನೇಕ ಭಾಗಗಳಲ್ಲಿ ಪರಿಸರ ನಾಶಕ್ಕೆ ಕಾರಣವಾದಾಗ ಅಭಿವೃದ್ಧಿ ಯೋಜನೆಗಳ ವಿರುದ್ಧವೂ ಅನೇಕ ಜನ ತಮ್ಮ ಮನೆ ಭೂಮಿ ಊರು ನೀರಲ್ಲಿ ಮುಳುಗಿ ಹೋಗುವಾಗ ದೇಶಿಯ ಹೋರಾಟಗಳನ್ನು ರೂಪಿಸಿಕೊಂಡರು. ಮತ್ತೊಂದೆಡೆ ಅರಣ್ಯ ನಾಶವೂ ನಡೆಯತೊಡಗಿದಂತೆ ಜನ ಮತ್ತು ಪರಿಸರವಾದಿಗಳೂ ಜಾಗೃತಗೊಂಡು ಚಳುವಳಿಗಳಿಗೆ ಕರೆ ನೀಡಿದ್ದನ್ನು ಅನೇಕ ಸಂದರ್ಭಗಳು ಸಾರಿ ಹೇಳುತ್ತವೆ.

ರೈತರ ಸಮಸ್ಯೆಯಲ್ಲಿ ಜಮಿನ್ದಾರಿ ಪದ್ಧತಿಯ ವಿರುದ್ಧ ನಡೆದ ಹೊರಾಟಗಳು, ಗೇಣಿ ಸಮಸ್ಯೆ ಕುರಿತ ಆಲೋಚನೆ ಹೊಸ ಹೊಸ ಬದಲಾವಣೆ ಹೋರಾಟಗಳಿಗೆ ನಾಂದಿ ಹಾಡಿರುವುದು ಚರಿತ್ರೆಯ ಪುಟಗಳು ದಾಖಲಿಸಿವೆ.

ನವವಸಾಹತುಶಾಹಿ ಕಾಲಘಟ್ಟದ ಈ ಸಂದರ್ಭಗಳಲ್ಲಿ ಅನೇಕ ಕತೆಗಾರರು ಸಮಸ್ಯೆಗೆ ಹೊಸಮುಖಗಳನ್ನು ಅನಾವರಣಗೊಳಿಸಿ ಸಣ್ಣಕತೆಗಳನ್ನು ರಚಿಸಿದ್ದಾರೆ. ಅಧ್ಯಯನ ವ್ಯಾಪ್ತಿಯ ದೃಷ್ಟಿಯಿಂದ ಕೆಲವು ಕತೆಗಾರರ ಕೆಲವು ಕತೆಗಳನ್ನು ಮಾತ್ರ ಈ ಚರ್ಚೆಯ ಸಂದರ್ಭದಲ್ಲಿ ಬಳಸಿಕೊಂಡಿದ್ದೇನೆ. ಅಧ್ಯಯನದ ಮಿತಿಇದಾಗಿದ್ದು ನವವಸಾಹತುಶಾಹಿ ಸಂದರ್ಭದ ದೇಶಿಯ ಸಂಘರ್ಷಗಳನ್ನು ಕುರಿತು ಮಹಾಪ್ರಬಂಧ ರಚಿಸುವಷ್ಟು ವಿಷಯ ಸಾಮಗ್ರಿ ಇದೆಯೆಂದು ಈ ಸಂದರ್ಭದ ಅಧ್ಯಯನದಿಂದ ಅರಿತು ಕೊಂಡಿದ್ದೇನೆ. ಇಲ್ಲಿ ನನ್ನ ಅಧ್ಯಯನ ಸಂದರ್ಭದಲ್ಲಿ ಗಮನಕ್ಕೆ ಬಂದ ಕೆಲವು ಸಣ್ಣ ಕತೆಗಳನ್ನು ಅನುಲಕ್ಷಿಸಿ ಈ ವಿಶ್ಲೇಷಣೆಯನ್ನು ಮಾಡಿದ್ದೇನೆ.

**ಟಿಪ್ಪಣಿಗಳು**

೦೧. ಡಾ. ತಂಬಂಡ ವಿಜಯ್ ಪೂಣಚ್ಚ - ರೈತ ಚಳುವಳಿಗಳು, ಪ್ರಸ್ತಾವನೆ,
ರೈತ ಚಳುವಳಿಗಳು - ಡಾ. ತಂಬಂಡ ವಿಜಯ್ ಪೂಣಚ್ಚ - ( ಪುಟ-೩)

೦೨. ಡಾ. ತಂಬಂಡ ವಿಜಯ್ ಪೂಣಚ್ಚ - ಕರ್ನಾಟಕ ಪ್ರಾಂತ ರೈತ ಸಂಘ ಮತ್ತು ರೈತ ಚಳುವಳಿಗಳು,
ರೈತ ಚಳುವಳಿಗಳು - ಡಾ. ತಂಬಂಡ ವಿಜಯ್ ಪೂಣಚ್ಚ - (ಪುಟ-೧೦)

೦೩. ಪಿ. ಲಂಕೇಶ್ - ಮುಟ್ಟಿಸಿಕೊಂಡವನು,
ಕಲ್ಲುಕರಗುವ ಸಮಯ ಮತ್ತು ಇತರೆ ಕಥೆಗಳು - ಪಿ. ಲಂಕೇಶ್ - (ಪುಟ-೪೭)

೦೪. ಪಿ. ಲಂಕೇಶ್ - ಸಹಪಾಠಿ,
ಕಲ್ಲುಕರಗುವ ಸಮಯ ಮತ್ತು ಇತರೆ ಕಥೆಗಳು - ಪಿ. ಲಂಕೇಶ್ - (ಪುಟ-೬೯)

೦೫. ಮಲ್ಲಿಕಾರ್ಜುನ ಹಿರೇಮಠ - ಅಮೀನಪುರದ ಸಂತೆ,
ಅಮೀನಪುರದ ಸಂತೆ - ಮಲ್ಲಿಕಾರ್ಜುನ ಹಿರೇಮಠ - (ಪುಟ-೨೦)

೦೬. ರಾಜಶೇಖರ ನೀರಮಾನ್ವಿ - ಕರ್ಪೂರದ ಕಾಯದಲ್ಲಿ ಬೆಂಕಿಯುಸಿರಾಟ,
ಕರ್ಪೂರದ ಕಾಯದಲ್ಲಿ ಬೆಂಕಿಯುಸಿರಾಟ - ರಾಜಶೇಖರ ನೀರಮಾನ್ವಿ - (ಪುಟ-೮೬)

೦೭. ಕುಂ. ವೀರಭದ್ರಪ್ಪ - ಕಪ್ಪು ನೆಲದಲ್ಲೊಂದು ಕೆಂಪುಕತೆ,
ಬರಿ ಕಥೆಯಲ್ಲೊ ಅಣ್ಣಾ, (ಸಮಗ್ರ ಕತೆಗಳು) - ಕುಂ. ವೀರಭದ್ರಪ್ಪ - (ಪುಟ-೯೪,೯೫)

೦೮. ಅರವಿಂದ ಮಾಲಗತ್ತಿ, - 'ಭೂಮಸೂದೆ'
ಮುಗಿಯದ ಕಥೆಗಳು - ಡಾ. ಅರವಿಂದ ಮಾಲಗತ್ತಿ - (ಪುಟ-೭೮)

೦೯. ಅಮರೇಶ ನುಗಡೋಣಿ - ತಮಂಧದ ಕೇಡು
ತಮಂಧದ ಕೇಡು - ಅಮರೇಶ ನುಗಡೋಣಿ - (ಪುಟ-೨, ೮)

೧೦. ಅಮರೇಶ ನುಗಡೋಣಿ - ಬೇಟೆ
ತಮಂಧದ ಕೇಡು - ಅಮರೇಶ ನುಗಡೋಣಿ (ಪುಟ- ೧೮)

೧೧. ಅಮರೇಶ ನುಗಡೋಣಿ - 'ಮನ್ನಿಸಿ ಮೂಕಾದ ಮೇಲೆ'
'ಮಣ್ಣು ಸೇರಿತು ಭೀಜ' - ಅಮರೇಶ ನುಗಡೋಣಿ (ಪುಟ-೧೨೩)

೧೨. ಅಮರೇಶ ನುಗಡೋಣಿ - 'ಪಕ್ಷಕಲ್ಲದೆ ಪರಿಣಾಮ ಕಾಣಿಸದು'
'ಸವಾರಿ' - ಅಮರೇಶ ನುಗಡೋಣಿ. (ಪುಟ-೧೪೯)

೧೩. ನಟರಾಜ ಹುಳಿಯಾರ್ - ಬಿರು ಬಿಟ್ಟ ನೆಲ
ಮತ್ತೊಬ್ಬ ಸರ್ವಾಧಿಕಾರಿ - ಡಾ. ನಟರಾಜ್ ಹುಳಿಯಾರ್, (ಪುಟ-೭೮) ,

೧೪. ಮಲ್ಲಿಕಾರ್ಜುನ ವಣೇನೂರು - ಮೂಗ
ಮಣ್ಣಿನ ಕುಡಿಕೆ - ಮಲ್ಲಿಕಾರ್ಜುನ ವಣೇನೂರು (ಪುಟ-೭,೯)

೧೫. ಎಸ್. ಗಂಗಾಧರಯ್ಯ - ನವಿಲ ನೆಲ,
ನವಿಲ ನೆಲ - ಎಸ್. ಗಂಗಾಧರಯ್ಯ (ಪುಟ-೧೧೧)

೧೬. ಕೃಷ್ಣ ನಾಯಕ್ - ಮೋತುನ ಮದ್ವೆ,
ಲದೇಣಿಯಾ, ಕೃಷ್ಣ ನಾಯಕ್ (ಪುಟ-೪೯)

೧೭. ಕಲಿಗಣನಾಥ ಗುಡದೂರು - ಮಣ್ಣು
ಉಡಿಯಲ್ಲಿ ಉರಿ - ಕಲಿಗಣನಾಥ ಗುಡದೂರು (ಪುಟ-೬೫)

೧೮. ರಾಜೇಂದ್ರ ಚೆನ್ನಿ - ನಡುಹಗಲಿನಲ್ಲಿ ಕಂದೀಲುಗಳು
ನಡುಹಗಲಿನಲ್ಲಿ ಕಂದೀಲುಗಳು - ರಾಜೇಂದ್ರ ಚೆನ್ನಿ (ಪುಟ-೧೦೧)

೧೯. ಶಿವರಾಮ ಕಾರಂತ - ಭಾರತದ ಪರಿಸರ ದ್ವಿತೀಯ ಸಮೀಕ್ಷೆ
ಭಾರತದ ಪರಿಸರ ದ್ವಿತೀಯ ಸಮೀಕ್ಷೆ ೧೯೮೪-೮೫ - ಶಿವರಾಮ ಕಾರಂತ (ಪುಟ-೨೫)

೨೦. ಕುಂ. ವೀರಭದ್ರಪ್ಪ - ಡೋಮ,
ಡೋಮ ಮತ್ತಿತರ ಕಥೆಗಳು - ಕುಂ. ವೀರಭದ್ರಪ್ಪ (ಪುಟ-೨೪)

೨೧. ಕುಂ, ವೀರಭದ್ರಪ್ಪ - ಭಗವತಿ ಕಾಡು
ಬರಿಕಥೆಯಲ್ಲೊ ಅಣ್ಣಾ - ಸಮಗ್ರ ಕತೆಗಳು - ಕುಂ. ವೀರಭದ್ರಪ್ಪ (ಪುಟ-೬೬)

೨೨. ಅಮರೇಶ ನುಗುಡೋಣಿ - ಒಡಲು ಗೊಂಡವರು,
ಹೊಸಕತೆಗಳು, - ರಮಾಕಾಂತ ಜೋಶಿ, (ಸಂ) (ಪುಟ-೧೧)

೨೩. ಶ್ರೀಧರ ಬಳಗಾರ - ಇಳೆಯೆಂಬ ಕನಸು
ಇಳೆಯೆಂಬ ಕನಸು - ಶ್ರೀಧರ ಬಳಗಾರ (ಪುಟ-೬೧)

೨೪. ಮಲ್ಲಿಕಾರ್ಜುನ ವಣೇನೂರು - ಬುತ್ತಿಯ ಬಟ್ಟಲು -
ಹೊಸತು ವಿಶೇಷಾಂಕ - (ಪುಟ-೧೧೧)

೨೫. ಬಿದರಹಳ್ಳಿ ನರಸಿಂಹಮೂರ್ತಿ - 'ಜೀವಹಂಸ'
'ಜೀವಹಂಸ' - ಬಿದರಹಳ್ಳಿ ನರಸಿಂಹಮೂರ್ತಿ (ಪುಟ-೩೬)

೨೬. ಕೆ. ಮೋಹನ್‌ಕೃಷ್ಣ ರೈ - ಆಲಮಟ್ಟಿ ವಿವಾದ,
ಪರಿಸರ ಚಳುವಳಿ - ಕೆ. ಮೋಹನ್‌ಕೃಷ್ಣ ರೈ (ಪುಟ-೮೮)

೨೭. ಮಲ್ಲಿಕಾರ್ಜುನ ವಣೇನೂರು - ಅಸಂಗತ

ಮಣ್ಣಿನ ಕುಡಿಕೆ - ಮಲ್ಲಿಕಾರ್ಜುನ ವಣೇನೂರು (ಪುಟ-೧೦೬)

೨೮. ಶ್ರೀಧರ ಬಳಗಾರ - ಇಳೆಯೆಂಬ ಕನಸು

ಇಳೆಯೆಂಬ ಕನಸು - ಶ್ರೀಧರ ಬಳಗಾರ (ಪುಟ-೬೩)

೨೯. ಅರವಿಂದ ಮಾಲಗತ್ತಿ - 'ತೂತಿನ ದುಡ್ಡು ಮತ್ತು ನೀರು'

ಮುಗಿಯದ ಕಥೆಗಳು - ಅರವಿಂದ ಮಾಲಗತ್ತಿ.(ಪುಟ-೩)

೩೦. ಕುಂ. ವೀರಭದ್ರಪ್ಪ - ಬರಿಗೊಡಗಳು,

ಬರೀ ಕತೆಯಲ್ಲೊ ಅಣ್ಣಾ - ಸಮಗ್ರ ಕತೆಗಳು - ಕುಂ. ವೀರಭದ್ರಪ್ಪ.(ಪುಟ-೪೩೬)

೩೧. ಅಮರೇಶ ನುಗಡೋಣಿ - 'ನೀರು ತಂದವರು'

ತಮಂಧದಕೇಡು - ಅಮರೇಶ ನುಗಡೋಣಿ. (ಪುಟ-೭೦)

೩೨. ಜನಾರ್ದನ ಎರ್ಪಕಟ್ಟೆ - ನೀರು,

ಹಗ್ಲೇ ಬರ್‍ತೇನ್ ಗಂಗಮ್ಮ - ಜನಾರ್ದನ ಎರ್ಪಕಟ್ಟೆ - (ಪುಟ-೬೧)

೩೩. ಕೆ. ಮೊಹನ್‌ಕೃಷ್ಣ ರೈ - ಕೈಗಾ ಅಣುಸ್ಥಾವರ

ಪರಿಸರ ಚಳುವಳಿ - ಕೆ. ಮೊಹನ್‌ಕೃಷ್ಣ ರೈ - (ಪುಟ-೪೮)

೩೪. ರಾಜಶೇಖರ ನೀರಮಾನ್ವಿ - ಕರ್ಪೂರದ ಕಾಯದಲ್ಲಿ ಬೆಂಕಿಯುಸಿರಾಟ

ಕರ್ಪೂರದ ಕಾಯದಲ್ಲಿ -ಬೆಂಕಿಯುಸಿರಾಟ ರಾಜಶೇಖರ ನೀರಮಾನ್ವಿ (ಪುಟ-೯೧)

೩೫. ರಾಜಶೇಖರ ಹತಗುಂದಿ - ಪೊರೆ ಕಳಚುವ ಪರಿ

ಪೊರೆ ಕಳಚುವ ಪರಿ - ರಾಜಶೇಖರ ಹತಗುಂದಿ (ಪುಟ-೩೬)

೩೬. ನೇಮಿಚಂದ್ರ - ಏನೊಂದು ಆಗದವರು

ಏನೊಂದು ಆಗದವರು - ನೇಮಿಚಂದ್ರ (ಪುಟ-೨೪೮)

೩೭. ಅಮರೇಶ ನುಗಡೋಣಿ - ಸವಾರಿ

ಸವಾರಿ - ಅಮರೇಶ ನುಗಡೋಣಿ (ಪುಟ-೯)

೩೮. ಅಮರೇಶ ನುಗಡೋಣಿ - ಒಡಲು ಗೊಂಡವರು

ಅಮರೇಶ ನುಗಡೋಣಿ - ಒಡಲು ಗೊಂಡವರು (ಪುಟ-೧೦)

* * * * *

# ಅಧ್ಯಾಯ : ಎಂಟು

## ಭಾಷಿಕ ನೆಲೆ

೮.೧. ಭಾಷಾ ಬಳಕೆಯ ಚಿಂತನೆಗಳು

೮.೨. ಕತೆಗಳಲ್ಲಿ ಭಾಷಾ ಬಳಕೆಯ ಸ್ವರೂಪ

# ಅಧ್ಯಾಯ - ಎಂಟು

# ಭಾಷಿಕ ನೆಲೆ

## ೮.೧. ಭಾಷಾ ಬಳಕೆಯ ಚಿಂತನೆಗಳು

ಭಾಷೆ ಇಂದು ಕೇವಲ ಸಂವಹನದ ಮಾಧ್ಯಮವಾಗಿ ಉಳಿದಿಲ್ಲ. ಅದು ಜೀವನವನ್ನು ನಿರ್ವಹಿಸುವ ಸಾಧನವೂ ಆಗಿದೆ. ಜೊತೆಗೆ ಭಾಷೆ ನಿರಂತರವಾಗಿ ಪ್ರವಹಿಸುವ ನದಿಯ ಪ್ರವಾಹದಂತೆ, ನಿರಂತರವಾಗಿ ಹರಿಯುತ್ತ ಏರಿಳಿತಗಳಿಗೆ ಒಳಗಾಗಿ ಕಾಲದೇಶಗಳ ವ್ಯತ್ಯಾಸದಿಂದ ಅದರ ರೂಪ ಬದಲಾಗುತ್ತಾ ಸಾಗುತ್ತದೆ. ಹೀಗೆ ನಿತ್ಯ ಪರಿವರ್ತನ ಶೀಲ ವಾಗಿರುವುದರಿಂದಲೇ ಅದು ಜೀವಂತವಾಗಿ ಉಳಿಯಲು ಸಾಧ್ಯವಾಗಿದೆ. ಹೀಗೆ ಹರಿವ ನದಿಗೆ ಹೊಸ ನೀರು ಬಂದು ಕೂಡುತ್ತಲೇ ಇರುವಂತೆ, ಇದ್ದಂತಹ ಧ್ವನಿ ಸಾಮಗ್ರಿಯನ್ನು ಬಳಸುತ್ತ ಹೊಸ ಹೊಸ ಶಬ್ದರೂಪ ಸೃಷ್ಟಿಸುವ ಕಾರ್ಯ, ಭಾಷೆಯಲ್ಲಿ ಸಾಗಿಯೇ ಇರುತ್ತದೆ. ಆದರೆ ಇಂದು ಕನ್ನಡ ಭಾಷೆಯು ಸಾಹಿತ್ಯ ಮಾಧ್ಯಮವಾಗಿ ತನ್ನ ನೆಲೆಯನ್ನು ಬಹುಮುಖಿ ಚಿಂತನೆಯ ಕಡೆ ಹರಿಸುತ್ತಿದೆ. ಏಕೆಂದರೆ ಬದುಕಿನ ಅನೇಕ ಬದಲಾವಣೆಗಳನ್ನು ಭಾಷೆಯ ಮೂಲಕ ಹಿಡಿದು ಅಭಿವ್ಯಕ್ತಿಗೊಳಿಸಲು ಸಾಧ್ಯವಾಗಿದೆ. ಅಲ್ಲದೇ ಭಾಷೆ ಒಂದು ಸಂವಹನ ಮಾಧ್ಯಮವೂ ಹೌದು, ಅಷ್ಟೇ ಅಲ್ಲದೆ ಸಂಸ್ಕೃತಿಯ ವಾಹಕವೂ ಹೌದು. ಸಾಹಿತ್ಯ ರಚನೆಯ ಸಂದರ್ಭದಲ್ಲಿ ಭಾಷೆ ಸಂಸ್ಕೃತಿಯ ಸಾಧನವಾಗಿಯೇ ಬಳಕೆಯಾಗಿದೆ. ಯಾವುದೇ ಒಬ್ಬ ಸಾಹಿತಿಗೆ ಭಾಷೆಯು ಸಂವಹನಗೊಳಿಸುವ ನೆಲೆಯಾಗಿಯೂ ಅಭಿವ್ಯಕ್ತಿ ಸಾಧನಗೊಳಿಸುವ ನೆಲೆಯಾಗಿಯೂ ಮುಖ್ಯವಾಗುತ್ತದೆ. ಸಂಸ್ಕೃತಿಯ ವಿಶಿಷ್ಟ ಸಂಗತಿಗಳ ಭಾಷಾ ಸೃಷ್ಟಿ ಮತ್ತು ಭಾಷೆಯ ಬಳಕೆಯ ಸಂದರ್ಭದಲ್ಲಿ ಸಮುದಾಯಗಳು ಬಳಸುವ ಯಾದೃಚ್ಛಿಕ ಗುಣದಿಂದಾಗಿ ಸಂಸ್ಕೃತಿ ನಿಷ್ಪನ್ನ ಸಂಗತಿಯೂ ಆಗಿದೆ. ಇಂದು ಸಂಸ್ಕೃತಿಯ ಪ್ರತಿನಿಧಿಕರಣವಾಗಿಯೂ ಭಾಷೆಯನ್ನು ಅಧ್ಯಯನ ಮಾಡಬಹುದಾಗಿದೆ.

ಇಂದು ನಮ್ಮ ಭಾಷೆಗೆ, ಜಾಗತೀಕರಣದ ಸಂದರ್ಭದಲ್ಲಿ ಏಕಭಾಷಿಕ ವ್ಯವಸ್ಥೆಯನ್ನು ಉಳಿಸುವ ರಾಜಕಾರಣದಲ್ಲಿ ಅತಂತ್ರ ಸ್ಥಿತಿ ಸೃಷ್ಟಿಯಾಗಿದೆ. ಇಂಗ್ಲೀಷ್-ಹಿಂದಿ-ಭಾಷೆಯನ್ನು ಇಂದಿನ ಪ್ರಭುತ್ವವು ಯಜಮಾನ ಭಾಷೆಯಾಗಿ ನಿಲ್ಲಿಸುವ ಹುನ್ನಾರ ನಡೆಯುತ್ತಿದೆ. ಹಿಂದಿ ರಾಷ್ಟ್ರಭಾಷೆಯಾಗಿರುವುದಾದರೆ. ಇಂಗ್ಲೀಷ್ ಭಾಷೆಯು ನಿತ್ಯ ಸಾಮಾಜಿಕ

ಭಾಷೆಯಾಗಿ ತನ್ನ ಪ್ರಭುತ್ವವನ್ನು ಸಾಧಿಸಲು ನಮ್ಮ ಸಂಸ್ಕೃತಿಯ ಮೇಲೆ ತನ್ನ ಕರಿನೆರಳನ್ನು ಚಾಚುತ್ತಿದೆ. ಇಂದು ಜನ ಸಾಮಾನ್ಯರೂ, ಅವಿದ್ಯಾವಂತರೂ ಇಂಗ್ಲೀಷ್ ಭಾಷೆಯ ಬಳಕೆಯ ವ್ಯಾಮೋಹದ ಕಡೆ ಆಕರ್ಷಿಸಲ್ಪಟ್ಟಿರುವುದು, ಎಲ್ಲೆಡೆ ಗೋಚರವಾಗುತ್ತಿದೆ. ಇದರಿಂದಾಗಿ ಅನೇಕ ಸ್ಥಳೀಯ ಭಾಷೆಗಳನ್ನು ನಿರಾಕರಿಸುವ ನಾಮಾವಶೇಷ ಮಾಡುವ ಹುನ್ನಾರವೂ ನಡೆಯುತ್ತಿದೆ. ಇಪ್ಪತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ಉಂಟಾದ ಅನೇಕ ಸಾಮಾಜಿಕ ಸ್ಥಿತ್ಯಂತರಗಳಲ್ಲಿ, ಮುಕ್ತ ಆರ್ಥಿಕ ನೀತಿ, ಉದಾರೀಕರಣ, ಖಾಸಗೀಕರಣ / ಜಾಗತೀಕರಣದ ಪ್ರಭಾವದಿಂದಾಗಿ ಭಾಷೆಗೆ ಅನೇಕ ಆತಂಕಗಳೂ ಸೃಷ್ಟಿಯಾಗಿವೆ. ಸಂಸ್ಕೃತಿಯ ಸಂದರ್ಭದಲ್ಲಂತೂ ಇದು ಅತಿರೇಕದ ಪರಿಣಾಮವಾಗಿ ಕಾಣಿಸಿಕೊಂಡಿದೆ. ''ಗ್ರಾಮೀಣ ಸಮುದಾಯ ಬಳಸುವ ಆಡುಮಾತು ಕನ್ನಡದ ವೈವಿಧ್ಯಮಯ ಬಳಕೆಯು, ವಿದ್ಯಾವಂತ ಪಟ್ಟಣದ ಸ್ಟಾಂಡರ್ಡ್ ಕನ್ನಡದ ಮುಂದೆ ತನ್ನ ಸ್ಥಾನವನ್ನು ಕಳೆದುಕೊಂಡಿದೆ. ಇ ಸ್ಟಾಂಡರ್ಡ್ ಕನ್ನಡವು ಶಿಕ್ಷಣದಲ್ಲಾಗಲೀ, ಆಡಳಿತದಲ್ಲಾಗಲೀ ಇಂಗ್ಲೀಷ್‌ನ ಎದುರು ತನ್ನನ್ನು ಗಟ್ಟಿಗೊಳಿಸಿಕೊಳ್ಳದೆ ತನ್ನದೇ ಆದ ಅಪ್ರಸ್ತುತತೆಯನ್ನು ಅನುಭವಿಸುತ್ತಿದೆ. ಎಲ್ಲ ಸತ್ವಕಳೆದುಕೊಂಡ ಕನ್ನಡ ಭಾಷೆ ಉಪಚಾರದ ಭಾಷೆಯಾಗಿ ಹೋದಂತೆ ಭಾಸವಾಗುತ್ತಿದೆ. ತಮಿಳುನಾಡು, ಆಂಧ್ರದಲ್ಲಿ ಆಯಾ ಭಾಷಿಕ ಸಮುದಾಯಗಳು ಭಾಷೆಯ ಅಸ್ತಿತ್ವದ ಪ್ರಶ್ನೆಯನ್ನು ರಾಜಕೀಯ ಅಥವಾ ಪ್ರಭುತ್ವದ ಅಸ್ತಿತ್ವದ ಪ್ರಶ್ನೆಯ ಜೊತೆಗೆ ಪರಿಣಾಮಕಾರಿಯಾಗಿ ತಳಕು ಹಾಕಿ ತಮ್ಮನ್ನು ತಾವು ಗಟ್ಟಿಗೊಳಿಸಿಕೊಳ್ಳುವುದು ನಮಗೆ ಯಾಕೆ ಕಣ್ಣಿಗೆ ಬೀಳುತ್ತಿಲ್ಲವೋ? ಕನ್ನಡ ಭಾಷೆಗೆ ಮತ್ತು ಭಾಷಾ ಸಮುದಾಯಕ್ಕೆ ರಾಜಕೀಯ ಶಕ್ತಿ ದಕ್ಕದಿರಲು ಕಾರಣಗಳೇನು?''[೧] ಎಂಬ ಡಾ. ಬಸವರಾಜ ಕಲ್ಗುಡಿಯವರ ಮೇಲಿನ ಮಾತುಗಳಲ್ಲಿ ಕನ್ನಡ ಭಾಷೆಗೆ ಬಂದೊದಗಿರುವ ಆಪತ್ತುಗಳ ಚಿಂತನೆಯ ಪ್ರಶ್ನೆಯಿದೆ. ಹಾಗೇ ಭಾಷೆಯನ್ನು ಕುರಿತು ಆತಂಕ ವ್ಯಕ್ತಪಡಿಸುವ ಕಲ್ಗುಡಿಯವರು. ''ಕಳೆದ ೫೦ ವರ್ಷಗಳಲ್ಲಿ ಕನ್ನಡ ಭಾಷೆಯನ್ನು ತನ್ನ ಓಟಿನ ರಾಜಕಾರಣಕ್ಕಾಗಿ ಮಾತ್ರ ಬಳಸುತ್ತ ಶಿಕ್ಷಣದಲ್ಲಾಗಲಿ, ಆಡಳಿತದಲ್ಲಾಗಲಿ, ಸಮೂಹ ಸಂವಹನ ಸಂದರ್ಭದಲ್ಲಾಗಲಿ ಈ ಭಾಷೆಯನ್ನು ಕಾಲ್ತೆಗೆಯುವಂತೆ ಮಾಡಿರುವ ಸಂಗತಿ ನಮ್ಮೆದುರು ಇದೆ ಎನ್ನುತ್ತಾರೆ. ಇಂದು ಆಧುನಿಕತೆ ಮತ್ತು ಅಭಿವೃದ್ಧಿ ಮತ್ತು ವಿಶ್ವಾತ್ಮಕ ಜ್ಞಾನ ಸ್ವರೂಪದ ಹೆಸರಿನಲ್ಲಿ ಇಂಗ್ಲೀಷ್ ಭಾಷೆಯು ನಮ್ಮ ಸಾಮಾಜಿಕ ಬದುಕಿನಲ್ಲಿ ಗಟ್ಟಿಯಾಗಿ ತಳವೂರಿರುವುದು ಕಾಣುತ್ತಿದೆ. ಕನ್ನಡದಲ್ಲಿ ಜ್ಞಾನಸೃಷ್ಟಿ ಅಸಾಧ್ಯವೆಂಬ ನೆಲೆಗೆ ನಾವು ಬಂದು ನಿಂತಂತಿದೆ.''[೨] ಈ ಭಾಷೆಗೆ ಹಲವಾರು ಆತಂಕಗಳು ಇರುವ ಕಾಲವೆಂದು ಹೇಳಿರುವ ಮಾತು, ಪ್ರಸ್ತುತ ಸಂದರ್ಭದಲ್ಲಿ ಯೋಚಿಸುವ ಸಂಗತಿಯಾಗಿದೆ.

ಈ ಭಾಷೆಗೆ ಬಂದೊದಗಿರುವ ಆಪತ್ತುಗಳ ನಿವಾರಣೆಗೆ ಮತ್ತು ಭಾಷಾ ಬದುಕಿನ ಅಸ್ತಿತ್ವಕ್ಕಾಗಿ ಅನೇಕ ಕನ್ನಡದ ಬರಹಗಾರರು ಜಾಗತೀಕರಣಕ್ಕೆ ಮುಖಾಮುಖಿಯಾಗಿ, ನಮ್ಮ ಭಾಷೆಯ ಅನನ್ಯತೆಯನ್ನು ತೋರ್ಪಡಿಸಲು ಗ್ರಾಮೀಣ ಭಾಗದ ಜನರು ಬಳಸುವ ಆಡುಭಾಷೆಯಲ್ಲಿ ಸಾಹಿತ್ಯ ರಚನೆಗೆ ತೊಡಗಿದರು. ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಆಧುನಿಕ ಕನ್ನಡ ಕತೆಗಾರರು ತಾವು ನೆಲೆನಿಂತು ಸಾಹಿತ್ಯ ರಚನೆಗೆ ಆ ಪ್ರದೇಶ ಗ್ರಾಮೀಣ ತಳಮಟ್ಟದ ಜನ ಬಳಸುತ್ತಿದ್ದ ಉಪಭಾಷೆಯನ್ನು ಬಳಸತೊಡಗಿದರು. ಕೆಲವರು ಆ ಪ್ರಾದೇಶಿಕ ಜಾಯಮಾನಕ್ಕೆ ಒಗ್ಗುವಂತಹ ನೆಲದ ಮಣ್ಣಿನ ವಾಸನೆಯ ಪ್ರಾದೇಶಿಕ ಭಾಷೆಯಲ್ಲಿ ಬರೆಯತೊಡಗಿದರು ಮತ್ತು ಕೆಲವರು ಪ್ರಾಂತಗಳಲ್ಲಿ ಹಿಂದೆ ಉಂಟಾಗಿರುವ ಉರ್ದುವಿನ ಪ್ರಭಾವ, ತೆಲುಗು ಭಾಷೆಯ ಪ್ರಭಾವಗಳಿಗೆ ಪ್ರತಿಸ್ಪಂದಿಸಿ ಆ ಕಾಲದ ಚಾರಿತ್ರಿಕ ಒತ್ತಡ, ಪಲ್ಲಟಗಳನ್ನು ಪ್ರಾಂತೀಯ ಭಾಷೆಯ ಮೂಲಕ ಕಟ್ಟಿಕೊಂಡಿದ್ದಾರೆ. ಹಾಗೇ ನೋಡಿದರೆ ಇಂಗ್ಲೀಷ್

ಭಾಷೆಗೆ, ಉಪಭಾಷೆ, ಪ್ರಾದೇಶಿಕ ಮತ್ತು ಪ್ರಾಂತೀಯ ಭಾಷೆಗಳ ಮುಖಾಂತರವೇ ದೇಶೀಯ ಸಂಘರ್ಷವನ್ನು ಕತೆಗಾರರು ಒಡ್ಡಿದರು.

ಉಪಭಾಷೆ, ಪ್ರಾದೇಶಿಕ ಮತ್ತು ಪ್ರಾಂತೀಯ ಭಾಷಿಕ ನೆಲೆಯಿಂದ ನಮ್ಮ ಭಾಷೆಯ ಉಳಿವನ್ನು, ಅನನ್ಯತೆಯನ್ನು ಸಾರಲು ತಕ್ಕ ಕಾಲವೂ, ಭೂಮಿಕೆಯೂ ಸಿದ್ಧವಾಗಿರುವುದನ್ನು ಮರೆಯುವಂತಿಲ್ಲ. ಈ ಬದಲಾವಣೆಯು ಭಾಷೆಯೆಂಬ ಜೀವನದಿಗೆ ಆಪತ್ತು ಬಂದೊದಗಿದಾಗ ಅನಿವಾರ್ಯವಾಗಿರುತ್ತದೆ. ಈ ಅನಿವಾರ್ಯವಾದ ಭಾಷೆಯ ಜೀವ ಸ್ಪಂದಿಯಾದ ಅನನ್ಯತೆಗೆ ಕನ್ನಡದ ಬಹುತೇಕ ಲೇಖಕರು ಸ್ಪಂದಿಸಿರುವುದು ಕಂಡುಬರುತ್ತದೆ. ಸಂವಹನ ಸಂದರ್ಭದಲ್ಲಿ ಕೆಲವು ತೊಡಕುಗಳು ಈ ಭಾಷಿಕ ನೆಲೆಯಿಂದ ಪ್ರಾಪ್ತವಾದರೂ ನೆಲದ ಸಾಂಸ್ಕೃತಿಕ ಸತ್ವ, ಆ ನೆಲದ ಜೀವ ಧ್ವನಿಯಾದ ಭಾಷೆಯ ಮೂಲಕ ಹೇಳಿದಾಗಲೇ ಸಾಹಿತ್ಯ ಕೃತಿಗೆ ಹೊಸ ಮಹತ್ವ ದಕ್ಕುತ್ತದೆ.

ಯಾವುದೇ ಒಂದು ಸಾಹಿತ್ಯ ಕೃತಿ ರಚನೆಯಾಗಬೇಕಾದರೆ ಆಕೃತಿಗೆ ಸ್ಥಳೀಯತೆ ಬೇಕೆಬೇಕು. ಇಲ್ಲಿ ಸ್ಥಳೀಯತೆಯ ಪ್ರಶ್ನೆಯನ್ನು ಕುರಿತು ವಿಚಾರ ಮಾಡುವಾಗ, ಆ ನೆಲದ ಭಾಷೆಯ ಮುಖಾಂತರವೇ ಸಾಹಿತ್ಯ ಕೃತಿಗಳನ್ನು ರಚಿಸುವುದರಿಂದ ಆ ನೆಲದ ಜೀವಂತ ಧ್ವನಿಯಲ್ಲಿ ಪಾತ್ರಗಳು ಮಾತನಾಡುತ್ತವೆ. ಇದರಿಂದ ಆ ನೆಲದ ಬದುಕು, ಬದುಕಿನ ಸಾಂಸ್ಕೃತಿಕ ಅನನ್ಯತೆಗಳು ಕೃತಿಯ ಮುಖೇನ ಅನಾವರಣಗೊಳ್ಳುತ್ತವೆ. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಇಂಗ್ಲೀಷ್ ಭಾಷೆಯ ಸಾರ್ವಭೌಮಾಧಿಕಾರವನ್ನು ಕುರಿತು ಪ್ರಶ್ನೆಮಾಡುವ ಸಂದರ್ಭ ಸೃಷ್ಟಿಯಾಯಿತು. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಅನೇಕ ಕತೆಗಾರರು ಒಂದು ಪ್ರದೇಶದ ಉಪಭಾಷೆಯ ಮುಖಾಂತರವೇ ನಮ್ಮ ನೆಲದ ಭಾಷೆಯ ಅನನ್ಯತೆಯನ್ನು ದಾಖಲಿಸಿದರು. ''ಒಂದು ಭಾಷೆಯನ್ನಾಡುವ ವಿಸ್ತಾರ ಪ್ರದೇಶದಲ್ಲಿ ಸಂಪರ್ಕ ಕಡಿಮೆಯಾದಷ್ಟು ಭಾಷೆಯ ವ್ಯತ್ಯಾಸಗಳು ಹೆಚ್ಚಾಗುತ್ತವೆ. ಈ ವ್ಯತ್ಯಾಸಗಳು ಸ್ಪಷ್ಟವಾಗಿ ಗೋಚರಿಸತೊಡಗುತ್ತಿದ್ದಂತೆ ಕಾಲಕ್ರಮೇಣ ಈ ವ್ಯತ್ಯಾಸ ಅಥವಾ ವೈಶಿಷ್ಟ್ಯಗಳ ಮೊತ್ತವೇ ಒಂದು 'ಉಪಭಾಷೆ'ಯಾಗಲು ಕಾರಣವಾಗುತ್ತವೆ''[೩]. ಇಂತಹ ಉಪಭಾಷೆಗಳ ಬಳಕೆ ಇಂದಿನ ಸಣ್ಣಕತೆಗಳಲ್ಲಿ ಎಪ್ಪತ್ತರ ದಶಕದ ಸುಮಾರಿನಲ್ಲಿ ಕಾಣಿಸಿಕೊಂಡಿತು.

**೮.೨. ಕತೆಗಳಲ್ಲಿ ಭಾಷಾ ಬಳಕೆಯ ಸ್ವರೂಪ**

ಆಧುನಿಕ ಕಥಾ ಸಾಹಿತ್ಯದ ಸಂದರ್ಭದಲ್ಲಿ ೨೦ನೇ ಶತಮಾನದ ಕೊನೆಯ ದಶಕಗಳಲ್ಲಿ ಭಾಷಿಕ ನೆಲೆಯ ಅನನ್ಯತೆಯೂ ಬಹುಮುಖ್ಯವಾಗಿದ್ದು ಅದರಲ್ಲೂ ಉಪಭಾಷೆಯ ಸ್ಪಷ್ಟ ನೆಲೆಯನ್ನು ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ಕಥನಕಾರರಾಗಿರುವ ದೇವನೂರು ಮಹಾದೇವರ ಕೃತಿಗಳಲ್ಲಿ ಕಾಣಬಹುದು. ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕಿನ ದ್ಯಾವನೂರು ಎಂಬ ಹಳ್ಳಿಯ ದಲಿತಕೇರಿಯ ಒಳಗಿನ ಭಾಷೆಯ ಮುಖಾಂತರವೇ ದಲಿತ ಸಂಸ್ಕೃತಿಯ ಅನನ್ಯತೆ, ಬದುಕನ್ನು ಮಹಾದೇವ ಕಟ್ಟಿಕೊಡುತ್ತಾರೆ. ಶತಮಾನಗಳಿಂದ ತಿರಸ್ಕಾರಕ್ಕೆ ಒಳಗಾಗಿದ್ದ ಅಸ್ಪೃಶ್ಯರ ಬದುಕನ್ನು ಅವರ ಆಡುಭಾಷೆಯ ಮುಖಾಂತರವೇ ಅನಾವರಣಗೊಳಿಸಿದ್ದು ಕನ್ನಡ ಕಥಾ ಸಾಹಿತ್ಯ ಸಂದರ್ಭದಲ್ಲಿ ಅನೇಕ ಚರ್ಚೆಗೆ ಕಾರಣವಾಯಿತು. 'ದ್ಯಾವನೂರು' ಕಥಾಸಂಕಲನದ ಎಲ್ಲಾ ಕತೆಗಳಲ್ಲಿ ಆ ಸೀಮೆಯ ದಲಿತರು ಬಳಸುವ ಆಡು ಭಾಷೆಯ ಚಿತ್ರಣ ಓದುಗರನ್ನು ಹೊಸ ಪ್ರಪಂಚಕ್ಕೆ ಕರೆದುಕೊಂಡು ಹೋಗುತ್ತದೆ. ತಾವು ಬಾಳಿಬದುಕಿದ ದಲಿತಕೇರಿಯ ಉಪಭಾಷೆಯನ್ನು ಮಹಾದೇವ ಸಮರ್ಥವಾಗಿ ಬಳಸುತ್ತಾರೆ. ''ದಲಿತ ಸಮುದಾಯದ ಅಂತರಂಗದ ನುಡಿಗಟ್ಟುಗಳಿಂದ ಬರೆಯುವ ಮಹಾದೇವ ಕೇವಲ ಆ ಭಾಷೆಯ ಸಂಗೀತದ ಗುಣಕ್ಕಲ್ಲ.

ಅನುಭಾವದ ಗಾಢತೆಯು ವ್ಯಕ್ತವಾಗಲು ಹಲವು ಸ್ತರದ ಭಾಷಿಕ ವಿನ್ಯಾಸಗಳಿವೆ. ಆದರೆ ದಲಿತರ ನುಡಿಗಟ್ಟನ್ನೆ ಯಥಾವತ್ತಾಗಿ ಲಿಖಿತ ಕೃತಿಯಲ್ಲಿ ತಂದರೆ ಅದು ವ್ಯಕ್ತಿಯ ವಿಶಿಷ್ಟ ಭಾಷಿಕ ಪ್ರತಿಭೆಯ ವಿನ್ಯಾಸ ಆಗಲಾರದು. ನಂಜನಗೂಡಿನ ದ್ಯಾವನೂರುಯೆಂಬ ಹಳ್ಳಿಯ ದಲಿತ ಕೇರಿಯ ಒಳಗಿನ ಉಪಭಾಷೆಯ ಮೂಲಕ ಆಧುನಿಕ ಜಗತ್ತಿನ ಭಾಷಿಕ ವಿನ್ಯಾಸಗಳ ಅನು ಸಂಧಾನದ ಜೊತೆಯೇ ಪ್ರತಿಸೃಷ್ಟಿಯಾಗುತ್ತದೆ. ಮಹಾದೇವ ಅವರು ಇಂತಹ ದಲಿತರ ಭಾಷಿಕ ಪ್ರತಿಭೆಯನ್ನು ಈ ಕಾಲದ ಸಾಹಿತ್ಯರೂಪಕಗಳಿಗೆ ಹೊಂದಿಸುವುದರಿಂದ ಆ ಭಾಷೆ ಕೇವಲ ಆ ಹಳ್ಳಿಯ ಆ ದಲಿತರ ಯಥಾವತ್ ಭಾಷೆಯಾಗುವುದಿಲ್ಲ. ಲೇಖಕನ ಪ್ರತಿಭೆಯ ಗರ್ಭದಲ್ಲಿ ಅವನು ಬೆಳೆದ ಬಾಲ್ಯದ ಪರಿಸರ ಭಾಷೆಯು ಜೈವಿಕವಾಗಿಯೇ ಬೆರೆತು ಬಂದಿರುತ್ತದೆ. ಇಂತಹ ಭಾಷೆಯ ಅನುಭವವನ್ನು, ದಲಿತರ ಬದುಕಿನ ಅನುಭವವನ್ನು ತನ್ನ ಕಾಲದ ಸಮಾಜದ ಅನುಭವಗಳಿಂದ ಸಂಯೋಗಿಸಿ ಬರೆಯುವಾಗ ಮೂಲದ ಬಾಲ್ಯದ ಆ ಹಳ್ಳಿಯ ಅದೇ ದಲಿತ ಪರಿಭಾಷೆಗಳು ಹೊಸ ರೂಪ ಸಾಹಿತ್ಯ ಕ್ರಮದಲ್ಲಿ ಬೇರೊಂದು ವಿನ್ಯಾಸವಾಗಿಯೇ ನಿಲ್ಲುತ್ತವೆ''[೪] ಎಂದು ಮಹತ್ವದ ಸಂಸ್ಕೃತಿ ಚಿಂತಕ ಮೊಗಳ್ಳಿ ಗಣೇಶರು ಅಭಿಪ್ರಾಯಪಟ್ಟಿದ್ದಾರೆ. ದೇವನೂರರು ತನ್ನ ಪರಿಸರದ ಭಾಷೆಯನ್ನು ಅದರ ಯಥಾವತ್ ರೂಪದಲ್ಲಿ ಬರೆದಿದ್ದರೆ ಅದಕ್ಕೆ ಮಹತ್ವ ಇರುತ್ತಿರಲಿಲ್ಲ. ಸಮುದಾಯದ ಭಾಷೆಯನ್ನು ತನ್ನ ಸಾಹಿತ್ಯದ ಭಾಷೆಯಾಗಿ ವ್ಯಕ್ತಿ ಭಾಷೆಯಾಗಿ ಮಾರ್ಪಡಿಸುವುದು ಸುಲಭದ ಸಂಗತಿಯಲ್ಲ. ಅದು ಮಹಾದೇವರಂತವರಿಗೆ ಮಾತ್ರ ಸಾಧ್ಯವಾಗಿದೆ ಎನಿಸುತ್ತದೆ.

ಮಹಾದೇವರು 'ಮಾರಿಕೊಂಡವರು' ಕತೆಯಲ್ಲಿ ನಂಜನಗೂಡು ಪ್ರದೇಶದ ದಲಿತರ ಉಪಭಾಷೆಯನ್ನೇ ಕತೆಯಾಗಿಸಿದ್ದಾರೆ. ದಿಕ್ಕು ದೆಸೆ ಕಾಣದ ಬೀರ ಮತ್ತು ಆತನ ಹೆಂಡತಿಗೆ ಗೌಡರು ಆಶ್ರಯ ನೀಡುತ್ತಾರೆ. ತಮ್ಮ ತೋಟದ ಮನೆಯಲ್ಲಿದ್ದು ತಮ್ಮ ತೋಟ ಮತ್ತು ಮನೆಯ ಕೆಲಸ ನೋಡಿಕೊಂಡಿರಲು ತಿಳಿಸಿದಾಗ ಭೀರ, ಲಕ್ಷ್ಮಿಗೆ ಸಂತೋಷವಾಗುತ್ತದೆ. ಗೌಡರನ್ನೆ ದೇವರೆಂದು ಜೀತದ ಬದುಕುಸಾಗಿಸುತ್ತಾರೆ. ಆದರೆ ಗೌಡರ ಮಗ ಕಿಟ್ಟಪ್ಪ ಕಾಲೇಜು ಶಿಕ್ಷಣ ಮೊಟಕುಗೊಳಿಸಿ ಫೇಲಾಗಿ ಮನೆ ಸೇರಿದವನು. ಹೆಣ್ಣು, ಕುಡಿತಗಳ ಚಟಕ್ಕೆ ಬಿದ್ದು. ಬೀರನಿಗೆ ಕುಡಿತದ ಆಶೆ ತೋರಿಸಿ ಲಕ್ಷ್ಮಿಯ ಸಂಬಂಧ ಗಳಿಸುತ್ತಾನೆ. ಈ ಸಂದರ್ಭವನ್ನು ಮಹಾದೇವರು ಕತೆಯಾಗಿಸಿದ ಕಲೆ ಅನನ್ಯವಾದದ್ದು.

''ಲಕ್ಷ್ಮೀ ಮೆಲ್ಲನೆ ಕರೆದು ಮೈಮುಟ್ಟಿ ಅಲ್ಲಾಡಿಸಿದಾಗ ತಟ್ಟನೆ ಎಚ್ಚರವಾಗಿ ಬೆಚ್ಚಿ ಬಿದ್ದಳು. ಯೋಚನೆ ದಿಗಿಲಿನ ಮಧ್ಯೆ ಯಾವಾಗ ನಿದ್ದೆ ಬಂತೋ ಗೊತ್ತಿರಲಿಲ್ಲ. ಹೊತ್ತು ಮೂಡಲು ಎಚ್ಚರವಾಗಿ, ಮೈಮಾಲು ಮುರಿಯಲು ಭೀರನಿಗೆ ಹಗೂರವಾದಂತೆ ತೋರಿತು. ಹಾಗೂ ಭೀರನಿಗೆ ವಸಿ ರಾತ್ರಿ ನಿಶೆ ಉಳಿದಿತ್ತು. ಎರಡು ಕೈಯನ್ನು ಗಸಗಸತೀಡಿ ಮೊಖಕ್ಕೆ ಎದುರು ತಂದು ಅಂಗೈ ನೋಡಿಕೊಂಡು ಮೆಲ್ಲನೆ ಲಚುಮಿ ಅಂದಾಗ ಉತ್ತರ ಬರಲಿಲ್ಲ ಅವಳು ಹೊದ್ದಿದ್ದ ಪಟ್ಟೆ ಪಟ್ಟೆರಗ್ಗಿಗೆ ದಿಟ್ಟಿ ನೆಟ್ಟಿತು. ಕಳೆದ ಸೋಮವಾರ ಕಿಟ್ಟಪ್ಪ ರಗ್ಗು ಚಾಚಿ ತಕ್ಕೋ ಬೀರ ಬರೋದು ಚಳಿಗಾಲ, ಅಂದು ಕೊಟ್ಟರು. ರಾತ್ರಿ ಮಲಗುವಾಗ ಲಚುಮಿ ಒಳಗೊಳಗೆ ನಗುತ್ತ ಅದನ್ನು ತನ್ನ ಕಡೆ ಎಳೆದುಕೊಂಡು ಇದು ನಂಗೇ ಬೇಕು ಎಂದು ಬಿಮ್ಮನೆ ಬೀರಿ ಹಿಡಿದುಕೊಂಡಳು. ಅವಳನ್ನೆ ಬಾಚಿತಬ್ಬಿಕೊಂಡು ಎದೆಗೆ ಅಮುಕಿ ಹೋಗ್ಲಿ ಅದನ್ನ ನೀನೆ ತಕ್ಕೊ ನಿನ್ನನ್ನ ನಂಕೊಡು ಅದ್ಕಿಂತ ನೀನೆ ಬೆಚ್ಚಗೆ ಅಂದಾಗ ಕಿಸಕಿಸನಕ್ಕಳು ಈಗ ಅವಳಿಗೆ ಬೆಚ್ಚಾಗುತ್ತಿರಬೇಕು''[೫] ಮೇಲಿನ ಸಾಲುಗಳಲ್ಲಿ ದೇವನೂರರು ಲಕ್ಷ್ಮೀ (ಪುಟ ೬) ಭೀರರ ದಾಪಂತ್ಯ ಬದುಕಿನಲ್ಲಿ ಕಿಟ್ಟಪ್ಪ ಪ್ರವೇಶ ಪಡೆದು ಕೊಂಡಿರುವುದು ಆತ ನೀಡಿದ ಸುಖದ ಕ್ಷಣಕ್ಕೆ

ಲಕ್ಷ್ಮೀ ಮಾರುಹೋಗಿ ಆತ ನೀಡಿದ ರಗ್ಗನ್ನೆ ಬೀರನಿಂದ ಕಸಿದುಕೊಂಡು ಕಿಟ್ಟಪ್ಪನ ಕನಸು ಕಾಣುವುದು. ಈ ಎಲ್ಲಾ ಸಾಂದರ್ಭಿಕ ಕ್ಷಣವನ್ನು ದಲಿತರ ಉಪಭಾಷೆಯ ಮುಖಾಂತರವೇ ಕಥೆಯಾಗಿಸಿದ್ದಾರೆ. ಆ ಸೀಮೆಯ 'ವಶಿ', 'ಮೊಖ', 'ತಕ್ಕೋ' ಬಿಮ್ಮನೆ ಬೀರಿ ಮುಂತಾದ ದಲಿತರ ಆಡುಭಾಷೆ ನುಡಿಗಟ್ಟುಗಳನ್ನೆ ಯಥಾವತ್ತಾಗಿ ಸಂದರ್ಭಕ್ಕೆ ಚ್ಯುತಿ ಬರದಂತೆ ಮಹಾದೇವ ಸಮರ್ಥವಾಗಿ ಬಳಸಿದ್ದಾರೆ.

ಮಹಾದೇವರ 'ಗ್ರಸ್ತರು' ಕತೆಯೂ ಕೂಡ ಆತ್ಮ ಕಥನದ ರೂಪದಲ್ಲಿದೆ. ಈ ಕತೆಯಲ್ಲಿ ಬರುವ ದಲಿತ ತರುಣನಿಗೆ ಆ ಊರಿನ ಗೌಡರು ಮಠದಲ್ಲಿ ನೌಕರಿ ಕೊಡಿಸಿದ್ದಾರೆ. ಆದರೆ ಆತನಿಗೆ ಅಲ್ಲಿಯ ಪರಿಸರ ಒಗ್ಗದೆ ನೌಕರಿ ಬಿಟ್ಟು ಊರಿಗೆ ಬಂದಿದ್ದಾನೆ. ಗೌಡರು ಈ ಹುಡುಗನಿಗಾಗಿ ಹಣ ಖರ್ಚು ಮಾಡಿದ್ದು ವ್ಯರ್ಥವಾಗಿದೆ ಗೌಡರು ಸಿಡಿಮಿಡಿ ಗೊಂಡಿದ್ದಾರೆ. ಮನೆಯಲ್ಲಿ ಅವ್ವನಿಗೆ ಖಾಯಿಲೆ. ಈ ಸಂದರ್ಭವನ್ನು ಆ ನೆಲದ ಭಾಷಿಕ ಬಂಧದಲ್ಲಿ ಮಹಾದೇವ ಕಟ್ಟಿಕೊಡುವ ರೀತಿ ತಲ್ಲಣಗೊಳಿಸುವಂತದ್ದಾಗಿದೆ.

''ಅವ್ವ ಎದ್ದು ಓಡಾಡಿದ್ದು ಮರೆತು ಹೋಗುವಷ್ಟು ದಿನಗಳಾದವು. ಜಡ್ಡು ಬಿದ್ದ ಹಟ್ಟಿಗೆ ಅವ್ವನ ಎದೆ ಬಡಿತ ಒಗ್ಗಿಬಿಟ್ಟಿದೆ. ನೆನಸಿಕೊಳ್ಳುವುದಕ್ಕೆ ಅಸಹನೀಯವಾಗಿ ತೋರಿತು. ಗೌಡರು ಬಂದು ಕಿರುಮನೆಯ ಮುಂದು ನಿಂತು ಠೀವಿಯ ಮಾತು ಒಗೆಯತೊಡಗಿದಾಗ ಅವ್ವನ ಜೀವ ಏಳುವುದಕ್ಕಾಗದೇ ಕೂರುವುದಕ್ಕಾಗದೆ ಒದ್ದಾಡಿ ಹೋಗಿರಬೇಕು. ಬಂದ ತಕ್ಷಣ ಅಳು ಕಚ್ಚಿಕೊಂಡು ಹೇಳಿದಳು: ''ಗೌಡರು ಚಾರಮಾರ ಅಂದರು. ನೀನು ಎದುರು ನೆಡೆಯುವುದು ಎಂದರೇನು? ಎಷ್ಟಾದರೂ ಅವರು ದೊಡ್ಡವರು'' ಅವ್ವನ ಮಾತುಗಳಿಂದ ಗೌಡರು ಮೂಡಿಬಂದರು ಒಂದು ಕೈಲಿ ಉರಿಯುವ ಸಿಗರೇಟು, ಇನ್ನೊಂದು ಕೈ ಅಲ್ಲಾಡಿಸುತ್ತಾ ''ಹುಡ್ಗ ಯೋಗ್ಯ ಅಂತ ಸಾವಿರ್ದವರ್ಗೂ ಸಾಲಕೊಟ್ಟೆ ಸ್ವಾಮಿಗಳ ಕಾಲ್ಗೆ ಬಿದ್ದು ಕೆಲ್ಸ ಕೊಡ್ಸಿದವ ನಾನು ಇವ್ಳೆ. ಈಗ ಎಷ್ಟರವವನು ಅಂತ ಗೊತ್ತಾಯ್ತು ತಕ್ಕೊ ನಾ ಹೇಳೋದು ಇಷ್ಟೆ. ಅಸ್ಲು ಬಡ್ಡಿ ಜೋತ್ಮಾಡ್ಕೊಂಡು ಹಟ್ಟಿ ಬಾಗ್ಲು ಮೆಟ್ಬೋದಕ್ಕೆ ಹೇಳು. ಇಲ್ಲ ನೀನೆ ಕಂಡಿದ್ದಿ, ಹೊಲ ಅಂಗೈಯಗ್ಲ ಉಳಿಯಾಕಿಲ್ಲ.''[೬]

ಮೇಲಿನ ಹದವಾದ ಆಡು ಭಾಷೆಯ ಮುಖಾಂತರ ದಲಿತರ ದಮನಿತ ಬದುಕಿನ ಚಿತ್ರಣವಿದೆ. ನೌಕರಿ ಬಿಟ್ಟು ಬಂದ ಆ ಯುವಕನಿಗೆ ಕಂಡ ತನ್ನ ಹಟ್ಟಿಯ ಅಸಾಯಕ ಬದುಕು. ಜೊತೆಗೆ ಆ ಸಂದರ್ಭದಲ್ಲಿ ಗೌಡರು ನುಡಿದ ಮಾತುಗಳು ಅಚ್ಚ ದೇಶಿಯ ಮಾತುಗಳಲ್ಲಿ ದರ್ಪವೂ ಇದೆ. ಮುಂದಿನ ಬದುಕನ್ನು ಕಸಿದುಕೊಳ್ಳುವ ದೌರ್ಜನ್ಯವೂವಿದೆ. ಅವ್ವನ ಮಾತುಗಳಿಂದ ಗೌಡರು ಮೂಡಿಬಂದರು ಎಂಬ ಧ್ವನಿಪೂರ್ಣವಾದ ಸಾಲಿನಿಂದ ಗೌಡರ ಮುಖ ಭಾವಗಳನ್ನು ಸಮರ್ಥವಾದ ಆಡು ಭಾಷೆಯ ಮುಖಾಂತರವೇ ಮಹಾದೇವರು ಕತ್ತಲು ಜಗತ್ತಿನ ದಲಿತರ ಬದುಕನ್ನು ಅನಾವರಣಗೊಳಿಸುತ್ತಾರೆ.

ದೇವನೂರರ ''ಅಮಾಸ'' ಕತೆಯಂತು ಸಾಂಸ್ಕೃತಿಕವಾಗಿ ದಲಿತರ ಬದುಕಿನ ದಟ್ಟ ಜೀವನಾನುಭವಗಳನ್ನು ತನ್ನ ಒಡಲಲ್ಲಿಟ್ಟುಕೊಂಡಿರುವ ಕತೆ. ಇಲ್ಲಿ ಅಮಾಸ ಮತ್ತು ಕುರಿಯರನ್ನು ದಲಿತರ ಸಾಂಸ್ಕೃತಿಕ ಪ್ರತೀಕವಾಗಿಸಿದ್ದಾರೆ. ಊರಿನ ಮಠ ಮತ್ತು ಮಾರಿಗುಡಿ ಅವರನ್ನು ಉಳಿಸಿ ಬೆಳಸಿದೆ. ಮೇಲ್ಜಾತಿಯ ಮಠ ಮತ್ತು ಮಾರಿಗುಡಿಗಳು ಊರಿನ ಸಾಂಸ್ಕೃತಿಕ ಕೇಂದ್ರಗಳು. ಮಠದ ಊಟವನ್ನು ನೆಚ್ಚಿಕೊಂಡು ಅಮಾಸ ಮತ್ತು ಕುರಿಯಯ್ಯ ಬದುಕಿದ್ದಾರೆ. ಮಾರಿಗುಡಿಯ ಹೆಸರಲ್ಲಿ ನಡೆಯುವ ಊರಿನ ಮಾರಿಹಬ್ಬ ದಲಿತರಿಗೆ ಎಲ್ಲ ಹಬ್ಬಗಳಿಗಿಂತ ದೊಡ್ಡ ಹಬ್ಬ. ಮಾರಿಕುಣಿತ, ಹುಲಿವೇಷ, ಮರಿಗಳ ಬಲಿ, ಹೆಂಡ, ಬಾಡು ದಲಿತರಿಗೆ ಹಬ್ಬದಲ್ಲಿ ಮುಖ್ಯವಾಗುತ್ತದೆ.

ಅಮಾಸ ಮತ್ತು ಕುರಿಯಯ್ಯನ ವ್ಯಕ್ತಿತ್ವ ಮತ್ತು ಚಹರೆಗಳನ್ನು ಮಹಾದೇವ ಕಟ್ಟಿಕೊಡುವ ಭಾಷೆಯನ್ನೆ ನೋಡಿದಾಗ. ''ಅಮಾಸ ಎಂಬುದು ಅಮಾಸನ ಹೆಸರು. ಅವನು ಕಪ್ಪಗಿದ್ದುದಕ್ಕೊ ಅಮಾವಾಸೆ ದಿನ ಹುಟ್ಟಿದ್ದಕ್ಕೋ ಅವನಿಗೆ ಅಮಾಸ ಎನ್ನುವ ಹೆಸರು ನಿಂತಿದೆ. ಅಮಾಸ ಅನ್ನುವ ಹೆಸರು ಯಾಕೆ ಬಂತು ಎಂದು ಅವನ ಅಪ್ಪ ಬದುಕಿದ್ದರೆ ಕೇಳಬಹುದಿತ್ತು. ಆದರೆ ಅವನು ಹುಟ್ಟಿದ ಮೇಲೆ ನಡೆದಾಡೊ ವೇಳೆಗೆ ಅವನನ್ನು ಹೆತ್ತವಳು ಹುಟ್ಟಿಸಿದವನು ನಾನಾ ನಿಮಿತ್ತವಾಗಿ ದೈವಾದೀನರಾದರು.''[೭]

ಇಲ್ಲಿ ದೇವನೂರರು ಚಿತ್ರಿಸಿರುವ 'ಅಮಾಸ' ತಂದೆ ತಾಯಿಯಿಲ್ಲದ ತಬ್ಬಲಿ. ಆತನ ಜೊತೆಗಿರುವ ಮಾರಿಗುಡಿಯಲ್ಲೇ ವಾಸವಾಗಿರುವ ಕುರಿಯಯ್ಯನ ಚಿತ್ರ ಹೀಗಿದೆ... ''ಅಲ್ಲಿ ಅಮಾಸನನ್ನು ಬಿಟ್ಟರೆ ಒಂದು ಹಳೆ ತಲೆ ವಾಸವಿದೆ. ಹಳೆ ತಲೆ ಅಂದರೆ ಅಂತು ಅವನ ಮಯ್ಯಿಕಯ್ಯಿ ತಲೆ ಅನ್ನದೆ ಕೂದಲು ಇದ್ದಷ್ಟು ಬೆಳ್ಳಗಾಗಿ ಅವನ ದೇಹ ತುಂಬ ಹರಿದಿವೆ. ಇದುವರೆಗೆ ಕಂಡಂತೆ ಅವನು ಕೂತಲ್ಲಿಂದ ಎದ್ದುದನ್ನು ಯಾರೂ ಕಂಡಂತಿಲ್ಲ. ಮಾರಿಗುಡಿಯ ಮೂಲೆಗೆ ಸೇರಿದಂತೆ ಒಂದು ಮೂಲೇಲಿ ಒಂದು ಕಡೆ ಒಂದು ಕಪ್ಪು ಕಂಬಳಿ, ಯಾವ ಕಾಲದ್ದೊ ಅಂತು ಹಾಸಿದೆ. ಅದರ ಮೇಲೆ ಕಾಲು ಚಾಚಿಯೊ ಪಕ್ಕದ ಕಂಬಕ್ಕೊರಗಿಯೋ ಅಥವಾ ಕೈಗಳ ಹಿಂದಕ್ಕಾನಿಸಿಯೋ ಕೂತೇ ಇರುವನು. ಅವ ಅಂತೆ ಕುಂತಾಗೆಲ್ಲಾ ಅರೆಗಣ್ಣು ಮುಚ್ಚಿ ಕೂರುವುದು ಹಿಂದಿನಿಂದಲೂ ಹೇಗೋ ಬಂದು ಬಿಟ್ಟಿದೆ. ಈ ಸ್ಥಿತಿಯ ಕಂಡರೆ ಎನನ್ನೋ ಧೇನಿಸುತ್ತೆ ಕುಂತಂತೆ ಗೋಚರಿಸುತ್ತೆ. ಸುಕ್ಕುಗಳಿಂದ ಮಾಡಿದ ಅವನ ಮೊಖ ಮೇಲಿನ ರೀತಿ ಅನ್ನಿಸಲು ಕಾರಣ ಇದ್ದೀತು.''[೮] ಅಮಾಸ ಮತ್ತು ಕುರಿಯಯ್ಯನ ಬಾಲ್ಯಕಾಲದ ಜೀವನಾನುಭವಗಳನ್ನು ಆ ನೆಲದ ಭಾಷೆಯ ಮೂಲಕ ಎಣೆಯುತ್ತಲೇ ಮಾರಿಹಬ್ಬದ ವರ್ಣನೆಯನ್ನು ಮಾಡಿ, ಇಡೀ ಹಬ್ಬದ ಗುಂಗಿನಲ್ಲಿ ಓದುಗರನ್ನು ಮಹಾದೇವ ಮುಳುಗಿಸಿ ಬಿಡುತ್ತಾರೆ. ಆ ಸಂದರ್ಭದ ಕೆಲವು ಸಾಲುಗಳನ್ನೆ ನೋಡಬಹುದು.

''ಹಬ್ಬದಂದು ನೆಲಕ್ಕೆ ಹೊತ್ತು ಇಳಿಯುತ್ತಿದ್ದಂತೆಲ್ಲಾ ಪರಸ್ಥಳದಿಂದ ನೆಂಟರಿಷ್ಟರು
ಊರಿಗೆ ಒಬ್ಬರಾಗಿ ಇಳಿಯುವುದು ಏರತೊಡಗಿತು. ಬಂದವರು ರೂಢಿಯಂತೆ ಮಾರಿಗುಡಿಗೆ
ಮೊಖಹಾಕಿಯೇ ಆಮೇಲಿನದು ಮಾಡುತ್ತಿದ್ದರು.'' (ಪುಟ ೫೧)

ಹೊರಗೆ ಜೋಳದ ಕಂತೆ ಕತ್ತಿಸಿ ಬಸಣ್ಣನು ತಮ್ಮಟೆ ಕಾಯಿಸುತ್ತಾ ಅದರ ದನಿ ಬಿಗಿ ಮಾಡುತ್ತಿದ್ದನು. ಅವನ ಸುತ್ತ ವಾನರ ಸೇನೆಯಂತೆ ಐಕಳು ಮಕ್ಕಳು ಸುತ್ತಿದ್ದವು. ಅದರೊಳಗೆ ಅಮಾಸನು ಒಬ್ಬನಾಗಿದ್ದನು''.[೯] (ಪುಟ-೫೧) ''ಬಸಣ್ಣನು ತಮ್ಮಟೆಯನ್ನು ಎದೆಗೆ ಏರಿಸಿ ಚಡ್ ಚಡ್ ನಕುನ, ನಕುನ...ನಕುನ ಬಾರಿಸಲು ಕಂಚಿಗೆ ಬಡಿದಂತೆ ತಮ್ಮಟೆಯ ಸದ್ದು, ಇದ್ದ ಐಕಳು ಸುಮ್ಮನಿರದೆ ಕುಣಿಯತೊಡಗಿದವು. ಬಸಣ್ಣನಿಗೂ ಹುಮ್ಮಸ್ಸು ಬಂದು ಢಂಗ್ ಡಂಗು, ಢಂಗು ಚಿಕ್ಕಿ ವಡೀತ ಅವನು ಕುಣಿದನು.''[೧೦] ಇಲ್ಲಿ ಮಹಾದೇವರು ಮಾರಿಗುಡಿಯ ಮುಂದಿನ ಹಬ್ಬದ ಸಡಗರ ಸಂಭ್ರಮವನ್ನು ಆ ಊರಿನ ದಲಿತಕೇರಿಯ ಉಪಭಾಷೆಯ ನಿರೂಪಣಾ ಶೈಲಿಯಲ್ಲಿ ಕಟ್ಟಿದ್ದಾರೆ. ನೆಲದ ಬದುಕಿನ ಜಾಯಮಾನಕ್ಕೆ ಒಗ್ಗಿದ ಭಾಷೆಯಲ್ಲಿ.. ಪಾತ್ರಗಳನ್ನು ಅನಾವರಣಗೊಳಿಸಿದ್ದಾರೆ. ಹುಲಿಯಾಟದ ಕುಣಿತ, ಅಂದಿನ ಸಂದರ್ಭವನ್ನು ಹೀಗೆ ದಾಖಲಿಸುತ್ತಾರೆ.!

''ಮಾರಿಗುಡೀಲಿ ಹುಲಿಯಾಸದ ತಮ್ಮಟೆ ಸದ್ದು ಎಲ್ಲರನ್ನು ಒಕ್ಕಡೆಗೆ ಸೆಳೆಯುತ್ತಿತ್ತು. ಎಲ್ಲರು ಬರೋ ಹುಲಿಗಳನ್ನೆ ಕಾಯುತ್ತಕಾದಿದ್ದರು. ಹಾಗೆ ಇದ್ದು ಒಮ್ಮೆಗೆ ಹುಲಿಮನೆ ಬಾಗಿಲು ತೆರೆದು ಕೊಂಡಿತು. ಎಲ್ಲರ

ಕಣ್ಣುಗಳೂ ದಬ..ದಬ ಅಲ್ಲಿಗೆ ಬಿದ್ದವು. ಒಂದು ದೊಡ್ಡಯಾಸದ ಹುಲಿ ನಿಂಬೆ ಹಣ್ಣು ಬಾಯಲ್ಲಿ ಕಚ್ಚಿ ಒಳಗಿನಿಂದ ಹೊರಕ್ಕೆ ನೆಗೆದು ಬಂತು. ಬರುತ್ತಲೆ ಜನವೆಲ್ಲ ಹೌಹಾರಿ ಚದುರಿ ಸರಿದು ಅಲ್ಲೆ ರೌಂಡಾಗಿ ಜಾಗವಾಯ್ತು. ಅದಾದ ಮೇಲೆ ನಾಕಾರು ದೊಡ್ಡ ಹುಲಿಗಳು ಕತ್ತೆಕಿರುಬ ನಗುಸೊ ಕೋಡಂಗಿ ಒಂದಾದ ಮೇಲ್ಲೊಂದು ಬಂದವು. ಬಂದವುಗಳಲ್ಲಿ ಮರಿ ಹುಲಿಯೂ ಇತ್ತು. ಎಲ್ಲಾ ಚಂದಾದ ಮೇಲ ಅಲ್ಲಿಂದಲೇ ಕುಣಿತ ಆರಂಭ ಆಯ್ತು''[೧೧] ಮಾರಿ ಹಬ್ಬದ ಸಂದರ್ಭದಲ್ಲಿ ಈ ಹುಲಿವೇಷದ ಕುಣಿತವೇ ಮೋಜಿನಿಂದ ಕೂಡಿರುವಂತದ್ದಾಗಿದೆ. ಊರಿನ ಜನ ಈ ಕುಣಿತ ನೋಡಲು ಜಗಲಿ ಇಳಿದೇನೆ ಜೀವಹಿಡಕೊಂಡು ನೋಡುತ್ತಿದ್ದರು ಎಂದು ಮೋಜಿನ ಸಂದರ್ಭವನ್ನು ಮೇಲಿನ ಉಪಭಾಷೆಯ ಮುಖಾಂತರವೇ ಕತೆಯಾಗಿಸಿದ್ದಾರೆ.

ಕನ್ನಡದ ಶ್ರೇಷ್ಠ ಕಥನಕಾರರಾದ ಪಿ. ಲಂಕೇಶರು 'ದ್ಯಾವನೂರು' ಸಂಕಲನದ ಒಟ್ಟು ವೈಶಿಷ್ಟತೆಯನ್ನು ಕುರಿತು ''ಮಹಾದೇವ ಅವರ ಪುಸ್ತಕ ಇದಕ್ಕಿಂತಲೂ ಮಿಗಿಲಾದುದನ್ನು ಮಾಡಿದೆ. ಬಹುಕಾಲದಿಂದ ನಮ್ಮ ಅಸಡ್ಡೆಗೆ ಒಳಗಾಗಿರುವ ಜನವರ್ಗಗಳಲ್ಲಿ ತಮ್ಮದೇ ಆದಂತಹ ವಿಶಿಷ್ಟವಾದ ವೇದನೆಯ ಒಂದು ನುಡಿಗಟ್ಟು ಹಾಗೂ ರೂಪಿಕೆ, ಅದಿಮ ಮೂಲದಿಂದ ಒದಗಿ ಬರುವ ಒಂದು ಶಕ್ತಿ ಮತ್ತು ಅನುಕಂಪಗಳಿದ್ದು, ಇವು ವಿದ್ಯಾವಂತ ವರ್ಗಗಳಲ್ಲಿ ಕಿಂಚಿತ್ತೂ ಕಂಡುಬರುವುದಿಲ್ಲ ಎಂಬುದನ್ನು ತೋರಿಸಿಕೊಟ್ಟಿದೆ.''[೧೨] ''ಮಹಾದೇವರ ಈ ಆಡುಮಾತಿನ ನಿರೂಪಣ ಶೈಲಿಯನ್ನು ಅನುಕರಿಸಲು ಕೆಲವರು ಯತ್ನಿಸಿ ಸೋತಿದ್ದಾರೆ. ಅದು ಜೆ.ಎಂ. ಸಿಂಜ್‌ನಂತೆ ಬರೆಯಲು ಹೋಗುವಂತಾಗುತ್ತದೆ. ಸಿಂಜ್‌ನ ಸಾಧನೆ ಇರುವುದು ಆತ ಆ ಮಾತುಗಳನ್ನು ಕೇಳಿ ದಾಖಲಿಸಿಕೊಂಡು ವಸ್ತುಸಿಕ್ಕಾಗ ಬಳಸಿದ್ದು. ಆತನ ಪಾತ್ರಗಳ ಆಳದಲ್ಲಿ ಆ ನುಡಿಗಟ್ಟು ಹೊಂದಿಕೊಂಡದ್ದು ಮಹಾದೇವರ ಮಾತು ಅಷ್ಟೇ, ಅವರ ಕಿವಿಯ ಮೇಲೆ ಬಿದ್ದ ಮಾತು ಮತ್ತು ಚಿತ್ತದ ಮೇಲೆ ಸುಳಿದ ಜನ ಇಲ್ಲಿ ಕತೆಯಾಗುತ್ತಾರೆ.''[೧೩]

ಈ ಮೇಲಿನ ಲಂಕೇಶರ ಮಾತುಗಳಲ್ಲಿ ಮಹಾದೇವರ ಚಿತ್ರಿಸಿದ ಪಾತ್ರಗಳು ಆ ಪಾತ್ರಗಳಿಗೆ ತುಂಬಿದ ಭಾಷೆಯು ತಮ್ಮ ನೆಲದ ಜೀವಧ್ವನಿಯಾದ ವೇದನೆಯ ನುಡಿಗಟ್ಟು, ನಮ್ಮ ಕಿವಿಯ ಮೇಲೆ ಬಿದ್ದ ಆಡುಭಾಷೆಯನ್ನೆ ಬಳಸಿ ನಮ್ಮ ಮನಸ್ಸಿನ ತೆರೆಯ ಮೇಲೆ ಹೊಸ ಭಾಷೆಯ ವಿನ್ಯಾಸವನ್ನು ಮೂಡಿಸುತ್ತಾರೆ. ಇದು ಮಹಾದೇವರ ಎಲ್ಲಾ ಕೃತಿಗಳಿಗೆ ಸಂಬಂಧಿಸಿದ ಮಾತಾಗಿದೆ.

'ಡಾಂಬರು ಬಂದುದು' ಕತೆ ಗ್ರಾಮೀಣ ಜಗತ್ತನ್ನು ಪ್ರವೇಶಿಸುವ ಹೊಸ ಮೌಲ್ಯಗಳ ನಿಶ್ಚಲ ಸ್ಥಿತಿಯನ್ನು ಕಲಕುತ್ತವೆ. ಇಲ್ಲಿ ಡಾಂಬರು ಕೇವಲ ಕ್ರೌರ್ಯವನ್ನು ಧ್ವನಿಸದೆ ಲಕುಮ, ರಾಜ, ಮಾದು, ಶಂಭು ಇವರ ಹೊಸ ಮನೋಧರ್ಮವನ್ನು ಸಂಕೇತಿಸುತ್ತದೆ. ಇಲ್ಲಿ ಹಳತು ಹೊಸತುಗಳ ಮೌಲ್ಯ ಸಂಘರ್ಷ ಮೂರ್ತವೂ ಆಗುತ್ತದೆ. ಸಣ್ಣ ಸಣ್ಣ ಭಾಷೆಯ ನುಡಿಗಟ್ಟುಗಳ ಮೂಲಕ ಕತೆಗೆ ಪೂರ್ಣತ್ವ ಬಂದಿದೆ.

''ಬಂದವರೂ ರೋಡು ಆಗುವ ಅದ್ಭುತವ ಚಣೋತ್ಸಾದರೂ ನೋಡದೆ ಹೋಗರು ಹಟ್ಟಿಕಡೆ ತಿರುಗಲು ಹೈಕಳ ಕೈ ಹಿಡಿದರೆ ಅವುಗಳ ಕೈ ಟಾರು ದೊಡ್ಡವರಿಗೂ ಮೆತ್ತಿಕೊಳ್ಳುವುದು..''[೧೪]

''ಚಾವಡಿ ಒಳಗ ಲಾಟೀನು ದೊಡ್ಡತಗೆ ಹೊಗೆ ಬೆಳಕು ಕಕ್ಕುತ ಅದೆ. ಆಗಲೇ ನಾಲ್ಕಾರು ಉಂಡಾಡಿಗಳು ತಮಗೆ ಯಾವುದೂ ಸಂಬಂದ ಇಲ್ಲದವರಂತೆ ಯಾಸ ಹಾಕಿ ಮಲಗಿಬಿಟ್ಟವರೆ ಅಲ್ಲಿಗೆ ಒಬ್ಬರಾಗಿ ಇಬ್ಬರಾಗಿ ಜನ ಕೂಡಿಕೊಳ್ಳುತ್ತಿದೆ. ಹೆಚ್ಚು ಹೆಚ್ಚು ಕೂಡಿದಂತೆ ಗಲಗು ಗದ್ದಲ ಹೆಚ್ಚಾಗುತ್ತಿದೆ..''[೧೫]

ಮೇಲಿನ ಎರಡು ನಿದರ್ಶನಗಳಲ್ಲಿವ್ಯಕ್ತವಾಗುವ ಹೊಸ ಮೌಲ್ಯದ ಬದಲಾವಣೆಗಳನ್ನು ಮಹಾದೇವರು ನೆಲದ ಮಣ್ಣಿನ ಭಾಷೆಯ ಮುಖಾಂತರವೇ ನಿರೂಪಿಸುತ್ತಾರೆ. ಒಂದು ಹಳ್ಳಿಗೆ ಡಾಂಬರು ಬಂದ ಸನ್ನಿವೇಶ, ಬದಲಾವಣೆ ನಂತರ ಡಾಂಬರು ರಸ್ತೆಗೆ ಮೀಸಲಾದ ದುಡ್ಡು ಗೌಡರ ಊರಿನ ಗುಡಿಯ ಜೀರ್ಣೋದ್ಧಾರಕ್ಕೆ ಬಳಸಬೇಕಾದಾಗ ಊರಿನ ಹುಡುಗರು ಪ್ರತಿಭಟಿಸುವ ರೀತಿ ಎಲ್ಲವೂ ಕತೆಗಾರರು ಪ್ರಾದೇಶಿಕ ಭಾಷೆಯ ಮುಖಾಂತರವೇ ಗಟ್ಟಿಗೊಳಿಸಿ ಸನ್ನಿವೇಶದ ದೃಶ್ಯಕ್ಕೆ ಕಳೆ ಮೂಡಿಸುತ್ತಾರೆ. ಹುಡುಗರು 'ಡಾಂಬರು' ಸುದ್ದಿಯನ್ನು ಪತ್ರಿಕೆಗೆ ಹಾಕಿಸಿದಾಗ ಗೌಡರು ರೊಚ್ಚಿಗೆದ್ದು ಪಂಚಾಯ್ತಿ ಸೇರಿಸುತ್ತಾರೆ. ಚಾವಡಿಯ ನ್ಯಾಯವನ್ನು ನಾಟಕೀಯ ಶೈಲಿಯಲ್ಲಿ ದೇಶೀಯ ನುಡಿಗಟ್ಟುಗಳ ಮುಖಾಂತರವೇ ಕಟ್ಟಿಕೊಡುತ್ತಾರೆ.

''ಒಬ್ಬ: ಸುರು ಮಾಡ್ರಪ್ಪೊ

ಇನ್ನೊಬ್ಬ: ಎಲ್ಲರ್ಗು ಗೊತ್ತಿರೋದೆ ಅದು. ಇನ್ನೇನು
ಸುರು ಮಾಡೋದು? ಪೂಜ ಮಾಡೋದ ಬಿಟ್ಟು.

ರಾಜಪ್ಪ: ಏನಣ್ಣ ಹಂಗಂದ್ರ ಅರ್ಥ

ಮತ್ತೊಬ್ಬ: ಅರ್ಥ ಗಿರ್ಥ ನಿಮಗ್ಗಾನಿಯಪ್ಪ ಗೊತ್ತು ನಾವೇನು
ಇಸ್ಕೊಲ್ಗೋಗಿ ಮಂಟಾಕಿದ್ದವ..?

ಶಾನುಭೋಗರು: ವಸಿ ಸುಮ್ಕಿರಯ್ಯ.. ಮಾತಾಡಿ ಪಟೇಲ್ರೆ ನೀವು.

ಪಟೇಲರು: ಮಾತಾಡೋದು ಏನು ಬಂತು ಹೇಳಿ.

ಶಾನುಭೋಗರು: ಕಾಗ್ದ ಬರ್‍ದು ಊರ್‍ನ ಮಾನ ತೆಗೆದವರು ನೀವುಗಳೆ ಅಂತ
ಎಲ್ಲರ್‍ಗೂ ಗೊತ್ತು ಅದ ಒಪ್ಪೋ ಇಥರ ಅವ್ರಿ ತಾನೆ ನೀವುಗಳು.

(ಲಕುಮ, ರಾಜಪ್ಪ ಶಂಭು ಮಾದು ಕಡೆ ಶಾನುಭೋಗರು ನೋಡುವುರು.. ಹೌದು ಎಂಬಂತೆ ಅವರು ತಲೆ ಅಲ್ಲಾಡಿಸುವರು. ಹೊರಗೆ ಇದ್ದವರ ಎದೆಗೆ ಗುದ್ದುವಂತೆ ಗದ್ದಲ ಎದ್ದು ಹೊರಬರುವುದು.)''[೬]

ಮಹಾದೇವರು ಚಾವಡಿಯಲ್ಲಿ ನಡೆದ ನ್ಯಾಯ ಪಂಚಾಯ್ತಿಯನ್ನು ಯಥಾವತ್ತಾಗಿ ಪಾತ್ರಗಳ ಸಂಭಾಷಣಾ ಭಾಷೆಯ ಮುಖಾಂತರದಲ್ಲಿ ಇಡೀ ದೃಶ್ಯವನ್ನು ನಮ್ಮ ಮುಂದೆ ನಿಲ್ಲಿಸುತ್ತಾರೆ. ನಂಜನಗೂಡಿನ ಗ್ರಾಮೀಣ ಭಾಗದ ಹದವಾದ ಆಡುಭಾಷೆಯು ಓದುಗನ ಮನಸ್ಸನ್ನು ಇಡೀ ಸನ್ನಿವೇಶದ ಮೂಲಕ ಸೆರೆಹಿಡಿಯುತ್ತದೆ.

ಮಹಾದೇವರು ಈ ಕತೆಯಲ್ಲಿ ಉಪ ಶಿರ್ಷಿಕೆಗಳಾದ ಊರ ಮೇಲುನೋಟ, ರೋಡು ಮಾಡಲು ಅರ್ಡರು, ಊರ ಮುಂದಲು, ಕಯ್ಗೆ ಬಾಯ್ಗೆಟಾರು, ಓದುಗರ ಓಲೆಗೊಂದೋಲೆ, ನ್ಯಾಯಕ್ಕೆ ಹೇಳಿದರು, ಚಾವಡಿ, ನ್ಯಾಯ, ಹೊಸೂರ ಹೊಸ ಮಾತು, ಗುಂಡಿಗೆ ಟಾರು ರಾತ್ರೋರಾತ್ರಿ, ಪಳ್ಳಿಗೆ ಹೋದವ ಬರಲಿಲ್ಲ, ಮಹಜರು, ಈ ಉಪಶಿರ್ಷಿಕೆಗಳ ಮುಖಾಂತರ ಉಪಭಾಷೆಯನ್ನು ಬಳಸಿ ಇಡೀ ಕತೆಯನ್ನು ಒಂದು ದೃಶ್ಯ ಕಾವ್ಯದಂತೆ ನಿರೂಪಿಸುತ್ತಾರೆ. ಸ್ವಾತಂತ್ರ್ಯೋತ್ತರ ಭಾರತದ ಗ್ರಾಮೀಣ ಬದುಕಿನ ತಲ್ಲಣಗಳನ್ನು ಕತೆಯಾಗಿ ಕತೆಗಾರರು ಕಟ್ಟುವ ರೀತಿ ಕೂಡ ಮನೋಜ್ಞವಾಗಿರುವಂತದ್ದು. ನೆಲದ ಹಸಿ ಹಸಿಯಾದ ಭಾಷೆ ಮನಸ್ಸಿನ ಪರದೆಗೆ ಅಚ್ಚೊತ್ತಿದಂತೆ ನಿಂತು ಭಾಷೆಯ ಮಾಯಲೋಕವನ್ನು ಸೃಷ್ಟಿಸುತ್ತಾರೆ.

ಯಾವುದೇ ''ಲೇಖಕರು ಒಂದು ವಸ್ತು ಅಥವಾ ವಿಚಾರಕ್ಕೆ ಭಾಷಿಕ ರೂಪ ಕೊಡುವಾಗ ಎರಡು ಸಂಗತಿಗಳು ಮುಖ್ಯವಾಗಿ ನಿರತವಾಗಿರುತ್ತವೆ. ಒಂದು: ಭಾಷೆಯನ್ನು ಕೃತಿ ನಿರ್ಮಾಣದಲ್ಲಿ ಹೇಗೆ ಸಾರ್ಥಕವಾಗಿ ದುಡಿಸಿಕೊಳ್ಳಬೇಕು ಎನ್ನುವುದು. ಮತ್ತೊಂದು: ಈ ಮೂಲಕ ಓದುಗ (ಕೇಳುಗ)ರಿಗೆ ಹೇಗೆ ಪರಿಣಾಮಕಾರಿಯಾಗಿ ತಲುಪಬೇಕು ಎನ್ನುವುದು.''[೧೭] ಎಂಬ ಸಂಸ್ಕೃತಿ ಚಿಂತಕ - ರಹಮತ್ ತರೀಕೆರೆಯವರ ಅಭಿಪ್ರಾಯದಂತೆ ಒಬ್ಬ ಲೇಖಕ ಯಾವುದೇ ವಸ್ತು ವಿಚಾರಕ್ಕೆ ಭಾಷಿಕ ನೆಲೆಯಲ್ಲಿ ಒಂದು ರೂಪ ಕೊಡುವ ಸಂದರ್ಭದಲ್ಲಿ ಆ ನೆಲದ ಪ್ರಾದೇಶಿಕ ಭಾಷೆಯನ್ನು ದುಡಿಸಿಕೊಳ್ಳುವ ರೀತಿಯೂ ಮತ್ತು ಆ ಭಾಷೆಯು ಓದುಗರಿಗೆ ಹೇಗೆ ಪರಿಣಾಮಕಾರಿಯಾಗಿ ತಲುಪಬಲ್ಲದೆಂಬ ಜಾಣ್ಮೆಯೂ ಬೇಕಾಗುತ್ತದೆ. ಈ ಜಾಣ್ಮೆಯು ಭಾಷಿಕ ನೆಲೆಯ ಸಂದರ್ಭದಲ್ಲಿ ದೇವನೂರು ಮಹಾದೇವ, ಕುಂ. ವೀರಭದ್ರಪ್ಪ, ಅಮರೇಶ ನುಗಡೋಣಿ, ರಾಘವೇಂದ್ರ ಪಾಟೀಲ ಮುಂತಾದ ಕತೆಗಾರರು ತಮ್ಮ ಕತೆಗಳಲ್ಲಿ ತಮ್ಮ ನೆಲದ ಪ್ರಾದೇಶಿಕ, ಪ್ರಾಂತೀಯ ಉಪಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡಿರುವುದು ಕಂಡುಬರುತ್ತದೆ. ದೇವನೂರರು ತಮ್ಮ ಸಮುದಾಯದ ಬದುಕನ್ನು ಕಟ್ಟಿಕೊಡುವಾಗ ಬಳಸುವ ಭಾಷೆ, ಅನುಭವ ಕಲ್ಪನೆ ವಿಚಾರಗಳು ಅರ್ಥಪೂರ್ಣ ಅಭಿವ್ಯಕ್ತಿಯಾಗಿ ಮೂಡಿಬಂದಿರುವುದು ಮೇಲಿನ ಅವರ ಕೃತಿಗಳ ವಿಶ್ಲೇಷಣೆಯಿಂದ ತಿಳಿದುಬರುತ್ತದೆ.

ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ಕತೆಗಾರರಾದ 'ಕುಂ. ವೀರಭದ್ರಪ್ಪ'ನವರು ತಮ್ಮ ಕತೆಗಳಲ್ಲಿ ಬಳಸುವ ಭಾಷೆ ಮಧ್ಯಮ ವರ್ಗದ ಓದುಗರಿಗೆ ಪರಿಚಿತವಲ್ಲದ ಅವರಲ್ಲಿ ಅಚ್ಚರಿ ಮೂಡಿಸುವ ಕೆಳವರ್ಗದ ಜೀವನ ಪ್ರಪಂಚದ ಭಾಷೆ. ಬಳ್ಳಾರಿ ಜಿಲ್ಲೆಯ ಕೊಟ್ಟೂರು ಪ್ರದೇಶದ ದೇಶಿಯ ನುಡಿಗಟ್ಟುಗಳನ್ನು ಸಮರ್ಥವಾಗಿ ಪ್ರಾದೇಶಿಕ ಭಾಷೆಯಲ್ಲೆ ಸೆರೆಹಿಡಿದಿದ್ದಾರೆ. ಕುಂ.ವೀ. ಆ ಭಾಷೆಯಲ್ಲೆ ವಿವರಗಳನ್ನು ದಟ್ಟಗೊಳಿಸುವ ಕ್ರಮಕೂಡ ಅನನ್ಯವಾಗಿರುವಂತದ್ದಾಗಿದೆ. 'ಡೋಮ' ಕತೆಯಲ್ಲಿ ಬರುವ ಊರ ಗೌಡನ ದಿನಚರಿ ವಿವರವನ್ನು ಪ್ರಾದೇಶಿಕ ಭಾಷೆಯ ಮೂಲಕ ಉದಾಹರಣೆಯಾಗಿ ನೋಡಬಹುದು.

''ಪ್ರತಿ ಮುಂಜಾವಿನಲ್ಲಿ ಹುಲಲಿ ಹಳ್ಳದ ಬಲದಂಡೆಯ ಮೇಲೆ ಜಾಲಿಗಿಡದ ಮಗ್ಗಲು ಚಂಬ್ತಂಡು ಕುಂತು ನಿಂತ ನೀರಲ್ಲಿ ತೊಳೆದುಕೊಂಡು ಅಲ್ಲಿಯೇ ಸೊಲುಪ ದೂರದಲ್ಲಿದ್ದ ಬೇವಿನ ಮರದಿಂದ ಕಿರುಬೆರಳು ಗಾತ್ರದ ಕಡ್ಡಿ ಮುರಿದು ತನ್ನ ಹುಳುಕು ಹಲ್ಲುಗಳ ಮೇಲೆ ಹಿತಮಿತವಾಗಿ ಆಡಿಸುತ್ತ ತನ್ನ ಜೀವದೊಳಗಿನ ಜೀವತೋಟ ಪ್ರವೇಶಿಸಿ ಒಂದೆರಡು ಮೂರು ಸಮಾಧಾನದ ನಿಟ್ಟುಸಿರುಗಳನ್ನು ಬಿಡುತ್ತಾ, ತೆಂಗಿನ ಹಾಲಿನಂಥ ಬಾವಿಯ ನೀರಿನಲ್ಲಿ ಬಾಯಿ ಮುಕ್ಕಳಿಸಿ ಮುಖತೊಳೆಯುವುದು ಊರು ಮಾಡುವ ಗೌಡನ ದಿನಚರಿಯ ಮೊಟ್ಟ ಮೊದಲ ಅಧ್ಯಾಯ''[೧೮]

ಬಳ್ಳಾರಿ ಸೀಮೆಯ ದೇಶಿಯ ನುಡಿಗಟ್ಟುಗಳನ್ನು ಕುಂ.ವೀ. ಲೀಲಾಜಾಲವಾಗಿ ಕತೆಗಳಲ್ಲಿ ಬಳಸಿ, ನೆಲದ ಬದುಕಿನ ಅನನ್ಯ ಸಂಸ್ಕೃತಿಯನ್ನು ಎತ್ತಿಹಿಡಿಯುತ್ತಾರೆ. ಈ ನೆಲದ ಶಬ್ದಗಳಾದ ಮುಂಜಾನಿ, ಜಾಲಿಗಿಡ, ಚಂಬು, ಮುಕ್ಕಳಿಸಿ ಮುಂತಾದ ಪದಕೋಶಗಳ ಜಗತ್ತನ್ನು ಕುಂವೀ ಕತೆಯಲ್ಲಿ ಕಾಣಬಹುದು.

''ಭಾಷೆ ಬೆಳಸಬೇಕೆನ್ನುವುದು ಲೇಖಕರ ಏಕೈಕ ಗುರಿಯಲ್ಲ. ತಮ್ಮ ಅನುಭವ-ಕಲ್ಪನೆ-ವಿಚಾರ ಅರ್ಥಪೂರ್ಣ ಅಭಿವ್ಯಕ್ತಿಗೆಂದು ಅವರು ಭಾಷೆಯನ್ನು ಅನಿವಾರ್ಯವಾಗಿ ಬಳಸುತ್ತಾರೆ''[೧೯] ಎಂಬ ತರೀಕೆರೆಯವರ ಅಭಿಪ್ರಾಯ ಕುಂವೀ ಕತೆಗಳ ಸಂದರ್ಭದಲ್ಲಿ ಅರ್ಥಪೂರ್ಣ ನಿಲುವಾಗಿ ಗೋಚರಿಸುತ್ತದೆ. ತಾವು ಬಾಳಿ ಬದುಕುತ್ತಿರುವ ನೆಲದ ಸುತ್ತಣ ಬದುಕಿನಲ್ಲಾಗುವ ಪಲ್ಲಟಗಳನ್ನು ತಮ್ಮ ಅನುಭವ ಕಲ್ಪನೆ ವಿಚಾರ ಶಕ್ತಿಯಿಂದ ಪ್ರಾದೇಶಿಕ ಭಾಷೆಯ ಮೂಲಕ ಕತೆಯಾಗಿಸಿದ್ದಾರೆ.

ಬಡತನ, ಹಸಿವು-ಕ್ರೌರ್ಯವನ್ನು ಕುಂ.ವೀ ಮನಮುಟ್ಟುವ ಭಾಷೆಯಲ್ಲಿ ಹೇಳುತ್ತಾರೆ. ತಮ್ಮ ಊರಿನ ಪ್ರಾದೇಶಿಕ ಭಾಷೆಯ ನೆಲೆಯಿಂದ ಕತೆಯ ಹಂದರ ರಚಿಸುತ್ತಾರೆ.

''ನಾಳೆ ಅಮವಾಸೆ ಐತೆ ಅನ್ನುವಾಗ ಕತ್ತಲ ಎಲ್ಲು ಮುಷ್ಠಿ ಬಾನ ಉಂಡಿದ್ದ ಅಷ್ಟೆ. ಅಮಾಸೆ ಹೋಯ್ತು ಪಾಡ್ಯ ಬಂತು. ಒಂದಗಳೂ ಅನ್ನವಿರದ ಹೊಟ್ಟೆ ಬೆನ್ನಿಗಂಟುವುದರಲ್ಲಿತ್ತು. ತಂಬಿಗೆಗಟ್ಟಲೆ ನೀರು ಕುಡಿದ. ಗೌಡರ ಮನೆಗಳಲ್ಲಿ ಏನೇನು ಅಡಿಗೆ ಆಗ್ತಾಯಿದೆ. ಏನೇನು ಇಲ್ಲ ಅನ್ನೋದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳತೊಡಗಿದ ಒಣಗಿದ್ದ ನಾಲಗೆ ಸುತ್ತಲೂ ಯಾವುದೋ ಒಂದು ಕಮ್ಮನೆಯರಸ ಇಣುಕ ತೊಡಗಿತು. ನುಂಗೇ ನುಂಗಿದ ಹೊಟ್ಟೆ ತುಂಬಿದಂತೆನಿಸಿತು. ಡೇಗಲು ಪ್ರಯತ್ನಿಸಿದ ಬರಲಿಲ್ಲ. ಆಯಾಸವಾದಂತಾಯಿತು. ನಡೆಯಲಾಗದೆ ಗೋಡೆಗಾತು ನಿಂತ. ಕಣ್ಣಿಗೆ ಚಕ್ರಬಂತು.''[೨೦]

ಮೇಲಿನ ಸಾಲುಗಳಲ್ಲಿ ಕತ್ತಲನ ಹಸಿವಿನ ತೀವ್ರ ಸ್ವರೂಪವನ್ನು ಕುಂ. ವೀ ಕಟ್ಟಿಕೊಡುವ ರೀತಿ ಅನನ್ಯವಾದದ್ದು. ಅನ್ನವಿಲ್ಲದೇ ನೀರು ಕುಡಿದು ಹೊಟ್ಟೆ ತುಂಬಿಸಿಕೊಳ್ಳುವ ಇಂತಹ ಎಷ್ಟೋ ಗ್ರಾಮೀಣ ಜನ ಸಮುದಾಯದ ನೋವಿನ ಆರ್ತನಾದ ಕುಂ.ವೀ ಭಾಷೆಯಲ್ಲೆ ಕೇಳಬೇಕು. ಜಾಗತೀಕರಣದ ಈ ಸಂದರ್ಭದಲ್ಲಿ ದೇಶೀ ಸಂಸ್ಕೃತಿಗಳ ಅನನ್ಯತೆಯನ್ನು ಉಳಿಸಿಕೊಳ್ಳುವ ತುಡಿತದೊಂದಿಗೆ ಕುಂ. ವೀ ಯವರೂ ಕೂಡ ಪ್ರಾದೇಶಿಕ ಭಾಷೆಯನ್ನು ಕಥನವಾಗಿಸಿದ್ದಾರೆ.

''ಸಾಹಿತ್ಯ ಸೃಷ್ಠಿಯಲ್ಲಿ ಭಾಷಾ ಬಳಕೆಯು ಸಾಂಸ್ಕೃತಿಕ ಆಯಾಮವುಳ್ಳ ತಾತ್ವಿಕ ಗಹನತೆಯ ಪ್ರಶ್ನೆಯಾಗಿದೆ. ಎಂಬುದು ಈ ಹಿನ್ನೆಲೆಯಲ್ಲಿ ಆಧುನಿಕ ಸಾಹಿತ್ಯವು ಹೊಸ ವಸ್ತುವಿನ ಹೊಸ ಪ್ರಕಾರಕ್ಕೆ ಹೊಸ ಸಂವೇದನೆಗೆ ತಕ್ಕ ಭಾಷೆ ಪಡೆದುಕೊಳ್ಳಲು ಮಾಡಿರುವ ಸೆಣಸಾಟವೂ ಕುತೂಹಲಕರವಾಗಿದೆ. ಹೊಸ ವಸ್ತು ಹೊಸ ಆಲೋಚನೆಗೆ ತಕ್ಕ ಭಾಷೆ ಪಡೆದುಕೊಳ್ಳಲು ವಚನಕಾರರು ರೂಪಿಸಿದ ಭಾಷಿಕ ಹೋರಾಟವನ್ನು ಆಧುನಿಕ ಕನ್ನಡದ ಎಲ್ಲಾ ಘಟ್ಟದ ಲೇಖಕರು ಮಾಡಿದರು. ಆಧುನಿಕ ಕನ್ನಡ ಸಾಹಿತ್ಯದ ಚರ್ಚೆ ಶುರುವಾಗುವುದೇ ಹೊಸ ಸಾಹಿತ್ಯದ ಭಾಷೆ ಯಾವುದಿದೆ ಎಂಬ ಪ್ರಶ್ನೆಯಿಂದ''[೨೧] ಎಂಬ ರಹಮತ್ ತರೀಕೆರೆಯವರ ಮೇಲಿನ ಸಾಲುಗಳಲ್ಲಿ ಸಾಹಿತ್ಯ ಸಂದರ್ಭದಲ್ಲಿ ಭಾಷೆಯ ಬಳಕೆಯೂ ಅನೇಕ ತಾತ್ವಿಕ ಆಯಾಮಗಳಲ್ಲಿ ಬದಲಾಗಿರುವುದನ್ನು ನಾವು ಪ್ರಾಚೀನ ಮತ್ತು ಆಧುನಿಕ ಸಾಹಿತ್ಯದ ಕಾಲಘಟ್ಟಗಳ ನೆಲೆಯಲ್ಲಿ ಮನಗಾಣಬಹುದಾಗಿದೆ. ಹಾಗೇ ನವೋದಯ, ಪ್ರಗತಿಶೀಲ, ನವ್ಯ ಮತ್ತು ನವ್ಯೋತ್ತರ ದಲಿತ ಬಂಡಾಯ ಸಾಹಿತ್ಯ ರಚನೆಯಲ್ಲಿ ಭಾಷೆಯನ್ನು ವೈವಿಧ್ಯಮಯ ಬದಲಾವಣೆಯಾಗಿ ಬಳಸಿರುವುದನ್ನು ಇಲ್ಲಿ ಮರೆಯುವಂತಿಲ್ಲ.

ಕುಂ. ವೀರಭದ್ರಪ್ಪನವರು ಬಂಡಾಯ ಸಾಹಿತ್ಯ ಸಂದರ್ಭದ ಚಳುವಳಿಯಲ್ಲಿ ತಮ್ಮನ್ನು ಗುರುತಿಸಿಕೊಂಡವರು. ತಾವು ರಚಿಸುತ್ತಿದ್ದ ಕತೆಗಳಲ್ಲಿ ಬಂಡಾಯದ ಮೊನುಚಾದ ಭಾಷೆಯನ್ನು ಯಥಾವತ್ತಾಗಿ ಬಳಸಿದರು.

''ಗೋಡ್ರು ಎತ್ತು ಸತ್ತೈತಂತ ಓಗಿದ್ರಾ'' ''ನಾವೆಲ್ಲಾ ಇನ್ನೂ ಬದ್ಕೀದೀವಲ್ಲ. ಅದ್ಕ ಅದು ಸತ್ತಿರೋದು...''[೧೪]

''ಕ್ಯೋಲೋ ಅಕ್ಕತಿ ಕ್ಯೋಳ್ತೇವಿ ಅದಕ್ಯಾಕೆ ಗೌಡನರ ಅರಕಬೇಕು.''[೨೨]

''ಗೌಡಾಗಿದ್ರೆ ಅವ್ನು ಮನಿಗಾಗಿದ್ದಾನು ಬಿಟ್ಟೆನ್ನಾ ಶಿವ್ನ''

''ಸುತ್ತಿರೋ ಎತ್ತು ಕ್ವಡಿಸ್ರೆಪ್ಯೋ... ಆ ಎತ್ತು ತಿನ್ನೋದು ನನ್ ಅಕ್ಕಪ್ರೊ... ಇವತ್ತು ಅನ್ಯಾಯ ನಂಗಾಯ್ತದೆ. ಇದೇ ನಾಳೆ ನಿಮ್ಗೂ ಆಯ್ತದೆ. ಇಂಗಾದ್ರೆ ಒಕ್ಕಲಿಗರ ವಕ್ಕಲು ಮಣ್ತಿನ್ನಬ್ಯೇಕಾಯ್ತದ್ರೆಪ್ರೋ...''[೨೩] ಕುಂ. ವೀ

ಗ್ರಾಮ್ಯ ಜೀವನದ ಅವರ ಜೀವನಾಡಿ ಭಾಷೆಯನ್ನು ದೇಶಿಯ ಪದ ಪುಂಜಗಳ ಜೊತೆಗೆ ಕಟ್ಟಿದರು. ಶೋಷಣೆ ಹತಾಶೆ, ನೋವು, ಹಸಿವಿನ ತೀವ್ರ ಸ್ವರೂಪವನ್ನು ಮೇಲೀನ ರೊಣ್ಣಿಯ ಹಸಿಯಾದ ಭಾಷೆಯಲ್ಲೇ ಮನಗಾಣಬೇಕು. ಈ ಗ್ರಾಮೀಣ ಭಾಷೆ ಬೇರೆ ಪ್ರದೇಶದ ಜನರ ಮನಸ್ಸಿಗೆ ಒಗ್ಗದೇ ಹೋದರೂ, ಒಂದು ಪ್ರದೇಶದ ಪ್ರಾದೇಶಿಕತೆಯನ್ನು ಅರಿಯಲು ಆ ನೆಲದ ಭಾಷೆ ಸಾಂಸ್ಕೃತಿಕ ಅನನ್ಯತೆಯನ್ನು ಸಾರುವ ಸಂಸ್ಕೃತಿಯ ಸಾಧನವೂ ಆಗಿರುತ್ತದೆ. ಬಳ್ಳಾರಿ ಸೀಮೆಯ ಆಡುಭಾಷೆಯ ಲಯ ಗತ್ತು ಗಾಂಭೀರ್ಯಗಳನ್ನು ಕುಂ. ವೀ ಯಂತೆ ಮತ್ತಾರೂ ದುಡಿಸಿಕೊಳ್ಳಲಿಲ್ಲವೆಂಬ ಮಾತು ಸತ್ಯ. ಸಮಾಜದ ನಿರ್ಲಕ್ಷಿತ ಜನರ ಜೀವನವನ್ನು ಕುಂ.ವೀಯಷ್ಟು ಹತ್ತಿರವಾಗಿ ನೋಡಿದ ಲೇಖಕರೇ ವಿರಳ, ಆ ಜನರ ದಟ್ಟವಾದ ಅನುಭವ ಸೂಕ್ಷ್ಮ ವಿವರಗಳ ಮೂಲಕ ಕೂಡಿದ ನಿರೂಪಣೆ, ಆ ಸಂದರ್ಭದಲ್ಲಿ ಕುಂವೀ ಬಳಸುವ ಭಾಷೆ ಜೀವಂತವಾದದ್ದು ಪಾತ್ರಗಳು ನಮ್ಮ ಮನಸ್ಸಿನ ಪರದೆಯ ಮೇಲೆ ಅಚ್ಚೊತ್ತಿದಂತೆ ನಿಲ್ಲುತ್ತವೆ. ಇವರ ಭಾಷೆ ಆಲೋಚನೆಗೆ ತೊಡಗಿಸುತ್ತದೆ.

ಬಳ್ಳಾರಿ ಭಾಗದ ಕೊಟ್ಟೂರು ಸೀಮೆಯ ಪ್ರಾದೇಶಿಕತೆಯನ್ನೊಳಗೊಂಡ ಈ ನೆಲದ ಭಾಷೆಯನ್ನೇ ಕುಂ.ವೀ.ಕತೆಗಳಿಗೆ ಉಡುಗೆ ತೊಡಿಸಿದ್ದಾರೆ. ಆದರೆ ಭಾಷೆಯ ಈ ಉಡುಗೆ ಪಾತ್ರಗಳ ಅಂತರಂಗದ ಗುಣವನ್ನು ಸಂಸ್ಕೃತಿಯ ಅನನ್ಯತೆಯನ್ನು ಎತ್ತಿಹಿಡಿಯುತ್ತವೆ. ಅವರ ಕತೆಗಳಲ್ಲಿ ಬಳಕೆಯಾದ ಪ್ರಾದೇಶಿಕತೆಯನ್ನೊಳಗೊಂಡ ಆಡು ಭಾಷೆಗೆ ಕೆಲವು ಸಾಲುಗಳನ್ನು ಪಟ್ಟಿ ಮಾಡಬಹುದು.

''ಅವನಿಗ್ಯಾಕೆ ಅಕ್ಸರ ಕಲಿಸಿದೆ ಎಪ್ಪೋ''[೨೪] (ಪುಟ-೧೦, ಡೋಮ)

''ಮುಂಜಾನೆ ಉಂಡಿದ್ದರೆ ಭಂಜೆ ಮುಂದ ಡೇಗುವ ಮನುಷ್ಯನಾದ ಕೊರಚರ ಎಲುಗ ಒಂದಲ್ಲಾ ಒಂದು ಕಾರಣಕ್ಕೆ ಊರವರಿಗೆಲ್ಲಾ ಸುಪರಿಚಿತನು''[೨೫] (ಎಲುಗನೆಂಬ ಕೊರಚನೂ ಚವುಡನೆಂಬ ಹಂದಿಯೂ, ಪುಟ-೪೭)

''ಗುದ್ದಲಿ ಸಲಿಕೆ, ಪುಟ್ಟಿಯನ್ನು ಒತ್ತಟ್ಟಿಗಿಟ್ಟು ಕಲ್ಲುದಿಬ್ಬದ ಮೇಲೆ ಕುಂತು ಕೋನೆ ಬೀಡಿಗೆ ಬೆಂಕಿ ತಗುಲಿಸಿದ ಸೂರ್ಯ ಮುಳುಗಲು ಪಶ್ಚಿಮ ದಿಗಂತದಲ್ಲಿ ಕೇವಲ ಒಂದೇ ಒಂದು ಮಾರಿನಷ್ಟು ಜಾಗ ಬಾಕಿ ಇತ್ತು.''[೨೬]

''ಲೋ ಜೋಗಮ್ಮಂಥೋನೆ ಮಾಡಿಕ್ಯಂಡೋಳ್ಗೆ ಇಟಾಕೊಂದು ಸೊಡ್ಲಕ್ಪಟ್ರೆ ಮುಂದೆ ಬಾಳೂವೆ ನಡೆದೀತೆ ಸಣ್ಣ ಪುಟ್ಟ ತೆಪ್ಪುಕಂಡು ಹಿಡ್ದು ಯೆಂಡ್ತೀ ಮೊಗ್ಲು ಮುರೀತಿರ ಬೇಕು. ಅದು ಗಂಡಸ್ರಲಚ್ಚಣ. ನಿಮ್ಮಪ್ಪಿದ್ನೋಡು ನನಗೆ ದಿನಕೊಂದ್ಸಾರಿ ಯಾದ್ರು ವಡೀದಿದ್ರೆ ಬೇಷಾ ಕಾಣ್ತಿರ್ಲಿಲ್ಲ. ಅವ್ನಂದ್ರೆ ಥರಥರ ನಡುಗ್ತಿದ್ದೆ. ಅಂಥ ಗಂಡ್ಸಿಗೆ ವುಟ್ಟೋನಾಗಿದ್ರೆ ನೀನ್ಯಾಕ್ ಯಂಗಿರ್‍ತಿದ್ದಿ''[೨೭]

''ಹ್ಞಾ ನಂಗೆ ಎಲ್ಡೆಕ್ರೆ ಹೊಲಾ ದ್ಯಾವ್ರು ನಿಮ್ಮೆಡ್ತಿ ಮಕ್ಕು ಮರೀನ ಸಂದಾಕಿಟ್ಟಿರ್ಲಿ ಎಷ್ಟು ಒಲ, ಯಾವ್ಕಡೆ ಕೊಟ್ಟಾರೆ. ಮುಂದಿನ ವರ್ಷ ಬಿತ್ತು ಬವ್ವ. ಹ್ಞ. ಹು''[೨೮]

'' 'ಸಾನಾ' ಮಾಡಿ ಕೊಡ್ರಿ ನೂರ್ರುಪಾಯಿ ಎಂದು ಗೌಡರಿಗೆ ಎರಡು ಮೂರು ದೂರದಲ್ಲಿ ನಿಂತರು. ನೀವು ನಮ್ಗೆ ಬಾಕಿ ಕೊಡ್ಬೇಕಲ್ಲ ಅದ್ರಾಗ ಮುರುಕಂತೀನ್ರಲೇ ಎಂದ ಗೌಡ, ಇದರಿಂದ ಮಾದಿಗರಿಗೆ ಸಿಟ್ಟು ಬಂತು. 'ಅದ್ಯಾಕ ಹಂಗತೀರಿ ಗೌಡ್ರೆ ವ್ವಾದ ಸುಗ್ಗ್ಯಾಗ ಬಡ್ಡೀ ಅಸ್ಲು ಚುಕ್ತಾ ಮಾಡೀವಿ''[೨೯]

''ಲೋ ಹೊಟ್ಗೇನು ತಿಂಥಿಯಲೋ ಬಂಗಾರದಂಥ ಗದ್ದೀನಾ ಕಳ್ಕೋಂಡೆಲ್ಲಲೋ ನಾಚ್ಕೆ ಇಲ್ದೆ ಕುಂತ್ಗಂಡು ಕಣ್ಣೀರು ಸುರಿಸ್ತಿದೀಯಾ ಹ್ ಹ್''[೩೦]

''ಟೆನ್ತನ್ನು ಥರಡು ಕಿಲಾಸಿನಲ್ಲಿ ಪಾಸಾಗಿದ್ದ ನನ್ನಂಥವರಿಗಂತೂ ನಮ್ಮೋಣಿ ಆಕ್ಸ್‌ಫರ್ಡ್ ಯೂನಿವರ್ಸಿಟಿಗಿಂತ ಮಿಗಿಲಾಗಿತ್ತು. ಪ್ರತಿಯೊಂದು 'ಓಲ್ಡ್ ಈಜ್ ಗೋಲ್ಡ್'ಗಳು ಯಾವುದೇ ಪ್ರೊಪೆಸರುಗಳಿಗಿಂತ ಒಂದು ಮಣ ಮಿಗಿಲಾಗಿದ್ದರು.''[೨೦]

ಮೇಲಿನ ಎಲ್ಲಾ ಕತೆಗಳಲ್ಲಿ ಬಳಕೆಯಾದ ಪ್ರಾದೇಶಿಕ ಭಾಷೆಯ ಪದ ಪುಂಜಗಳನ್ನೆ ಬಳಸಿ ಕುಂ.ವೀ.ನವರಾದ ಹಾಸ್ಯ ಪ್ರಜ್ಞೆಯೊಂದಿಗೆ ಕತೆಗಳನ್ನು ಹೆಣೆದಿದ್ದಾರೆ. ಪ್ರತಿಯೊಂದು ಸಾಮಾಜಿಕ ಸಂದರ್ಭಗಳಲ್ಲಿ ಸೃಷ್ಟಿಯಾದ ಪಾತ್ರಗಳ ಪರಕಾಯ ಪ್ರವೇಶ ಮಾಡಿ ಸನ್ನಿವೇಶಕ್ಕೆ ಭಾಷೆಯ ಮೆರುಗು ನೀಡುತ್ತಾರೆ. ಮಾತಿಗೆ ತೊಡಗುವ ಇಲ್ಲಿಯ ಸಮುದಾಯಗಳನ್ನು ಆ ಸಮುದಾಯದ ಆಡು ಭಾಷೆಯನ್ನು ಸಾಹಿತ್ಯ ಕೃತಿಯಲ್ಲಿ ಅನುಸಂಧಾನ ಮಾಡಿಕೊಳ್ಳುತ್ತಾರೆ.

ಇಪ್ಪತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ನಮ್ಮ ಕತೆಗಾರರು ದೇಶಿಯ ಭಾಷೆಯ ಸಂಸ್ಕೃತಿಗಳ ಅನನ್ಯತೆಯನ್ನು ಉಳಿಸಿಕೊಳ್ಳುವ ಸಾಂಸ್ಕೃತಿಕ ಹೊಣೆಗಾರಿಕೆಯಿಂದ ಪ್ರಾದೇಶಿಕ ಸೊಗಡನ್ನು ಒಳಗೊಂಡ ಕತೆಗಳನ್ನು ರಚಿಸಿದರೆ ಬೆಳಗಾವಿ ಸೀಮೆಯ ಗೋಕಾಕ ಭಾಗದ ಪ್ರಾದೇಶಿಕ ಭಾಷೆಯನ್ನು ಆ ಭಾಗದ ಸಾಮಾಜಿಕ ಸ್ತರಗಳಿಗೆ ಸೇರಿದ ಜನರ ಮಾತು ಕತೆ ಭಾಷೆಯ ಬಳಕೆ ಆಚಾರ, ವ್ಯವಹಾರ, ದೇಹ ಭಂಗಿ, ಮನೆಬದುಕಿನ ಪರಿಸರ ಇವುಗಳ ವಿವರಗಳನ್ನು 'ರಾಘವೇಂದ್ರ ಪಾಟೀಲ'ರ ಕತೆಗಳಲ್ಲಿ ಕಾಣಬಹುದು. ಇವರ 'ದೇಸಗತಿ', 'ಲಯ' ಕಥಿಯ ಹುಚ್ಚಿನ ಕರಿಟೊಪಿಗಿಯರಾಯ, ಮಾಯಿಯ ಮುಖಗಳು ಮುಂತಾದ ಕತೆಗಳಲ್ಲಿ ಪಾಟೀಲರು ಈ ಪ್ರದೇಶದ ಪ್ರಾದೇಶಿಕ ಭಾಷೆಯನ್ನು ಈ ಸೀಮೆಯ ಅನನ್ಯವಾದ ಸಾಂಸ್ಕೃತಿಕ ನೆಲೆಯನ್ನು ತಮ್ಮ ಹದವಾದ ಭಾವಗೀತಾತ್ಮಕತೆಯ ಲಯದಲ್ಲಿ ಕಟ್ಟಿಕೊಟ್ಟಿದ್ದಾರೆ.

ಅವರ ಕತೆಗಳಲ್ಲಿಯ ಪ್ರಾದೇಶಿಕ ಭಾಷೆಯ ಸೊಗಡನ್ನು ಕತೆಗಳ ಕೆಲವು ಸಾಲುಗಳಲ್ಲಿ ಕಾಣಿಸಬಹುದು.

''ಕೂಸಿನ ಮೈ ಅನ್ನುವುದು ಭರ್ಪನಂಗ ತಣ್ಣಗಾಗೇದ ದೇಸಾಯರು ಹೌಹಾರಿದರು............ಅಮೃತಾ ಅಮೃತಾ ಅಂತ ಒದರಿ ಕರಕೋತ ಆ ಕೂಸಿನ ಎದಿ ಮ್ಯಾಗ ಕೈಯಿಟ್ಟು ನೋಡಿದರು. ಉಸರಿಲ್ಲಾ ಎದೀ ಬಡೀವಲ್ಲದು ಏನಾತು ಏನಾತು ನನ್ನ ಕಂದಗ? ಏನಾತು ನನ್ನ ಕೂಸಿಗೆ? ಮಾತಾಡೋ ಬಾಳಾ ಅಂತ ಗೊಳ್ಯಾಡಲಿಕ್ಕೆ ಹತ್ತಿದರು''[೨]

ಕತೆಗಾರ ಈ ಕತೆಯಲ್ಲಿ ಗೋಕಾವಿ ಸೀಮೆಯ ಭಾಷೆಯನ್ನು ಪಾತ್ರದ ಮಾತಾಗಿ ಮಾತ್ರ ಬಳಸದೆ ನಿರೂಪಣಾ ಭಾಷೆಯಾಗಿ ಬಳಸಿ ಸಂದರ್ಭಕ್ಕೆ ಸನ್ನಿವೇಶದ ಕಳೆಕಟ್ಟುತ್ತಾರೆ.

ನಿಸರ್ಗ ನಾಶವಾಗುತ್ತಿದೆ. ಬೆಟ್ಟ ಗುಡ್ಡಗಳನ್ನು ಹಣದ ದುರಾಸೆಗೆ ನಾಶಮಾಡುತ್ತಿದ್ದ ಹುನ್ನಾರ ತಿಳಿದ ಕಲ್ಪನಾಥ ದೇಸಾಯರು ಮಮ್ಮಗ ಮಾಣಿಕ ದೇಸಾಯಿಯ ಮೇಲೆ ರೊಚ್ಚಿಗೇಳುತ್ತಾರೆ.

''ಕಲ್ಲಗುಡ್ಡ ಅಂತ ಕಲ್ಲ ಗುಡ್ಡ. ಮಗನ ಈಗ ಉಳದದ್ದಂದರ ಇದ ಒಂದ. ಆಕಸ್ಮಾತ್ ನೀ ಊರಿಗೆ ಹೋದೆಂದರ ನೀನ ಹೇಳಿಕೋಬೇಕು. ನಾ ದೇಸಾಯಿ ನಾ ಮಾಣಿಕ ದೇಸಾಯಿ ನಾ ಮಾಣಿಕ ದೇಸಾಯಿ ಅಂತ ನಿನ್ನ ಚಹರೇ ಹೆಂಗ ಉಳದೀತೋ ಅವರ ಮನಸಿನ್ಯಾನ? ಅದರ ಆ ಗುಡ್ಡಾ! ಅದ ದೇಸಾಯರ ಗುಡ್ಡಲೇ. ಅದಕ ದೇಸಾಯರ ಗುಡ್ಡಾ ದೇಸಾಯರ ಗುಡ್ಡಾ ಅಂತಾರಪಾ ಸೂರ್ಯ ಚಂದ್ರಮ ಇರೋತನಕಾ ನಮ್ಮ ಅಜ್ಜ ಕಟ್ಟಿದ ಧರುಮನಟ್ಟಿಯ ದೇಸಗತಿ ಇರತೈ ತೋ ಬಾಳಾ ಅದರ ಜೋಡೀ ಹಂತ ಗುಡ್ಡಾ ಅದೇನಾ ಕಲ್ಲಾಗುಡ್ಡಾ''[೩೩]

ಧರುಮನ ಹಟ್ಟಿಯ ಕಲ್ಲು ಗುಡ್ಡದ ಪಕ್ಕ ಊರ ಜನ ಸಾಗುವಳಿ ಭೂಮಿ ಮಾಡಿಕೊಂಡು ಬದುಕು ತಳ್ಳುತ್ತಿರುವಾಗ ಗುಡ್ಡವನ್ನು ಅಗೆದು ವ್ಯಾಪಾರ ಕೇಂದ್ರವಾಗಿ ಮಾರ್ಪಡಿಸುವ ಹುನ್ನಾರ ತಿಳಿದಾಗ ದೇಸಾಯರು ರೊಚ್ಚಿಗೆದ್ದು

ಮೇಲಿನ ಮಾತುಗಳನ್ನು ಆಡುತ್ತಾರೆ. ಗುಡ್ಡವನ್ನು ಕಲ್ಲಕ್ವಾರೀ ಕಂಟ್ರಾಕ್ಟರ್‌ಗೆ ಬರೆದು ಕೊಡಬೇಕೆಂದಾಗ ಅವರ ರಕ್ತ ಕುದ್ದು ಹೋಗುತ್ತದೆ. ಆ ಸಂದರ್ಭದಲ್ಲಿ ದೇಸಾಯರು ಆಡುವ ಮಾತು ತಮ್ಮ ದೇಸಗತಿ ಮನೆತನದ ಔದಾರ್ಯ ನಿಲುವನ್ನು ಸಾರುತ್ತಾರೆ. ಪಾಟೀಲರು ಬಳಸಿದ ಪ್ರಾದೇಶಿಕ ನುಡಿಗಟ್ಟಿನ ಭಾಷೆ ಮನಸೂರೆಗೊಳ್ಳುತ್ತದೆ. ಇಂತಹ ಎಷ್ಟೋ ಸಾಲುಗಳು ಕತೆಗಳಲ್ಲಿ ಕಂಡುಬರುತ್ತವೆ.

''ಈ ವರ್ಷನೂ ಇಲ್ಲೀತನಕಾ ಮುಗಲಿನ ಅಂಗಳ ದಾಗ ಮಾಡದ ಗಾಳೀ ಪಟಾ ಹಾರಲಿಲ್ಲ. ರಾತ್ರಿ ಆತಂದರ ನಿಚ್ಚಳ ನೀಲಿಯ ಮುಗಲಿನ್ಯಾಗ ಹೊಳಪು ಕಳಕೊಂಡ ಮುದಕ ಮನಶಾರ ಕಣ್ಣಿನಂಥಾ ಚಿಕ್ಕಿಗೋಳು ಪಿಳಿ ಪಿಳೀ ಅಂತ ಪೀಳಕತ್ತಿದ್ದವು ಹಗಲಂತೂ ಥೇಟ್ ವೈಶಾಖದಂಗ''[೩೪] ಮೇಲಿನ ಮಳೆ ಬಾರದೇ ಹೋದ ಬರಗಾಲದ ಸಂದರ್ಭವನ್ನು ಆ ನೆಲದ ನೋವಿನ ಪ್ರಾದೇಶಿಕ ಭಾಷೆಯಲ್ಲಿ ಸಮರ್ಥವಾಗಿ ಕಥನ ಮಾಡಿದ್ದಾರೆ.

''ಕಲ್ಲೋಳೀಪಂತರಿಗೆ ಈ ವ್ಯಾಳ್ಯಾ ಅಷ್ಟ ಹಿಡಸಲಿಲ್ಲ. ಇಲ್ಲಿಗೆ ಯೋಳಕ್ಕ ಬರಬೇಕಂದರ ಅವು ಸವ್ವಾ ಆರು ಆರೂವರಿಗೇ ಮನೀ ಬಿಡಬೇಕು''[೩೫]

'ಬಸ್ಸೂ ಓಡೋಗಿ ಬಂದು ಅವ್ವ ಶಿವಬಸವ್ವನ ಮಗ್ಗಲಿಗೆ ಕೂತ ಶಿವ ಬಸವ್ವ ತುದಿ ಗುಂಡೀಲೆ ಕುಂತು ಮುಂದಕ ಬಾಗಿ ಬಾಗಿ ಎಮ್ಮಿ ಹಿಂಡಲಿಕ್ಕತ್ತಿದ್ದಳು''[೩೬]

''ಹೇಂತಿ ಸತ್ತ ಮ್ಯಾಲ ಸೋನಪ್ಪ ಕಾಕಾ ಮತ್ತೊಂದು ಮದಿವೀ ಏನ ಮಾಡಿಕೋಳಿಲ್ಲ ಹೆಂಗಸನಿಗಿಂತ ಹೆಂಗಸ ಆಗಿ ಕಸಾ ಮುಸರೀ ಮಾಡಿಕೊಡೂ. ಹೆಂಡಿಕಸಾ ಮೇವೂ ಮಿಡಚಿ ಅಂತ ಮಾಡಿಕೊಂಡು ಎಮ್ಮೀ ಹಿಂಡೋದು ಹಾಲು ಹಾಕೋದು ಮಾಡಿಕೊಂಡೂ ಸಣ್ಣ ಬಾಳಾ ಬಸ್ಯಾನ್ನ ಸಂಭಾಳಿಸಿಕೊಂಡು ಮನಿ ನಡಿಸಿದ''[೩೭]

''ಮಂದಿ ಧಡಕ್ ಅಂತ ಎದ್ದು ನಿಂತು ಮುಂದಿನ ಕ್ಷಣದಾಗ ಗೌಡರ ವಾಡೇದ ಕಡೆ ಓಡಲಿಕ್ಕೆ ಸುರುಮಾಡಿತು. ವಾಡೇದ ತಲಬಾಗಲದಾಗ ಗುಂಪು ಕೂಡಿದ ಮಂದಿ ಒಳಗ ಹೋಗಲಿಕ್ಕೆ ಧೈರ್ಯ ಸಾಲದೇ ಅಲ್ಲೇ ಗುಜು ಗುಜು ಮಾಡ ಕೋತ ನಿಂತಿತು.''[೩೮]

ಹೀಗೆ ರಾಘವೇಂದ್ರ ಪಾಟೀಲರು ಕನ್ನಡ ಕಥನ ಸಂದರ್ಭದಲ್ಲಿ ಬಳಸಿದ ಭಾಷೆ, ಗೋಕಾಕ ಪ್ರಾಂತ್ಯದ ಜನಪದ ನುಡಿಗಟ್ಟುಗಳ ಮೂಲಕ ಆ ನೆಲದ ಭಾಷೆಯ ಅಂತಃಸತ್ವವನ್ನ ತಮ್ಮ 'ದೇಸಗತಿ' ಕತೆಯಿಂದ ಇಲ್ಲಿಯವರೆಗೆ ವಿಶಿಷ್ಟ ಶೈಲಿಯ ಮುಖಾಂತರ ಸೆರೆಹಿಡಿದಿದ್ದಾರೆ. ಸಮಕಾಲೀನ ಬದುಕಿನ ಅನಂತ ಮುಖಗಳು, ವಿಘಟನೆಗಳು, ಇವರ ಕತೆಗಳಲ್ಲಿ ಅವರದೇ ಆದ ಭಾಷಿಕ ಶೈಲಿಯಲ್ಲಿ ಚರ್ಚೆಗೆ ನಿಲ್ಲುತ್ತವೆ.

ಹೈದರಾಬಾದ್ ಕರ್ನಾಟಕದ ಬಹುಮುಖ್ಯ ಕತೆಗಾರ 'ಅಮರೇಶ ನುಗಡೋಣಿ'ಯವರು ತಮ್ಮ ಕತೆಗಳಲ್ಲಿ ರಾಯಚೂರು ಸೀಮೆಯ ಪ್ರಾದೇಶಿಕ ಭಾಷೆಯ ಮೂಲಕ ಆ ಭಾಗದ ಸಾಂಸ್ಕೃತಿಕ ಅನನ್ಯತೆಯನ್ನು ಎತ್ತಿಹಿಡಿದಿದ್ದಾರೆ. ಇವರು ಕಟ್ಟಿದ ಕತೆಗಳಲ್ಲಿ ಗ್ರಾಮೀಣ ಸಮುದಾಯದ ಬದುಕು ಆ ಸಂದರ್ಭಕ್ಕೆ ಅವರು ಬಳಸಿದ ಭಾಷೆ ಮತ್ತು ಉಪಯೋಗಿಸಿದ ಆ ನೆಲದ ನುಡಿಗಟ್ಟುಗಳು ಅವರ ಕಥನ ಶಕ್ತಿಯ ಸಮರ್ಥ ನಿದರ್ಶನವಾಗಿದೆ. ಹೈದರಾಬಾದ್ ಕರ್ನಾಟಕದ ಜಮೀನ್ದಾರಿ ವ್ಯವಸ್ಥೆಯ ಉಸಿರುಕಟ್ಟುವ ಬದುಕನ್ನು ಯಥಾವತ್ತಾಗಿ ಕತೆಯಾಗಿಸಿದ್ದಾರೆ. ಜೊತೆಗೆ ಜಮೀನ್ದಾರಿ ವ್ಯವಸ್ಥೆಯೊಂದಿಗೆ ಬದುಕು ಕಂಡುಕೊಂಡ ಬಡ ಜನತೆಯ ಉದಾರವಾದಿ ನೀಲುವು ಇವರ ಕತೆಗಳ ಮೂಲ ಸ್ಥಾಯಿಭಾವವಾಗಿದೆ.

''ಯಪ್ಪಾ ಮಗ ಮಾಡದ್ಕ ನಾನೇನು ಮಾಡ್ಲಿ, ದೇವುರು ಮಾಡದ್ಕ ನಾನೇನು ಮಾಡ್ಲಿ ನಾನೇನಾದ್ರ ನಿನಗ ಎಲ್ಡ ಬಗದೀನಾ? ಅಂದ, ದುರುಗ,'' ನನ್ಗೂ ತಿಳಿವಲ್ದಂಗಾಗ್ಯಾದ ದುರುಗ. ನಿನ್ನ ಮಗನ್ನ ಆವಾಗ ನೆನಿಸಿಗಂಡ್ರ ಮುದ್ದು ಬರ್ತಿತು. ಈಗ ನೆನಪಾಗಿ ಕಾಡ್ತಾನ. ನನ್ನ ಮನೆತನಕ್ಕ ಮಸಿ ಬಳ್ಯಾಕ ನಿಂತು ಬುಟ್ಟಾನ. ದುರುಗಾ, ಮಸಿ ಬಳ್ಯಾಕ''೩೯ ಅಂದು ಹಲ್ಲುಕಡುದ, ಶಾಂತಗೌಡ

''ಯಪ್ಪಾ ನನ್ಗ ನಿನಗ ಬುಡದ ನಂಟು. ನೀನಿದ್ದಲ್ಲಿ ನಾನು, ನಾನಿದ್ದಲ್ಲಿ ನೀನು. ನನ್ಗ ನಿಗ್ಗ ಕುಲಯಿಲ್ಲ ಜಾತಿಯಿಲ್ಲ, ಹಂಗ ನಡಕಂಡು ಬಂದೀವಿ''೪೦ ಅಂದು ಸುಮ್ಮನಾದ.

''ಹೋಗ್ಲಿ ಬುಡು ಅಂದಂಗ ತುಂಗಮ್ಮನ ದಾಟದಾತಾದಿಲ್ಲನೋಡು''೪೧ (ಪುಟ-೧೯ ತಮಂಧದ ಕೇಡು)

ಇಲ್ಲಿ ಶಾಂತಗೌಡ ದುರುಗರ ನಡುವಿನ ಸಂಭಾಷಣೆ ಗೌಡ ಜೀತಗಾರನೆಂಬ ಭೇದ ಭಾವ ಮೀರಿದ ಕರಳು ಸಂಬಂಧಿ ಭಾಷೆಯಾಗಿ ಹೊರ ಹೊಮ್ಮಿದೆ.

''ಅಮರೇಶರ ಕತೆಗಳ ಉಪ ಭಾಷೆಯದು ತೆಲುಗು ಕನ್ನಡಗಳ ದ್ವಿಭಾಷಿಕತೆಯೇ ವಿನಃ ಕನ್ನಡ-ಉರ್ದುಗಳದಲ್ಲ. ಅವರ ಕಥೆಗಳ ಭೌಗೋಳಿಕ ಪರಿದಿ ವಿಸ್ತರಿಸಿದಾಗ ಇದು ಬದಲಾಗಬಹುದು. ಅಲ್ಲದೆ ಸಾಂಸ್ಕೃತಿಕವಾದ ಇತಿಹಾಸವನ್ನು ತನ್ಮೂಲಕ ಶಬ್ಧಕೋಶವನ್ನು ಪಡೆಯದ ಉಪಭಾಷೆಯಲ್ಲಿ ವೈಚಾರಿಕತೆಯನ್ನು ಒಡ ಮೂಡಿಸುವುದು ಹೇಗೆಂಬ ಸಮಸ್ಯೆಯನ್ನು ಉಪಭಾಷೆಗೆ ಅಂಟಿಕೊಳ್ಳುವ ಕತೆಗಾರರು ಎದುರಿಸಬೇಕಾಗುತ್ತದೆ. ಕತೆಯ ಒಡಲಿಂದಲೇ ಮೂಡಿರುವ ವಿಚಾರಗಳಿಗಿಂತ ಅಲಾಯದವಾದ ವೈಚಾರಿಕತೆಯನ್ನು ತರಲು ಶಿಷ್ಟಭಾಷೆ ಅನಿವಾರ್ಯವಾಗಬುಹುದೇನೋ. ತಮ್ಮ ಕಥೆಗಳ ಚೌಕಟ್ಟಿನೊಳಗೆ 'ವಿದ್ಯಾವಂತ' ಪಾತ್ರಗಳನ್ನು ಅಂದು ಕೊಂಡಾಗ ಅಮರೇಶರಿಗೆ ಆ ಸವಾಲು ಎದುರಾದೀತು''೪೨ ಎಂಬ ವಿಮರ್ಶಕ ಎಚ್.ಎಸ್.ರಾಘವೇಂದ್ರರಾವ್ ಅವರ ಮಾತು ಇವರ ಕತೆಗಳ ಭಾಷಾ ಬಳಕೆಯ ಕುರಿತ ಸ್ಪಷ್ಟ ನಿಲುವೂ ಆಗಿದೆ.

ಹೊಸ ತಲೆಮಾರಿನ ಕತೆಗಾರರಾದ ಅಮರೇಶ ನುಗಡೋಣಿಯವರು ತಮ್ಮ ಊರ ಭಾಷೆಯನ್ನು ಕತೆಯಲ್ಲಿ ಬಳಸಿದ್ದಾರೆ. ಇದು ಭಾಷಿಕ ವೈವಿಧ್ಯಕ್ಕೆ ಸಾಕ್ಷಿ. ಈ ಪ್ರಾದೇಶಿಕ ಗುಣವನ್ನೊಳಗೊಂಡ ಆ ಊರಿನ ಜಾತಿ ಅಥವಾ ಸಮುದಾಯದ ವಿಶಿಷ್ಟ ಭಾಷೆಯನ್ನು ಅಮರೇಶರು ಸಮರ್ಥವಾಗಿ ಕಥನಕ್ಕೆ ಬಳಸಿಕೊಂಡಿದ್ದಾರೆ. ಜಾಗತೀಕರಣದ ಸಂದರ್ಭದಲ್ಲಿ ದೇಶೀಯ ಸಂಸ್ಕೃತಿಯ ಉಳಿವಿಗಾಗಿ ಪ್ರಾದೇಶಿಕತೆಯ ಉಪಭಾಷೆಗಳ ಮೂಲಕ ನಮ್ಮ ಭಾಷೆಯ ಅನನ್ಯವಾದ ನೆಲೆಯನ್ನು ಎತ್ತಿಹಿಡಿದರು ಇವರ ಒಟ್ಟು ಕತೆಗಲ್ಲಿ ಬಳಕೆಯಾದ ಈ ನೆಲದ ದೇಶಿಯ ಸೊಗಡಿನ ಭಾಷೆ ಹೀಗಿದೆ.

''ಅದೇನು ಕರೆವಕ್ಕ ಸಾವು ಪಾಪಿಗಳಿಗೆಂಗ ಬರ್ತಾದ ?''೨೦

''ಯಕ್ಕ ಯಾರ ಯಾರ್ ಬಾಯಾಗ ಏಟೇಟು ಇಟ್ಟಾದೆಂಬೋದು ಹೋಗ್ಲಿದೀಪಾರ್ಸಿ

ಈಗ ತಂತಾಕ ಇದ್ದುದ್ದನ್ನ ಕೊಟ್ರ ಬೇಸಾದ ಎಲ್ಲಿ ಮಣ್ಣಾಗಿಟ್ಟಾದೋ ಜಂತ್ಯಾಗಿಟ್ಟಾದೋ''೪೩

''ಭೀಮ ನೀ ಎಷ್ಟು ಕ್ವಾಣ, ಎಮ್ಮೆ ಕೊಯ್ಕಂಡು ತಿಂದ್ರು ನನ್ಗೆ

ಒಂದು ಜತೆ ತೊಗಲಿನ ಚಪ್ಲಿ ಮಾಡಿ ಕೊಡ್ತೀನಿ ಅಂದಾತ ಮಾಡಿಕೊಡ್ಲಿಲ್ಲ''೪೪

''ಏನಾ ಲೇ ಕೋಡಿ, ನಿನ್ಗೇನು ಬಂದಾದ ಇವತ್ತು ಮೂಡಲು ಹರದ್ರೂ ಎಚ್ಚರಾಗಿಲ್ಲಂದ್ರ? ಕೆಡುಕು ಮಳೆ ಎಲ್ಲಿ ಹಚ್ಚಿ ಹೊಡಿತಾದಂತ ಮಾಡಿದ್ದೆ ಮಳೆಬಂದ್ರ ಕಣ ಹದಗೆಡ್ತಾದ ಹಾಸಿಗೆ ತೊಯ್ಯಟು ಬಂದು ನಿಂತ್ಗಂಡ್ತು

ನಿನ್ನಹಾಸ್ಗಿ ತೋದಾವ ಅಂಗೆ ಮಕ್ಕಂಡಿದ್ದೇನು ರಾತ್ರಿ ಮಕ್ಕಂಬಕ್ಕಲ್ಲ ಮಾಳಿಗೆ ಬಾಗ್ಲಿ ಅಂಗೇ ತೆರುದು ಮಕ್ಕಂಡಿದ್ದಿ ಕೋಡಿ ನಾಡು ಕೋಡಿ''[೪೫]

''ದೇವುರು ದಿಂಡ್ರು ಬ್ಯಾಡಂಬೋರು ನಮ್ಮೂರಾಗ ಮೊದ್ಲು ಹುಟ್ಟಿ ಬಿಟ್ರಲ್ಲಪ್ಪ ನಮ್ಮ ಕರ್ಮಕ್ಕೆ ಪೈಕಾನಿ ಕಟ್ಟಿಸಬೇಕಂತ ಪೈಕಾನಿ..! ನಮ್ಮೆಂಡ್ರೇನು ನಿಜಾಮನ ಸೂಳೇರೇನು ಪೈಕಾನ್ಯಾಗ ಕುಂದ್ರಾಕ''[೪೬] (ಪುಟ-೬೩ ಮೂಡಲು ಹರಿಯಿತು.)

''ತಾಳಿಕಟ್ಟಿದ ಮರುದಿನವೇ ಮನೆ ಬಣ ಬಣ ಅನ್ನತೊಡಗಿತ್ತು 'ವಾರದನೀರಿಗೆ' ಮದಲಿಂಗ ನನ್ನು ಮದಲಗಿತ್ತಿ ಜತೆ ಬೀಗರು ಕರೆದುಕೊಂಡು ಹೋಗಿದ್ದರು''[೪೭]

''ಇದೆಂತ ಕೋಡಿ, ಧರಿದ್ರ ನನ್ನ ಸಲುವಾಗಿ ತಾಳಿ ಸಾಮಾನ ಒತ್ತಿ ಇಡದಂದ್ರೇನು? ಮತ್ತ ಯಾವಾಗ ಬುಡ್ಸಿಗಂಬಂದಾದೀತು ತಾಳಿ ಮಾರದಂದ್ರ''[೪೮] ಮೇಲಿನ ಕತೆಯ ಸಾಲುಗಳಲ್ಲಿ ಸಾವು-ಜೀತ-ಮಳೆ-ದೇವರ ಅಸ್ತಿತ್ವ, ನಿಜಾಮರು ಬಿಟ್ಟು ಹೋದ ಬದುಕು, ಮದುವೆ, ಮನೆ, ಪರಿಸರ, ಬಡತನದ ಛಾಯೆ ಈ ಎಲ್ಲಾ ಸನ್ನಿವೇಶದಲ್ಲಿ ಅಮರೇಶರು ಬಳಸಿದ ತಮ್ಮ ನೆಲದ ಭಾಷೆಯು ಅನನ್ಯ ಸಂಸ್ಕೃತಿಯ ಪ್ರತೀಕವಾಗಿ ಮೂಡಿಬಂದಿದೆ.

ಅಮರೇಶ ನುಗಡೋಣಿಯವರ ಎರಡನೇ ಕಥಾ ಸಂಕಲನ 'ತಮಂಧದಕೇಡು' ಕೃತಿಯಲ್ಲಿ ಬಂಡಾಯದ ಮೂಲ ಮಾದರಿಯನ್ನು ಚಲನಶೀಲವಾಗಿ ಬಳಸಿಕೊಂಡಿದ್ದಾರೆ. ಆ ಸಂದರ್ಭದಲ್ಲಿ ಬಳಸಿದ ಭಾಷೆ ನೆಲದ ಮಾತಾಗಿ ಮೂಡಿಬಂದಿದೆ. ಹೈದ್ರಾಬಾದ್ ಕರ್ನಾಟಕದ ಕುಗ್ರಾಮಗಳಲ್ಲಿ ಓಡಾಡಿ ಬಂದಂತೆ ಆ ನೆಲದ ಬದುಕು ಮನಸ್ಸಿಗೆ ತಟ್ಟುವಂತೆ ಬರೆಯುತ್ತಾರೆ.

''ಸುಲ್ತಾನಮ್ಮಗ ಯಾಕೋ ಕಜ್ಜಿ ಚಿನ್ನಯ್ಯ ಮ್ಯಾಲೆ, ಗುರೆಡ್ಡಪ್ಪನ ಮ್ಯಾಲೆ ಸಿಟ್ಟು ಬಂದು ಒಳ ಒಳಗೆ ಸಾಪಿಸಿಕುದ್ದಳು ಒಳ್ಳೊಳ್ಳೇರಿಗೆ ಸಾವು ಬರ್ತದ ಇವುಕ್ಕ ಬರವಲ್ದು ತಾಯಿ ಗಂಡರು ಅಂತ ಬಯ್ಕೊಂಡು ಗುಡಿಸಿಲಿಗೆ ಕರಕೊಂಡು ಬಂದು ಪರಕ್ಕಗ ಉಣ್ಣಾಕಿಕ್ಕಿದ್ದಳು''[೪೯]

''ಗುಡಿ ಸಿಲ್ಯಾಗ ಮುಡಿಸಿಟ್ಟ ಚಿಮಣಿ ಬೆಳಕು ತಟಗೂ ಅಳ್ಳಾಡದಂತೆ ಉರಿತಿತ್ತು. ಅದರ ಬೆಳಕನಡಿ ಕತ್ತಲಾದಾಗ ಕುಂತ ಅವರೆಲ್ಲರ ಎದೆ ಕುಲುಮೆಯಾಗಿತ್ತು...ಮಾತುಗಳು ಒಳಗೆಕಾದು ನಿಗಿನಿಗಿಯಾಗಿದ್ದವು. ನಿಟ್ಟುಸಿರುಬಿಟ್ಟರೆ ಬೆಂಕಿಯಂಥ ಝಳ..! ಏನೊಂದು ತಿಳಿಯದೆ ಯಾವುದೇ ಹಂತಕ್ಕೆ ಬರದ ಸಂಕಟದಿಂದ ನರಳುತ್ತಿದ್ದರು.''[೫೦]

''ವಿಚಾರ ಬದಲಾದಂಗ ಊರು, ಕೇರಿ ಮುಖಗಳು ಸೊಟ್ಟಗಾದವು. ಇನ್ನ ಕಟುಗುರು, ಪಿಂಜಾರ್ರು ಹೊತ್ತು ಬಂದಂಗ ಕೊಡೆ ಹಿಡಕಂಡು ನಡದಾರ. ಬಡಿಗೇರು, ಕುರುಬರು, ಬ್ಯಾಡ್ರು ಇವುರೆಲ್ಲ ಮಾಲಿಗೌಡಗ, ಪೋಲೀಸ್ ಗೌಡಗ ಅಂಜಿಕೊಂಡು ಅವುರ ಹೇಳಿದಂಗ ಕೇಳಿಕೊಂಡು ಬಿದ್ದಾವ. ನಮಗ ಯಾರು ಕೂಡ ಜಗಳ ಬೇಕಿದ್ದಿಲ್ಲ. ಕೇರ್ಯಾಗ ನಾವು ಒಂದಾಗಿ ಊರಿಗೆ ಬಸ್ಸು ಬರಂಗ ಮಾಡಿದಿವಿ. ನಾವು ಕೇಳಿದಾಗು ಬಸ್ಸು ಬಿಡ್ಲಿಲ್ಲ. ಈ ಸರಕಾರ ಿಲೆರು ಹೋಗಿ ಕೇಳಿದ್ರ ಬುಟ್ರಲ್ಲ''[೫೧]

ಜಾತಿಗಳ ಮಧ್ಯೆ ಸಂಭವಿಸಿದ ಸಂಘರ್ಷವನ್ನು ಅಮರೇಶರು ಕಟ್ಟಿಕೊಡುವಾಗ ನೆಲದ ಬದುಕಿನೊಳಗಿನ ಹದವಾದ ಆಡುಭಾಷೆಯಿಂದಲೇ ಕತೆಗೆ ಕಳೆಕಟ್ಟುತ್ತಾರೆ. ಊರುಕೇರಿಯೊಳಗಿನ ಜನ ಸಾಮಾನ್ಯರ ಭಾಷೆಯ ಮೂಲಕವೇ ಸಂಘರ್ಷಾತ್ಮಕವಾದ ಸಾಂಘಿಕ ಬದುಕನ್ನು ಅನಾವರಣಗೊಳಿಸುತ್ತಾರೆ. ಜೊತೆಗೆ ವಚನಕಾರರ ಆಶಯವನ್ನು ಬಳಸಿಕೊಂಡು ವಾಸ್ತವದ ವಿವರಗಳ ಸಂಯೋಜನೆಯಿಂದ ಕತೆ ಬರೆಯುತ್ತಾರೆ.

''ನಾಳೆ ಬಸವನ ಜಯಂತಿ. ಬಸವರಾಜಪ್ಪನಿಗೆ ಕೊನೆ ಸಲ ತಿದ್ದಿಕೊಳ್ಳಾಕ ಅವಕಾಶ ಕೊಡಬೇಕು. ಅಸ್ತ್ರ ಕಾಯಕದ ಜಂಗಮನನ್ನು ಕರೆಸೋದು ಬೇಸು ಅಂದಳು ಅದರಂತೆ ಅಸ್ತ್ರಕಾಯಕದ ಜಂಗಮರನ್ನು ಕರೆತರಲು ಅವ್ವನೆ ಕುದುರೆ ಕೊಟ್ಟು ಕಳಿಸಿಬಿಟ್ಟಳು.''[೫೨]

ಉತ್ಕ್ರಮಣ ಕತೆಯ ಭಾಷೆಯೂ ಉತ್ಕೃಷ್ಟವಾದುದು. ಈ ಕತೆಯಲ್ಲಿ ನುಗುಡೋಣಿಯವರು. ತೆಕ್ಕೆ ಕಾಯಕದ ಜಂಗಮರು ಮುಳ್ಳಾವಿಗೆ ಕಾಯಕದಯ್ಯ ಶಸ್ತ್ರದ ಕಾಯಕದ ಜಂಗಮರ ಪ್ರವೇಶ ಕಲ್ಪಿಸಿ ವಿಭಿನ್ನ ಆಯಾಮದಲ್ಲಿ ಕತೆಯಾಗಿಸಿದ್ದಾರೆ.

ಅಮರೇಶ ನುಗುಡೋಣಿಯವರು ಉಳಿಗಮಾನ್ಯ ವ್ಯವಸ್ಥೆಯಲ್ಲಿ ದಲಿತರು ನಲುಗಿಹೋದ ಬದುಕು, ಆ ಬದುಕಿನಲ್ಲಿಯೂ ಸ್ವಾಭಿಮಾನಿಯಾಗಿ ಕಾಣುವ ಅವರ ಹೃದಯ ವೈಶಾಲ್ಯತೆ, ಆ ಸಂದರ್ಭದಲ್ಲಿ ಕತೆಗಾರರು ಬಳಸುವಂತ ಭಾಷೆ ಭಾವಗೀತಾತ್ಮಕ ಮತ್ತು ಚಿತ್ತಾಕರ್ಷಕವಾದದ್ದು.ವಾಸ್ತವ ಬದುಕಿನ ಸಂವೇದನೆಯಲ್ಲಿ ಆ ಸಂದರ್ಭದ ಜಾಯಮಾನಕ್ಕೆ ಒಗ್ಗುವ ಭಾಷೆಯನ್ನು ನುಗುಡೋಣಿಯವರು ಬಳಸುವುದರಿಂದ ಆ ಭಾಷಿಕ ಜನ ಸಮುದಾಯದ ನೆಲದಲ್ಲಿ ಓದುಗರಿಗೆ ಸಂಚರಿಸಿದಂತೆ ಭಾಸವಾಗುತ್ತದೆ. ಇಂದಿನ ಜಾಗತೀಕರಣದ ಇಂಗ್ಲೀಷ್ ಭಾಷೆಯ ವ್ಯಾಮೋಹದ ಮುಂದೆ ನಶಿಸಿ ಹೋಗುತ್ತಿರುವ ಗ್ರಾಮೀಣ ಸಂಸ್ಕೃತಿ, ಭಾಷೆ, ಸಾಮಾಜಿಕ ಮೌಲ್ಯಗಳನ್ನು ಎತ್ತಿಹಿಡಿಯಲು ನುಗಡೋಣಿಯವರು ಸಮರ್ಥವಾಗಿ ಪ್ರಾದೇಶಿಕ ಭಾಷೆಯನ್ನು ಬಳಸಿ ಬದುಕಿನ ವಾಸ್ತವತೆಗೆ ಮೆರಗು ನೀಡಿದ್ದಾರೆ. ಕನ್ನಡದ ಕತೆಗಾರರು ಬಳಸಿದ ಪ್ರಾದೇಶಿಕ ಪ್ರಾಂತೀಯ ಉಪಭಾಷೆ ಭಾಷಿಕ ನೆಲೆಯನ್ನು ಕುರಿತು ಅಧ್ಯಯನ ಮಾಡುವ ಸಾಂಸ್ಕೃತಿಕ ಸಂದರ್ಭದಲ್ಲಿ ಹೆಸರಿಸಬೇಕಾದ ಕೆಲವೇ ಕತೆಗಾರರಲ್ಲಿ ಅಮರೇಶ ನುಗುಡೋಣಿಯವರೂ ಒಬ್ಬರಾಗಿದ್ದಾರೆ.

ಕಥಾ ಸಾಹಿತ್ಯ ಸಂದರ್ಭದಲ್ಲಿ ಭಾಷಿಕ ನೆಲೆ ಯ ವೈವಿಧ್ಯತೆಯನ್ನು ಹೆಸರಿಸಬೇಕಾದಾಗ ಮಹಿಳಾ ಕತೆಗಾರ್ತಿಯರಲ್ಲಿ ವೈದೇಹಿಯವರೂ ಒಬ್ಬರು. ಇವರ ಬಹುತೇಕ ಕತೆಗಳಲ್ಲಿ ದಕ್ಷಿಣ ಕನ್ನಡ ಭಾಗದಲ್ಲಿ ಬಳಕೆಯಾದ ಕುಂದಾಪುರದ ತಾಲೂಕಿನ ಪ್ರಾದೇಶಿಕ ಕನ್ನಡವಾಗಿದೆ. ಬ್ರಹ್ಮಾವರವನ್ನೂ ಒಳಗೊಂಡು ದಕ್ಷಿಣ ಭದ್ರಗಿರಿಯ ಹೊಳೆ, ಉತ್ತರದ ಶಿರೂರು ಪಶ್ಚಿಮ ಸಮುದ್ರ ಪೂರ್ವದ ಶಂಕರನಾರಾಯಣ ಸಿದ್ದಾಪುರ, ಹೊಸಂಗಡಿ ಗಡಿಭಾಗದ ಕನ್ನಡವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ತೆಂಕಲಾಯಿನ ಕಡೆಯ ಕೋಟ ಬ್ರಾಹ್ಮಣರು ರೂಢಿಸಿಕೊಂಡಿರುವ ಪ್ರಾದೇಶಿಕ ಕನ್ನಡವಾಗಿದೆ.

ವೈದೇಹಿಯವರ 'ಅಮ್ಮಚ್ಚಿಯ ನೆನಪು', 'ವಾಣಿಮಾಯಿ' ಕತೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೋಟ ಬ್ರಾಹ್ಮಣರು ರೂಢಿಸಿಕೊಂಡಿರುವ ಪ್ರಾದೇಶಿಕ ಕನ್ನಡದ ಬಳಕೆಗೆ ಉದಾಹರಿಸಬಹುದು.

''ವಾಣಿಮಾಯಿ.. ವಾಣಿಮಾಯಿ ನಾನು ಅವಳ ಬಳಿ ನಿಂತು ಮೆಲ್ಲ ಕರೆಯುತ್ತಲೇ ಇದ್ದೆ.. ದೊಡ್ಡಪ ಬಂದರು.. ಕೋಲೂರಿಕೊಂಡು.. ಇವಳು ಮೇಲೆ ಹೋತ ಮುಂಚೆ ಒಂಚೂರು ಕಂಡದ್ ಹೋಪ ಅಂದ್ ಬಂದ್''[೫೩]

''ಯಂತ ಹೆಣ್ಣೆ ಹೆದ್ರ್‍ತೆಂತರ ಮೋಪ ಬ್ಯಾರಿ ಗೊತ್ತಿಲ್ದ. ಮೆಟ್ಟಿನಂಗಡಿಯವ ನಮ್ಮ ಒಕ್ಕಲು ಹಾಜಿಬ್ಯಾರಿಯ ಮಗ''[೫೪]

''ನೀನು ಮೆಟ್ಟು ಮೆಟ್ಟಂಡಿದಿಯಲ್ಲ.. ಅದು ಅಡ್ಡಿಲ್ಲಯ್ಯಾ ಚಟ್ಟಲೆ ನಿನ್ನ ಹೊತ್ತಂಡ್ ಹೋಪ್ತಿಗೆ ಒಟ್ಟಿಗೆ ತೆಕಂಡ್ ಹೋವು ಮತ್ತೆ. ಬಿಟ್ಟು ಹೋಗಡಾ.. ನಿನ್ನ ಹೆಂಡತಿ ಮೆಟ್ಟಂಡ್ ಯಾರೊಟ್ಟಿಗಾದರೂ ಓಡಿ ಹೋಪ್ಳು.''[೫೫]

''ವೆಂಕಟಪ್ಪಯ್ಯ ಸೀತತ್ತೆಯನ್ನು ಕರೆದ ಹಿಂಗೆಲ್ಲ ಮಾಡಿಂಡ್ ಇವಳು ಪೇಟೆಗೆ ಹೋರಡ್ತದ್, ಬಾಸಾಯಿ ತಿಂತದ್. ಯಾಕೆ ಬೇಕಾಯಿ ಈಗ ಪೇಟೆ ಪೇಟೆ ಅಂದ್ ಹೋತ್‌ದ್ ಆ ಶಂಭಟ್ಟರ ಮನೆಗದ್ಲ ಅವರ ಮನೆ ಜಗಲಿ ಕಾಸ್ ತ್ ದ್, ಬಾಯಿ ಕಲ್ದ್ ಗಾಡ್ ತ್‌ದ್, ಅವು ಇವುಳ ಹಲ್ಲೆಲ್ಲ ಲೆಕ್ಕ ಮಾಡಿಂತೋ.''[೫೬]

''ಅಮ್ಮ ನಾವು ದೇವಸ್ಥಾನಕ್ಕೆ ಹೋಯಿದ್ ಬರ್‍ರೊ'[೫೭]

''ಎನು ತಿರುಪತಿಗೇ ಹೋದ್ವೇ ಕಣ್ಣು ಮೇಲಾಯ್ತು? ನಾನು ಇಲ್ಲೇ ಇದ್ದೆ.. ಕಾಣೆಲ್ಲಯ? ಆಮಗುನ್ನ ಯಾಕೆ ಹಿಂಸೆ ಮಾಡ್ತೆ..?''[೫೮]

''ಎನು ರಂಡೆ ಒಬ್ಬಳೇ! ಯಂತ ಕತೆ ಮಾಡಿಂದೆ?

ಒಬ್ಬಳೇ ಬರದೆ ಮತ್ತೆಂತೆ ಮಾಡ್ತದೆ ಅಲ್ಲಿದ್ದ್? ನಿನ್ನಯಂಕಪ್ಪಯ್ಯನೇಣು ಹಾಕಿಂಡ''[೫೯]

ಮೇಲಿನ ಕತೆಗಳಲ್ಲಿ ಬಳಕೆಯಾಗಿರುವ ಭಾಷೆ ಕೋಟ ಬ್ರಾಹ್ಮಣರು ದಕ್ಷಿಣ ಕನ್ನಡ ಭಾಗದಲ್ಲಿ ರೂಢಿಸಿಕೊಂಡಿರುವ ಪ್ರಾದೇಶಿಕ ಕನ್ನಡವಾಗಿದೆ. ಆ ಭಾಗದ ನುಡಿಗಟ್ಟುಗಳಾದ ದೊಡಪ, ಹೋತ. ಹೆದ್ರ್‌ತೆಂತರ, ಹೊತ್ತಂಡ್ ಹೋಪ್ಪಿಗೆ, ಹೋತ್‌ದ್, ನಗಾಡತ್‌ದ್. ಮಾಡಿಂತೂ ಬರ್‍ರೊ ಮುಂತಾದ ಶಬ್ದಗಳು ಆ ಪ್ರದೇಶದ ಪ್ರಾದೇಶಿಕ ಸೊಗಡಿನಿಂದ ಹುಟ್ಟಿದ ನುಡಿಗುಟ್ಟುಗಳು. ಈ ಭಾಷೆ ಸಂವಹನಕ್ಕೆ ತೊಂದರೆಯಾದರೂ ಆ ಪ್ರದೇಶದ ಆಡುಭಾಷೆಯಲ್ಲಿ ಬರೆಯುವಾಗ ಈ ಶಬ್ದಗಳು ಭಾಷಿಕ ನೆಲೆಯ ಅನನ್ಯತೆಯನ್ನು ಅರಿಯುವಾಗ ವಿಶಿಷ್ಟತೆಯಾಗಿ ಕಾಣುತ್ತದೆ. ಒಂದು ಪ್ರದೇಶದ ಜನಸಂಸ್ಕೃತಿಯ ಭಾಷೆಯನ್ನು ಅರಿಯುವಾಗ ವಿವಿಧತೆಯ ಈ ಭಾಷೆ ವೇಷಗಳು ಅನನ್ಯ ಸಂಕರ ಸಂಸ್ಕೃತಿಯ ಪಡಿನೆರಳಾಗಿ ವೈದೇಹಿ ತಮ್ಮ ಕತೆಗಳಲ್ಲಿ ಬಳಸಿದ್ದಾರೆ. ಶತಮಾನಗಳು ದಾಟಿದರೂ ಈ ಭಾಷಿಕ ನೆಲೆಯ ಶೋಧ ತಣಿಯುವುದೇ ಇಲ್ಲವೆಂಬ ವೈದೇಹಿಯವರ ಮಾತುಗಳು ಈ ಸಾಂಸ್ಕೃತಿಕ ಸಂದರ್ಭದಲ್ಲಿ ಯೋಚಿಸುವ ಸಂಗತಿಯಾಗಿದೆ. ವೈದೇಹಿಯವರ ಒಟ್ಟು ಕಥನ ಸಾಹಿತ್ಯ ಸಂದರ್ಭವನ್ನು ಈ ನೆಲೆಯಲ್ಲಿ ಗಮನಿಸಬಹುದಾಗಿದೆ.

ಬಳ್ಳಾರಿ ಸೀಮೆಯ ಗ್ರಾಮೀಣ ಪ್ರದೇಶದ ನೆಲದ ಬದುಕು. ಇಲ್ಲಿಯ ನೆಲದ ಗಂಧ ಗಾಳಿ ಬಿಸಿಲು ಹಬ್ಬ ಹರಿದಿನಗಳು ಬದುಕಿನ ಜೀವಂತ ಚಿತ್ರಣಗಳನ್ನು ಹೊಸತಲೆ ಮಾರಿನ ಕತೆಗಾರರಾದ ಮಲ್ಲಿಕಾರ್ಜುನ ವಣೇನೂರರ 'ಮಣ್ಣಿನ ಕುಡಿಕೆ' ಸಂಕಲನದಲ್ಲಿ ಸೆರೆಹಿಡಿದಿದ್ದಾರೆ. ಈ ಸಂಕಲನದ ಕತೆಗಳಲ್ಲಿ ವಣೇನೂರರು ನೆಲದ ಪ್ರಾದೇಶಿಕ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಬಳ್ಳಾರಿಯ ಗ್ರಾಮೀಣ ಭಾಗದ ಆಡು ಭಾಷೆಯ ಬಳಕೆಯಾದ ಕೆಲವು ಕತೆಗಳ ಸಾಲುಗಳು.

''ನೋಡಪಾ ಮೂಕಾ' ಮರ್‍ರೆಣ್ಣ ಗಟ್ಟಿಯಾಗಿ ಮಾತಾಡಲು ಅಂಜಿದಂತೆ ತೋರಿದ. 'ಅವನು ಇದಾನಲ್ಲ ಆ ಮಿಂಡ್ರುಮಗ ಎನ್ನುಗ, ಅವನಂತು ಹೊಲ ಬುಟ್ಟುಕೊಡನಲ್ಲ. ಮೊದ್ಲೆ ನೀನು ಭೂಮ್ಯಮ್ಮ ಅಂದ್ರೆ ಬಿದ್ದು ಸಾಯೋ ಮನುಷ್ಯ''[೬೦] ಅಂಗಡೆಲ್ಲಮ್ಮ ''ನೋಡಲೊ ಅಲ್ಲಿ ಹಗರ್‍ಯಾಗ ಒಂದೀಟು ಜಾಗೈತೆ, ಆ ಉಸುಕಿನ್ಯಾಗ ಕರಿಬಿಚ್ಚಣ್ಣು ಅವು ಇವು ಬೇಕೆಂದಾಗ ಬೆಳಿತಾವ ನೀನು ಮಾಡಿಕ್ಯಂಬಂಗಿದ್ರೆ ನೋಡು ಮತ್ತೆ ಎಂದು ಕೇಳಿದಳು.''[೬೧]

'ಹನ್ನೆಲ್ಡು ಹದಿಮೂರು ವರ್ಷದಿಂದ ದ್ಯಾವರೇ ನಡೆದಿಲ್ಲ, ನೀವೆ ಇಂಗದರೆ ಎಂಗ, ನಿಮ್ಮ ಸಂಬಂಧಿಕರೆ ಯಾರಾನ್ನ ಕುಂಭವರುಲೋಳು'[೬೨]

‘‘ಯಪ್ಪಾ ಸಿವನೇ ಏನಾದರೂ ಒಂದು ಮಾಡ್ರೋ....ಉರ್ರ್‍ಹಾಗುಳು ದೈವಸ್ಥರಿಗೆ ಹೊತ್ಗಂಡ್ಹೊಗೋ ಮಾರೆಮ್ಮ ಬರಲಿ ಅವರ ಕೈಗೆ ಕರೆ ನಾಗ್ರಾವು ಕಡೀಲಿ’’[೬೩]

‘‘ಅಚ್ಚಳ್ಳಿ ಪಿಚ್ಚಳ್ಳಿ ಬೇನ ಮರದ್ಹಾಗ ಬೆಳ್ಳಳ್ಳಿ’’[೬೪]

‘‘ಅಲ್ಲಲೇ ನಿಮ್ಗೆ ತತ್ವಗಿತ್ವ ಅಂಬುದು ಏನಿಲ್ಲಾ’

ಯೆಚ್ಚಮ್ಮಾದ್ರೆ ನಿಮ್ಮನ್ನ ಊರಾಕಸುತ

ಕರಕಂಬಗಿಲ್ಲಲೆ...ಮಾದ್ರು ಬ್ಯಾಗಾರು ಊರು

ಮ್ಯಾಗಿದ್ರೆ ಸರ್ವನ್ನಾಸ್ನ ಆಗಿಬಿಡ್ತಾತ, ಸರ್ವನಾಸ್ನ’’[೬೫]

‘‘ಹೊಲೂಕ್ ವೋದ್ರೆ ನೀರೇ ಬಿಡಂಗಿಲ್ಲ ನೀನು ನೋಡಿದ್ರೆ ಸರೀಗೆ ಬದುಕು ಮಾಡಂಗಿಲ್ಲ.. ಹೆಂಗ ನಿನಕಾಲಾಗ ಇರೋವೋತ್ತು ಬಂದಿಲ್ಲವೋ’’[೬೬]

ಮೇಲಿನ ಕತೆಗಳಲ್ಲಿ ಬಳ್ಳಾರಿಯ ಗ್ರಾಮೀಣ ಭಾಗದ ಆಡು ಭಾಷೆಯ ನುಡಿಗಟ್ಟುಗಳನ್ನೆ ವಣೇನೂರರು ಸಮರ್ಥವಾಗಿ ಬಳಸಿ ಕತೆಯಾಗಿಸಿದ್ದಾರೆ. ಬುಟ್ಟುಕೊಡು, ಭೂಮ್ಮಮ್ಮ, ಹಗರ್‍ಯಾಗ, ದ್ಯಾವರು, ನಾಗ್ರಾವು ಈ ಬಳ್ಳಾರಿಯ ಮೂಡಲು ದಿಕ್ಕಿಗಿರುವ ಹಗರಿದಂಡೆಯ ಹಳ್ಳಿಗಳಲ್ಲಿ ಮಕ್ಕಳು ಪೀರಲು ಹಬ್ಬದಲ್ಲಿ ಬಳಸುವ ‘ಅಚ್ಚಳ್ಳಿ ಪಿಚ್ಚಳ್ಳಿ ಬೇನ ಮರದ್ಹಾಗ ಬೆಳ್ಳಳ್ಳಿ’ ಈ ನುಡಿಗಟ್ಟಿನ ಭಾಷೆ ಈಗಲೂ ಇದೆ. ಹಾಗೇ ಯೆಚ್ಚಮ್ಮಾದ್ರೆ, ಸರ್ವನಾಸ್ನ, ಹೊಲೂಕ್ ಮುಂತಾದ ಗ್ರಾಮೀಣ ಭಾಗದ ಆಡು ಭಾಷೆ ಪದಗಳನ್ನು ಪಾತ್ರಗಳ ಸಂಭಾಷಣೆಯಲ್ಲಿ ಯಥಾವತ್ತಾವಾಗಿ ಬಳಕೆ ಮಾಡಿದ್ದಾರೆ.

ಬಳ್ಳಾರಿ ಜಿಲ್ಲೆ ಐತಿಹಾಸಿಕವಾಗಿ, ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಅನನ್ಯವಾದ ಬದುಕನ್ನು ಕಂಡ ನೆಲ. ನೆಲಕಚ್ಚಿ ನಿಂತು ಬರೆಯುವ ಲೇಖಕರಿಗೆ ಇಲ್ಲಿಯ ಗ್ರಾಮೀಣ ಭಾಗದ ಬದುಕು ಭಾಷೆ ಹೊಸ ಜೀವನದರ್ಶನವನ್ನು ಮೂಡಿಸುತ್ತದೆ. ವಣೇನೂರರು ತಾವು ಹುಟ್ಟಿ ಬೆಳೆದ ಹಗರಿಸಾಲಿನ ಜನ ಭಾಷೆಯನ್ನೇ ಕಥನ ಮಾಡಿದ್ದಾರೆ. ಇಲ್ಲಿಯ ಬಿಸಿಲು, ಬೆವರು ನೆಲದ ಗಂಧ ರಿಜಿರುಗಿಡಗಳು, ಹೊಲಗದ್ದೆಗಳು ರಸ್ತೆಗಳು, ದೂಳು ಅದರೊಳಗೆ ಬುದುಕು ಕಟ್ಟಿಕೊಳ್ಳಲು ಒದ್ದಾಡುತ್ತಿರುವ ಬಡ ಜನತೆಯ ಜೀವಂತ ಆಡು ಭಾಷೆಯ ಹದವನ್ನು ಔಚಿತ್ಯವರಿತು ಬಳಸಿದ್ದಾರೆ. ಸಮರ್ಥವಾದ ಅಭಿವ್ಯಕ್ತಿಯೊಂದಿಗೆ ಪ್ರಾದೇಶಿಕ ಭಾಷೆಯೊಂದಿಗೆ ಬದುಕಿನ ಸೌಂದರ್ಯವನ್ನು ಅನಾವರಣಗೊಳಿಸಿದ್ದಾರೆ.

ಇಪ್ಪತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ಅದರಲ್ಲೂ ಎಪ್ಪತ್ತರ ದಶಕದ ಈಚೆಗೆ ಕನ್ನಡ ಕಥನ ಸಾಹಿತ್ಯ ಸಂದರ್ಭದಲ್ಲಿ ಅನೇಕ ಲೇಖಕರು ನೆಲದ ಭಾಷೆಯಲ್ಲೆ ಸಾಹಿತ್ಯ ರಚನೆಗೆ ತೊಡಗಿದ್ದು ಮಹತ್ವದ ಸಂದರ್ಭವೆಂದೇ ಹೇಳಬಹುದು. ಇದಕ್ಕೆ ಅನೇಕ ಕಾರಣಗಳಿವೆ. ಜಾಗತೀಕರಣದ ಸಂದರ್ಭದಲ್ಲಿ ನಮ್ಮ ಭಾಷೆ ಸಂಸ್ಕೃತಿಯ ಮೇಲೆ ವಿದೇಶಿ ಭಾಷೆ ಮತ್ತು ಸಂಸ್ಕೃತಿಯನ್ನು ಹೇರಲ್ಪಡುತ್ತಿದ್ದಾಗ ನಮ್ಮ ಭಾಷೆ-ಸಂಸ್ಕೃತಿಯ ಅನನ್ಯತೆಯನ್ನು ಉಳಿಸಲು ಅನೇಕ ಕತೆಗಾರರು ಉಪಭಾಷೆ-ಪ್ರಾದೇಶಿಕ-ಪ್ರಾಂತೀಯ ಭಾಷೆಯಲ್ಲಿ ಸಾಹಿತ್ಯ ರಚಿಸತೊಡಗಿದರು. ಈ ಶತಮಾನದ ಕೊನೆಯ ದಶಕಗಳಲ್ಲಿ ಭಾಷಿಕ ನೆಲೆಯೂ ಕೂಡ ಹೊಸ ಚಿಂತನೆಯ ಓದನ್ನು ಆರಂಭಿಸಿತು. ಮೈಸೂರು ಭಾಗದ ನಂಜನಗೂಡಿನ ದಲಿತ ಕೇರಿಯ ಉಪಭಾಷೆಯನ್ನು ದೇವನೂರು ಮಹಾದೇವರು ಕಥನ ಸಾಹಿತ್ಯದಲ್ಲಿ ಬಳಸಿ ಮೊಟ್ಟಮೊದಲಿಗೆ ಹೊಸ ಭಾಷೆಯ ಮಾಯಾ ಲೋಕವನ್ನೇ ಸೃಷ್ಟಿಮಾಡಿದರೆ, ಕುಂ. ವೀರಭದ್ರಪ್ಪನವರು ಬಳ್ಳಾರಿ

ಸೀಮೆಯ ಕೊಟ್ಟೂರು ಭಾಗದ ಪ್ರಾದೇಶಿಕ ಭಾಷೆಯೊಂದಿಗೆ ನೂರಾರು ಕತೆಗಳ ಹುತ್ತವನ್ನೆ ಕಟ್ಟಿದರು. ರಾಘವೇಂದ್ರ ಪಾಟೀಲರ ಬೆಳಗಾವಿ ಪ್ರಾಂತ್ಯದ ಗೋಕಾಕ ನೆಲದ ಆಡು ಭಾಷೆಯ ಲಯವನ್ನು ಯಥಾವತ್ತಾಗಿ ಕತೆಯಾಗಿಸಿದರು. ಹೈದ್ರಾಬಾದ್ ಕರ್ನಾಟಕದ ಪ್ರಾಂತ ಭಾಷೆಯ ಜಾಯಮಾನಕ್ಕೆ ತಕ್ಕಂತೆ ರಾಯಚೂರು ಗ್ರಾಮೀಣ ಭಾಗದ ಆಡು ಭಾಷೆಯನ್ನು ಅಮರೇಶ ನುಗುಡೋಣಿಯವರು ಕಥಾ ಸಾಹಿತ್ಯಕ್ಕೆ ಪರಿಚಯಿಸಿದರು ವೈದೇಹಿ ದಕ್ಷಿಣ ಕನ್ನಡ ಭಾಗದ ಕೋಟ ಬ್ರಾಹ್ಮಣರು ಬಳಸಿದ ಪ್ರಾದೇಶಿಕ ಭಾಷೆಯಲ್ಲಿ ಕತೆಕಟ್ಟಿದರು. ಮಲ್ಲಿಕಾರ್ಜುನ ವಣೇನೂರರು ಬಳ್ಳಾರಿಯ ಮೂಡಣ ಭಾಗದ ಹಗರಿ ಸಾಲಿನ ಹಳ್ಳಿಗಳ ಆಡು ಭಾಷೆಯ ಮೂಲಕವೇ ಕತೆ ಬರೆದರು.

ಹೀಗೆ ಈ ಭಾಷಿಕ ನೆಲೆಯ ಅನನ್ಯತೆಯೂ ಕೂಡ ವಿದೇಶಿ ಭಾಷೆ, ಸಂಸ್ಕೃತಿಗೆ, ಈ ನೆಲದ ಕತೆಗಾರರು ಒಡ್ಡಿದ ಭಾಷಾ ಬಳಕೆ ದೇಶೀಯ ಸಂಘರ್ಷವೆನ್ನಬಹುದಾಗಿದೆ. ಈ ನೆಲೆ, ಇಪ್ಪತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ಕಾಣಿಸಿಕೊಂಡ ಮಹತ್ವದ ಹೊಸ ಚಿಂತನೆಯ ಬದಲಾವಣೆ, ಸಾಂಸ್ಕೃತಿಕ ಅನನ್ಯತೆಯನ್ನು ಸಾರಿದ ನೆಲೆಯೂ ಆಗಿದೆಯೆಂದರೆ ಅತಿಶಯೋಕ್ತಿಯೇನಲ್ಲ.

**ಟಿಪ್ಪಣಿಗಳು**

೧. ಬಸವರಾಜ ಕಲ್ಗುಡಿ - ಕನ್ನಡ ತಿಳುವಳಿಕೆಗೆ ಮಿಂಚು ತಂದು ಕೊಟ್ಟ ಭಾಷೆ.
ದಲಿತರು ಭಾಷೆ ಮತ್ತು ಸಮಾಜ - ಪಿ. ಮಹಾದೇವಯ್ಯ (ಸಂ) (ಪುಟ: ೪೯)

೨. ಅದೇ - ಪುಟ - ೪೯

೩. ಪ್ರೊ. ಎಂ.ಎಚ್. ಕೃಷ್ಣಯ್ಯ - ಕನ್ನಡ ಮತ್ತು ಉಪಭಾಷೆಗಳು.
ಕನ್ನಡ ಭಾಷೆಯ ಚರಿತ್ರೆ - ಪ್ರೊ. ಎಂ ಎಚ್ ಕೃಷ್ಣಯ್ಯ (ಪುಟ: ೭೫)

೪. ಮೊಗಳ್ಳಿ ಗಣೇಶ್ - ಕುಸುಮ ಬಾಲೆ ಮಾಂತ್ರಿಕ ದೃಶ್ಯ ಕಾವ್ಯ
ದಲಿತ ಕಥನ - ಮೊಗಳ್ಳಿ ಗಣೇಶ್ (ಪುಟ: ೩೨)

೫. ದೇವನೂರು ಮಹಾದೇವ - ಮಾರಿಕೊಂಡವರು.
ದೇವನೂರು ಮಹಾದೇವ ಅವರ ಸಮಗ್ರ ಕೃತಿಗಳು - (ಪುಟ: ೬)

೬. ದೇವನೂರು ಮಹಾದೇವ - ಗ್ರಸ್ತರು
(ಅದೇ - ಪುಟ: ೮,೯)

೭. ದೇವನೂರು ಮಹಾದೇವ - ಅಮಾಸ. ಅದೇ - ಪುಟ: ೪೭

೮. ಅದೇ - ಪುಟ - ೪೭

೯. ಅದೇ - ಪುಟ - ೫೧

೧೦. ಅದೇ - ಪುಟ - ೫೨

೧೧. ಅದೇ - ಪುಟ - ೫೫

೧೨. ದೇವನೂರು ಮಹಾದೇವ್ - ಎನ್.ಪಿ. ಶಂಕರನಾರಾಣ್‌ರಾವ್ (ಪುಟ-೧೬)

೧೩. ದೇವನೂರು ಮಹಾದೇವರ ಕೃತಿಗಳು - ಪಿ. ಲಂಕೇಶ್ (ಮುನ್ನುಡಿ)

೧೪. ದೇವನೂರು ಮಹಾದೇವ - ಡಾಂಬರು ಬಂದುದು (ಪುಟ-೩೨)

೧೫. ಅದೇ - ಪುಟ-೩೪

೧೬. ಅದೇ - ಪುಟ-೩೪

೧೭. ರಹಮತ್ ತರೀಕೆರೆ - ಭಾಷಾ ವಿಮಾಂಶೆ (ಪುಟ: ೧೬೯)

೧೮. ಕುಂ. ವೀರಭದ್ರಪ್ಪ - ಡೋಮ (ಪುಟ: ೨೮೬)

೧೯. ರಹಮತ್ ತರೀಕೆರೆ - ಭಾಷಾ ವಿಮಾಂಶೆ (ಪುಟ: ೧೬೯)

೨೦. ಕುಂ. ವೀರಭದ್ರಪ್ಪ - ಕತ್ತಲನು ತ್ರಿಶೂಲ ಹಿಡಿದ ಕತೆ (ಪುಟ: ೧)

೨೧. ರಹಮತ್ ತರೀಕೆರೆ - ಭಾಷಾ ವಿಮಾಂಶೆ (ಪುಟ: ೧೭೧)

೨೨. ಕುಂ. ವೀರಭದ್ರಪ್ಪ - ದೇವರ ಹೆಣ (ಪುಟ: ೧೪೮)

೨೩. ಅದೇ - ಪುಟ-೧೪೯

೨೪. ಕುಂ. ವೀರಭದ್ರಪ್ಪ - ಡೋಮ (ಪುಟ: ೧೦)

೨೫. ಕುಂ. ವೀರಭದ್ರಪ್ಪ - ಎಲುಗನೆಂಬ ಕೊರಚನೂ ಚವುಡನೆಂಬ ಹಂದಿಯೂ (ಪುಟ: ೪೭)

೨೬. ಕುಂ. ವೀರಭದ್ರಪ್ಪ - ಕಿವುಡ ನಾಯಿಯಾದ ಪ್ರಸಂಗ (ಪುಟ: ೧೫)

೨೭. ಕುಂ. ವೀರಭದ್ರಪ್ಪ - ಭಗವತಿ ಕಾಡು (ಪುಟ: ೪೭)

೨೮. ಕುಂ. ವೀರಭದ್ರಪ್ಪ - ಕಪ್ಪುನೆಲದಲ್ಲೊಂದು ಕೆಂಪು ಕತೆ

೨೯. ಕುಂ. ವೀರಭದ್ರಪ್ಪ - ಕೆಂಡದ ಮಳೆ ಕರೆವಲ್ಲಿ ಉದಕವಾಗಿದ್ದವರ ಕತೆ (ಪುಟ: ೧೩೩)

೩೦. ಕುಂ. ವೀರಭದ್ರಪ್ಪ - ಬಿಸಿಲ ಕಳಸದ ಹಿಮ ಶಿಖರ (ಪುಟ: ೬೭೯)

೩೧. ಕುಂ. ವೀರಭದ್ರಪ್ಪ - ದೇವರು ತಳ ಸಡಲಿದಾಗ (ಪುಟ: ೯೫೦)

೩೨. ರಾಘವೇಂದ್ರ ಪಾಟೀಲ - ದೇಸಗತಿ (ಪುಟ: ೪೧)

೩೩. ರಾಘವೇಂದ್ರ ಪಾಟೀಲ - ದೇಸಗತಿ (ಪುಟ: ೧೯)

೩೪. ರಾಘವೇಂದ್ರ ಪಾಟೀಲ - ಲಯ (ಪುಟ: ೮೨)

೩೫. ರಾಘವೇಂದ್ರ ಪಾಟೀಲ - ಮಾಯಿಯ ಮುಖಗಳು (ಪುಟ: ೯)

೩೬. ರಾಘವೇಂದ್ರ ಪಾಟೀಲ - 'ದೀಬರ ದಿಂಡೀ ದೀಬರ ದಿಂಡೀ ಕುಬಸಾ ಎಲ್ಲಿಟ್ಟೇ' (ಪುಟ: ೫೩)

೩೭. ರಾಘವೇಂದ್ರ ಪಾಟೀಲ - ಅದೇ ಪುಟ-೬೪

೩೮. ರಾಘವೇಂದ್ರ ಪಾಟೀಲ - ತುದಿಯೆಂಬೋ ತುದಿಯಲ್ಲ (ಪುಟ: ೯೪)

೩೯. ಅಮರೇಶ ನುಗಡೋಣಿ - ತಮಂಧದ ಕೇಡು - (ಪುಟ: ೧೯)

೪೦. ಅದೇ - ಪುಟ-೧೯

೪೧. ಅದೇ - ಪುಟ-೧೯

೪೨. ಎಚ್.ಎಸ್. ರಾಘವೇಂದ್ರರಾವ್ - ಮುನ್ನುಡಿ - 'ತಮಂಧದ ಕೇಡು' ಕಥಾ ಸಂಕಲನ

೪೩. ಅಮರೇಶ ನುಗಡೋಣಿ - ಮಣ್ಣು ಸೇರಿತು ಬೀಜ - (ಪುಟ: ೩)

೪೪. ಅಮರೇಶ ನುಗಡೋಣಿ - ದಾರಿ ಮೂಡಿಸುವ ಹೆಜ್ಜೆಗಳು - (ಪುಟ: ೧೯)

೪೫. ಅಮರೇಶ ನುಗಡೋಣಿ - ಹೊತ್ತು ಮೂಡುವ ಸಮಯ - (ಪುಟ: ೫೫)

೪೬. ಅಮರೇಶ ನುಗಡೋಣಿ - ಮೂಡಲು ಹರಿಯಿತು - (ಪುಟ: ೬೩)

೪೭. ಅಮರೇಶ ನುಗಡೋಣಿ - ನೆಲದ ಮರೆಯ ನಿಧಾನ - (ಪುಟ: ೭೫)

೪೮. ಅಮರೇಶ ನುಗಡೋಣಿ - ಒತ್ತೆ - (ಪುಟ: ೧೦೭)

೪೯. ಅಮರೇಶ ನುಗಡೋಣಿ - ಧರೆಉರಿದರೆ (ಅದೇ - ಪುಟ: ೪೦)

೫೦. ಅಮರೇಶ ನುಗಡೋಣಿ - ನೀರು ತಂದವರು - (ಪುಟ: ೫೦)

೫೧. ಅದೇ - ಪುಟ-೫೭

೫೨. ಅಮರೇಶ ನುಗಡೋಣಿ - ಉತ್ಕ್ರಮಣ - (ಪುಟ: ೧೧೦)

೫೩. ವೈದೇಹಿ - ವಾಣಿಮಾಯಿ - (ಪುಟ: ೨೪)

೫೪. ಅದೇ - ಪುಟ-೩೧

೫೫. ಅದೇ - ಪುಟ-೩೩

೫೬. ವೈದೇಹಿ - ಅಮ್ಮಚ್ಚಿಯ ನೆನಪು - (ಪುಟ. ೧೫೫)

೫೭. ಅದೇ - ಪುಟ-೧೫೬

೫೮. ಅದೇ - ಪುಟ-೧೫೯

೫೯. ಅದೇ - ಪುಟ-೧೬೦

೬೦. ಮಲ್ಲಿಕಾರ್ಜುನ ವಣೇನೂರು - ಮೂಗ - (ಪುಟ: ೯)

೬೧. ಅದೇ - ಪುಟ-೯

೬೨. ಮಲ್ಲಿಕಾರ್ಜುನ ವಣೇನೂರು - ಕೊನೆ - (ಪುಟ: ೧೩)

೬೩. ಮಲ್ಲಿಕಾರ್ಜುನ ವಣೇನೂರು - ಊಳೂರು ಪೀರಲು ದೇವರು - (ಪುಟ: ೭೪)

೬೪. ಅದೇ - ಪುಟ-೮೪

೬೫. ಮಲ್ಲಿಕಾರ್ಜುನ ವಣೇನೂರು - 'ಹರಿವಾಣದಲ್ಲಿ ತಡೆದಿಟ್ಟ ಹರಿವ ನದಿ' - (ಪುಟ: ೯೧)

೬೬. ಮಲ್ಲಿಕಾರ್ಜುನ ವಣೇನೂರು - ಅಸಂಗತ - (ಪುಟ: ೧೦೬)

* * * * *

## ಅಧ್ಯಾಯ : ಒಂಭತ್ತು

## ಸಮಾರೋಪ

ಈ ಮಹಾ ಪ್ರಬಂಧವನ್ನು ಮುಗಿಸುವ ಸಂದರ್ಭದಲ್ಲಿ ಒಂಭತ್ತು ಅಧ್ಯಾಯಗಳಲ್ಲಿ ನಾನು ಆಯ್ಕೆ ಮಾಡಿಕೊಂಡ ವಸ್ತುವಿಷಯವನ್ನು ಕುರಿತು ವಿಶ್ಲೇಷಣೆಗೆ ಒಳಪಡಿಸಿದನ್ನು ಸಮೀಕ್ಷಾತ್ಮಕ ಪ್ರಮೇಯವನ್ನು ಕೊನೆಯಲ್ಲಿ ಕೆಲವು ಮಾತುಗಳಲ್ಲಿ ಬರೆಯಬೇಕೆನಿಸಿದೆ. ''ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ. (ಸಣ್ಣಕತೆಗಳನ್ನು ಆಧರಿಸಿ) ಎಂಬ ವಿಷಯವನ್ನು ಕುರಿತು. ಸುದೀರ್ಘವಾದ ಅಧ್ಯಯನವನ್ನು ಸಂಸ್ಕೃತಿ ವಿಶ್ಲೇಷಣೆಯ ಮೂಲಕ ಮಂಡಿಸಲಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ಜರುಗಿದ ಅನೇಕ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಹುಟ್ಟಿಕೊಂಡ ತಾತ್ವಿಕ ಚರಿತ್ರೆಗಳನ್ನು ಅಧ್ಯಯನ ಮಾಡಿದ್ದೇನೆ. ಜೊತೆಗೆ ಈ ಶತಮಾನದಲ್ಲಿ ಜರುಗಿದ ಘಟನೆಗಳಿಗೆ ಆಧುನಿಕ ಕನ್ನಡದ ಸಣ್ಣಕತೆಗಾರರು ಸೃಜಶೀಲಬರವಣಿಗೆಯ ಮೂಲಕ ಸ್ಪಂದಿಸಿದ ರೀತಿಯನ್ನು ಕತೆಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.ಇಲ್ಲಿ 'ಸಂಸ್ಕೃತಿ ಪ್ರಶ್ನೆ' ಎಂಬ ಪರಿಕಲ್ಪನೆಯನ್ನು ಬದುಕಿನ ಪ್ರಶ್ನೆ ಎಂಬ ನೆಲೆಯಲ್ಲಿ ಚರ್ಚಿಸಲಾಗಿದೆ. ಸಂಶೋಧನಾ ಬರವಣಿಗೆಯ ಸಂದರ್ಭದಲ್ಲಿ ಮಹಾಪ್ರಬಂಧವನ್ನು ಒಂಬತ್ತು ಅಧ್ಯಯಗಳಾಗಿ ವಿಂಗಡಿ ಅಧ್ಯಯನ ಕೈಗೊಂಡು ಸ್ಪಷ್ಟವಾದ ವಿಶ್ಲೇಷಣೆಯೊಂದಿಗೆ ರಚಿಸಲಾಗಿದೆ. ಇಲ್ಲಿ ಒಂದೊಂದು ಅಧ್ಯಯಗಳಲ್ಲಿ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಅಂತರ್‌ಶಿಸ್ತೀಯ ಮತ್ತು ಬಹು ಶಿಸ್ತೀಯ ನೆಲೆಯಲ್ಲಿ ಅಧ್ಯಯನ ಮಾಡಿ ಖಚಿತವಾದ ನಿಲುವಿನಲ್ಲಿ ಮಹಾಪ್ರಬಂಧ ರಚಿಸಿದ್ದೇನೆ.

**ಮೊದಲ ಅಧ್ಯಯದಲ್ಲಿ** ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಈ ವರೆಗೆ ನಡೆದ ಅಧ್ಯಯನದ ಸಮೀಕ್ಷೆ ಎಂಬ ಉಪಶೀರ್ಷಿಕೆಗಳಲ್ಲಿ ವಿಶ್ಲೇಷಣೆಗಳನ್ನು ನಡೆಸಲಾಗಿದೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ದೇಶ ಅದರಲ್ಲೂ ಕನ್ನಡ ನಾಡಿನ ಸಂದರ್ಭದಲ್ಲಿ ಜರುಗಿದ ಘಟನೆಗಳು ಸಾಂಸ್ಕೃತಿಕ ಬದುಕಿನ ಮೇಲೆ ಉಂಟುಮಾಡಿದ ಪರಿಣಾಮಗಳು ಇವು ಕನ್ನಡದ ಕತೆಗಾರರ ಸೃಜನಶೀಲ ಬರವಣಿಗೆಗೆ ಪ್ರೇರಣೆಯಾದ ಬಗೆಯನ್ನು ಅಧ್ಯಯನ ಮಾಡುವುದು ಸ್ಪಷ್ಟವಾದ ಉದ್ದೇಶವಾಗಿದೆ. ಈ ಸಂದರ್ಭದಲ್ಲಿ ಯಾವುದೇ ಸಂಶೋಧನೆಗೆ ನಿರ್ದಿಷ್ಟ ಉದ್ದೇಶದ ಜೊತೆಗೆ ವ್ಯಾಪ್ತಿಯೂ ಇರುತ್ತದೆ. ಇಲ್ಲಿನಾನು ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ

ಸಂಸ್ಕೃತಿ ಕಥನದ ನಿರ್ವಚನಕ್ಕೆ ಎಪ್ಪತ್ತು ಎಂಬತ್ತು, ತೊಂಬತ್ತು ಮತ್ತು ಇಲ್ಲಿಯವರೆಗಿನ ಕರ್ನಾಟಕದ ಸಂದರ್ಭದಲ್ಲಿ ಜರುಗಿದ ಮುಖ್ಯಘಟನೆಗಳನ್ನು ಮೇಲಿನ ಮೂರು ದಶಕಗಳ ಕಾಲಮಾನದ ವ್ಯಾಪ್ತಿಯೊಂದಿಗೆ ಅಧ್ಯಯನ ಮಾಡಿದ್ದೇನೆ. ಈ ಮೂರು ದಶಕಗಳ ಸಾಂಸ್ಕೃತಿಕ ಪಲ್ಲಟಗಳನ್ನು ಅಂತರ್‌ಶಿಸ್ತೀಯ, ಬಹುಶಿಸ್ತೀಯ ಅಧ್ಯಯನ ವಿಧಾನದಲ್ಲೆ ಸಾಹಿತ್ಯ ಸಂಸ್ಕೃತಿಯ ವಿಶ್ಲೇಷಣೆ ಮಾಡಿದ್ದೇನೆ. ಇಲ್ಲಿ ಕಥೆಗಳ ಸಾಂಸ್ಕೃತಿಕ ಅಧ್ಯಯನದ ವಿಧಾನದಲ್ಲಿ ಕತೆಗಾರರು ಸಾಮಾಜಿಕ ವಾಸ್ತವವನ್ನು ಸಾಹಿತ್ಯದ ಪ್ರತಿನಿಧಿಕರಣವಾಗಿ ನಿರೂಪಿಸಿದ ಬಗೆಯು ವ್ಯಕ್ತಿನಿಷ್ಠ ಅಧ್ಯಯನದ ವಿಧಾನ ಮಾದರಿಯಾಗಿರುವುದನ್ನು ವಿವರಿಸಿದ್ದೇನೆ. ಈ ಸಂದರ್ಭದಲ್ಲಿ ನಾನು ಸಾಹಿತ್ಯ, ಸಂಸ್ಕೃತಿಗೆ ಸಂಬಂಧ ಪಟ್ಟಂತೆ, ಮುಖ್ಯವಾಗಿ ವಿಷಯದ ಚೌಕಟ್ಟಿಗೆ ಸಂಬಂಧಿಸಿದಂತೆ ಈಗಾಗಲೇ ಕನ್ನಡದಲ್ಲಿ ಅಧ್ಯಯನ ಮಾಡಲಾಗಿರುವ ಸಂಶೋಧನಾ ಮಹಾಪ್ರಬಂಧಗಳನ್ನು ಗಮನಿಸಿದ್ದೇನೆ. ಇಲ್ಲಿನ ಮಹಾಪ್ರಬಂಧಗಳಲ್ಲಿ ಕೆಲವನ್ನು ಬಿಟ್ಟರೆ ಇನ್ನುಳಿದ ಪ್ರಬಂಧಗಳು ಏಕ ಮಾದರಿಯಲ್ಲಿ ವ್ಯಕ್ತಿ ಕೇಂದ್ರಿತ, ಕೃತಿಕೇಂದ್ರಿತ ನೆಲೆಯಲ್ಲಿ ರಚನೆಗೊಂಡಿರುವುದು ಕಂಡುಕೊಂಡಿದ್ದೇನೆ. ಇದೇ ಕಾರಣಕ್ಕಾಗಿ ಪ್ರಸ್ತುತ ಪ್ರಬಂಧವನ್ನು ಬಹುಶಿಸ್ತೀಯ ಕ್ರಮದಲ್ಲಿ ನಡೆಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಸಾಮಾಜಿಕ ಬದುಕಿನ ಪ್ರತಿರೂಪವಾದ 'ಸಂಸ್ಕೃತಿ ಪ್ರಶ್ನೆ'ಯನ್ನು ಕುರಿತು ಚರ್ಚಿಸಿದ್ದೇನೆ. ಸಂಸ್ಕೃತಿಯ ಪ್ರಶ್ನೆಯೆಂದರೆ ಬದುಕಿನ ಪ್ರಶ್ನೆಯೇ ಆಗಿದ್ದು ಸಮಷ್ಠಿ ಬದುಕಿನ ಆಚಾರ-ವಿಚಾರ, ನಡೆ-ನುಡಿ ಅಂತರಂಗ ಸಾಧನೆಯ ಪ್ರತೀಕವಾದ ಸಂಸ್ಕೃತಿ ಪರಿಕಲ್ಪನೆಯು ಅರ್ಥ ವ್ಯಾಪ್ತಿಯಲ್ಲಿ ಅನೇಕತೆಯನ್ನು ಸಾರಿದೆ. ಸಂಸ್ಕೃತಿ ಪರಿಕಲ್ಪನೆಯನ್ನು ಸೂತ್ರರೂಪದಲ್ಲಿ ಹಿಡಿದಿಡಲಾದ ವಿರಾಟ್ ಶಕ್ತಿಯಾಗಿದೆ. ಡಿ.ವಿ.ಜಿಯವರು ಸಂಸ್ಕೃತಿ ಶಬ್ದದ ವ್ಯುತ್ಪತ್ತಿಯನ್ನು ವಿವರಿಸುತ್ತಾ. ಸಂಸ್ಕಾರದಿಂದ ಸಂಸ್ಕೃತಿ ಸಂಸ್ಕಾರ ಮತ್ತು ಸಂಸ್ಕರಣೆಯೆಂದರೆ ಸಮ್ಯಕ್‌ಕರಣ ಸಮ್ಯಕೃತಿ ಹಾಗಂದರೆ ಚೆನ್ನಾಗುವಂತೆ ಮಾಡುವುದು ಎಂದಿದ್ದಾರೆ. ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವುದೇ ಸಂಸ್ಕೃತಿ ಎಂದರೆ, ಮತ್ತೊಬ್ಬ ಕನ್ನಡದ ಪ್ರಬುದ್ಧ ಸಂಸ್ಕೃತಿ ಚಿಂತಕ ಶಂಬಾ ಜೋಷಿಯವರು ಸಂಸ್ಕೃತಿಯೆಂಬುದು ಪ್ರತ್ಯೇಕ ವಸ್ತುವಲ್ಲ, ಜಡವಲ್ಲ ಅದು ಜೀವನ ಕ್ರಮ ಹೀಗೆಂದು ಹೇಳಿದ ಶಂಬಾ ಸಂಸ್ಕೃತಿಯೆಂದರೆ ಜೀವನದ ರೀತಿಯೆಂದು ಈ ಪರಿಕಲ್ಪನೆಯನ್ನು ವಿಸ್ತರಿಸಿದರು.

ಪ್ರಸ್ತುತ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಚಿಂತಕರಲ್ಲೊಬ್ಬರಾದ ರಹಮತ್ ತರೀಕೆರೆಯವರ 'ಸಾಂಸ್ಕೃತಿಕ ಅಧ್ಯಯನ'ಯೆಂಬ ಕೃತಿಯಲ್ಲಿ ಸಂಸ್ಕೃತಿಯ ಪರಿಕಲ್ಪನೆಯ ಸ್ವರೂಪವನ್ನು ನಿರ್ಧರಿಸುವ ಸಂದರ್ಭದಲ್ಲಿ ಚಿಂತನಾಕ್ರಮದ ಹಿನ್ನೆಲೆಯಲ್ಲಿ ಉದಾರವಾದಿ, ಪರಿಷ್ಕರಣವಾದಿ, ವಿಚಾರವಾದಿ, ಶೂದ್ರವಾದಿ, ನಿರ್ವಸಾಹತೀಕರಣವಾದಿ, ದಲಿತವಾದಿ, ಎಡವಾದಿ, ಆಧುನಿಕೋತ್ತರವಾದಿಯೆಂದು ವಿಂಗಡಿಸಿ, ವಿಶ್ಲೇಷಿಸಿರುವುದನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

'ಜಾಗತೀಕರಣ' ಇದು ಅನೇಕ ಬಗೆಯ ಪ್ರತಿರೋಧ ಮತ್ತು ಪರ್ಯಾಯಗಳ ಹುಡುಕಾಟಗಳಿಗೆ ಕಾರಣವಾಯಿತು. ಈ ಸಂದರ್ಭದಲ್ಲಿ ಮುಂಚೂಣಿಗೆ ಬಂದ ಸಂಸ್ಕೃತಿಯ ಚಿಂತನೆ 'ಪೋಸ್ಟ್‌ಮಾರ್ಡನಿಸಂ' ಇದರ ಲಕ್ಷಣವೆಂದರೆ ಸಮಸ್ತ ಬೃಹತ್ ಮತ್ತು ಸ್ಥಾಪಿತರಚನೆಗಳನ್ನು ಪ್ರಶ್ನಿಸುವುದಾಗಿತ್ತು. ಪ್ರತಿಯೊಂದು ಕಾಲಘಟ್ಟದಲ್ಲಿಯೂ ಸಂಸ್ಕೃತಿ ಪರಿಕಲ್ಪನೆಯು ತನಗೆ ಪ್ರಿಯವಾದ ಮೈಲುಗಲ್ಲುಗಳನ್ನು, ವರ್ಗೀಕರಣಗಳನ್ನು ನಿರ್ಮಿಸಿಕೊಂಡು ಆ ಮೂಲಕ ಮರು ಹೊಂದಾಣಿಕೆ ಮಾಡಿಕೊಂಡಿರುವುದನ್ನು ಕಾಣಬಹುದಾಗಿದೆ.

'ಸಂಸ್ಕೃತಿಯು ವಂಶವಾಹಿನಿಯಾಗಿ ಹರಿದು ಬರುವಂತಹದಲ್ಲ. ಅದು ರಕ್ತ ಜನ್ಯವೂ ಅಲ್ಲ ಸಂಸ್ಕೃತಿ ಸಾಮಾಜಿಕ ಬದುಕಿನ ಪ್ರತಿಫಲವಾಗಿರುವಂತದ್ದು, ಸವಂಹನವಿಲ್ಲದೆ ಸಂಸ್ಕೃತಿಯಿಲ್ಲ ಸಂಸ್ಕೃತಿಯನ್ನು ವ್ಯವಸ್ಥೆಯಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಎಲ್ಲಾ ಸಮಾಜಗಳು ಅಧಿಕಾರದ ಸಂರಚನೆಯಾಗಿರುವುದರಿಂದ, ಸಮಾಜದ ಯಜಮಾನಿಕೆಯ ಶಕ್ತಿಗಳು ಯಾವ ಸ್ವರೂಪದವು ಎಂಬುದರ ಮೇಲೆ ಆ ಸಮಾಜದ ಸಂಸ್ಕೃತಿ ರೂಪಿತ ವಾಗುತ್ತದೆ'' ಎಂಬ ಜಿ. ರಾಜಶೇಖರವರ ಮಾತಿನಲ್ಲಿ ಸಂಸ್ಕೃತಿಯು ಸಾಮಾಜಿಕ ಬದುಕಿನ ಪ್ರತಿಫಲನವಾಗಿ ರೂಪಿತವಾದರೆ, ಕನ್ನಡದ ಬಹುಮುಖ್ಯ ಚಿಂತಕರಾದ ಡಾ. ಕೆ.ವಿ. ನಾರಾಯಣರು 'ಸಂಸ್ಕೃತಿಯು ವಾಸ್ತವ ಜೀವನ ವಿಧಾನವೆಂದೂ, ಸಂಸ್ಕೃತಿ ಚಿಂತನೆ ನಿರ್ವಾತದಲ್ಲಿ ನಡೆಯುವುದಿಲ್ಲ, ಹಾಗೆಯೇ ಅದು ಶುದ್ಧ ಬೌದ್ಧಿಕ ಚಟುವಟಿಕೆಯೂ ಅಲ್ಲ. ನಿರಂತರವಾಗಿ ನಡೆಯುತ್ತಾ ಇರುವ ಪಲ್ಲಟಗಳನ್ನು ಪರ್ಯಾಯಗಳನ್ನು ಗುರುತಿಸುತ್ತಲೇ ಅವುಗಳ ಬಗೆಗೆ ಒಂದು ಮೌಲ್ಯಾತ್ಮಕ ನಿಲುವುಗಳನ್ನು ಸಂಸ್ಕೃತಿ ಚಿಂತಕರು ತಳೆಯಬೇಕಾಗುತ್ತದೆ' ಎನ್ನುವ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಕನ್ನಡ ಸಾಹಿತ್ಯ ವಿಮರ್ಶೆಯ ಮುಖ್ಯಧಾರೆ ಯಾವಾಗಲೂ ಸಂಸ್ಕೃತಿ ನಿಷ್ಠ ಪ್ರಶ್ನೆಗಳನ್ನೇ ಅವಲಂಬಿಸಿ ಬೆಳೆದಿದೆ. ಇದು ಶುದ್ಧ ಸಾಹಿತ್ಯ ವಿಮರ್ಶೆ ಆಗಿದೆಯೆಂದು ಹೇಳಿರುವ ಡಾ. ಕೆ.ವಿ. ನಾರಾಯಣರ ಮಾತು ಸತ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಸಂಸ್ಕೃತಿ ಪರಿಕಲ್ಪನಾತ್ಮ ಚರ್ಚೆಯು ಬಹುಮುಖಿಯಾದ ನೆಲೆಯಲ್ಲಿ ಅರ್ಥವ್ಯಾಪ್ತಿಯನ್ನು ವಿಸ್ತರಿಸಿಕೊಂಡಿರುವುದನ್ನು ವಿವಿಧ ವಿದ್ವಾಂಸರ ಅಭಿಪ್ರಾಯಯೊಂದಿಗೆ ಈ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

ಅಧ್ಯಾಯನ ಮೂರರಲ್ಲಿ ಅನೇಕ ತಲ್ಲಣಗಳಿಗೆ ಬದಲಾವಣೆಗಳಿಗೆ, ಒಳಗಾದ ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಾದಂತಹ ಎಪ್ಪತ್ತು, ಎಂಬತ್ತು, ತೊಂಬತ್ತು ಮತ್ತು ಇಲ್ಲಿಯವರೆಗೆ ಕರ್ನಾಟಕದ ಸಂದರ್ಭದಲ್ಲಿ ನಡೆದ ಪ್ರಮುಖ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗಮನದಲ್ಲಿಟ್ಟುಕೊಂಡು ಮೂರು ದಶಕಗಳಲ್ಲಿ ಜರುಗಿದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ವಿದ್ಯಮಾನಗಳನ್ನು ವಸಾಹಾತು ಪೂರ್ವ ಮತ್ತು ವಸಾಹತ್ತೋತ್ತರ ವಿದ್ಯಾಮಾನಗಳೆಂದು ವಿಂಗಡಿಸಿ ಸುದೀರ್ಘ ಅಧ್ಯಯನ ಮಾಡಿದ್ದೇನೆ. ಕರ್ನಾಟಕ ಸಂದರ್ಭದಲ್ಲಿ ಘಟಿಸಿದ ಘಟನೆಗಳೇ ವಿದ್ಯಾಮಾನಗಳೆಂದು, ಈ ವಿದ್ಯಾಮಾನಗಳಲ್ಲಿ ಕೆಲವು ಜಾಗತಿಕ ಸಂದರ್ಭದಲ್ಲಿ ಜರುಗಿದರೂ, ಕನ್ನಡ ಮತ್ತು ಕರ್ನಾಟಕದ ಸಂದರ್ಭದಲ್ಲಿ ಉಂಟು ಮಾಡಿದ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ವಸಾಹತು ಪೂರ್ವ ಸಂದರ್ಭದಲ್ಲಿ ಅದರಲ್ಲೂ ಸ್ವಾತಂತ್ರ್ಯ ಪೂರ್ವ ಕಾಲದಲ್ಲಿದ್ದ ಉದಾರ ಮಾನವತಾವಾದ, ಪರಂಪರೆಯ ವೈಭವೀಕರಣ ಮತ್ತು ಆಧುನಿಕತೆಯಿಂದ ಉಂಟಾದ ವಿಜ್ಞಾನದ ಸಾರ್ವಭೌಮತ್ವ ಮುಂತಾದ ವಸ್ತು ಸ್ಥಿತಿಯನ್ನು ಅರಿತು ಅಧ್ಯಯನ ಮಾಡಿದ್ದೇನೆ. ಆ ಸಂದರ್ಭದಲ್ಲಿ ದೇಶ ಮತ್ತು ನಾಡಿನಲ್ಲಿ ಕೋಮುವಾದದ ಕರಾಳ ನೆರಳು ಉಂಟುಮಾಡಿದ ಕಂಪನಗಳನ್ನು ಕುರಿತು ಕೂಡಾ ವಿಶ್ಲೇಷಣೆ ಮಾಡಿದ್ದೇನೆ.

ವಸಾಹಾತೋತ್ತರ ವಿದ್ಯಮಾನಗಳಲ್ಲಿ ಬಂಡಾಯ-ದಲಿತೋತ್ತರ ಚಿಂತನೆ ಕನ್ನಡ ಭಾಷೆ-ಸಂಸ್ಕೃತಿಯ ಸಂದರ್ಭದಲ್ಲಿ ಮಹತ್ವದ ಮೈಲುಗಲ್ಲು. ಎಪ್ಪತ್ತರ ದಶಕದಲ್ಲಿ ಜರುಗಿದ ದಲಿತ-ಬಂಡಾಯ ಚಳುವಳಿಗಳು ಸಾಹಿತ್ಯ-ಸಂಸ್ಕೃತಿಯ ನಿಟ್ಟಿನಲ್ಲಿ ದಲಿತರ ಶೂದ್ರರ ಪಾಲ್ಗೊಳ್ಳುವಿಕೆ ಹೊಸ ಚೈತನ್ಯದ ಅಲೆಯನ್ನು ಸೃಷ್ಟಿಸಿತು. ಇದೇ ಹೊತ್ತಿನಲ್ಲಿ ಗ್ರಾಮೀಣ ಭಾಗದ ತಳಮಟ್ಟದ ಜನರಿಗೆ ಅಧಿಕಾರ ದೊರಕಬೇಕೆಂದು, 'ಅಧಿಕಾರ ವಿಕೇಂದ್ರಿಕರಣ'ವಾಗಬೇಕೆಂದು ಗಾಂಧೀಜಿಯವರ ರಾಮ ರಾಜ್ಯದ ಕನಸಿನ ಪರಿಕಲ್ಪನೆಯೊಂದಿಗೆ ಹುಟ್ಟಿಕೊಂಡ 'ಮಂಡಲ ವರದಿ' ಜಾರಿ ಹೋರಾಟವು ಕರ್ನಾಟಕದ ಸಂದರ್ಭದಲ್ಲಿ ಉಂಟುಮಾಡಿದ ಬದಲಾವಣೆಗಳನ್ನು

ಗಮನಿಸಿದ್ದೇನೆ. ಅಸ್ಸಾಂನಲ್ಲಂತೂ ವಿದ್ಯಾರ್ಥಿಗಳು ಈ ಚಳುವಳಿಗಳಿಂದ ಸರಕಾರವನ್ನು ರೂಪಿಸುವ ಮಟ್ಟಕ್ಕೆ ಹೋದರು. ಮಂಡಲ ವರದಿ ಜಾರಿಯಾಗಬೇಕೆಂದು ಉಗ್ರ ಚಳುವಳಿ ಪ್ರಾರಂಭಿಸಿದ್ದನ್ನು ಅನೇಕ ಪತ್ರಿಕೆಗಳ ವರದಿ, ಲೇಖನಗಳ ಅಧ್ಯಯನದಿಂದ ತಿಳಿದುಕೊಂಡಿದ್ದೇನೆ. ಈ ವರದಿಯು ದೀರ್ಘವಾಗಿರುವುದರ ಜೊತೆಗೆ ಜಿಲ್ಲಾಧಿಕಾರಿಗಳಿಗೆ ವಿಪರೀತ ಅಧಿಕಾರ ನೀಡಿರುವುದು ಮತ್ತು ಗ್ರಾಮೀಣ ಜನತೆಯ ಬುದ್ಧಿ ಸಾಮರ್ಥ್ಯಕ್ಕೆ ಮೀರಿದ ಕಾರ್ಯಾಚರಣೆಯನ್ನು ಮಂಡಲಗಳಿಗೆ ವಿಧಿಸಿದ್ದು, ಅಧಿಕಾರ ವಿಕೇಂದ್ರೀಕರಣದಿಂದ ತಳಮಟ್ಟದ ಜನರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಇಚ್ಛೆಯು ಸಫಲಗೊಳ್ಳಲಿಲ್ಲವೆಂಬ ನಿಲುವುಗಳನ್ನು ಚರ್ಚೆಗೆ ಒಳಪಡಿಸಲಾಗಿದೆ.

'ಜಾಗತೀಕರಣ'ದ ಪ್ರಭಾವವೂ ಕೂಡ ನಾಡು ಭಾಷೆ, ಸಂಸ್ಕೃತಿಯ ಮೇಲೆ ಉಂಟುಮಾಡಿದ ಪರಿಣಾಮವೂ ಕೂಡ ಆತಂಕ ಕಾರಿಯಾದದ್ದು. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳು, ಸಂಸ್ಕೃತಿಯ ಅನನ್ಯತೆಗಳಿಗೆ ಭಂಗವನ್ನುಂಟುಮಾಡಿದವು. ನಮ್ಮ ಭಾಷಿಕ ಜೀವನಶೈಲಿಯನ್ನು ಜಾಗತೀಕರಣ ತನ್ನ ಅಧೀನಕ್ಕೆ ತೆಗೆದುಕೊಳ್ಳುವುದರ ಜೊತೆಗೆ ವಿದೇಶಿ ಭಾಷೆ, ಸಂಸ್ಕೃತಿಯನ್ನು, ನಮ್ಮ ಭಾಷೆ ಮತ್ತು ಸಂಸ್ಕೃತಿಯ ಮೇಲೆ ಹೇರಲ್ಪಡುವ ಹುನ್ನಾರವನ್ನು ಮಾಡುತ್ತಿದೆ. ಇಂಗ್ಲೀಷ್ ಭಾಷೆ ಬದುಕಿನ ರೀತಿ ರಿವಾಜುಗಳ ಹೇರಿಕೆಯ ಮಟ್ಟಕ್ಕೆ ಬಂದಾಗ ಗ್ರಾಮೀಣ ಭಾಗದ ಜೀವನಾಡಿಯಾದ ಆಡು ಭಾಷೆಗೆ, ಅದರಲ್ಲೂ ಶಿಷ್ಟ ಕನ್ನಡ ಭಾಷೆಗೆ ಕುತ್ತು ಒದಗಿ ಬರುತ್ತದೆ. ಆ ಸಂದರ್ಭದಲ್ಲೆಲ್ಲಾ ಅನೇಕ ಕನ್ನಡ ಲೇಖಕರು ದೇಶಿಯ ನೆಲೆಯ ಹುಡುಕಾಟಕ್ಕೆ ತೊಡಗಿದ್ದಾರೆ. ಇಂಗ್ಲೀಷ್ ವಸಾಹತುಶಾಹಿ ಸಂಸ್ಕೃತಿಯ ಪ್ರಭಾವದಿಂದ ಬಿಡುಗಡೆ ಹೊಂದಲು ಅನೇಕ ಸಂಸ್ಕೃತಿ ಚಿಂತಕರು ಕೃತಿಗಳಲ್ಲಿ ದೇಶೀಯ ಚಿಂತನೆಯ ಕಡೆ ವಿಚಾರಮಾಡಿದ್ದಾರೆ. ''ದೇಶೀಯ ನೆಲೆಯ ಹುಡುಕಾಟವು ಮುಂದೆ ದೇಶೀಯವಾದ''ವೆಂದು ಚರ್ಚೆಗೆ ಒಳಗಾಗುವ ಮಟ್ಟಿಗೆ ಸಿದ್ಧಾಂತವಾಗಿ ರೂಪಗೊಂಡಿದ್ದನ್ನು ವಿವರಿಸಿದ್ದೇನೆ. ಈ ದೇಶಿಯತೆಯು ಪ್ರಾದೇಶಿಕ ಸತ್ವವನ್ನು ಒಳಗೊಂಡ ಪರಿಕಲ್ಪನೆಯಾಗಿ, ಅದು ಸಾಹಿತ್ಯದಲ್ಲಿಯೂ ಗುಣಾತ್ಮಕವಾಗಿ ಕಾಣಿಸಿಕೊಂಡಿದೆ. ಪ್ರಾದೇಶಿಕ ಸತ್ವ, ದೇಶಿಯ ಜೀವ ಸೆಲೆಯ ಬದುಕನ್ನು ಆಧುನಿಕ ಕನ್ನಡದ ಬಹುತೇಕ ಕತೆಗಾರರು ಮೈಗೂಡಿಸಿಕೊಂಡಿರುವುದನ್ನು ಅಧ್ಯಯನದಿಂದ ಅರಿತಿದ್ದೇನೆ. ದೇವನೂರು ಮಹಾದೇವ, ವೈದೇಹಿ, ಕುಂ. ವೀರಭದ್ರಪ್ಪ, ಅಮರೇಶ ನುಗಡೋಣಿ, ಮುಂತಾದ ಕತೆಗಾರರ ಕತೆಗಳ ಮೂಲಕ ದೇಶಿಯ ಸಂಸ್ಕೃತಿಯ ಬದುಕನ್ನು ಕಥನವಾಗಿಸಿ ನಮ್ಮ ನೆಲದ ಜೀವ ಸಂಸ್ಕೃತಿಯ ಬದುಕಾಗಿ ಚಿತ್ರಿಸಿದ ಅವರ ಕತೆಗಳನ್ನು ಮಹಾಪ್ರಬಂಧದ ಬೇರೆ ಬೇರೆ ಅಧ್ಯಾಯಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಬಳಸಿಕೊಂಡು ವಿವರಣೆ ಮಾಡಿದ್ದೇನೆ.

ಅನೇಕ ಶತಮಾನಗಳು ಒಂದೇ ಶತಮಾನದಲ್ಲಿ ಮೇಳೈಸಿರುವ ಕಾಲವೆಂದರೆ ಇಪ್ಪತ್ತನೆ ಶತಮಾನ, ಈ ಶತಮಾನವು ಸಂಕಟ ಮತ್ತು ಸಂಭ್ರಮಗಳು ಮನುಷ್ಯನನ್ನು ರೂಪಿಸುತ್ತಿರುವ ಬಗೆಯೇ ಬೇರೆಯಾಗಿದೆ. ಪ್ರಾಚೀನ, ಮಧ್ಯಕಾಲೀನ ಮತ್ತು ಸಮಕಾಲೀನ ಸಂದರ್ಭಗಳು ಒಟ್ಟಿಗೆ ಕಾಡಿಸುತ್ತಿರುವ ಕಾಲ ನಮ್ಮದಾಗಿದೆಯೆಂದಿರುವ ಸಂಸ್ಕೃತಿ ಚಿಂತಕ ಪ್ರೊ. ಬರಗೂರು ರಾಮಚಂದ್ರನವರು ಕಾಲ ಒಂದು ಘಟ್ಟವನ್ನು ಮುಟ್ಟಿದಾಗ ಪುನರ್ ಮೌಲ್ಯೀಕರಣದ ಅಗತ್ಯ ಬೀಳುತ್ತದೆ ಎಂದಿದ್ದಾರೆ. ಆ ಕಾಲ ಕ್ಷಣವೊ ಆಗಬಹುದು, ಯುಗವೊ ಆಗಬಹುದು. ಕ್ಷಣ ಮಾತ್ರದ ಮಿಂಚಿನಿಂದ ಪುನರ್ ಮೌಲ್ಯೀಕರಣದ ಅನಿವಾರ್ಯತೆ ಉಂಟಾಗುವುದಿಲ್ಲ. ಅನೇಕ ಕ್ಷಣಗಳು ತಮ್ಮ ನಿರಂತರತೆಯಲ್ಲಿ ನೆಲೆಯೂರುತ್ತ ಒಂದು ನಿರ್ದಿಷ್ಟ ಘಟ್ಟವನ್ನು ತಲುಪಿದ ಮೇಲೆ ಹುಟ್ಟುವ ಹೊಸ ಆಶೋತ್ತರಗಳ ಒತ್ತಾಸೆಯಲ್ಲಿ

ಪುನರ್ ಮೌಲ್ಯೀಕರಣದ ಮಾತು ಕೇಳಿಬರುತ್ತದೆ. ಹೊಸ ಆಶೋತ್ತರಗಳಿಗೆ ನಿರ್ದಿಷ್ಟ ಅಲಂಕೃತಿ ಲಭ್ಯವಾದಂತೆ ಪುನರ್ ಮೌಲ್ಯೀಕರಣದ ಅನಿವಾರ್ಯತೆ ಹೆಚ್ಚಾಗುತ್ತದೆ. ಈಗ ಪುನರ್ ಮೌಲ್ಯೀಕರಣ ಅನಿವಾರ್ಯವೆನ್ನುವ ಬರಗೂರರು, ಬದುಕು ಮತ್ತು ಬರಹ ಎರಡನ್ನೂ ಗಮನದಲ್ಲಿಟ್ಟುಕೊಂಡು ಪುನರ್ ಮೌಲ್ಯೀಕರಣದ ಅನಿವಾರ್ಯತೆಯ ಚಿಂತನೆ ಮಾಡಿದ್ದಾರೆ. ಬರಗೂರರ ಈ ಸಾಹಿತ್ಯದ ಪುನರ್ ಮೌಲ್ಯೀಕರಣದ ಬೀಜಗಳು ಮನುಷ್ಯ ಕಲ್ಪನೆ ಮತ್ತು ಕಾಲಕ್ಕೆ ಇರುವ ಸಂಬಂಧದಲ್ಲೂ ಇರುತ್ತವೆಯೆಂಬ ನಿಲುವಿನ ವಿಚಾರಗಳನ್ನು ಇಲ್ಲಿ ವಿವರಿಸಿದ್ದೇನೆ. ನಮ್ಮ ಸಾಮಾಜಿಕ ಬದುಕಿನಲ್ಲಿ ಅನೇಕ ಸಮುದಾಯಗಳ ಕೆಳವರ್ಗದ ಬದುಕು ಅಲಕ್ಷಕ್ಕೆ, ಒಳಗಾಗಿದೆ. ಇಂತಹ ಅಲಕ್ಷಿತ ಸಮುದಾಯಗಳೊಳಗಿನ ಉಪಸಂಸ್ಕೃತಿಯು ಆಧೀನ ಸಂಸ್ಕೃತಿಯೊಂದಿಗೆ ಬೆಸೆದುಕೊಂಡಿರುವ ಪರಿ. ಜೊತೆಗೆ ಪರ್ಯಾಯ, ಪ್ರತಿ ಸಂಸ್ಕೃತಿಯ ಪ್ರಭಾವವು ಯಾವ ಮಟ್ಟದಲ್ಲಿರುತ್ತದೆ ಎಂಬ ಅಭಿಪ್ರಾಯವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಿದ್ದೇನೆ.

ಜಾಗತಿಕರಣ ಪ್ರಭಾವದಿಂದ ಕೃಷಿ ಮತ್ತು ರೈತರ ಬದುಕಿನ ಮೇಲೆ ಉಂಟಾದ ಪರಿಣಾಮಗಳನ್ನು ಚರ್ಚಿಸುತ್ತಾ. ರೈತ ಚಳುವಳಿಯ ಹುಟ್ಟು ಬೆಳವಣಿಗೆ ಜೊತೆ ಕರ್ನಾಟಕದ ಸಂದರ್ಭದಲ್ಲಿ ರೈತರ ದಮನಿತ ಪ್ರಶ್ನೆಗಳನ್ನಿಟ್ಟುಕೊಂಡು ರೂಪಿತವಾದ ರೈತ ಸಂಘವು ಸಾಗಿದ ಸೂಕ್ಷ್ಮವಾದ ನೋಟವನ್ನು ಕುರಿತು ವಿವರಿಸಿದ್ದೇನೆ. ಭೂಮಿತಾಯಿಯ ಚೊಚ್ಚಲ ಮಗನಾದ ರೈತ ಇಂದು ತೀವ್ರವಾದ ಸಂಕಟಗಳಿಗೆ ಒಳಗಾಗಿದ್ದಾನೆ. ಈತನ ಬಗ್ಗೆ ಕೇವಲ ಮೊಸಳೆ ಕಣ್ಣೀರು ಸುರಿಸುವ ಆಳುವ ವರ್ಗಗಳು ರೈತರನ್ನು ನಿರ್ಲಕ್ಷಿಸುತ್ತಲೇ ಬಂದಿರುವ ಹಾದಿಯನ್ನು ಇಲ್ಲಿ ಗುರುತಿಸಿದ್ದೇನೆ.

ಕಳೆದೆರೆಡು ಮೂರು ದಶಕಗಳಲ್ಲಿ ಜಾಗತಿಕ ವಿದ್ಯಮಾನಗಳಲ್ಲಿ ಉಂಟಾಗುತ್ತಿರುವ ಬದಲಾವಣೆಗಳು ಮಹಿಳಾ ಬದುಕಿನ ಮೇಲೂ ತೀವ್ರವಾದ ಪರಿಣಾಮಗಳನ್ನು ಉಂಟುಮಾಡಿವೆ. ಕಳೆದ ಕಾಲು ಶತಮಾನದಲ್ಲಿ ಭಾರತೀಯ ಸ್ತ್ರೀವಾದವೂ ಕೂಡ ಚಿಂತನೆಯ ಹೊಸ ಹೊಸ ಮಗ್ಗಲುಗಳಿಗೆ ಚಾಚಿಕೊಳ್ಳುತ್ತಾ ಚಲನಶೀಲತೆಯ ವ್ಯಾಪಕತೆಯನ್ನು ಪಡೆದುಕೊಳ್ಳುವ ಮಹಿಳಾ ಪ್ರಶ್ನೆಯನ್ನು ಮುಂಚೂಣಿಗೆ ತಂದಿದೆ. ಹೀಗೆ ಅಧ್ಯಾಯ ಮೂರರಲ್ಲಿ ಇಪ್ಪತ್ತನೆಯ ಶತಮಾನದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವಿದ್ಯಮಾನಗಳನ್ನು ಹಾಗೂ ವಸಾಹತು ಪೂರ್ವ ಮತ್ತು ವಸಾಹತೋತ್ತರ ಸಂದರ್ಭಗಳೆಂದು ವಿಂಗಡಿಸಿ ಸುದೀರ್ಘವಾಗಿ ವಿವರಿಸಿದ್ದೇನೆ. ಈ ವಿದ್ಯಮಾನಗಳು ಇಪ್ಪತ್ತನೇ ಶತಮಾನದ ಕೊನೆಯ ದಶಕಗಳ ಒಟ್ಟು ಸಾಂಸ್ಕೃತಿಕ ಬದುಕನ್ನು ಪಲ್ಲಟಗೊಳಿಸಿದ ಸ್ಥಿತಿಯನ್ನು ಚರ್ಚಿಸಿದ್ದೇನೆ.

ಅಧ್ಯಾಯ ನಾಲ್ಕರಲ್ಲಿ ದಲಿತ ಅನನ್ಯತೆಯನ್ನು ಕುರಿತು ವಿವರಿಸಿದ್ದೇನೆ. ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂದರ್ಭದಲ್ಲಿ ಅನೇಕ ಕತೆಗಾರರು ದಲಿತ ಬದುಕಿನ ದುಃಖ ದುಮ್ಮಾನಗಳನ್ನು ವಿಶಿಷ್ಟ ರೀತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಈ ಅಧ್ಯಾಯದಲ್ಲಿ ಮೊದಲಿಗೆ ದಲಿತ ಸಾಹಿತ್ಯದ ಹುಟ್ಟು ಬೆಳವಣಿಗೆ, ಬಂಡಾಯ ದಲಿತ ಸಾಹಿತ್ಯವು ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಉಂಟುಮಾಡಿದ ಸಾಂಸ್ಕೃತಿಕ ಚಳುವಳಿಯ ಹಿನ್ನೆಲೆಗೆ ಸ್ಪಂದಿಸಿ ಆ ಕಾಲಘಟ್ಟದಲ್ಲಿ ಸೃಷ್ಟಿಯಾದ ಕಥಾ ಸಾಹಿತ್ಯದ ಅನನ್ಯತೆಯನ್ನು ವಿವರಿಸಿದ್ದೇನೆ. ದೇವನೂರು ಮಹಾದೇವ, ಅರವಿಂದ ಮಾಲಗತ್ತಿ, ಮ.ನ.ಜವರಯ್ಯ, ಮೊಗಳ್ಳಿ ಗಣೇಶ್ ಇನ್ನೂ ಮುಂತಾದ ಕತೆಗಾರರ ಮುಖ್ಯಕತೆಗಳಲ್ಲಿ ವ್ಯಕ್ತವಾಗಿರುವ ದಲಿತ ಸಂಸ್ಕೃತಿಯ ಬದುಕಿನ ದಟ್ಟ ವಿವರಗಳನ್ನು ಚರ್ಚಿಸಿದ್ದೇನೆ. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ ಸಾಹಿತ್ಯ ಚಳುವಳಿ ಹೊಸ ಚಿಂತನೆಯ ಪರಿಪಕ್ವವಾದ ನೆಲೆಯನ್ನು ಹುಟ್ಟುಹಾಕಿದ ಕಾಲಘಟ್ಟವಾಗಿದೆಯೆಂಬ ಮಾತನ್ನು ತಾತ್ವಿಕ ಚರಿತ್ರೆಯೊಂದಿಗೆ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಮುಸ್ಲಿಂ ಸಂವೇದನೆಯು ಕೂಡ ಕನ್ನಡ ಕಥಾ ಸಾಹಿತ್ಯ ಪ್ರಕಾರದಲ್ಲಿ ಅನನ್ಯವಾಗಿ ಪ್ರಕಟಗೊಂಡಿದೆ. ಅಧ್ಯಾಯ ಐದರಲ್ಲಿ ಮುಸ್ಲಿಂ ಸಂಸ್ಕೃತಿಯೊಳಗಿನ ಆಚಾರ-ವಿಚಾರ-ನಂಬಿಕೆ ವಿಧಿವಿಧಾನಗಳನ್ನು ಆ ಜನಾಂಗದ ನೋವು ನಲಿವುಗಳನ್ನು ತಾತ್ವಿಕವಾದ ಚರಿತ್ರೆಯ ಜೊತೆಗೆ ಚರ್ಚಿಸಿದ್ದೇನೆ. ಮುಸ್ಲಿಂ ಜನಾಂಗದಲ್ಲೆ ಹುಟ್ಟಿದ ಆ ಜನಾಂಗದ ನೋವುಗಳನ್ನುಂಡು, ತೀರ ಹತ್ತಿರವಾಗಿ ಅವರ ಬದುಕನ್ನು ಗ್ರಹಿಸಿದ ಸಾರಾ ಅಬೂಬಕರ್, ಬಾನು ಮುಸ್ತಾಕ್, ಬೋಳುವಾರು ಮಹಮ್ಮದ್ ಕುಂಞ, ಪಕೀರ್‌ಮಹಮದ್ ಕಟ್ಪಾಡಿ, ಅಬ್ದುಲ್ ರಶೀದ್, ಅಬ್ಬಾಸ್ ಮೇಲಿನಮನಿ ಮುಂತಾದ ಕತೆಗಾರರ ಮುಖ್ಯ ಕತೆಗಳನ್ನು ವಿಶ್ಲೇಷಿಸಲಾಗಿದೆ. ಮುಸ್ಲಿಂ ಸಮುದಾಯದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದುಕಿನ ಸ್ಥಿತ್ಯಂತರಗಳು, ಆತ್ಮವಿಸ್ವಾಸ, ವಿಮರ್ಶನ ಪ್ರಜ್ಞೆ ಪೂರ್ವಗ್ರಹವಿಲ್ಲದ ಗ್ರಹಿಕೆಯಿಂದ ದಾಖಲಾಗಿರುವುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಿದ್ದೇನೆ, ಅಲ್ಪಸಂಖ್ಯಾತರಾದ ಮುಸ್ಲಿಂ ಜನಾಂಗ ಕೋಮು ಸಾಮರಸ್ಯವನ್ನು ಕಾಪಾಡುವ, ಭಾವಕ್ಯತೆಯ ಮಂತ್ರವನ್ನು ಜನರ ಮನದಂಗಳಲ್ಲಿ ಬಿತ್ತುವ ರೆಹಮಾನ್ ಸಾಹೇಬರ ಪಾತ್ರವನ್ನು ಅವರ ವಿವೇಕದ ನಡೆನುಡಿಯನ್ನು ಅಬ್ಬಾಸ್ ಮೇಲಿನಮನಿಯವರ "ಮಸೀದಿ ಉರುಳಿದ ಸಮಯ" ಕತೆ ದಾಖಲಿಸುತ್ತದೆ. ಮಂದಿರ ಮಸೀದಿ ಚರ್ಚೆಯನ್ನು ಪ್ರಸ್ತುತ ಸಂದಭದಲ್ಲಿ ಮನದಂಗಳದಲ್ಲಿ ಅಚ್ಚೊತ್ತಿದಂತೆ ಕತೆಗಾರರು ಈ ಕತೆಯ ಮೂಲಕ ಸೆರೆಹಿಡಿದಿದ್ದಾರೆ. ಹಾಗೇ ಬೋಳುವಾರರ 'ಅಖಿರತ್' 'ಇದ್ದತ್' 'ಒಂದು ತುಂಡು ಗೋಡೆ' ಕತೆಗಳು, ಪಕೀರ್‌ಮಹಮದ್‌ಕಟ್ಪಾಡಿಯವರ 'ಅಪ್ಪ' 'ಹತ್ಯೆ' 'ವ್ಯಾಜ್ಯ' 'ನೊಂಬು' ಕತೆಗಳು, ಅಬ್ದುಲ್‌ರಶೀದ್‌ರ 'ಪ್ರಾಣಿ ಪಕ್ಷಿ' ಮುಂತಾದ ಕತೆಗಳಲ್ಲಿ ಮುಸ್ಲಿಂ ಸಮುದಾಯದ ಅನನ್ಯ ಬದುಕು ಹೇಗೆ ಚಿತ್ರಿತವಾಗಿದೆಯೆಂಬುದನ್ನು ಕತೆಗಾರರ ಕತೆಗಳ ಚರ್ಚೆಯೊಂದಿಗೆ ನಿರೂಪಿಸಿದ್ದೇನೆ. ಸಮಾಜದ ಮುಖ್ಯ ವಾಹಿನಿಯಲ್ಲಿ ಮುಸ್ಲಿಂ ಸಮುದಾಯವೂ ಕೂಡ ತಮ್ಮದೇ ಆದಂತ ಸಾಂಸ್ಕೃತಿಕ ಬದುಕಿನ ಒಳತೋಟಗಳನ್ನು ವೈವಿಧ್ಯಮಯವಾಗಿ ದಾಖಲಿಸಿರುವುದರ ಜೊತೆಗೆ ಕನ್ನಡ ಕಥಾ ಸಾಹಿತ್ಯ ವಾಹಿನಿಗೆ ಮುಸ್ಲಿಂ ಸಂವೇದನೆ ಕೂಡ ಹೊಸ ಚಿಂತನೆ ಮೂಡಿಸಿರುವುದನ್ನು ಮನಗಂಡಿದ್ದೇನೆ.

ಎಪ್ಪತರ ದಶಕದ ಮಧ್ಯಭಾಗದ ೧೯೭೫ ರ ವರ್ಷ ಭಾರತೀಯ ಸ್ತ್ರೀವಾದದ ತಿರುವಿನ ಕಾಲ ಘಟ್ಟವಾಗಿದೆ. ಅನೇಕ ಜನಪರ ಪರಿಸರಪರ ಚಳುವಳಿಗಳ ಒಟ್ಟಿಗೆ ಸ್ತ್ರೀಯರ ಪಾಲ್ಗೊಳ್ಳುವಿಕೆ ಹೆಚ್ಚುತ್ತಲೇ ಸಾಗಿತು. ಇದರಿಂದಾಗಿ ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಸ್ತ್ರೀಯರು ಹೊಸದಾಗಿ ಕಾಣಿಸಿಕೊಳ್ಳುತ್ತಿರುವಿಕೆಯನ್ನು ಅನೇಕ ಸಂಸ್ಕೃತಿ ಕಥನಗಳು ದಾಖಲಿಸಿವೆ.

ಅಧ್ಯಾಯ ಆರರಲ್ಲಿ ಸ್ತ್ರೀವಾದಿ ನಿಲುವುಗಳು, ಸ್ತ್ರೀ ಚೈತನ್ಯದ ಅನನ್ಯತೆಗಳನ್ನು ಅನೇಕ ಕತೆಗಾರ್ತಿಯರ ಕತೆಗಳ ವಿಶ್ಲೇಷಣೆಯ ಮೂಲಕ ಅನಾವರಣಗೊಳಿಸಲಾಗಿದೆ.

ವೀಣಾ ಶಾಂತೇಶ್ವರ, ಗೀತಾ ನಾಗಭೂಷಣ, ಎಚ್. ನಾಗವೇಣಿ, ಬಿ.ಟಿ. ಲಲಿತಾನಾಯಕ, ವೈದೇಹಿ, ನೇಮಿಚಂದ್ರ, ಬಿ.ಟಿ. ಜಾಹ್ನವಿ, ಮುಂತಾದ ಕತೆಗಾರ್ತಿಯರ ಮುಖ್ಯಕತೆಗಳಲ್ಲಿ ಚರ್ಚಿತವಾದ ಮಹಿಳಾ ಬದುಕಿನ ವಿವರಗಳನ್ನು ಕುರಿತು ಈ ಅಧ್ಯಾಯದಲ್ಲಿ ನಿರೂಪಿಸಿದ್ದೇನೆ. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಚಿಂತನೆಯನ್ನು ಹೊಸ ಧ್ವನಿಯಲ್ಲಿ ದಾಖಲಿಸಿದ ಸ್ತ್ರೀವಾದಿ ನೆಲೆಯೂ ಕೂಡ ಪ್ರಮುಖ ವಿಚಾರಧಾರೆಯಾಗಿರುವುದನ್ನು ಕಂಡುಕೊಂಡು ವಿಶ್ಲೇಷಣೆ ಮಾಡಿದ್ದೇನೆ.

ಯಾವುದೇ ಒಂದು ಸಂಸ್ಕೃತಿಯು ಅನ್ಯ ಸಂಸ್ಕೃತಿಯ ಸಂಪರ್ಕದಲ್ಲಿಯೂ ಚಲನಶೀಲವಾಗುವುದು, ಈ ಪ್ರಕ್ರಿಯೆಯಲ್ಲಿಯೇ ಅದರ ಜೀವಂತಿಕೆಯಿದೆ ಎನ್ನುವುದು ಒಂದು ನೆಲೆ. ಆದರೆ ಇಂತಹ ಸಂಪರ್ಕ ಮತ್ತು ಪರಸ್ಪರ ಪ್ರಭಾವಗಳಲ್ಲಿ ವಿದೇಶಿ ಪಾಲು ಹೆಚ್ಚಾದರೆ ದೇಶಿ ಸಂಸ್ಕೃತಿಯ ಅನನ್ಯತೆಗೆ ಕುತ್ತಾಗುತ್ತದೆ. ಈ ಹಿನ್ನೆಲೆಯಲ್ಲಿ ನವ ವಸಾಹತುಶಾಹಿ ನೆಲೆಯಿಂದ ಭಾರತ ಮತ್ತು ಕರ್ನಾಟಕವು ಹಲವು ಆತಂಕಗಳನ್ನು ಇಂದು ಎದುರಿಸುತ್ತಿದೆ. ಈ ನವ ವಸಾಹತುಶಾಹಿ ನೆಲೆಯ ಆಕರ್ಷಣೆಯಿಂದ ಸೃಷ್ಟಿಯಾದ ಅನೇಕ ದೇಶಿಯ ಸಂಘರ್ಷಗಳನ್ನು ಅಧ್ಯಾಯ ಏಳರಲ್ಲಿ ಚರ್ಚಿಸಿದ್ದೇನೆ. ಮುಕ್ತ ಆರ್ಥಿಕ ನೀತಿ ಮತ್ತು ಬ್ರಿಟೀಷರು ಬಿಟ್ಟುಹೋದ ನೆನಪುಗಳ ಮೂಲಕ ನಮ್ಮ ಬದುಕು ಹಲವು ಆಕರ್ಷಣೆಗಳಿಗೆ ಒಳಗಾಗಿದೆ. ಮುಕ್ತ ಆರ್ಥಿಕ ನೀತಿಯ ಫಲವಾಗಿ ಹಲವಾರು ವಿದೇಶಿ ಕಂಪನಿಗಳು ಭಾರತಕ್ಕೆ ಪ್ರವೇಶಿಸಿ ತಮ್ಮ ಬಂಡವಾಳವನ್ನು ಇಲ್ಲಿ ಹೂಡುತ್ತಿವೆ. ಇದರ ಪರಿಣಾಮವಾಗಿ ಕೈಗಾರಿಕೆಗಳು ಉದ್ಯೋಗಾವಕಾಶಗಳು ಲಭ್ಯವಾಗುತ್ತಿವೆ. ಆರ್ಥಿಕ ಉದಾರೀಕರಣದ ಫಲವಾದ ನವವಸಾಹತುಶಾಹಿ ಸಂದರ್ಭದಿಂದ ಇಡೀ ಭಾರತವು ವಿದೇಶಿಮಯವಾಗುತ್ತಿದೆ. ನಮ್ಮ ಸಂಸ್ಕೃತಿಯಲ್ಲಿ ಅಳವಡಿಸಿಕೊಂಡ ಅನೇಕ ಪರಿಕರಗಳು ವಿದೇಶಿ ಸೃಷ್ಟಿಗಳೆಂಬ ಭಾವನೆ ಹೋಗಿ ಅದೇ ಸ್ವದೇಶಿಯೆಂಬ ಭ್ರಮೆ ಗಟ್ಟಿಯಾಗುತ್ತಿದೆ. ಮತ್ತೊಂದು ನೆಲೆಯಿಂದ ವೀಕ್ಷಿಸಿದಾಗ ಕೈಗಾರೀಕರಣದಿಂದ ಅರಣ್ಯನಾಶ, ಪರಿಸರದ ಅಸಮತೋಲನ ನಮ್ಮ ಸಂಸ್ಕೃತಿ ಪೂಜ್ಯ ಭಾವದಲ್ಲಿ ಗ್ರಹಿಸಿದ್ದ ನದಿ, ಕೆರೆ, ಅರಣ್ಯಗಳ ನಾಶವು ನಮ್ಮ ಅಂತಃಸತ್ವವನ್ನು ಭಗ್ನಗೊಳಿಸುತ್ತದೆ.

ಕೈಗಾರಿಕೆಗಳ ಸ್ಥಾಪನೆಯಾದಂತೆಲ್ಲಾ ಗ್ರಾಮೀಣ ಜನತೆಯ ವಲಸೆ ಹೆಚ್ಚುತ್ತದೆ. ಇದರಿಂದ ಗ್ರಾಮೀಣ ಪ್ರದೇಶದಲ್ಲಿ ಮಾನವ ಸಂಪನ್ಮೂಲದ ಕೊರತೆ ಕಂಡುಬರುತ್ತದೆ. ಕೂಲಿದರ ಹೆಚ್ಚುತ್ತದೆ. ಇದನ್ನು ನಿಭಾಯಿಸದಿದ್ದಾಗ ಬೇಸಾಯದ ಭೂಮಿಯಲ್ಲಿ ನೀಲಗಿರಿ ಮರಗಳು ಬೆಳೆಯುತ್ತವೆ. ಇನ್ನು ಮುಂದುವರಿದು ಹೇಳುವುದಾದರೆ ರೈತರ ಹೊಲಗಳು ಬೀಳು ಬೀಳುತ್ತವೆ. ರೈತರಲ್ಲಿ ಅನೇಕ ಸಮಸ್ಯೆಗಳು ಸೃಷ್ಟಿಯಾಗುತ್ತವೆ. ಈ ಅಧ್ಯಾಯದಲ್ಲಿ ನವವಸಾಹತು ಶಾಹಿನೆಲೆಯಿಂದ ಸೃಷ್ಠಿಯಾದ ದೇಶಿಯ ಸಂಘರ್ಷ ನಾನಾ ಮುಖಗಳಾದ ಭೂಮಿ ಮತ್ತು ರೈತರ ಪ್ರಶ್ನೆ, ಪರಿಸರ ಮತ್ತು ಅರಣ್ಯ ಪ್ರಶ್ನೆ, ನೀರು ಮತ್ತು ಕೈಗಾರಿಕಾ ಪ್ರಶ್ನೆಗಳೆಂದು ವಿಂಗಡಿಸಿ ತಾತ್ವಿಕವಾದ ಚರಿತ್ರೆಯೊಂದಿಗೆ ಚರ್ಚಿಸಿದ್ದೇನೆ. ಜೊತೆಗೆ ಈ ನವವಸಾಹತು ಶಾಹಿ ಸಂದರ್ಭಗಳಿಗೆ ದೇಶಿಯ ಸಂಘರ್ಷದ ನೆಲೆಗಳ ಹುಡುಕಾಟದೊಂದಿಗೆ, ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಮಲ್ಲಿಕಾರ್ಜುನ ಹಿರೇಮಠ, ರಾಜಶೇಖರ ನೀರಮಾನ್ವಿ, ಕುಂ ವೀರಭದ್ರಪ್ಪ, ಅಮರೇಶ ನುಗಡೋಣಿ, ನಟರಾಜ್ ಹುಳಿಯಾರ್, ಶ್ರೀಧರ ಬಳಿಗಾರ, ರಾಜಶೇಖರ ಹತಗುಂದಿ, ಮಲ್ಲಿಕಾರ್ಜುನ ವಣೇನೂರು, ಮುಂತಾದ ಕತೆಗಾರರ ಮುಖ್ಯ ಕತೆಗಳನ್ನು ನವವಸಾಹತುಶಾಹಿ ನೆಲೆಯ ದೇಶಿಯ ಸಂಘರ್ಷದ ಸಂದರ್ಭಕ್ಕೆ ಮುಖಾಮುಖಿಯಾಗಿ ವಿಶ್ಲೇಷಣೆಗೆ ಒಳಪಡಿಸಿಕೊಳ್ಳಲಾಗಿದೆ.

ಅಧ್ಯಾಯ ಎಂಟರಲ್ಲಿ 'ಭಾಷಿಕ ನೆಲೆ'ಯನ್ನು ಕುರಿತು ವಿವರಿಸಿದ್ದೇನೆ. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಕಥಾರಚನೆಗೆ ತೊಡಗಿದ ಅನೇಕ ಕತೆಗಾರರು ಜಾಗತೀಕರಣಕ್ಕೆ ಮುಖಾಮುಖಿಯಾಗಿ ತಾವು ಬಾಳಿ ಬದುಕುತ್ತಿರುವ ನೆಲದ ಆಡು ಭಾಷೆಯಲ್ಲೆ ಬರೆಯತೊಡಗಿದರು. ಇದೊಂದು ರೀತಿಯಲ್ಲಿ ನಮ್ಮ ಭಾಷೆ ಸಂಸ್ಕೃತಿಯ ಮೇಲೆ ವಿದೇಶಿ ಭಾಷೆ, ಸಂಸ್ಕೃತಿಯು ಹೇರಲ್ಪಡುತ್ತಿದ್ದಾಗ, ನಮ್ಮ ಭಾಷೆಯ ಉಳುವಿಗಾಗಿ ನಮ್ಮ ನೆಲದ ಜೀವ ವೈವಿಧ್ಯತೆಯ ಸಂಸ್ಕೃತಿಯ ಏಳಿಗೆಗಾಗಿ ಭಾಷಿಕ ವೈವಿಧ್ಯತೆಯನ್ನು ಅನುಸರಿಸಿ ಉಪಭಾಷೆ, ಪ್ರಾದೇಶಿಕ, ಪ್ರಾಂತಿಯ

ಭಾಷೆಯಲ್ಲಿ ಕಥಾ ರಚನೆಗೆ ತೊಡಗಿದರು. ದೇವನೂರು ಮಹಾದೇವರು ನಂಜನಗೂಡಿನ ದಲಿತಕೇರಿಯ ಉಪಭಾಷೆಯಲ್ಲಿ ಕತೆ ರಚಿಸಿ ದಲಿತ ಸಂಸ್ಕೃತಿಯ ಅನನ್ಯತೆ ಸಾರಿದರೆ, ಕುಂ. ವೀರಭದ್ರಪ್ಪನವರು ಬಳ್ಳಾರಿ ಗಡಿಭಾಗದ, ಕೊಟ್ಟೂರು ಸೀಮೆಯ ಪ್ರಾದೇಶಿಕ ನುಡಿಗಟ್ಟುಗಳನ್ನು ಬಳಸಿ ಈ ನೆಲದ ಪ್ರಾದೇಶಿಕ ವೈಶಿಷ್ಟತೆಯನ್ನು ನೂರಾರು ಕತೆಗಳಲ್ಲಿ ಸಮರ್ಥವಾಗಿ ಸೆರೆಹಿಡಿದಿದ್ದಾರೆ. ಹೈದ್ರಾಬಾದ್ ಕರ್ನಾಟಕ ಪ್ರಾಂತ ಭಾಷೆಯಲ್ಲಿ ಅಮರೇಶ ನುಗಡೋಣಿಯವರು ಕತೆಗಳ ಮೂಲಕ ದೇಶಿಯ ಜೀವನ ಶೈಲಿಯಲ್ಲಿ ಅದ್ಭುತ ಗ್ರಾಮೀಣ ಜಗತ್ತನ್ನು ಅನಾವರಣಗೊಳಿಸಿದ್ದಾರೆ. ವೈದೇಹಿಯವರು ಕೂಡ ದಕ್ಷಿಣ ಕನ್ನಡ ಭಾಗದ ಹವ್ಯಕ ಬ್ರಾಹ್ಮಣರು ಬಳಸುವ ಕೋಟ ಕನ್ನಡವನ್ನು ಕತೆಗಳಲ್ಲಿ ತಂದಿದ್ದಾರೆ. ರಾಘುವೇಂದ್ರ ಪಾಟೀಲರು ಬೆಳಗಾವಿ ಪ್ರಾಂತ್ಯದ ಗೋಕಾಕ ಸೀಮೆಯ 'ದೇಶಗತಿ' ಮನೆತನಗಳ ಉಪಭಾಷೆಯನ್ನು ನೆಲದ ವಿವಿಧ ಪಾತ್ರಗಳ ಮುಖಾಂತರ ಅನಾವರಣಗೊಳಿಸಿದ್ದಾರೆ. ಹೀಗೆ ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ಪ್ರಶ್ನೆಯನ್ನು ಕೇಂದ್ರೀಕರಿಸಿ ವಿಶ್ಲೇಷಣೆ ಮಾಡುವಾಗ ಮೇಲೆ ಹೆಸರಿಸಿದ ಅನೇಕ ಕತೆಗಾರರು ಉಪಭಾಷೆ, ಪ್ರಾದೇಶಿಕ, ಪ್ರಾಂತೀಯ ಭಾಷೆಗಳನ್ನು ಬಳಸುವುದರ ಮುಖಾಂತರ ತಮ್ಮ ತಮ್ಮ ಮೂಲ ಭಾಷೆಯ ಉಳಿವನ್ನು ಹಾಗೂ ಅದರ ಏಳಿಗೆಯನ್ನು ಕಥನಗಳ ಮೂಲಕ ಎತ್ತಿಹಿಡಿದಿದ್ದಾರೆ. ಹಾಗಾಗಿ 'ಭಾಷಿಕ ನೆಲೆ'ಯೂ ಕೂಡ ಇಪ್ಪತ್ತನೆ ಶತಮಾನದ ಕೊನೆಯ ದಶಕಗಳ ಸಂಸ್ಕೃತಿ ನಿರ್ವಚನಕ್ಕೆ ಪ್ರಮುಖ ಕಾರಣವಾಗಿರುವುದನ್ನು ಮೇಲೆ ಉಲ್ಲೇಖಿಸಿದ ಕತೆಗಾರರ ಕತೆಗಳ ಮೂಲಕ ಚರ್ಚಿಸಿದ್ದೇನೆ.

ಹೀಗೆ ಎಂಟು ಅಧ್ಯಾಯಗಳಲ್ಲಿ, ಇಪ್ಪತ್ತನೆಯ ಶತಮಾನದಲ್ಲಿ ಜರುಗಿದ ಪ್ರಮುಖ ವಿದ್ಯಮಾನಗಳು ಇಲ್ಲಿ ವಿಶ್ಲೇಷಣೆಗೆ ಒಳಗಾಗಿವೆ. ಈ ವಿದ್ಯಮಾನಗಳಿಂದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಾದ ಸ್ಥಿತ್ಯಂತರಗಳು, ಸಂಸ್ಕೃತಿ ಪರಿಕಲ್ಪನೆಯ ಚರ್ಚೆ, ಜೊತೆಗೆ ಸಾಹಿತ್ಯಿಕ ಮತ್ತು ಸಾಮಾಜಿಕ ಬದುಕಿನಲ್ಲಿ ಹುಟ್ಟಿಕೊಂಡ ದಲಿತ ಚಳುವಳಿಯ ಹುಟ್ಟು ಬೆಳವಣಿಗೆ, ದಲಿತ ಸಾಹಿತ್ಯದ ಅನನ್ಯತೆ, ಮುಸ್ಲಿಂ ಅನನ್ಯತೆ, ತೊಂಬತ್ತರದ ದಶಕಗಳಲ್ಲಿ ಕಾಣಿಸಿಕೊಂಡ ಸ್ತ್ರೀವಾದದ ಹುಟ್ಟು, ಸಾಹಿತ್ಯದ ಸಂದರ್ಭದಲ್ಲಿ ಸ್ತ್ರೀವಾದಿ ನೆಲೆಯ ಮುಖ್ಯನೆಲೆಗಳ ಹುಡುಕಾಟ, ಹಾಗೆ ಆಧುನಿಕತೆ, ಜಾಗತೀಕರಣದ ಪ್ರಭಾವದಿಂದ ವಿವಿಧ ವಲಯಗಳಲ್ಲಿ ಸೃಷ್ಟಿಯಾದ ದೇಶಿಯ ಸಂಘರ್ಷಗಳನ್ನು ರೈತ ಪ್ರಶ್ನೆ, ಭೂಮಿ ಪ್ರಶ್ನೆ, ಪರಿಸರ, ಅರಣ್ಯ, ನೀರು, ಕಾರ್ಖಾನೆ ಪ್ರಶ್ನೆಗಳನ್ನು ತಾತ್ವಿಕ ಚರಿತ್ರೆಯೊಂದಿಗೆ ಈ ಸಂದರ್ಭಕ್ಕೆ ಕತೆಗಾರರು ಕತೆಗಳ ಮೂಲಕ ಸ್ಪಂದಿಸಿದ ರೀತಿಯನ್ನು ವಿಸ್ತಾರವಾಗಿ ಇಲ್ಲಿ ಚರ್ಚಿಸಿದ್ದೇನೆ. ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಕತೆಗಳ ಮೂಲಕ ಕಾಣಿಸಿಕೊಂಡ ಭಾಷಿಕ ನೆಲೆಯೂ ಕೂಡ ಜಾಗತೀಕರಣಕ್ಕೆ ಮುಖಾಮುಖಿಯಾಗಿ ಕಾಣಿಸಿಕೊಂಡ ನಮ್ಮ ನೆಲದ ಉಪಭಾಷೆ, ಪ್ರಾದೇಶಿಕ, ಪ್ರಾಂತೀಯ ಭಾಷೆಯ ನೆಲೆಗಳನ್ನು ಪ್ರಮುಖ ಕತೆಗಾರರ ಕತೆಗಳ ಮೂಲಕ ವಿಶ್ಲೇಷಿಸಿದ್ದೇನೆ.

ಒಟ್ಟಾರೆ ಇಪ್ಪತ್ತನೆ ಶತಮಾನದ ಕೊನೆಯ ದಶಕಗಳಲ್ಲಿ ಕಾಣಿಸಿಕೊಂಡ ಪ್ರಮುಖ ವಿದ್ಯಮಾನಗಳ ಜೊತೆ ಕತೆಗಾರರು ಸ್ಪಂದಿಸಿದ ರೀತಿಯನ್ನು ಕತೆಗಳ ಮೂಲಕ ವಿಶ್ಲೇಷಣೆ ಮಾಡಿದ್ದೇನೆ. ಈ ಕಾಲಘಟ್ಟಗಳಲ್ಲಿ ಸಾಂಸ್ಕೃತಿಕ ಬದುಕಿನ ವಿವಿಧ ನೆಲೆಗಳು ಸಂಸ್ಕೃತಿ ನಿರ್ವಚನದ ರೂಪಗಳನ್ನು ಚರ್ಚಿಸಿದ್ದೇನೆ. ಈ ಶತಮಾನವು ಪ್ರಮುಖ ವಿದ್ಯಮಾನಗಳ ಮುಖಾಂತರ ಹೊಸ ಚಿಂತನೆಯನ್ನು, ಮತ್ತು ಸಾಂಸ್ಕೃತಿಕ ಹುಡುಕಾಟವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಚರ್ಚಿಸಿದ್ದೇನೆ.

* * * * *

# ಅನುಬಂಧಗಳು

೧. ಮೂಲ ಆಕರಗಳು

(ಕಥಾಸಂಕಲನಗಳು)

೨. ಪರಾಮರ್ಶನ ಗ್ರಂಥಗಳು

೩. ಪತ್ರಿಕೆಗಳು

## ೦೧. ಮೂಲ ಆಕರಗಳು

(ಕಥಾಸಂಕಲನಗಳು)


೦೧. ಅಬ್ಬಾಸ್ ಮೇಲಿನಮನಿ - ಸಮಗ್ರಕತೆಗಳು.
ಪರಿಸರ ಪ್ರಕಾಶನ, ಗುಳೆದಗುಡ್ಡ.

೦೨. ಅಬ್ದುಲ್ ರಶೀದ್ - ಪ್ರಾಣಿಪಕ್ಷಿ (೧೯೯೭)
ನಮ್ಮ ಪ್ರಕಾಶನ, ತಿಪಟೂರು.

೦೩. ಅಬ್ದುಲ್ ರಶೀದ್ - ಇಲ್ಲಿಯವರೆಗಿನ ಕತೆಗಳು (೨೦೦೬)
ಅಭಿನವ ಪ್ರಕಾಶನ, ಬೆಂಗಳೂರು.

೦೪. ಅಮರೇಶ ನುಗಡೋಣಿ - ಮಣ್ಣು ಸೇರಿತು ಬೀಜ (೧೯೯೭)
ನಮ್ಮ ಪ್ರಕಾಶನ, ತಿಪಟೂರು.

೦೫. ಅಮರೇಶ ನುಗಡೋಣಿ - ತಮಂಧದ ಕೇಡು (೧೯೯೭)
ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು

೦೬. ಅಮರೇಶ ನುಗಡೋಣಿ - ಸವಾರಿ (೨೦೦೭)
ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೦೭. ಅರವಿಂದ ಮಾಲಗತ್ತಿ - ಮುಗಿಯದ ಕತೆಗಳು (೨೦೦೦)
ಅಂಜನಾದ್ರಿ - ಚೆತನ್ ಬುಕ್ ಹೌಸ್, ಮೈಸೂರು.

೦೮. ಕಲಿಗಣನಾಥ ಗುಡದೂರು - ಉಡಿಯಲ್ಲಿ ಉರಿ
ಲೋಹಿಯಾ ಪ್ರಕಾಶನ, ಬಳ್ಳಾರಿ

೦೯. ಕೃಷ್ಣನಾಯಕ - ಲದೇಣಿಯಾ
ಲೋಹಿಯಾ ಪ್ರಕಾಶನ, ಬಳ್ಳಾರಿ
೧೦. ಗೀತಾ ನಾಗಭೂಷಣ - ಅವ್ವ ಮತ್ತು ಇತರೆ ಕತೆಗಳು
ಬಸವ ಪ್ರಕಾಶನ, ಗುಲಬರ್ಗಾ
೧೧. ಗಂಗಾಧರಯ್ಯ ಎಸ್ - ನವಿಲ ನೆಲ (೨೦೦೩)
ಸಾರಂಗ ಪ್ರಕಾಶನ, ತಿಪಟೂರು
೧೨. ಜನಾರ್ಧನ ಎರ್ಪಕಟ್ಟೆ - ಹಾಗ್ಲೆ ಬರ್ತೇನ್ ಗಂಗಮ್ಮ
ಸಿವಿಜಿ ಪ್ರಕಾಶನ, ಬೆಂಗಳೂರು
೧೩. ದೇವನೂರು ಮಹಾದೇವ - ಸಮಗ್ರ ಕೃತಿಗಳು
ಪತ್ರಿಕೆ ಪ್ರಕಾಶನ, ಬೆಂಗಳೂರು
೧೪. ನಟರಾಜ ಹುಳಿಯಾರ - ಮತ್ತೊಬ್ಬ ಸರ್ವಾಧಿಕಾರಿ (೧೯೯೩)
ಚಂದನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು
೧೫. ನಾಗವೇಣಿ.ಎಚ್ - ಮೀಯುವ ಆಟ (೨೦೦೫)
ಲೋಹಿಯಾ ಪ್ರಕಾಶನ, ಬಳ್ಳಾರಿ
೧೬. ನೇಮಿಚಂದ್ರ - ಇಲ್ಲಿಯವರೆಗಿನ ಕತೆಗಳು (೨೦೦೧)
ಅಂಕಿತ ಪ್ರಕಾಶನ, ಬೆಂಗಳೂರು
೧೭. ಪೂರ್ಣಚಂದ್ರ ತೇಜಸ್ವಿ - 'ಸಮಗ್ರ ಕತೆಗಳು' (೨೦೦೧)
ಪತ್ರಿಕೆ ಪ್ರಕಾಶನ, ಬೆಂಗಳೂರು
೧೮. ಫಕೀರ್ ಮಹಮ್ಮದ್ ಕಟ್ಪಾಡಿ - ನೊಂಬು
ಸ್ವಪ್ನ ಬುಕ್ ಹೌಸ್, ಬೆಂಗಳೂರು
೧೯. ಭಾನುಮುಷ್ತಾಕ್ - ಬೆಂಕಿಮಳೆ
ಸಿವಿಜಿ.ಪ್ರಕಾಶನ, ಬೆಂಗಳೂರು
೨೦. ಭಾನುಮುಷ್ತಾಕ್ - 'ಎದೆಯ ಹಣತೆ'
ಸಿವಿಜಿ ಪ್ರಕಾಶನ, ಬೆಂಗಳೂರು
೨೧. ಬೋಳುವಾರು ಮಹಮ್ಮದ್ ಕುಂಞ - ಅಂಕ
ಕಾಮದೇನು ಪ್ರಕಾಶನ, ಬೆಂಗಳೂರು
೨೨. ಬೋಳುವಾರು ಮಹಮ್ಮದ್ ಕುಂಞ - ಆಕಾಶಕ್ಕೆ ನೀಲಿ ಪರದೆ
ಅಂಕಿತ ಪ್ರಕಾಶನ, ಬೆಂಗಳೂರು

೨೩. ಬೋಳುವಾರು ಮಹಮ್ಮದ್ ಕುಂಞ - 'ಒಂದು ತುಂಡು ಗೋಡೆ'
ಅನನ್ಯ ಪ್ರಕಾಶನ, ಬೆಂಗಳೂರು
೨೪. ಮಲ್ಲಿಕಾರ್ಜುನ ಹಿರೇಮಠ - ಅಮೀನಪುರದ ಸಂತೆ
ಪೃಥ್ವಿ ಪ್ರಕಾಶನ, ಬೆಂಗಳೂರು
೨೫. ಮಲ್ಲಿಕಾರ್ಜುನ ವಣೇನೂರು - ಮಣ್ಣಿನ ಕುಡಿಕೆ
ಲೋಹಿಯಾ ಪ್ರಕಾಶನ, ಬೆಂಗಳೂರು
೨೬. ಮೊಗಳ್ಳಿ ಗಣೇಶ್ - ಬುಗುರಿ (೧೯೯೨)
ಪತ್ರಿಕೆ ಪ್ರಕಾಶನ, ಬೆಂಗಳೂರು
೨೭. ಮೊಗಳ್ಳಿ ಗಣೇಶ್ - ಅತ್ತೆ (೧೯೯೭)
ವಿಶ್ವಾಲಯ ಪ್ರಕಾಶನ, ಬೆಂಗಳೂರು
೨೮. ಮೊಗಳ್ಳಿ ಗಣೇಶ್ - ಭೂಮಿ (೨೦೦೧)
ಪ್ರಿಸ್‌ಂ ಬುಕ್ಸ್, ಬೆಂಗಳೂರು
೨೯. ರಮಾಕಾಂತ ಜೋಷಿ (ಸಂ) - ಒಂದಿಷ್ಟು ಕತೆಗಳು (೨೦೦೫)
ಮನೋಹರ ಗ್ರಂಥ ಮಾಲಾ, ಧಾರವಾಡ
೩೦. ರಾಜಶೇಖರ ನೀರಮಾನ್ವಿ - ಕರ್ಪೂರದ ಕಾಯದಲ್ಲಿ ಬೆಂಕಿ ಯುಸಿರಾಟ
ಲೋಹಿಯಾ ಪ್ರಕಾಶನ, ಬಳ್ಳಾರಿ
೩೧. ರಾಘುವೇಂದ್ರ ಪಾಟೀಲ - ದೇಶಗತಿ
ಸಂವಾದ ಪ್ರಕಾಶನ, ಚಿತ್ರದುರ್ಗ
೩೨. ರಾಘುವೇಂದ್ರ ಪಾಟೀಲ - ಮಾಯಿಯ ಮುಖಗಳು (೧೯೯೮)
ಆನಂದ ಕಂದ ಗ್ರಂಥಮಾಲೆ, ಚಿತ್ರದುರ್ಗ
೩೩. ರಾಜಶೇಖರ ಹತಗುಂದಿ - 'ಕಾಳ ಬೆಳದಿಂಗಳ ಸಿರಿ'
ಲೋಹಿಯಾ ಪ್ರಕಾಶನ, ಬಳ್ಳಾರಿ
೩೪. ಲಂಕೇಶ್ ಪಿ - ಕಲ್ಲುಕರಗುವ ಸಮಯ ಮತ್ತು ಇತರ ಕತೆಗಳು (೧೯೯೩)
ಪತ್ರಿಕೆ ಪ್ರಕಾಶನ, ಬೆಂಗಳೂರು
೩೫. ಲಲಿತಾನಾಯಕ ಬಿ.ಟಿ - ಹಬ್ಬ ಮತ್ತು ಬಲಿ
ಲಂಬಾಣಿ ಒಕ್ಕೂಟ ಪ್ರಕಾಶನ, ಬೆಂಗಳೂರು
೩೬. ವೀರಭದ್ರಪ್ಪ ಕುಂ - 'ಬರೀ ಕಥೆಯಲ್ಲೋ ಅಣ್ಣಾ' (ಸಮಗ್ರ ಕತೆಗಳು)
ಸಿವಿಜಿ ಪ್ರಕಾಶನ, ಬೆಂಗಳೂರು

೩೭. ವೀರಭದ್ರಪ್ಪ ಕುಂ - 'ಡೋಮ ಮತ್ತಿತರ ಕತೆಗಳು'
ಅನನ್ಯ ಪ್ರಕಾಶನ, ಹೊಸಮನೆ ಶ್ರೀದೇವಿನಗರ ವಿದ್ಯಾಗಿರಿ, ಧಾರವಾಡ

೩೮. ವೀರಭದ್ರಪ್ಪ ಕುಂ - ಭಗವತಿ ಕಾಡು
ಯುವಕ ಸಂಘ, (ರಿ) ಹಗರಿಬೊಮ್ಮನ ಹಳ್ಳಿ

೩೯. ವೀರಭದ್ರಪ್ಪ ಕುಂ - ನಿಜಲಿಂಗ
ಯುವಕ ಸಂಘ, (ರಿ) ಹಗರಿಬೊಮ್ಮನ ಹಳ್ಳಿ

೪೦. ವೀಣಾ ಶಾಂತೇಶ್ವರ - ಮುಳ್ಳುಗಳು
ಸಂಕ್ರಮಣ ಪ್ರಕಾಶನ, ಧಾರವಾಡ

೪೧. ವೀಣಾ ಶಾಂತೇಶ್ವರ - ಕೊನೆಯ ದಾರಿ (೧೯೭೨)
ಅಕ್ಷರ ಪ್ರಕಾಶನ, ಸಾಗರ

೪೨. ವೈದೇಹಿ - 'ಮರಗಿಡ ಬಳ್ಳಿ'
ಅಕ್ಷರ ಪ್ರಕಾಶನ, ಸಾಗರ

೪೩. ವೈದೇಹಿ - ಅಮ್ಮಚ್ಚಿಯೆಂಬ ನೆನಪು
ಅಕ್ಷರ ಪ್ರಕಾಶನ, ಸಾಗರ

೪೪. ಸಾರಾ ಅಬೂಬಕ್ಕರ್ - ಮುಸ್ಲಿಂ ಹುಡುಗಿ ಶಾಲೆ ಕಲಿತಿದ್ದು
ಪತ್ರಿಕೆ ಪ್ರಕಾಶನ, ಬೆಂಗಳೂರು

೪೫. ಸಾರಾ ಅಬೂಬಕ್ಕರ್ - ಚಪ್ಪಲಿಗಳು
ನವಕರ್ನಾಟಕ ಪ್ರಕಾಶನ, ಬೆಂಗಳೂರು

೪೬. ಶ್ರೀಧರ ಬಳಗಾರ - ಇಳಿಯೆಂಬ ಕನಸು (೨೦೦೩)
ಆನಂದ ಕಂದ ಗ್ರಂಥಮಾಲೆ, ಚಿತ್ರದುರ್ಗ

೪೭. ಹಮುಮಂತಯ್ಯ ಎಲ್ (ಸಂ) - ದಲಿತ ಕತೆಗಳು
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

* * * * *

## ೦೨. ಪರಾಮರ್ಶನ ಗ್ರಂಥಗಳು

೦೧. ಅರ್ಜುನ ಗೊಳಸಂಗಿ (ಸಂ) - ಕನ್ನಡ ದಲಿತ ಸಾಹಿತ್ಯ: ಸಮಾಲೋಕನ (೨೦೦೩)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೦೨. ಅಮರೇಶ ನುಗಡೋಣಿ (ಸಂ) - ಬಿಸಿಲಹನಿಗಳು (೧೯೯೫)
ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ರಾಯಚೂರು

೦೩. ಅಶೋಕ.ಟಿ.ಪಿ (ಸಂ) - ಸಾಹಿತ್ಯ ವಿಮರ್ಶೆ (೧೯೮೩)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೦೪. ಅಶೋಕ ಟಿ.ಪಿ. - ಪುಸ್ತಕ ಪ್ರೀತಿ (೧೯೯೩)
ಅಕ್ಷರ ಪ್ರಕಾಶನ, ಸಾಗರ

೦೫. ಅನಂತ ಮೂರ್ತಿ.ಯು.ಆರ್ - ಪ್ರಜ್ಞೆ ಮತ್ತು ಪರಿಸರ (೧೯೭೧)
ಅಕ್ಷರ ಪ್ರಕಾಶನ, ಸಾಗರ

೦೬. ಅರವಿಂದ ಮಾಲಗತ್ತಿ - ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನ (೧೯೮೯)
ಹೊಸದಿಕ್ಕು ಪ್ರಕಾಶನ, ಬೆಂಗಳೂರು

೦೭. ಅರವಿಂದ ಮಾಲಗತ್ತಿ - ದಲಿತ ಯುಗ ಮತ್ತು ಕನ್ನಡ ಸಾಹಿತ್ಯ (೧೯೯೯)
ಚೇತನ್ ಬುಕ್ ಹೌಸ್, ಮೈಸೂರು

೦೮. ಅರವಿಂದ ಮಾಲಗತ್ತಿ (ಸಂ) - ದಲಿತ ಮಾರ್ಗ (೨೦೦೩)
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೦೯. ಆರ್ಕೆ ಮಣಿಪಾಲ - ವಾಸ್ತವ (೧೯೮೪)
ಯುವಕ ಸಂಘ (ರಿ) ಹಗರಿಬೊಮ್ಮನಹಳ್ಳಿ

೧೦. ಕರೀಗೌಡ ಬೀಚನಹಳ್ಳಿ - ಶತಮಾನದ ಸಣ್ಣಕತೆಗಳ ಸಮೀಕ್ಷೆ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧. ಕರೀಗೌಡ ಬೀಚನಹಳ್ಳಿ (ಸಂ) - ಕಥನ ಕಲೆಯ ನೆಲೆಗಳು (೧೯೯೨)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೨. ಕೀರ್ತಿನಾಥ ಕುರ್ತುಕೋಟಿ - ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ
ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು

೧೩. ಕುಮಾರಸ್ವಾಮಿ.ಎಚ್ - ದಲಿತ ಚಳುವಳಿಗಳು ಮತ್ತು ಸಾಮಾಜಿಕ ನ್ಯಾಯ (೨೦೦೭)
ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ (ಅಪ್ರಕಟಿತ)

೧೪. ಕೃಷ್ಣಯ್ಯ ಹೆಚ್.ಎಂ - ಕನ್ನಡ ಭಾಷೆಯ ಚರಿತ್ರೆ
ಸುವಿದ್ಯಾ ಪ್ರಕಾಶನ, ಬೆಂಗಳೂರು

೧೫. ಕೋದಂಡರಾಮ.ಎನ್.ಕೆ. - ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ (೧೯೯೬)
ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು.

೧೬. ಗಂಗಾಧರ.ಬಿ. - ಬಂಡಾಯ ಸಾಹಿತ್ಯದ ಕಾದಂಬರಿಗಳು (೧೯೯೮)
ಪಿಎಚ್.ಡಿ ಮಹಾಪ್ರಬಂಧ, ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ (ಅಪ್ರಕಟಿತ)

೧೭. ಗೋಪಾಲ ಕೃಷ್ಣರಾವ್ ಕೆ.ಎಲ್ - 'ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ' (೧೯೯೫)
ನವಕರ್ನಾಟಕ ಪ್ರಕಾಶನ, ಬೆಂಗಳೂರು

೧೮. ಚಂದ್ರ ಪೂಜಾರಿ - ಸಮಾಜ ಸಂಶೋಧನೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೯. ಚಂದ್ರೇಗೌಡ, ಬಿ.ಎಲ್.ರಾಜು (ಸಂ) - ತೇಜಸ್ವೀ ನೆನಪು (೨೦೦೭)
ರಂಗಭಾರತಿ (ರಿ) ಹೂವಿನ ಹಡಗಲಿ

೨೦. ಚಂದ್ರಶೆಖರ.ಎಸ್ - 'ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ' (೨೦೦೦)
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೧. ಜವರಯ್ಯ ಮ.ನ. - ಪರಂಪರೆ ಮತ್ತು ದಲಿತ ಬಂಡಾಯ
ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು

೨೨. ತಂಬಂಡ ವಿಜಯ್ ಪೂಣಚ್ಚ-ರೈತ ಚಳುವಳಿ (೧೯೯೪)
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೩. ತಪಸ್ವಿ ಕುಮಾರ್ ನಂ-ಸಂಸ್ಕೃತಿ ವಿಕಾಸ
ಚೇತನ ಬುಕ್ ಹೌಸ್, ಮೈಸೂರು

೧೪. ತಿಪ್ಪೇರುದ್ರಸ್ವಾಮಿ-'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'

ಡಿವಿಕೆ ಮೂರ್ತಿ ಪ್ರಕಾಶಕರು, ಮೈಸೂರು

೧೫. ದೇವುಡು-'ಕರ್ನಾಟಕ ಸಂಸ್ಕೃತಿ'

ಶಾರದಾ ಪ್ರಕಟನಾಲಯ ಬೆಂಗಳೂರು.

೧೬. ಧರಣಿದೇವಿ ಮಾಲಗತ್ತಿ - ಸ್ತ್ರೀವಾದ ಮತ್ತು ಭಾರತೀಯತೆ (೧೯೯೮)

ಚೇತನ್ ಬುಕ್ ಹೌಸ್, ಮೈಸೂರು

೧೭. ನಾಗಭೂಷಣಸ್ವಾಮಿ ಓ.ಎಲ್ - ವಿಮರ್ಶೆಯ ಪರಿಭಾಷೆ (೧೯೯೮)

ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೧೮. ನಾಗರಾಜ ಡಿ.ಆರ್. - ಸಾಹಿತ್ಯ ಕಥನ (೧೯೯೬)

ಅಕ್ಷರ ಪ್ರಕಾಶನ - ಹೆಗ್ಗೋಡು ಸಾಗರ.

೧೯. ನಾಗರಾಜ ಡಿ.ಆರ್ - ಸಂಸ್ಕೃತಿ ಕಥನ (ಸಂ) ಅಗ್ರಹಾರ ಕೃಷ್ಣಮೂರ್ತಿ

ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೦. ನಾಗಭೂಷಣ ಡಿ.ಎಸ್. - ಅನೇಕ (೨೦೦೫)

ಲೋಹಿಯಾ ಪ್ರಕಾಶನ - ಬಳ್ಳಾರಿ.

೨೧. ನಾರಾಯಣ ಕೆ.ವಿ. - ಬೇರು ಕಾಂಡ ಚಿಗುರು

ವಿವೇಕ ಪ್ರಕಾಶನ ವಿಚಾರ ವೇದಿಕೆ ಬೆಂಗಳೂರು.

೨೨. ನಿಸಾರ್ ಅಹಮದ್ (ಪ್ರ.ಸಂ) - ದಶವಾರ್ಷಿಕ ವಿಮರ್ಶೆಗಳು (೧೯೮೩)

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೨೩. ಪುರುಷೋತ್ತಮ ಬಿಳಿಮಲೆ - ಬಂಡಾಯ-ದಲಿತ ಸಾಹಿತ್ಯ (೧೯೯೦)

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೨೪. ಬಸವರಾಜ ಸಬರದ - ಹೊಸದಿಕ್ಕು (೧೯೯೦)

ಪಲ್ಲವಿ ಪ್ರಕಾಶನ, ಬೀದರ್

೨೫. ಬರಗೂರು ರಾಮಚಂದ್ರಪ್ಪ - ಉಪಸಂಸ್ಕೃತಿ ಅಧ್ಯಯನ ಮಾಲೆ (೧೯೯೪)

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೨೬. ಬರಗೂರು ರಾಮಚಂದ್ರಪ್ಪ ಪ್ರ.ಸಂ - "ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ನೆಲೆಗಳು"

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೩೭. ಬರಗೂರು ರಾಮಚಂದ್ರಪ್ಪ - ಸಂಸ್ಕೃತಿ:ಶ್ರಮ ಮತ್ತು ಸೃಜನ ಶೀಲತೆ
ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೩೮. ಬರಗೂರು ರಾಮಚಂದ್ರಪ್ಪ - ಬಂಡಾಯ ಸಾಹಿತ್ಯ ಮಿಮಾಂಶೆ (೧೯೯೧)
ಅನ್ವೇಷಣೆ ಪ್ರಕಾಶನ, ಬೆಂಗಳೂರು

೩೯. ಬರಗೂರು ರಾಮಚಂದ್ರಪ್ಪ (ಪ್ರ.ಸಂ)- 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ' (೧೯೯೩)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೦. ಬರಗೂರು ರಾಮಚಂದ್ರಪ್ಪ (ಪ್ರ.ಸಂ)- 'ಕನ್ನಡ ಸಾಹಿತ್ಯದಲ್ಲಿ ಬದುಕಿನ ಅಭಿವ್ಯಕ್ತಿ' (೧೯೯೩)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೧. ಬರಗೂರು ರಾಮಚಂದ್ರಪ್ಪ (ಪ್ರ.ಸಂ)- 'ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ' (೧೯೯೩)
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೨. ಮನು ಚಕ್ರವರ್ತಿ.ಎನ್. (ಸಂ) - ಭಾರತೀಯ ಸ್ತ್ರೀವಾದ
ಅಕ್ಷರ ಪ್ರಕಾಶನ - ಹೆಗ್ಗೋಡು ಸಾಗರ.

೪೩. ಮಲ್ಲೆಪುರಂ ಜಿ. ವೆಂಕಟೇಶ - ಶಂಬಾ ಸಂಸ್ಕೃತಿ ಚಿಂತನೆ
ಸಪ್ನ ಬುಕ್ ಹೌಸ್ ಗಾಂಧಿನಗರ - ಬೆಂಗಳೂರು

೪೪. ಮಹಾದೇವಯ್ಯ.ಪಿ. (ಸಂ) - ದಲಿತರು, ಭಾಷೆ ಮತ್ತು ಸಮಾಜ (೨೦೦೬)
ಪ್ರಸಾರಾಂಗ - ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

೪೫. ಮಹೇಶನ್.ಮ. - ಜಾಗತೀಕರಣ (೨೦೦೨)
ನವಕರ್ನಾಟಕ ಪ್ರಕಾಶನ ಬೆಂಗಳೂರು.

೪೬. ಮಹೇಶ್ವರಯ್ಯ ಎಚ್.ಎಂ - ಪೂರ್ಣಚಂದ್ರ ತೇಜಸ್ವಿ
ಸಾಹಿತ್ಯ ಸಂಪದ - ನವಕರ್ನಾಟಕ ಪ್ರಕಾಶನ (೨೦೦೫) ಬೆಂಗಳೂರು.

೪೭. ಮಾಲಿನಿ ಮಲ್ಯ (ಸಂ) - ಶಿವರಾಮ ಕಾರಂತರ ಲೇಖನಗಳು (೧೯೯೪)
ಮಂಗಳೂರು ವಿಶ್ವವಿದ್ಯಾಲಯ ಮಂಗಳೂರು.

೪೮. ಮುನಿವೆಂಕಟಪ್ಪ ವಿ - ದಲಿತ ಚಳುವಳಿ ಒಂದು ಅವಲೋಕನ (೧೯೯೮)
ವಿಚಾರವಾದಿ ಪ್ರಕಾಶನ, ಮೈಸೂರು

೪೯. ಮುರಾರಿ ಬಲ್ಲಾಳ. ನಿ. - ಕಿಟಕಿಗಳು ಕನ್ನಡಿಗಳು
ಕನ್ನಡ ಪುಸ್ತಕ ಪ್ರಾಧಿಕಾರ ಕನ್ನಡ ಭವನ ಬೆಂಗಳೂರು.

೪೯. ಮೊಗಳ್ಳಿ ಗಣೇಶ್ - 'ದಲಿತರು ಮತ್ತು ಜಾಗತೀಕರಣ'

ಪ್ರಸಾರಾಂಗ - ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೫೦. ಮೊಗಳ್ಳಿ ಗಣೇಶ್ - ದಲಿತ ಚಿಂತನೆ

ಪ್ರಸಾರಾಂಗ - ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೫೧. ಮೋಹನ್‌ಕೃಷ್ಣ ರೈ ಕೆ. - ಪರಿಸರ ಚಳುವಳಿ (೧೯೯೯)

ಪ್ರಸಾರಾಂಗ - ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

೫೨. ರಹಮತ್ ತರೀಕೆರೆ - ಸಾಂಸ್ಕೃತಿಕ ಅಧ್ಯಯನ (೨೦೦೪)

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೫೩. " - ಪ್ರತಿ ಸಂಸ್ಕೃತಿ ಕ್ರೈಸ್ಟ್ ಕಾಲೇಜು

ಕನ್ನಡ ಸಂಘ ಬೆಂಗಳೂರು.

೫೪. " - ಮರದೊಳಗಣ ಕಿಚ್ಚು (೨೦೦೨)

ಬೆಳ್ಳಿಚುಕ್ಕಿ ಪ್ರಕಾಶನ ಬೆಂಗಳೂರು.

೫೫. " - ಇಲ್ಲಿ ಯಾರು ಮುಖ್ಯರಲ್ಲ (೨೦೦೫)

೫೬. ರಾಘವೇಂದ್ರ ಪಾಟೀಲ - ಮಾಗ್ವಾದ (೧೯೯೦)

ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ

೫೭. ರಾಜಶೇಖರ ಜಿ. - ಕೋಮುವಾದದ ರಾಜಕೀಯ (೨೦೦೨)

ನವಕರ್ನಾಟಕ ಪ್ರಕಾಶನ ಬೆಂಗಳೂರು.

೫೮. ರಾಜಾರಾಮ ಹೆಗಡೆ - ಗತಕಥನ (೨೦೦೫)

ಆನಂದ ಕಂದ ಗ್ರಂಥಮಾಲೆ ಮಲ್ಲಾಡಿಹಳ್ಳಿ - ಚಿತ್ರದುರ್ಗ

೫೯. ರಾಜಾರಾಮ ಹೆಗಡೆ - ಭಾರತೀಯ ಇತಿಹಾಸ ಸಮಾಜ ಮತ್ತು ಸಂಸ್ಕೃತಿ

ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೦. ರಾಜೇಂದ್ರ ಚೆನ್ನಿ / ಸಿರಾಜ್ ಅಹಮದ್ (ಸಂ) - 'ಜಾಗತೀಕರಣ : ಒಂದು ಸಮಗ್ರ ಮಂಥನ'

(೨೦೦೪) ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು - ೦೨

೬೧. ರಾಜೇಂದ್ರ ಚೆನ್ನಿ - ದೇಶೀವಾದ (೧೯೮೬)

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು - ೦೨

೬೨. ರಾಜೇಂದ್ರ ಚೆನ್ನಿ - ನಡುಹಗಲಿನಲ್ಲಿ ಕಂದೀಲುಗಳು (೨೦೦೪)
ಲೋಹಿಯಾ ಪ್ರಕಾಶನ ಬಳ್ಳಾರಿ.

೬೩. ರಾಮಚಂದ್ರನ್ ಸಿ.ಎನ್. - ಸಾಹಿತ್ಯ ವಿಮರ್ಶೆ (೧೯೮೯)
ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ - ಬೆಂಗಳೂರು.

೬೪. ವೀರಣ್ಣ.ಸಿ. - ಸಾಹಿತ್ಯ ಮತ್ತು ಸಮುದಾಯ
ನವಕರ್ನಾಟಕ ಪ್ರಕಾಶನ, ಬೆಂಗಳೂರು

೬೫. ಶಿವರುದ್ರಪ್ಪ ಜಿ.ಎಸ್ - ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ (೧೯೮೯)
ಕರ್ನಾಟಕ ಸಾಹಿತ್ಯ ಅಕಾಡೆಮಿ ಸೃಪತುಂಗ ರಸ್ತೆ ಬೆಂಗಳೂರು - ೦೩

೬೬. ಶಿವರುದ್ರಪ್ಪ.ಜಿ.ಎಸ್ - ಮಹಿಳೆ ಮತ್ತು ಕನ್ನಡ ಸಾಹಿತ್ಯ (೧೯೭೯)
ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು

೬೭. ಶಿವರುದ್ರಪ್ಪ ಜಿ.ಎಸ್. - ದಶವಾರ್ಷಿಕ ಸಾಹಿತ್ಯ ವಿಮರ್ಶೆ (೧೯೮೯)
ಪ್ರಸಾರಾಂಗ - ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

೬೮. ಶಿವರಾಮ ಪಡಿಕ್ಕಲ್ - ನಾಡುನುಡಿಯ ರೂಪಕ (೨೦೦೧)
ಪ್ರಸಾರಾಂಗ - ಮಂಗಳೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ ಮಂಗಳೂರು.

೬೯. ಶಿವಾನಂದ ವಿರಕ್ತಮಠ - 'ಮಹಿಳಾ ಅಧ್ಯಯನ' (೨೦೦೪)
(ಸಂಯುಕ್ತ ಸಂಚಿಕೆ) - ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ.

೭೦. ಶ್ರೀನಿವಾಸಮೂರ್ತಿ - 'ಕನ್ನಡ ಪರ ಚಿಂತನೆ ಮತ್ತು ಪರಂಪರೆ'
(ಪಿಎಚ್.ಡಿ ಮಹಾಪ್ರಬಂಧ) - ಕನಕ ಪ್ರತಿಷ್ಠಾನ ಬೆಂಗಳೂರು - ೧೦

೭೧. ಷರೀಫಾ ಕೆ. - ಬಂಡಾಯ ಮುಸ್ಲಿಂ ಸಂವೇದನೆ
ಸಿವಿಜಿ ಪಬ್ಲಿಕೇಷನ್ಸ್ ಬೆಂಗಳೂರು.

೭೨. ಸಂಗಮೇಶ ಸವದತ್ತಿ ಮಠ - ಕನ್ನಡ ಭಾಷಾ ವ್ಯಾಸಂಗ (೧೯೮೫)
ರೂಪರಶ್ಮಿ ಪ್ರಕಾಶನ, ಕಲಬುರ್ಗಿ

೭೩. ಸರೂಜೂ ಕಾಟ್ಕರ್ - ಕನ್ನಡ ಮರಾಠಿ ದಲಿತ ಸಾಹಿತ್ಯ (೧೯೯೬)
ವಿಮೋಚನಾ ಪ್ರಕಾಶನ, ಅಥಣಿ

೭೪. ಸುಬ್ಬಣ್ಣ.ಕೆ.ವಿ(ಅನುವಾದ)- ಆಶೀಶ್ ನಂದಿ ವಿಚಾರ' (೧೯೯೫)
ಅಕ್ಷರ ಪ್ರಕಾಶನ, ಸಾಗರ

೭೫. ಹನುಮಂತಯ್ಯ ಎಲ್. - ಕಥಾಕಥನ

ಸಿವಿಜಿ ಪಬ್ಲಿಕೇಷನ್ ಬೆಂಗಳೂರು - ೧೯೯೯.

೭೬. ಹಾ.ಮಾ. ನಾಯಕ ಸಂ - 'ಡಿ.ವಿ.ಜಿ. ಸಂಪುಟ - ೧ (೧೯೮೭)

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೭೭. ಹೊನ್ನಯ್ಯ ಸಿ.ಬಿ. - 'ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ'

(ಪಿಎಚ್.ಡಿ ಮಹಾಪ್ರಬಂಧ) - ಮುದ್ದುಶ್ರೀ ಪ್ರಕಾಶನ ಬೆಂಗಳೂರು.

* * * * *

## ೦೩. ಪತ್ರಿಕೆಗಳು

೦೧. ಸಂಕ್ರಮಣ - ೬೦ ವಿಶೇಷಾಂಕ ಜೂನ್ ೧೯೭೪.

ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ ಸಂಸ್ಥಾಪನ

ಸಮ್ಮೇಳನ, ವಿಶೇಷಾಂಕ, ಸಂಕ್ರಮಣ ಪ್ರಕಾಶನ ಧಾರವಾಡ.

೦೨. ಸಂಕ್ರಮಣ - ಸಂಪುಟ - ೨೪ ಸಂಚಿಕೆ,೨ - ೧೯೮೯

೦೩. ಪ್ರಜಾವಾಣಿ ವಿಶೇಷಾಂಕಗಳು - ೨೦೦೫/೨೦೦೬

೦೪. ಸಾಹಿತ್ಯ ಸಂವಾದ - ೪೯ ರಾಘವೇಂದ್ರ ಪಾಟೀಲ (ಸಂ)

ಸಂಚಿಕೆ - ೧, ಜನವರಿ ಮಾರ್ಚ್ - ೧೯೯೯

೦೫. ಸಾಹಿತ್ಯ ಸಂಗಾತಿ - ಅರವಿಂದ ಮಾಲಗತ್ತಿ (ಪ್ರ ಸಂ)

ಸಂಪುಟ - ೩೪, ಮಂಗಳಗಂಗೋತ್ರಿ ಮಂಗಳೂರು.

೦೬. ಅನ್ವೇಷಣೆ - ಆರ್.ಜಿ.ಹಳ್ಳಿ ನಾಗರಾಜ (ಸಂ)

ಸಂಪುಟ - ೫, ಸಂಚಿಕೆ - ೩೪, ಸೆಪ್ಟೆಂಬರ್-ಅಕ್ಟೋಬರ್ ೧೯೮೯, ಬೆಂಗಳೂರು

೦೭. ದಲಿತ : ಸಂಪುಟ (೩) - ಬುದ್ದಣ್ಣ ಹಿಂಗಮೀರೆ / ಸೋಮಶೇಖರ ಇಮ್ರಾಪುರ,

ಚೆನ್ನಣ್ಣ ವಾಲೀಕಾರ ಪ್ರಶಾಂತ ಪಬ್ಲಿಕೆಷನ್ ಹುಬ್ಬಳ್ಳಿ.

೦೮. ಸಂಕ್ರಮಣ ವಿಶೇಷಾಂಕ - ೧೯೯೧, - ಚಂದ್ರಶೇಖರ ಪಾಟೀಲ

ಸಂಕ್ರಮಣ ಪ್ರಕಾಶನ - ಧಾರವಾಡ

೦೯. ಭಾವನಾ - ಅಕ್ಟೋಬರ್ ೨೦೦೩

೧೦. ಹೊಸತು ವಿಶೇಷಾಂಕ - ೨೦೦೧

ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು - ೦೧

೧೧. ಹೊಸತು - ವಿಶೇಷಾಂಕ - ೨೦೦೫

೧೨. ಹೊಸತು ವಿಶೇಷ ಸಂಚಿಕೆ - ೨೦೦೬

ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು - ೦೧

೧೩. ಹೊಸತು ವಿಶೇಷಾಂಕ - ೨೦೦೭

ನವಕರ್ನಾಟಕ ಪಬ್ಲಿಕೇಷನ್ಸ್ ಬೆಂಗಳೂರು - ೦೧

೧೪. ಉತ್ಥಾನ - ನವೆಂಬರ್ - ೧೯೮೩

೧೫. ಮಯೂರ (ಜೂನ್-೨೦೦೭) ತೇಜಸ್ವಿ ನೆನಪಿನ ಸಂಚಿಕೆ

* * * * *

